# "ಕನ್ನಡದಲ್ಲಿ ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು"

('ಸಂಸ್ಕೃತಿ' ಪರಿಕಲ್ಪನೆಯನ್ನು ಅನುಲಕ್ಷಿಸಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಅಧ್ಯಯನದ 'ಮಹಾಪ್ರಬಂಧ'ದ "ಅಂತಿಮ ಪ್ರತಿ"ಯನ್ನು ಸಲ್ಲಿಸುತ್ತಿರುವ)



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೧೫-೧೬


ಸಂಶೋಧನಾ ವಿದ್ಯಾರ್ಥಿನಿ

ವಾಣಿ ಬಿ.ಎಸ್.





ಬಿ.ಎಂ.ಶ್ರೀ. [illegible]
ಎಂ.ವಿ.ಸೀ. ಸ್ನಾತಕೋತ್ತರ ಅಧ್ಯಯನ ಕೇಂದ್ರ,
ವಿಭಾಗ, ಸಿಂಧಿ ಎನ್.ಆರ್.ಕಾಲೋನಿ, ಬೆಂಗಳೂರು.

ಮಾರ್ಗದರ್ಶಕರು : ಡಾ॥ ಕೆ.ರಮಾನಂದ
ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥರು, ಕನ್ನಡ
ಕಾಲೇಜು, ಕೆಂಪಾಪುರ, ಹೆಬ್ಬಾಳ,
ಬೆಂಗಳೂರು - ೫೬೦೦೨೪

## ಸಂಶೋಧನಾ ವಿದ್ಯಾರ್ಥಿನಿಯ ಪ್ರಮಾಣ ಪತ್ರ

"ಕನ್ನಡದಲ್ಲಿ ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು" ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಡಾ॥ ಕೆ. ರಮಾನಂದ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧನಾ ವಿದ್ಯಾರ್ಥಿನಿ,

ಸ್ಥಳ : ಬೆಂಗಳೂರು

ದಿನಾಂಕ : 20/12/2019

Vani B.S.

ವಾಣಿ ಬಿ.ಎಸ್.

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

# "ಕನ್ನಡದಲ್ಲಿ ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು"

('ಸಂಸ್ಕೃತಿ' ಪರಿಕಲ್ಪನೆಯನ್ನು ಅನುಲಕ್ಷಿಸಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಅಧ್ಯಯನದ 'ಮಹಾಪ್ರಬಂಧ'ದ "ಅಂತಿಮ ಪ್ರತಿ"ಯನ್ನು ಸಲ್ಲಿಸುತ್ತಿರುವ)




**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**

ಭಾಷಾ ನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೧೫-೧೬

ಸಂಶೋಧನಾ ವಿದ್ಯಾರ್ಥಿನಿ

**ವಾಣಿ ಬಿ.ಎಸ್.**

K. Ramananda



**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,**
ಎಂ.ವಿ.ಸೀ. ಸ್ನಾತಕೋತ್ತರ ಅಧ್ಯಯನ ಕೇಂದ್ರ,
ವಿಭಾಗ, ಸಿಂಧಿ ಎನ್.ಆರ್.ಕಾಲೋನಿ, ಬೆಂಗಳೂರು.

ಮಾರ್ಗದರ್ಶಕರು : ಡಾ॥ ಕೆ.ರಮಾನಂದ
ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥರು, ಕನ್ನಡ
ಕಾಲೇಜು, ಕೆಂಪಾಪುರ, ಹೆಬ್ಬಾಳ,
ಬೆಂಗಳೂರು – ೫೬೦೦೨೪

# - ಪರಿವಿಡಿ -



*** *** ***

## ಅಧ್ಯಾಯ-1

## ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

ವರ್ತಮಾನ ಸಂಸ್ಕೃತಿಯನ್ನು ಪ್ರಾಚೀನ ಸಂಸ್ಕೃತಿಯೊಂದಿಗೆ ತುಲನಾತ್ಮಕವಾಗಿ ನೋಡುವುದು ಅವಶ್ಯವಾಗಿದೆ. ಕಾರಣ ವರ್ತಮಾನದ ಬೇರುಗಳು ಪ್ರಾಚೀನ ಸಂಸ್ಕೃತಿಯಲ್ಲಿ ಹುದುಗಿವೆ. ಕಾಲ ಬದಲಾದಂತೆ ಚಿಂತನೆಯ ಮಾರ್ಗವೂ ಬದಲಾಗಬೇಕಾದುದು ಅನಿವಾರ್ಯವಾಗಿದೆ. ಅಂದಿಗೂ–ಇಂದಿಗೂ ಆಗಿರುವ ಅನೇಕಾನೇಕ ಬದಲಾವಣೆಗಳನ್ನು ಪುರಾಣಾರ್ಥದಿಂದ ಬೇರ್ಪಡಿಸಿ ತಿಳಿಯಬೇಕು.

ಮಹಾಭಾರತದ ಹಲವಾರು ಘಟನೆಗಳು ಧರ್ಮಪ್ರೇರಕ ಶಕ್ತಿಗೊಳಪಟ್ಟು ಅಲೌಕಿಕವೆನಿಸಿದರೂ ಈ ವಿಸ್ಮಯಕರವಾದ ಕೆಲವು ದೃಶ್ಯಗಳು 'ಆಧುನಿಕ ಚಿಂತನೆ'ಯನ್ನು ರೂಪಿಸುವ ಪ್ರೇರಣೆಯ ಮೂಲಧಾತುವಾಗಿದೆ.

ಉದಾಹರಣೆಗೆ :– ಕರ್ಣ, ಪಾಂಡವರು, ಕೌರವರ ಜನನ, ದ್ರೋಣನ ಜನನ, ಸತ್ಯವತಿಯ ಜನನ, ಅಕ್ಷದ್ಯೂತ, ದ್ರೌಪದೀ ವಸ್ತ್ರಾಪಹರಣ – ಇತ್ಯಾದಿ ಘಟನೆಗಳು.

'ಆಧುನಿಕತೆ' ವರ್ತಮಾನ ಜೀವನದ ಲಕ್ಷಣವಾಗಿರುವುದರಿಂದ ಮಹಾಭಾರತದ ಭೂತಜೀವನವನ್ನು ಹೊಸತಂತ್ರದಿಂದ ವಿಶ್ಲೇಷಿಸುವ, ಪುನರ್ವಿಮರ್ಶಿಸಿ ಅಂದಿನ ಜನಜೀವನ ಸಂಸ್ಕೃತಿಯನ್ನು ಅನುಲಕ್ಷಿಸಿ ಮೂಲಭೂತ ಅನುಭವ, ಅವರ ಭಾವನೆಗಳ ಸ್ವರೂಪ, ಬದಲಾವಣೆಗಳ ಸ್ವರೂಪವನ್ನು ಯುಗದ ಇತಿಹಾಸವೇ ಒಂದು ಮಹಾಕಾವ್ಯವಾಗಿರುವುದನ್ನು ಮರೆಯುವಂತಿಲ್ಲ. ಹಾಗೆಯೇ, **"ಆಧುನಿಕ ವಿಮರ್ಶಕನಿಗೆ ಉಳಿದಿರುವ ಕೆಲಸವೆಂದರೆ; ಯಾವುದು ಒಂದಾನೊಂದು ರೀತಿಯಲ್ಲಿ ಅಂತರ್ಬೋಧವಾಗಿದೆಯೋ ಅದನ್ನು ಶಾಸ್ತ್ರಾಧಾರಗಳಿಂದ ವಿವರಿಸುವುದು, ಸ್ಫುಟಗೊಳಿಸುವುದೂ ಆಗಿದೆ."**[1] ಆದರೆ ಇಲ್ಲಿ ಆಧುನಿಕ ಚಿಂತನೆಯೆಂದರೆ; ಯೋಗ್ಯವಾದ, ಪ್ರಾಮಾಣಿಕವಾದ, ಆಧಾರ ಸಹಿತವಾದ, ಮನಸ್ಸಿಗೊಪ್ಪುವಂತಹ ವೈಜ್ಞಾನಿಕ ಪ್ರಭಾವಯುತವಾದ, ಪ್ರಬುದ್ಧವಾದ, ಸತ್ಯದ ಒರೆಗೆ ಹಚ್ಚಿ ತೆಗೆದ ಚಿಂತನೆ. ಇಂದಿನ ಜನಜೀವನಕ್ಕೆ ಮಹಾಭಾರತದ ನಾಗರಿಕತೆ ಮೂಲಾಧಾರವೆಂಬುದನ್ನಂತೂ ಒಪ್ಪಲೇಬೇಕು.

ಇಂದಿನ ಭಾರತೀಯ ಸಂಸ್ಕೃತಿ ಹೆಚ್ಚಿನದೆಲ್ಲಾ ಮಹಾಭಾರತದಿಂದ ಪ್ರಭಾವಿತವಾಗಿ ರೂಪಗೊಂಡಿರುವಂತಹದ್ದೇ ಆಗಿರುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. **ಮಹಾಭಾರತದ ವಿಷಯದಲ್ಲಿ ನಿರ್ಣಯ ಮಾಡಲು ಹೊರಗಿನ ಯಾವ ಪ್ರಮಾಣವೂ ಅಗತ್ಯವಿಲ್ಲ. ಕೇವಲ ಋಗ್ವೇದ ಒಂದೇ ಸಾಕು.** ಪ್ರತಿಯೊಂದು ವಸ್ತುವನ್ನೂ ಆಧುನಿಕ ಚಿಂತನೆ ಎಂಬ ಮಾನದಂಡದಿಂದ ಅಳೆದು ನೋಡಿದಾಗ ವಸ್ತುವಿನ ನಿಜವಾದ ಸ್ಥಿತಿಯ ಅರಿವಾಗಿ ಅಂಧಶ್ರದ್ಧೆ, ಕುರುಡು ನಂಬಿಕೆಗಳು ಸಹಜವಾಗಿ ದೂರವಾಗುತ್ತದೆ. "ವಾಲ್ಮೀಕಿ ರಾಮಾಯಣ, ವ್ಯಾಸ ಮಹಾಭಾರತ ಎರಡೂ ಒಂದಕ್ಕಿಂತ ಒಂದು ಹೆಚ್ಚಾಗಿರುವಂತಹದ್ದು. ಒಂದರಲ್ಲಿ ಕಾವ್ಯಭಾಗ ಹೆಚ್ಚಾಗಿದ್ದರೆ ಇನ್ನೊಂದರಲ್ಲಿ ಲೋಕಜೀವನದ ಭಾಗವೇ ಹೆಚ್ಚಾಗಿದೆ. ಭರತ ಖಂಡದ ನಾಗರಿಕತೆಗೆ ಇವು ಮೂಲಾಧಾರ. **'ಭಾರತ'** ಎಂಬ ಮಾತೂ **ಕುರು ಮತ್ತು ಕೌರವ** ಎಂಬ ಮಾತೂ ವೇದಗಳಲ್ಲಿಯೇ ದೊರೆಯುತ್ತದೆ. **ಧೃತರಾಷ್ಟ್ರ, ವಿಚಿತ್ರವೀರ್ಯ** ಎಂಬ ಹೆಸರುಗಳೂ ಋಗ್ವೇದದಲ್ಲಿ ಸಿಕ್ಕುತ್ತವೆ."[2]

ವೇದಗಳನ್ನು ವಿಂಗಡಿಸಿದ್ದರಿಂದಲೇ ವ್ಯಾಸ ಋಷಿಗಳು ವೇದವ್ಯಾಸರಾದರು ಎಂದು ಮಹಾಭಾರತದಲ್ಲಿ ಹೇಳಿದೆ. ವೇದಗಳನ್ನು ವಿಭಾಗಿಸುವುದೆಂದರೆ ಸಾಮಾನ್ಯವಾದ ಕೆಲಸವಲ್ಲ! ವೇದ ವಿಂಗಡಣೆಯಲ್ಲಿ ಮೊದಲನೆಯದೇ ಋಗ್ವೇದ. ಆದರೆ, **"ಪುರಾಣಗಳು ಬಹುಮಟ್ಟಿಗೆ ಮಹಾಭಾರತಕ್ಕಿಂತಲೂ ಈಚಿನವು. ಮತ್ತು**

ಮಹಾಭಾರತದ ಸಾಮಗ್ರಿಯು ಗ್ರಂಥ ರಚನೆಯ ಕಾಲಕ್ಕಿಂತಲೂ ಪ್ರಾಚೀನವಾದುದು."[೩] ಈ ಋಗ್ವೇದದಲ್ಲಿ, "ಮಹಾಭಾರತ ಅಧ್ಯಯನಕ್ಕೆ ಹಿನ್ನೆಲೆಯಾಗಿ ಪರಾಮರ್ಶೆ ಮಾಡಬೇಕಾದ ಸಾಹಿತ್ಯವು ಶ್ರುತಿ-ಸ್ಮೃತಿಗಳಲ್ಲಿಯೂ; ಭರತ ವಂಶದ ಕ್ಷತ್ರಿಯರ ಪ್ರಸ್ತಾಪವೂ ಋಗ್ವೇದದಲ್ಲಿದೆ."[೪] ಋಗ್ವೇದ ಕಾಲದ ನಂತರವೇ ವಾಲ್ಮೀಕಿ ಋಷಿಗಳಿಂದ ರಚನೆಯಾದ 'ರಾಮಾಯಣ' ಮಹಾಕಾವ್ಯ ಜನಜನಿತವಾಗಿತ್ತು. ರಾಮಾಯಣ ಮಹಾಕಾವ್ಯವು ಋಗ್ವೇದದ ನಂತರ ಬಂದರೂ ಅದು ಋಗ್ವೇದ ಆಧಾರಿತವಲ್ಲ. ಆದರೆ ಅದರಲ್ಲಿ ಬರುವ "ನಳ ಚರಿತ್ರೆ"ಗೆ ಋಗ್ವೇದದಲ್ಲಿ "ದ್ಯೂತ" ಪ್ರಕರಣ ಆಧಾರವಾಗಿದೆ. ಕಾರಣ; ದ್ಯೂತ ಅಂದಿನ ಕಾಲದ ಸಮಾಜದಲ್ಲಿ ರಾಜ-ಮಹಾರಾಜರ "ರಾಜಕ್ರೀಡೆ"ಯಾಗಿತ್ತು. ದ್ಯೂತ ಆಡುವುದು ಅಂದಿನ ಕಾಲದ ರಾಜಧರ್ಮವಾಗಿತ್ತು. ದ್ಯೂತ ಅರಮನೆಯ ಅಂತಃಪುರಕ್ಕಷ್ಟೇ ಸೀಮಿತವಾಗಿರದೆ ಸಾಮಾನ್ಯ ಪ್ರಜೆಗೂ ಜೂಜಾಟದ ಮಾಧ್ಯಮವಾಗಿತ್ತು.

ವೇದ ವಿಂಗಡಣೆಯ ಸಂದರ್ಭದಲ್ಲಿಯೇ ೧೦ನೆಯ ಮಂಡಲದಲ್ಲಿ ಬರುವ ಈ ಕ್ರೀಡೆಯ ದುಷ್ಪರಿಣಾಮ ಮತ್ತು ಈ ಕ್ರೀಡೆಗೆ ದಾಸರಾದ ರಾಜ-ಮಹಾರಾಜರು ಯಾವ ರೀತಿ ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ಪತ್ನಿಯೊಡನೆ ಅರಣ್ಯ ಸೇರುವ ಅಮಾನುಷ ಪ್ರಕ್ರಿಯೆ ರಾಜ-ಮಹಾರಾಜರಿಗಷ್ಟೇ ಸೀಮಿತವಾಗದೆ, ದ್ಯೂತದ ದುಶ್ಚಟಕ್ಕೆ ಬಲಿಯಾದ ಪ್ರಜೆಗಳೂ ತಮ್ಮ ಸರ್ವಸ್ವವನ್ನೂ ಪಣಕ್ಕಿಟ್ಟು ಬರಿಗೈಯಲ್ಲಿ ಬೀದಿಗೆ ಬೀಳುವ ಮಾನವ ಕುಲವನ್ನು ಕಂಡು ಮನನೊಂದ ವೇದವ್ಯಾಸರು ದ್ಯೂತವು ಹೇಗೆ ಒಂದು ಸಾಮ್ರಾಜ್ಯವನ್ನೇ ಯುಗಾಂತಗೊಳಿಸುತ್ತದೆಂದು ಜಗತ್ತಿಗೆ ಅರುಹಲು ಈ ಮಹಾಭಾರತ ಮಹಾಕಾವ್ಯವನ್ನೇ ರಚಿಸಿದ್ದಾರೆ ಎನ್ನುವುದು ನನ್ನ ಅಧ್ಯಯನದಿಂದ ಪಡೆದ ಅಭಿಪ್ರಾಯ ಅಥವಾ 'ಸಿದ್ಧಾಂತ'ವೆನ್ನಬಹುದು.

ವ್ಯಾಸರು ಮಹಾಭಾರತದ ಕಥೆಗೆ ಸಂಬಂಧಿಸಿದ ಹಲವಾರು ಪಾತ್ರಗಳನ್ನೂ, ಘಟನೆಗಳನ್ನೂ ಆಧಾರವಾಗಿಟ್ಟುಕೊಂಡು ಋಗ್ವೇದ ಮೂಲಾನ್ವೇಷಣೆಯನ್ನು ಆಶ್ರಯಿಸಿದ್ದಾರೆಂದು ನನ್ನ ಈ ಅಧ್ಯಯನದಲ್ಲಿ ಆಧಾರ ಮತ್ತು ಪ್ರಮಾಣಸಹಿತ ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

### "ಅಕ್ಷದ್ಯೂತ"ದ ಪರಿಣಾಮವೇ ಮಹಾಭಾರತ "ಕುರುಕ್ಷೇತ್ರ ಯುದ್ಧ" :

**ಮಹಾಭಾರತ** ಭಾರತೀಯ ಧರ್ಮ, ಸಂಸ್ಕೃತಿ, ನಾಗರಿಕತೆಗಳ ಸಮಗ್ರ ದರ್ಶನ ಮಾಡಿಸುವ ಮಹಾಕಾವ್ಯ. ಈ ಗ್ರಂಥದಲ್ಲಿ ಸಂಸ್ಕೃತಿಯ ಒಳ-ಹೊರ ಪಾಪಗಳ ಪಾರದರ್ಶಕ ಶಬ್ದ ಚಿತ್ರಗಳಿವೆ. ವೇದ-ವೇದಾಂಗ ಸಕಲ ಶಾಸ್ತ್ರಗಳ ಸಾರಸರ್ವಸ್ವ ತತ್ತ್ವಸಾರವುಳ್ಳ ವಿಶ್ವಕೋಶ. ನಮಗೆ ದೊರೆತಿರುವ ಇತಿಹಾಸಗಳಲ್ಲಿ ಪ್ರಾಚೀನ ಇತಿಹಾಸವೆಂದರೆ ಮಹಾಭಾರತವೇ! ಭಾರತೀಯ ಕಾವ್ಯಗಳಿಗೆ ಸಾಗರಸದೃಶ ಆಕರ ಈ ಮಹಾಕಾವ್ಯ.

ಚತುರ್ವೇದಗಳನ್ನು ವೇದವ್ಯಾಸರು ವಿಭಾಗ ಮಾಡುವಾಗ ಋಗ್ವೇದದೊಳಗಿನ "ಅಕ್ಷದ್ಯೂತ"ವು ವ್ಯಾಸರಿಗೆ ಕಂಡು ಬಂದಿದ್ದು; ಅದರ ದುಷ್ಪರಿಣಾಮಗಳಿಂದ ಋಷಿಗಳು ಬಹಳ ಪ್ರಭಾವಿತರಾಗಿದ್ದಾರೆಂದೂ, ಈ ದುಷ್ಪರಿಣಾಮವನ್ನು ಜಗತ್ತಿಗೆ ಪರಿಣಾಮಕಾರಿಯಾಗಿ ಬೋಧಿಸುವ ಪಣ ತೊಟ್ಟು ಮಹಾಭಾರತ ಮಹಾಕಾವ್ಯವನ್ನು ರಚಿಸಿದ್ದಾರೆ. **"ಪಾಂಡವರಿಗೂ ಕೌರವರಿಗೂ ನಡೆದ ಯುದ್ಧವೇ ಮಹಾಭಾರತದ ಹೃದ್ಭಾಗ. ಈ ಪ್ರಧಾನ ಕಥೆಗೆ ಕಾಲಕ್ರಮದಲ್ಲಿ ಇತರ ಅನುಷಂಗಿಕ ವಿಷಯಗಳೂ, ಉಪಾಖ್ಯಾನಗಳೂ, ಉಪದೇಶ ಭಾಗಗಳೂ, ದೃಷ್ಟಾಂತ ಕಥೆಗಳೂ, ಮೋಕ್ಷ ಬೋಧಕ ಪ್ರಕರಣಗಳೂ ಅಲ್ಲಲ್ಲಿ ಕೆಲವು ಗದ್ಯ ಭಾಗಗಳೂ ಸೇರಿಸಲ್ಪಟ್ಟವು."**[೫] ಮಹಾಭಾರತದ ನಿಜವಾದ ಕಥೆಯು ಆರಂಭಗೊಳ್ಳುವುದರಲ್ಲಿ ಇರುವ ವಿವಿಧ ಅಭಿಪ್ರಾಯಗಳಂತೆ; ಅಂತ್ಯ ಕಥೆಯಲ್ಲಿಯೂ ನಾನಾ ವಿಧದ ಅಭಿಪ್ರಾಯಗಳಿವೆ. ಕೆಲವರು, "ಪಾಂಡವರು ವನವಾಸ ಅಂತ್ಯದ ಗೋಗ್ರಹಣವೇ ಮಹಾಭಾರತದಅಂತ್ಯ." ಎಂದಿದ್ದಾರೆ. ಇವೆಲ್ಲಾ ಏನೇ ಇದ್ದರೂ, ಅಕ್ಷದ್ಯೂತ ಮಹಾಭಾರತದ ಹೃದ್ಭಾಗ ಎನ್ನುವುದಂತೂ ನಿಜ. ಮಹಾಭಾರತದ ತಿರುಳೇ ಅಕ್ಷದ್ಯೂತವಾಗಿದೆ. ಋಷಿ ಕವಿ 'ದ್ಯೂತ'ದಂತಹ ಪ್ರಕರಣ ಅಥವಾ ಕಥಾವಸ್ತುವಿನಿಂದ ತತ್ತ್ವಜ್ಞನಾಗುತ್ತಾನೆ.

ಋಗ್ವೇದದ ಹತ್ತನೇ ಮಂಡಲದ **"ದ್ಯೂತ"** ಪ್ರಕರಣ 'ದರ್ಶನ'ವಾಯಿತು. **"ರಾಮಾಯಣ"** ಮಹಾಕಾವ್ಯವೂ **ನೆನಪಾಯಿತು.** ಆಗಲೇ **ವ್ಯಾಸರಿಗೆ ತಮ್ಮ ಮಹಾಕಾವ್ಯ ಮಹಾಭಾರತದ ಕಾವ್ಯವಸ್ತುವಿನ ದರ್ಶನ ಹೀಗಾಯಿತು.** ಆಗಲೇ **"ಜಯ-ಭಾರತ"**ದ ಹೊಳಹು ಹೊಳೆದಿರಬೇಕು. **"ಪ್ರಜ್ಞಾನವನವೋನ್ಮೇಶ ಶಾಲಿನಿ ಪ್ರತಿಭಾ"** ಅಲಂಕಾರದ

**ಲಕ್ಷಣಕ್ಕೂ ಮೀಮಾಂಸೆಯಾಯಿತು.**

ವ್ಯಾಸರು ಮಹಾಭಾರತದ ರಚನೆಕಾರರು ಎನ್ನುವುದರ ಜೊತೆಗೆ ಇಲ್ಲಿನ ಕಥಾಭಾಗದ ಒಂದು ಮುಖ್ಯಪಾತ್ರಧಾರಿಗಳೂ ಆಗಿರುವುದೊಂದು ದೊಡ್ಡ ವೈಶಿಷ್ಟ್ಯ.

**"ಅಕ್ಷದ್ಯೂತ" ಪ್ರಸಂಗದಿಂದಾಗಿ ದ್ರೌಪದಿ ಮಹಾಭಾರತದ ಮುಖ್ಯ ಪಾತ್ರವಾಗಿದ್ದಾಳೆ. ಕ್ಷತ್ರಿಯ ಕುಲನಾಶಕ್ಕೆ ಅಗ್ನಿಕನ್ಯೆಯ ಈ ಪಾತ್ರ ಬಹಳ ಪ್ರಮುಖವಾಗಿದೆ.**

**ಈ ಅಕ್ಷದ್ಯೂತಕ್ಕೆ ಮಹಾಭಾರತ ಮಹಾಕಾವ್ಯ ಒಂದು ಸಾಂಕೇತಿಕ ಪ್ರತಿಮೆ– ಕಾವ್ಯ ಪ್ರತಿಮೆಯಾಗಿದೆ.**

**ಕನ್ನಡದಲ್ಲಿ 'ಮಹಾಭಾರತ' ಕುರಿತಾಗಿ ಮಾಡಬೇಕಾದ "ಆಧುನಿಕ ಚಿಂತನೆ" ಯ ಅವಶ್ಯಕತೆಯೇನು?**

ಮಹಾಭಾರತದ ಕುರಿತಾದ "ಆಧುನಿಕ ಚಿಂತನೆ"ಯ ಈ ಪ್ರಯತ್ನಕ್ಕೆ ತೊಡಗುವ ಮೊದಲು "ಆಧುನಿಕ ಚಿಂತನೆ" ಎಂದರೆ ಏನೆಂದು ಸ್ಪಷ್ಟಪಡಿಸಿ ಕೊಳ್ಳಬೇಕಾಗಿದೆ.

ಈಗಾಗಲೇ ಹಲವಾರು ಪ್ರಸಿದ್ಧ ಪಾಶ್ಚಾತ್ಯ ಮತ್ತು ಭಾರತೀಯ ವಿದ್ವಾಂಸರು ಮಹಾಭಾರತ ಮಹಾಕಾವ್ಯವನ್ನು ವಿವಿಧ ದೃಷ್ಟಿಕೋನಗಳಿಂದ ವಿಮರ್ಶಿಸಿದ್ದಾರೆ. ಆದರೆ ಮಹಾಭಾರತದಲ್ಲಿ ಇನ್ನೂ ಅಸಂಖ್ಯಾತ ಜಿಜ್ಞಾಸೆಗಳು, ಸಮಸ್ಯೆಗಳು, ಪ್ರಶ್ನೆಗಳು ಹಾಗೆಯೇ ಉಳಿದಿರುವುದು ನಮಗೆ ತಿಳಿದು ಬರುತ್ತದೆ. ಮಹಾಭಾರತವನ್ನು ಅಧ್ಯಯನ ಮಾಡಿದಂತೆಲ್ಲಾ ನೂರಾರು ಪ್ರಶ್ನೆಗಳು ಕಾಡುತ್ತಲೇ ಹೋಗುವುದು ಸಹಜ. ಇಂತಹ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನದಲ್ಲಿ ನನ್ನದೂ ಒಂದು ಅಳಿಲು ಸೇವೆ. ಇದು ನಿರಂತರ ನಡೆದೇ ಇರುತ್ತದೆ. ಇಲ್ಲಿ ಕಾಣುವಂತಹ ಪ್ರಶ್ನೆಗಳಿಗೆಲ್ಲಾ 'ಇದಮಿತ್ಥಂ' ಎಂದು ಉತ್ತರಿಸುವ ಎದೆಗಾರಿಕೆ ಯಾವ ವಿದ್ವಾಂಸನಿಗೂ ಇಲ್ಲ. ಏಕೆಂದರೆ; **"ಮಾನವನ ಇತಿಹಾಸದಲ್ಲಿ ಅತ್ಯಂತ ಪ್ರಭಾವಶಾಲಿಯಾದ ಇಂದಿನ ವಿಜ್ಞಾನಯುಗದಲ್ಲಿ ಹಿಂದಿನ ದಾರ್ಶನಿಕರಿಗೆ ದೊರೆಯದ ಅನೇಕ ಸಲಕರಣೆಗಳು ಇಂದಿನ ವೈಜ್ಞಾನಿಕರಿಗೆ ದೊರೆತು ಹಿಂದಿನವರಿಗೆ ಅಗೋಚರವಾಗಿದ್ದ ಅನೇಕ ಸಲಕರಣೆಗಳು ಇಂದಿನ ವೈಜ್ಞಾನಿಕರಿಗೆ ದೊರೆತು ಹಿಂದಿನವರಿಗೆ ಅಗೋಚರವಿದ್ದ ಅನೇಕಾನೇಕ ರಹಸ್ಯ ಕ್ಷೇತ್ರಗಳನ್ನು, ವಿಷಯಗಳನ್ನು ಪ್ರವೇಶ ಮಾಡಿದ್ದಾರೆ."**[1] ಆದ್ದರಿಂದ ಹೀಗೆ ಅವಕಾಶ ಇರುವುದರಿಂದ ಆ ಸಾಹಸವನ್ನು ನಾನೀಗ ಕೈಗೊಂಡಿದ್ದೇನೆ. ಈಗಾಗಲೇ ಹಲವಾರು ವಿದ್ವಾಂಸರು ಮಹಾಭಾರತದ ಹುಟ್ಟು, ಬೆಳವಣಿಗೆಯ ಕುರಿತು ಮಾಡಿರುವ ಶೋಧದ ಅನ್ವೇಷಣೆಯಲ್ಲೇ ನಾನೂ ಈ ಅಧ್ಯಯನ ನಡೆಸುವಲ್ಲಿ ಒಂದು ಹೆಜ್ಜೆ ಮುಂದಿಟ್ಟಿದ್ದೇನೆ.

ಮಹಾಭಾರತ ಕಾಲದ ಸಾಮಾಜಿಕ ಜೀವನಕ್ಕೂ ಇಂದಿನ ಆಧುನಿಕ ಜಗತ್ತಿನ ವ್ಯಕ್ತಿಯ ಬದುಕು, ಕುಟುಂಬ, ಸಮಾಜ, ರಾಜಕೀಯ, ಮತ–ಧರ್ಮಗಳು, ನಂಬಿಕೆಗಳು, ನಡವಳಿಕೆಗಳು, ಸಾಂಪತ್ತಿಕ ಸ್ಥಿತಿ, ಅರಿವು ಮೊದಲಾದ ಎಲ್ಲ ಕ್ಷೇತ್ರಗಳಲ್ಲಿಯೂ ಆಗಿರುವ ವಿಭಿನ್ನ ರೀತಿಯ ಜನಜೀವನಕ್ಕೂ ಇರುವ ವ್ಯತ್ಯಾಸ ಅದಕ್ಕೆ ಕಾರಣ ಪರಿವರ್ತನಶೀಲ ಯುಗಧರ್ಮವನ್ನು ಹುಡುಕುವ ಉದ್ದೇಶ. ಏಕೆಂದರೆ, **"ಮಹಾಭಾರತ ಕಾಲದ ಜನ ಜೀವನ ಸುಮಾರು ೫,೦೦೦ ವರ್ಷಗಳಷ್ಟು ಹಿಂದಿನದು. ಮಹಾಭಾರತವೊಂದು ಪಳೆಯುಳಿಕೆಯಾಗಿ, ಹಿಂದಿನ ಕಾಲದ ಜನ–ಜೀವನದ ನೆನಪುಗಳನ್ನು ನೀಡುವ ಗ್ರಂಥವಾಗಿದೆ. ಇಂದಿನ ಜನ–ಜೀವನದ ಅರಿವಿಗೆ ನಿಲುಕದ ಆದರೆ ಜೀವನಕ್ಕೆ ನೆಮ್ಮದಿ ತುಂಬುವ ಯಾವ ಅಂಶಗಳಿಗೆ ಮಹಾಭಾರತ ಮಾರ್ಗದರ್ಶಿಯಾಗಿದೆ ಎನ್ನುವತ್ತ ನಿಖರ ಸೂಚನೆಯಿಲ್ಲದೇ ಅದು ಹೇಗೆ ಇಂದಿಗೂ ಸುಸಂಗತವೆಂದು ನಂಬಲಾದೀತು?"**[2] ಎನ್ನುವ ರಹಸ್ಯವನ್ನು ಭೇದಿಸುವ ಉದ್ದೇಶದಿಂದ ಮಹಾಭಾರತ ಅಧ್ಯಯನವನ್ನು ಆಧುನಿಕ ಚಿಂತನೆಗಳ ಬೆಳಕಿನಲ್ಲಿ ಕೈಗೊಂಡಿರುತ್ತೇನೆ. ಕೇವಲ ಜನಾದರಣೀಯವೊಂದೇ ಒಂದು ಕೃತಿಯ ಸತ್ವಕ್ಕೆ, ಮಹತ್ವಕ್ಕೆ ಸಮರ್ಥನೆ ನೀಡಲಾರದು.

೨೦ನೇ ಶತಮಾನದ ಪ್ರಾರಂಭದವರೆವಿಗೂ ವೇದಮೂಲವಾದ ಧರ್ಮವನ್ನಾಗಲೀ, ಋಷಿ ಪ್ರಣೀತವಾದ **ಸ್ಮೃತಿಗಳನ್ನಾಗಲೀ ಯಾರೂ ಪ್ರಶ್ನಿಸುತ್ತಿರಲಿಲ್ಲ.** ಧರ್ಮ ಎಲ್ಲರನ್ನೂ, ಎಲ್ಲವನ್ನೂ ನಿಯಂತ್ರಿಸುತ್ತಿತ್ತು.

ಮಹಾಭಾರತದಂತಹ ಮಹಾಕಾವ್ಯವನ್ನು ಹೊಸದೃಷ್ಟಿಯಿಂದ ನೋಡುವುದು ಅಥವಾ "ಆಧುನಿಕ ಚಿಂತನೆ"ಗೆ ಒಳಪಡಿಸುವುದೆಂದರೆ ಸಾಮಾನ್ಯ ವಿಚಾರವಲ್ಲ. ಅಂದಿನ ಭಾರತೀಯರು ಚತುರ್ವಿಧ ಪುರುಷಾರ್ಥಗಳ ಸಾಧನೆಗಾಗಿಯೇ ಪ್ರತ್ಯೇಕ ಧಾರ್ಮಿಕ, ಆಧ್ಯಾತ್ಮಿಕ ಗ್ರಂಥಗಳನ್ನು ರಚಿಸುತ್ತಿದ್ದರು. ಆ ಕಾಲಕ್ಕೆ ಅದು ಪ್ರಸ್ತುತವೆನಿಸಿತ್ತು.

ಆದರೆ ಈಗಿನ ಕಾಲಕ್ಕೆ ಅದು ಅಪ್ರಸ್ತುತವೆಂದು ಹೇಳುವುದು ಸರಿಯಲ್ಲ. ಏಕೆಂದರೆ, ಅಂದಿನ ಯುಗಧರ್ಮಕ್ಕನುಗುಣವಾಗಿ, ಭಾರತೀಯರ ಸಾಮಾಜಿಕ ಜನಜೀವನದಲ್ಲಿ ಅಲವತ್ತುಕೊಂಡಿದ್ದ ಸಂಸ್ಕೃತಿಗೆ ಕಾರಣವನ್ನು ಇಂದಿನ ಕಾಲಮಾನದಲ್ಲಿ ವೈಜ್ಞಾನಿಕ ಚಿಂತನೆಗೆ ಒಳಪಡಿಸಿ ಪ್ರಮಾಣಬದ್ಧವಾದ ಶೋಧನೆ ಮಾಡುವುದು ಈ ಅಧ್ಯಯನದ ಮುಖ್ಯ ಉದ್ದೇಶವೂ ಹೌದು.

ಅಂದರೆ ಮಹಾಭಾರತದ ಅಧ್ಯಯನ ಅಥವಾ ಸಂಶೋಧನೆಯನ್ನು ಈವರೆವಿಗೂ ಯಾರೂ ಮಾಡಿಲ್ಲವೆಂದು ಅರ್ಥವಲ್ಲ. ಪಾಶ್ಚಾತ್ಯ, ಪೌರಾತ್ಯ ವಿದ್ವಾಂಸರು ಹಲವರು ಈಗಾಗಲೇ ಈ ಕುರಿತು ಹಲವಾರು ದೃಷ್ಟಿಗಳಿಂದ ಅಧ್ಯಯನ ನಡೆಸಿದ್ದಾರೆ.

**ಮಹಾಭಾರತವು ಮೇಲ್ನೋಟಕ್ಕೆ ಒಂದು ಮಹಾಕಾವ್ಯದಂತೆ ಕಂಡರೂ ಅದು ಒಂದು "ದ್ಯೂತ"ದ ದಾಯಾದಿ ಮತ್ಸರದಿಂದ ಉಂಟಾದ ದುಷ್ಪರಿಣಾಮವನ್ನು ನಿಗೂಢವಾಗಿ; ಧ್ವನಿಪೂರ್ಣವಾಗಿ ತೋರಿಸುವ ಒಂದು ಸಂಕೀರ್ಣ ಕಥೆ. ಈ "ದ್ಯೂತ"ದ ಜೂಜು ಎಲ್ಲಿಯವರೆಗೆ ವಿನಾಶಕಾರಿಯೆಂದರೆ, ಯುಗ-ಯುಗಗಳನ್ನೇ ಬದಲಾಯಿಸುವಷ್ಟು ವಿಪತ್ಕಾರಿ. ಇದನ್ನು ಲೋಕದ ಜನರಿಗೆ ತಿಳಿಸಲೆಂದೇ ವ್ಯಾಸರು "ಭಾರತ" ಮಹಾಕಾವ್ಯವನ್ನು ರಚಿಸಿದರು. ಜಗತ್ತಿನ ಜನರಿಗೆಲ್ಲಾ ಜ್ಞಾನದ ಬೆಳಕನ್ನು ನೀಡಲೆಂದೇ ಹೊರಟ ಮಹಾ ಮುನಿ ವ್ಯಾಸರು ಆಳವಾದ ಮಹಾಮೋಹವೆಂಬ ಅಜ್ಞಾನದ ಅಂಧಕಾರದಲ್ಲಿ ಮುಳುಗಿದ್ದ ಜನತೆಯನ್ನು ಮೇಲೆತ್ತುವ ಲೋಕನಾಥ ಎಂದು ವ್ಯಾಸರನ್ನು ಆನಂದವರ್ಧನ ಹೇಳಿರುವುದು;**

**ಮಹಾಭಾರತದ ಕಾರ್ಯೈಕ್ಯ "ದ್ಯೂತ"ದ ದುಷ್ಪರಿಣಾಮವಾದರೆ; ರಸೈಕ್ಯ – ಶಾಂತರಸ ಎಂದಿರುವುದು ತ್ರಿಕಾಲ ಸತ್ಯ!**

ಮಹಾಭಾರತದ ವಸ್ತು ಇಂತಿಷ್ಟೇ ಎಂದು ನಿರ್ಣಯಿಸುವುದು, ಹೀಗೆಯೇ ಎಂದು ವರ್ಣಿಸತೊಡಗುವುದು ಅಸಾಧ್ಯ ಸಾಹಸ. ಈ ಮಹಾಕೃತಿಯನ್ನು ಭಾರತೀಯ ಇತಿಹಾಸದಲ್ಲೇ ಅತ್ಯಂತ ದುರ್ಗಮವಾದ ಕಾಡು ಎಂದೇ ಈವರೆವಿಗೂ ಭಾವಿಸಲಾಗಿದೆ. **"ಭರತ ಖಂಡದ ಎಲ್ಲ ಸಂಪ್ರದಾಯಗಳು, ನಂಬಿಕೆಗಳು ಜೀವನ ವಿಧಾನಗಳು ಏಕತ್ರ ಸಂಗ್ರಹವಾಗಿರುವ ಏಕೈಕ ಮಹಾಗ್ರಂಥ ಈ ಮಹಾಭಾಗತ."**[೮] ಇಂತಹ ಗ್ರಂಥದ ಕುರಿತಾಗಿ **"ಮಹಾಭಾರತದಲ್ಲಿ ಬಂದಿರುವ ಕಥೆಯನ್ನು ಕೂಲಂಕಷವಾಗಿ ಅಧ್ಯಯನ ಮಾಡುವಾಗ ಕತೆಯೆಂದರೆ ಒಂದು ಜನಾಂಗದ ಆಶೋತ್ತರಗಳನ್ನು ಪೂರ್ಣಗೊಳಿಸುವ, ಅವರ ಜೀವನಕ್ಕೆ ಅರ್ಥ ತಂದುಕೊಡುವ ಒಂದು ಸಾಧನ."**[೯] ಎಂದು ಹೇಳಿರುವುದು ಸ್ಪಷ್ಟವಾಗಿದೆ.

ಇಂತಹ ಮಹಾಕಾವ್ಯ ಗ್ರಂಥದ ಬಗೆಗೆ **"ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗೂ ಮಹಾಭಾರತಕ್ಕೆ ವ್ಯಾಖ್ಯಾನ ಬರೆಯುವುದು, ಅರ್ಥನಿರ್ಣಯ ಮಾಡುವುದು ವಿದ್ವತ್ತಿನ ಗರಡಿಯೆಂದು ನಿಕಷವೆಂದೂ ಭಾವಿಸಲಾಗಿದೆ."**[೧೦] ಹಾಗಾಗಿ ಮಹಾಭಾರತವನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡುವ, ಆಧುನಿಕವಾಗಿ ಚಿಂತಿಸುವ ಪ್ರಯತ್ನಕ್ಕೆ ಯಾರೂ ಕೈಹಾಕಿಲ್ಲ.

ಯಜ್ಞ-ಯಾಗಾದಿ ಕಾಲದ ವಿರಾಮವೇಳೆಯಲ್ಲಿ ಕಥೆ ಹೇಳುವ ಸೌತಿಗಳು 'ಧರ್ಮದ ವ್ಯಾಖ್ಯೆಯಲ್ಲಿ ಅಡಕವಾಗಿದ್ದ ಉದಾಗನೀತಿ ಎಲ್ಲವೂ ಮರೆಯಾಗಿ ಹೋದ ತದನಂತರ ಬಲಾಧಿಪತ್ಯದ ಕಾಲದ ಪವಾಡಗಳ ಬೆರಗು, ಕರ್ತವ್ಯ ನಿರ್ವಹಿಸದೆಯೂ ಜೀವನ ಫಲಗಳನ್ನು ಗಿಟ್ಟಿಸಬಲ್ಲ ತಂತ್ರ, ಜನರ ಒಳಿತು-ಕೆಡಕುಗಳಿಗೆ ಕಾರಣನಾದ ದೇವರು. ಈ ದೇವಾನುಗ್ರಹ ಸಂಪಾದಿಸಲು ಸಲ್ಲಿಸಬೇಕಾದ ಕೈಂಕರ್ಯ ಮುಂತಾದವು ರಂಗಪ್ರವೇಶಿಸಿ ವರ್ತಮಾನ ಜೀವನವನ್ನು ಬಂದಳಿಕೆಗಳಂತೆ ಬಿಗಿದುಕೊಂಡು ವಿಕಸಿಸುವುದು ಹೇಗೆತಾನೇ ಸಾಧ್ಯ?..

ವೈಜ್ಞಾನಿಕ ಮನೋಧರ್ಮದ "ಆಧುನಿಕ ಚಿಂತನೆ"ಯ ತಾಯಿಬೇರಿಗೆ ಹಿಡಿದಿರುವ ಗೆದ್ದಲು ಈ ದೇವರು. **"ದೇವರು, ರೂಪ, ಗುಣ, ಭಾವನೆ, ಲಹರಿ, ಸಂತೋಷ, ದುಃಖ, ಕೋಪ, ಮತ್ಸರ, ಕಾಮ ಮುಂತಾದ ಸಕಲ ಮಾನವೀಯ ಸದ್ಗುಣ-ದುರ್ಗುಣಗಳಿಂದ ಬಾಧಿತವಾಗಿರುವ ಜನರ ಅದೃಷ್ಟದ ಜೊತೆ ಚಕ್ಕಂದವಾಡುತ್ತಿರುವ ಮತ್ತು**

**ಅವರಲ್ಲಿ ನಿಷ್ಕ್ರಿಯತೆ ಪ್ರಚೋದಿಸುತ್ತಿದೆ."**[೧೧] ಆದ್ದರಿಂದ ಹೀಗಿರುವ ಈ ವಿಕರ್ಷಕ ದೇವರನ್ನು ಈ ಅಧ್ಯಯನದ ಮಧ್ಯೆ ನಿವಾರಿಸಿದ ವಿನಃ **ವೈಜ್ಞಾನಿಕ ಮನೋಧರ್ಮ ಅಭಿವರ್ಧಿಸಲಾರದು.**

ಮಹಾಭಾರತದಲ್ಲಿ ಸಂಸ್ಕೃತಿ, ಪರಿಕಲ್ಪನೆ, 'ಆಧುನಿಕ ಚಿಂತನೆ'ಯೆಂಬ ವೈಚಾರಿಕ ಅಧ್ಯಯನಕ್ಕೆ ಕೈಗೊಳ್ಳಲಾಗಿದೆ. ಆದರೆ ರಾಮಾಯಣ, ಮಹಾಭಾರತದ ಬಗ್ಗೆ ಮಾತನಾಡಲು ಅಗಾಧ ಪ್ರತಿಭೆ ಅವಶ್ಯಕ ಎಂದು ನಾನಾ ವಿದ್ವಾಂಸರ ಅಭಿಪ್ರಾಯವಾಗಿದೆ. ಅವುಗಳನ್ನು ಜೀವಮಾನವೆಲ್ಲ ಪಾರಾಯಣ ಮಾಡಿ ಅರಗಿಸಿಕೊಂಡವರು ಏನಾದರೂ ಸ್ವಲ್ಪ ಹೇಳಬಹುದು. ಆದ್ದರಿಂದಲೇ ಸಂಸ್ಕೃತ ಸಾಹಿತ್ಯ ಸಮುದ್ರದಲ್ಲಿ ಈಜಾಡಿದ **F. Max Muller, "Life seems too short to read such a dignatic work as a whole."**[12] ಎಂದು ಉದ್ಗಾರವೆತ್ತಿದ್ದಾನೆ. 'ಮಹತ್ವಾತ್ ಭಾರತ್ವಾಚ್ಚ ಮಹಾಭಾರತ ಮುಚ್ಯತೇ!' ಗಾತ್ರದಲ್ಲೂ, ಜ್ಞಾನದಲ್ಲೂ ಪ್ರಪಂಚದಲ್ಲೇ ಈ ಮಹಾಭಾರತವನ್ನು ಮೀರಿಸಿದ ಮಹಾಕಾವ್ಯ ಮತ್ತೊಂದಿಲ್ಲ.

ಈ ಅಧ್ಯಯನದಲ್ಲಿ ಮಹಾಕವಿ ಪಂಪನಂತೆಯೇ ವಿನಯವನ್ನು ತೋರುವುದರೊಂದಿಗೆ, ಕುಮಾರವ್ಯಾಸ ಮಹಾಕವಿಗೆ ವೀರನಾರಾಯಣನೇ ಕವಿಯಾದ ಹಾಗೆ ನನಗೆ ನನ್ನ ಅಧ್ಯಯನವೇ ನೆರವನ್ನು ಪಡೆದುಕೊಳ್ಳುವ ಮುಖಾಂತರ ಈ ಅಧ್ಯಯನವನ್ನು ಸಾಮಾಜಿಕ, ಸಾಂಸ್ಕೃತಿಕ ವಿಷಯಕ್ಕಷ್ಟೇ ಸೀಮಿತಗೊಳಿಸಿ ಮಹಾಕಾವ್ಯವನ್ನು ವಸ್ತುನಿಷ್ಠ ಅಧ್ಯಯನದ ವ್ಯಾಪ್ತಿಗೆ ತಂದುಕೊಂಡು ಸಂಸ್ಕೃತಿಯನ್ನು ವೈಜ್ಞಾನಿಕವಾಗಿ ಬೆಲೆಕಟ್ಟುವ ಪ್ರಯತ್ನವನ್ನು ಮಾಡಲಾಗಿದೆ.

ಮಹಾಭಾರತ, **"ಪ್ರಾಚೀನ ಭಾರತ ಸಂಸ್ಕೃತಿಯ ಇತಿಹಾಸವೆಂದು ಪ್ರಸಿದ್ಧವಾದ ಜಗತ್ತಿನ ಮಹಾಕಾವ್ಯಗಳಲ್ಲಿ ಅಗ್ರಗಣ್ಯವಾದುದು."**[೧೩] ಎಂಬ ಗೌರವಕ್ಕೆ ಪಾತ್ರವಾಗಿರುವುದೇನೋ ನಿಜ. ಆದರೆ ಇಲ್ಲಿ ಕೌರವರು ಮತ್ತು ಪಾಂಡವರು ಎಂದು ಪ್ರತ್ಯೇಕವಾಗಿ ಗುರ್ತಿಸಿದರೂ ಈ ಎರಡೂ ಪಕ್ಷಗಳು ಕುರುವಂಶಕ್ಕೇ ಸೇರಿದ **"ಕೌರವಾಃ"** ಎಂದೇ ಸಂಭೋದಿಸಲಾಗಿದೆ. ಎರಡೂ ಪಕ್ಷಗಳೂ ಕುರುವಂಶಕ್ಕೆ ಸೇರಿದ್ದರೂ ಗುರ್ತಿಸಲಿಕ್ಕಾಗಿ ಪ್ರತ್ಯೇಕವಾಗಿ ನಿರ್ದೇಶಿಸಲಾಗಿದೆ.

ಇದೂವರೆಗೂ ಮಹಾಭಾರತವನ್ನು ಜನಜೀವನದ ಅಧ್ಯಯನದ ಗುರಿಯನ್ನಾಗಿರಿಸಿಕೊಂಡು ತಮ್ಮ ಪ್ರತಿಭೆ, ಪಾಂಡಿತ್ಯ, ಲೋಕಾನುಭವಗಳನ್ನೆಲ್ಲ ಧಾರೆಯೆರೆದಿದ್ದಾರೆ. **"ಪೂರ್ವ–ಪಶ್ಚಿಮದ ಪಂಡಿತರುಗಳ, ವಿದ್ವಾಂಸರ ಶ್ರಮ–ಸಾಧನೆಗಳು ಅನನ್ಯವಾಗಿವೆ. ಶತಮಾನಗಳಿಂದ ಈ ಮಹನೀಯರು ಮಾಡಿದ ಸಂಶೋಧನೆಯೇ ಇತಿಹಾಸವಾಗುವಷ್ಟು ಸುದೀರ್ಘವಾಗಿದೆ."**[೧೪] ಮಹಾಭಾರತದಲ್ಲಿ ಸಂಸ್ಕೃತಿಯ ಶೋಧನೆ ಮತ್ತು ಆಧುನಿಕ ಚಿಂತನೆ ಪ್ರಾಚೀನ ಭಾರತದ ಇತಿಹಾಸದ ಪುನರ್ನಿರ್ಮಾಣವೇ ಆಗಿದೆ. ಅಷ್ಟೇ ಅಲ್ಲ, **"ಇದೊಂದು 'ಯುಗದ ಸಂಸ್ಕೃತಿಯ ಚಿತ್ರಣ'ವೇ ಆಗಿದೆ."**[೧೫] (ಋಗ್ವೇದದ ಆಧಾರದಿಂದ) **"ಇಲ್ಲಿ ಪಾಂಡವರು ಹಾಗೂ ಅವರಿಗೂ ಹಿಂದಿನ ಭಾರತೀಯ ಸಂಸ್ಕೃತಿಯನ್ನೂ ಕಾಣಬಹುದು. ಮಹಾಭಾರತದ ಅಧ್ಯಯನವನ್ನು ವಿಚಾರಯುಕ್ತವಾದ ಶ್ರದ್ಧೆ ಹಾಗೂ ಜೀವನ ಮೌಲ್ಯಗಳ ಪರಿಶೀಲನೆಯ ಗುರಿಯನ್ನು ಹೊಂದಿದ್ದಾರೆ.** ಮುಂದಿನವರು ಈ ಮಹಾಕಾವ್ಯವನ್ನು **ಒಂದು ಧಾರ್ಮಿಕ, ನೈತಿಕ ಕಾವ್ಯವನ್ನಾಗಿ ಮಾಡಲೆಂದೇ ಇದರಲ್ಲಿ ಅವರವರ ಮತ–ಧರ್ಮಗಳಿಗೆ ಸಂಬಂಧಪಟ್ಟ ಆಖ್ಯಾನ, ಉಪಾಖ್ಯಾನ, ಭಾಗವತ–ಪುರಾಣಗಳ ಕಥೆಗಳನ್ನು, ಪ್ರಾಚೀನ ವೀರಗಾಥೆ, ಋಗ್ವೇದದ ನಾರಾಶಂಸಿ ಗಾಥೆಯ ಮಾದರಿಗಳ ಉಪಾಖ್ಯಾನಗಳನ್ನು ಸೇರಿಸುತ್ತಾ ಹೋಗಿ ೧,೦೦,೦೦೦ ಶ್ಲೋಕದ ಕಾವ್ಯವನ್ನಾಗಿಸಿದ್ದಾರೆ."**[೧೬] **ಮಹಾಭಾರತದಲ್ಲಿ ಭಾರತ ವರ್ಷದ ಧಾರ್ಮಿಕ, ರಾಜನೈತಿಕ, ಸಾಮಾಜಿಕ, ಆರ್ಥಿಕ, ಔದ್ಯೋಗಿಕ ಹಾಗೂ ಅನ್ಯ ಪ್ರಕಾರದ ಸ್ಥಿತಿಗಳು ಹೇಗಿದ್ದವೆಂಬುದರ ಉತ್ತಮ ಚಿತ್ರವು ಕಾವ್ಯದಲ್ಲಿದೆ.**

ಮಹಾಭಾರತ ಭಾರತೀಯ ಸಾಹಿತ್ಯ–ಸಂಸ್ಕೃತಿಗಳ ವಿಶ್ವಕೋಶ. ಇದು ಭಾರತ ದೇಶದ ಮುಂದಿನ ಸಂತತಿಗಳಿಗೆ ದೇಶದ **"ಗತಕಾಲದ ಪರಿಸ್ಥಿತಿಗಳ ಕುರಿತು ವಿಫುಲ ಮಾಹಿತಿ ನೀಡುವುದಾಗಿದೆ. ದೇಶದ ಸಾಂಸ್ಕೃತಿಕ ಸಾಮಾಜಿಕ ಜೀವನದ ನಾನಾ ಸ್ವರೂಪಗಳ ಬಗೆಗೂ, ರಾಜಕೀಯ ಸಂಘಟನೆ ಹಾಗೂ ಪುರಾತನ ಭಾರತೀಯರ ಅನುದಿನ ಜೀವನದ ಬಗೆಗೂ ಅತ್ಯಂತ ಸ್ವಾರಸ್ಯಕರ ವಿಷಯಗಳನ್ನು ಒಳಗೊಂಡಿವೆ."**[೧೭] ಹಾಗೆಯೇ, **"ಇಂದಿನ ನವನಗರೀಕರಣ ವೈವಿಧ್ಯಪೂರ್ಣವಾದ ಪುರಾತಾತ್ವಿಕ ಸಂಸ್ಕೃತಿಗಳಿಂದ ಉದಿಸಿತು."**[೧೮] ಎನ್ನುವುದನ್ನು

ಮರೆಯುವಂತಿಲ್ಲ. **"ಈ ಗ್ರಂಥವು ಶತಮಾನಗಳವರೆಗೆ ಬೆಳೆದು ಬಂದ ಅನೇಕರ ಕೃತಿಯಾಗಿದೆ."**[೧೯] ಇದೊಂದು **ಸಾಹಿತ್ಯ ದೈತ್ಯ** (Literary Monster) ಎಂದು ಪಾಶ್ಚಾತ್ಯರು ಪ್ರತಿಪಾದಿಸಿದ್ದಾರೆ.

ಡಾ|| ಇರಾವತಿ ಬಾಯಿ ಕರ್ವೆ ಅವರು ತಮ್ಮ 'ಯುಗಾಂತರ' ಗ್ರಂಥ, (ಪು. ೨೬ರಲ್ಲಿ) "ಮಾನವೀ ಜೀವನವು ವಿಫಲವಾಗಿರುವುದು–ಇದನ್ನ ಮನಸ್ಸಿನ ಮೇಲೆ ಬಿಂಬಿಸಲಿಕ್ಕೇ 'ಮಹಾಭಾರತ'ವನ್ನು ರಚಿಸಿರಲಿಕ್ಕಿಲ್ಲವೇ? ಎಂದು ಪ್ರಶ್ನಿಸಿದ್ದಾರೆ. **'ಅವರ ಈ ಮೌಲಿಕ ಪ್ರಶ್ನೆ ಜಾಗತಿಕ ಸಂಸ್ಕೃತಿಗೆ ಮಹತ್ವದ್ದು ಮತ್ತು ಇದನ್ನು ಒರೆಗೆ ಹಚ್ಚಿ ನೋಡುವುದು ವಿಚಾರವಂತರ ಕರ್ತವ್ಯವಾಗಿದೆ."**[೨೦] ಎಂದಿರುವ ಡಾ|| ಶಂ.ಬಾ.ಜೋಶಿ ಅವರ ಮಾತನ್ನು ನಾವಿಲ್ಲಿ ಗಮನಿಸಬೇಕಾಗಿದೆ.

ಮಹಾಭಾರತದ ಬಗ್ಗೆ ಓಲ್ಡೆಂಬರ್ಗ್, ವಿಂಟರ್ನಿಟ್ಸ್, ಚಾರ್ಲ್ಸ್‌ವಿಲ್ಕಿಸನ್ಸ್, ಬಾಪ, ಲಾಸನ್, ವೆಬರ್, ಲುಡ್‌ವಿಗ್, ಸೊರೆನ್‌ಸನ್, ಅಡಾಲ್ಫ್ ಹಾಲ್ಟ್ಸ್‌ಮನ್, ವಾನ್‌ಶ್ರೋಡರ್, ಗ್ಯೆರ್‌ಸನ್, ಬುಲರ್‌ಡಾ, ಹಾಪ್ಕಿನ್ಸ್, ಜೆ.ಹರ್ಟೆಲ್, ಜೋಸೆಫ್ ಡಾಲ್ಮನ್, ಏಬಾರ್–ಮುಂತಾದ ಪಾಶ್ಚಾತ್ಯ, ಪೌರಾತ್ಯ ವಿದ್ವಾಂಸರು ಪ್ರಶಂಸಿಸಿರುವುದೂ ಮಹಾಭಾರತ ಮಹಾಕಾವ್ಯದ ಮಹತ್ವವಾಗಿದೆ.

**'ಮಹಾಭಾರತ'**ವನ್ನು ಈವರೆವಿಗೂ ಯಾಕೆ ಯಾರೂ **ಪೂರ್ಣಪ್ರಮಾಣದಲ್ಲಿ** ವೈಚಾರಿಕವಾಗಿಯಾಗಲೀ ಅಥವಾ ವೈಜ್ಞಾನಿಕವಾಗಿಯೇ ಆಗಲಿ **"ಆಧುನಿಕ"**ವಾಗಿ ಚಿಂತಿಸುವ ಪ್ರಯತ್ನ ಮಾಡಲಿಲ್ಲ? ಎನ್ನುವಂತಹ ಒಂದು ಜಟಿಲವಾದ ಪ್ರಶ್ನೆ ಸಹಜವಾಗಿ ನಮ್ಮೆದುರು ನಿಲ್ಲುತ್ತದೆ. ಇದಕ್ಕೆ ಕಾರಣ ಇಷ್ಟೇ; 'ಮಹಾಭಾರತ'ದಂತಹ ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಪುರಾಣೇತಿಹಾಸಗಳಿಗೆ ಪ್ರಪ್ರಥಮ ಸ್ಥಾನವಿದೆ. ಶ್ರೀಮಾನ್ ಎ.ಆರ್. ಕೃಷ್ಣಶಾಸ್ತ್ರಿಯವರು ಹೇಳುವಂತೆ, "ಮಹಾಭಾರತವು **'ಇತಿಹಾಸ'** ಎಂದರೆ (ಇತಿ: ಹ + ಆಸ) ಹೀಗೇ ಇತ್ತಂತೆ, ಹೀಗೇ ನಡೆಯಿತಂತೆ ಎಂದು ಹೇಳುವ ಗ್ರಂಥ, ಹಿಂದಿನ ಚರಿತ್ರೆ. ಆದರೆ ಈಗಿನ

ಕಾಲದಲ್ಲಿ ನಮಗೆ ಪರಿಚಿತವಾಗಿರುವಂಥ **ಚರಿತ್ರೆ** ಅಲ್ಲ."[೨೧] ಚರಿತ್ರೆಯನ್ನು ರೂಪಿಸಲು ಆಧಾರಗಳ ಅವಶ್ಯವಿದೆ. ಲಭ್ಯವಿರುವ ಆಧಾರಗಳ ಮೂಲಕ ಸತ್ಯಾಂಶಗಳನ್ನು ರೂಪಿಸಬೇಕು.

೧. **ಯಾವುದೇ** ಒಂದು ಒಂದು ಕೃತಿಯನ್ನು ಚಾರಿತ್ರಿಕವಾಗಿ ರೂಪಿಸಲು ಪ್ರಾಕ್ತನ ಶಾಸ್ತ್ರದ ಪ್ರಾಚೀನ ಅವಶೇಷಗಳು, ಅಧ್ಯಯನಕ್ಕೆ ಶಾಸನಗಳು, ಪ್ರಾಚೀನ ನಾಣ್ಯಗಳು, ಪ್ರಾಚೀನ ಅವಶೇಷಗಳು, ಸಾಹಿತ್ಯ, ವಿದೇಶಿಯರ ಬರವಣಿಗೆ ಇತ್ಯಾದಿ ಚಾರಿತ್ರಿಕ ಮೂಲಾಧಾರಗಳು ಬೇಕು. ಆದರೆ **'ಮಹಾಭಾರತ'**ಕ್ಕೆ ಸಂಬಂಧಿಸಿದ ಈ ಯಾವ ಮೂಲಾಧಾರಗಳೂ ಇಲ್ಲದ ಮೇಲೆ ಅದು 'ಚರಿತ್ರೆ' ಎನಿಸಲಾರದು. ಹಾಗಾಗಿಯೇ 'ಇತಿಹಾಸ'ವಾಗಿ ಉಳಿದಿದೆ.

೨. **ವೈಜ್ಞಾನಿಕ ಮನೋಧರ್ಮ**ವಿಲ್ಲದಿದ್ದಲ್ಲಿ ಮಹಾಭಾರತದ **ಪುನರ್ ಮೌಲ್ಯೀಕರಣ ಶೋಧ ಸಾಧ್ಯವೇ ಇಲ್ಲ.** ಸಂಶೋಧನೆಯು ಪ್ರಧಾನವಾಗಿ ಕಟ್ಟುವ ಕೆಲಸ; ಕಾಲವನ್ನು ಕ್ರಮಬದ್ಧವಾಗಿ ಕಟ್ಟುವ ಕೆಲಸ. ವರ್ತಮಾನದಲ್ಲಿ ನಿಂತು ಭೂತವನ್ನು ಕಟ್ಟಿಕೊಡುವಾಗ ಉಂಟಾಗುವ **ವೈರುಧ್ಯಗಳನ್ನು** ಮೀರುತ್ತ ಸಮಚಿತ್ತವನ್ನು ಕಾಯ್ದುಕೊಳ್ಳಬೇಕಾದ ಸಾಂಸ್ಕೃತಿಕ ಜವಾಬ್ದಾರಿಯ ಕ್ರಿಯೆ. ಅದರಿಂದ ಸಂಸ್ಕೃತಿಯ ಪುನಾರಚನೆಯಲ್ಲಿ **ಸಂಶೋಧನೆಯ ಪಾತ್ರ ಮಹತ್ವವನ್ನು ಪಡೆಯುತ್ತದೆ.** "ಗ್ರಂಥದ ರಚನೆಯ ಸಂದರ್ಭದಲ್ಲಿ ಉಂಟಾಗಿರಬಹುದಾದ ತಪ್ಪು ಗ್ರಹಿಕೆಗಳ ಕಾರಣದಿಂದಾಗಿ **'ಪುನಾರಚನೆ'**ಯ ಅಗತ್ಯ ಬೀಳುತ್ತದೆ."[೨೨] ವೈಜ್ಞಾನಿಕ ಮನೋಧರ್ಮ ಅತ್ಯವಶ್ಯಕವಾಗಿದೆ.

೩. ಮಹಾಭಾರತದಲ್ಲಿ ಅಲ್ಲಲ್ಲಿ ಉಪಲಬ್ಧವಾಗಿರುವ ಪ್ರಕ್ಷಿಪ್ತಗಳಿಗೆ "ದುರಹಂಕಾರಿಗಳಾದ ಕೆಲವು ದುಷ್ಟ ವಿದ್ವಾಂಸರು ಭಾರತಾದಿ ಮೂಲ ಗ್ರಂಥದ ಕೆಲವು ಕಡೆಗಳಲ್ಲಿ ತಮ್ಮ ಮತಕ್ಕೆ ಅನುಕೂಲವಾದ ಶ್ಲೋಕಗಳನ್ನು ತಾವೇ ರಚಿಸಿ ಸೇರಿಸಿರುತ್ತಾರೆ. ಕೆಲವೆಡೆ ತಮಗೆ ಪ್ರತಿಕೂಲವಾದ ಶ್ಲೋಕಗಳನ್ನು ತೆಗೆದು ಬಿಡುತ್ತಾರೆ. ಕಥಾ ವಿಚ್ಛೇದವನ್ನುಂಟು ಮಾಡಿ ತಮಗೆ ಅಭಿಪ್ರೇತವಾದ ಕಥೆಗೆ ಅನುಕೂಲವಾದ ಶ್ಲೋಕಗಳನ್ನು ಸೇರಿಸಿರುತ್ತಾರೆ. ಪಾಠಕ್ರಮದಲ್ಲಿ ಪ್ರಚಲಿತವಿರುವ ಭಾರತಾದಿ ಗ್ರಂಥಗಳೂ ಕೂಡ ದುಷ್ಟ– ವಿದ್ವಾಂಸರ ಕಪಟದಿಂದ

ಲುಪ್ತವಾದಂತೆಯೇ ಆಗಿದೆ."[೨೩] ಇದಕ್ಕೆ ಉದಾಹರಣೆಯಾಗಿ; ಸತ್ಯವತಿ, ಶಂತನು, ಭೀಷ್ಮ, ಪರಾಶರ, ದೂರ್ವಾಸರಂತಹ ಋಷಿಗಳ ಕಾಮದಾಹದ ಕಪಟ, ಕೃಷ್ಣದ್ವೈಪಾಯನ, ಪಾಂಡವರ ಜನನ, ಕುಂತಿಯ ಜನನ – ಕರ್ಣನ ಜನನ, ದ್ರೋಣ – ಕೃಪ, ಕೃಪಿಯರ ಜನನ ಇತ್ಯಾದಿ. ಯುಧಿಷ್ಠಿರ–ಭೀಮಾದಿ ಪಾತ್ರಗಳು ಬ್ರಹ್ಮಾದಿ ದೇವತೆಗಳಾಗಿರುವುದು ದ್ರೌಪದಿ ಅಗ್ನಿಕನ್ಯೆ–ಯಜ್ಞಕನ್ಯೆಯಾಗಿರುವುದು, ಧೃಷ್ಟದ್ಯುಮ್ನನ ಜನನ ನಿಗೂಢವಾಗಿರುವುದು.

೪. ಭೃಗುಋಷಿ ಇತ್ಯಾದಿ ಹಲವಾರು ಋಷಿಗಳನ್ನು ಶ್ರೇಷ್ಠರನ್ನಾಗಿಸಲು 'ಅಯೋನಿಜ'ರನ್ನಾಗಿ ಜನ್ಮವಿತ್ತಿರುವುದು ಕಂಡುಬರುತ್ತದೆ.

೫. ಭೀಮನನ್ನು ಬಲಶಾಲಿಯನ್ನಾಗಿ ಮಾಡಲು ವಾಯುಪುತ್ರನನ್ನಾಗಿಸಿರುವುದು, ಅಶ್ವತ್ಥಾಮ ರುದ್ರ ಸ್ವರೂಪನಾಗಿರುವುದು;

**೬. ವಸುದೇವ ಸುತೋನಾಯಂ ನಾಯಂ ಗರ್ಭೇವಸತ್ ಪ್ರಭುಃ । ನಾಯ ದಶರಥಾತ್ ಜಾತೋ ನ ಚಾಪಿ ಜಮದಗ್ನಿತಃ ॥**

"ಶ್ರೀಕೃಷ್ಣನು ವಸ್ತುತಃ ವಸುದೇವನ ಮಗನಲ್ಲ. ಅವನಿಗೆ ಗರ್ಭವಾಸವೇ ಇಲ್ಲ. ಇದರಂತೆ ರಾಮನು ದಶರಥನಿಂದ, ಪರಶುರಾಮನು ಜಮದಗ್ನಿಯಿಂದ ಹುಟ್ಟಿದವನಲ್ಲ. ಭಗವದವತಾರಗಳಿಗೆ ಜನನವೇ ಇಲ್ಲ."[೨೪] ಮಹಾಭಾರತದಲ್ಲಿಯ ಸಂತಾನಪ್ರಾಪ್ತಿ ವಂಶೋತ್ಪತ್ತಿಗೂ ಹಲವು ಋಷಿಗಳ ಜನನಕ್ಕೂ ಇದೇ ಕಾರಣ.

ಇದಕ್ಕೆ ತದ್‌ವಿರುದ್ಧವಾದ ಕೃಷ್ಣ ಸೂಕ್ತವೊಂದನ್ನು ಗಮನಿಸಿದರೆ;

**"॥ ಮಮ ಯೊನಿರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ॥**
**। ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥"** [೨೫]

– ಯಾವುದನ್ನು ತಿಳಿದು ಎಲ್ಲ ಮನನಶೀಲರು ಸಂಸಾರದಿಂದ ಮುಕ್ತಿಯನ್ನು ಪಡೆದಿರುವರೋ, ಅಂತಹ ಜ್ಞೇಯ ವಿಷಯಗಳಲ್ಲಿ ಉತ್ತಮವಾದ ಇನ್ನೊಂದು ವಿಷಯವನ್ನು ಹೇಳುವೆನು. ಅರ್ಜುನ ಮಹಾಲಕ್ಷ್ಮಿಯು ನನ್ನ ಮಡದಿಯು ಅವಳಲ್ಲಿ ನಾನು ಇಪ್ಪತ್ನಾಲ್ಕು ತತ್ತ್ವಗಳ ಅಂಶದಿಂದ ಕೂಡಿದ ಜೀವರನ್ನು 'ರೇತೋರೂಪ'ದಿಂದ ಹೊರಪಡಿಸಿ ತರುತ್ತೇನೆ. ಅನಂತರ ಎಲ್ಲ ಜೀವರ ಉತ್ಪತ್ತಿಯಾಗುತ್ತದೆ. ಕೃಷ್ಣನೇ ಹೀಗೆ ಹೇಳಿದ ಮೇಲೆ ಇನ್ನು ಎಲ್ಲಿಂದರಲ್ಲಿ ಬಿದ್ದ ರೇತಸ್ಸಿನಿಂದ ಗರ್ಭಾಶ್ರಯವಿಲ್ಲದೆ ಜೀವರ ಉತ್ಪತ್ತಿ ಆಗಲು ಹೇಗೆ ಸಾಧ್ಯ? ಹೀಗೆ ಮನಗಂಡಾಗ ಇದನ್ನು ನಾವು ವೈಜ್ಞಾನಿಕವಾಗಿ ಚಿಂತಿಸಲು ಅವಕಾಶ ದೊರೆಯುತ್ತದೆ.

**೭. ಆದರೆ ಇಲ್ಲಿ ಸೂತರು ನಿರ್ವಹಿಸಿದಂತಹ ಪಾತ್ರ ಎಂಥಹದು? :**

ಸಾಮ್ರಾಜ್ಯಶಾಹಿಯ ಮತ್ತೊಂದು ಮಹತ್ವಪೂರ್ಣ ಅಂಗವು "ಪ್ರಚಾರಾಂಗ". ರಾಜಮಹಾರಾಜರ ಶೌರ್ಯದ ಗುಣಗಾನವನ್ನು ರಾಜ್ಯದ ಮೂಲೆ ಮೂಲೆಗೆ ಮುಟ್ಟಿಸುವ, ಆ ಮೂಲಕ ರಾಜನು ದೇವಸಮಾನನು, ಮಹಿಮಾನ್ವಿತನು – ಎಂಬ ಭಾವನೆಯನ್ನು ಜನರಲ್ಲಿ ಮೂಡಿಸಿ ಆತನಿಗೆ ಸಂಪೂರ್ಣ ವಿಧೇಯತೆಯ ಮಾನಸಿಕ ಸ್ಥಿತಿಯನ್ನು ಸಮಾಜದಲ್ಲಿ ಪ್ರವರ್ಧಿಸುವ ಸಾಧನ–**ಸೂತ**ರೆಂಬ ಒಂದು ವರ್ಗವನ್ನು ಹುಟ್ಟುಹಾಕಿ ಸಂಪೂರ್ಣವಾಗಿ ಅವರನ್ನು ಜಾಹೀರಾತಿನ ಈ ಕಾರ್ಯಕ್ಕಾಗಿ ಬೆಳೆಸಿದ್ದು; ಅವರು ಪುರಾಣಪಟುಗಳು. "ದೇವತೆಗಳ ಮಹಾತ್ಮೆಯ ನೆವದಲ್ಲಿ ತಮ್ಮ ರಾಜನ ಮಹಿಮೆ–ಪ್ರತಾಪಗಳನ್ನು ಸೇರಿಸಿಕೊಂಡು ಜನರಿಗೆ ಮುಟ್ಟಿಸುವ ಅವರ ಮನಸ್ಸಿನಲ್ಲಿ ಅಚ್ಚೊತ್ತುವ ಉಪನ್ಯಾಸದ ವಿಶಿಷ್ಟ ತಂತ್ರದಲ್ಲಿ ಅವರು ನಿಪುಣರಾದರು. ಇವೇ **ಪುರಾಣಗಳ ಹುಟ್ಟಿಗೆ ಮೂಲವು."[೨೬] ಧರ್ಮದ ಕಲ್ಪನೆಗಳು ದೇವ್ವಗಳನ್ನು ಸೃಷ್ಟಿಸಿದವರು ಪುರಾಣಿಕರು. ಇವೇ ಮುಂದೆ 'ಅಷ್ಟಾದಶ ಪುರಾಣ'ಗಳೆಂದು ಪ್ರಸಿದ್ಧಿಯಾದವು. ಇವರ ಈ ಕಲ್ಪನೆಗಳಿಗೆ ಮೂಲ ಆಕರ ವೇದ ಸಾಹಿತ್ಯ. ಮುಂದಿನ 'ಮತಧರ್ಮ'ಗಳಿಗೆಲ್ಲ ಈ ಋಷಿಗಳು, ತತ್ತ್ವವೇತ್ತರು, ದಾರ್ಶನಿಕರು ಕಾರಣರಾದರು. ಇವರ ಮಾತೇ ವೇದವಾಕ್ಯವಾಯಿತು. ಇದಕ್ಕೆಲ್ಲ ತಳಹದಿ ವೈದಿಕ ಧರ್ಮ– ವೈದಿಕ ಸಾಹಿತ್ಯ** "ಹಿಂದಿನ ಬ್ರಾಹ್ಮಣ–ಉಪನಿಷತ್ತುಗಳ ಬಳಸು ಮಾತುಗಳನ್ನು ಬಿಟ್ಟು, ನೇರವಾಗಿ,

ತಿಳಿಯಾಗಿ ರಾಜಧರ್ಮವನ್ನು ಕ್ಷತ್ರಿಯರ ಮುಂದಿಟ್ಟ ಜೀವನದ ದರ್ಶನವೇ **ಮಹಾಭಾರತ.**"[೨೭] ಮನುಷ್ಯರ ಆಯುಷ್ಯವು ಕ್ಷೀಣಿಸುತ್ತಾ ಬಂದಿತು. ಅನಂತವಾದ ವೇದವನ್ನು ಅಧ್ಯಯನ ಮಾಡುವ ಸಾಧ್ಯತೆಯಿಲ್ಲದೆ ಹೋಯಿತು. ಈ ಎಲ್ಲ ಪ್ರಭುಗಳಾದ, ವರದರಾದ, ವೇದವ್ಯಾಸರು ತಾವು ವಿಭಾಗಿಸಿದ ವೇದಗಳನ್ನೂ ಮತ್ತು ತಾವು ರಚಿಸಿದ **ಐದನೆಯ ವೇದವಾದ ಮಹಾಭಾರತವನ್ನೂ** ತಮ್ಮ ಶಿಷ್ಯರಿಗೆ ಮತ್ತು ತಮ್ಮ ಮಗನಾದ ಶುಕನಿಗೂ ಉಪದೇಶಿಸಿದರು."[೨೮]

೮. **ಶ್ರೀಹರಿಯೇ ಸ್ವಯಂ ವೇದವ್ಯಾಸ ರೂಪದಿಂದ** ಭಾರತ ರಚಿಸಿರುವುದು, ಶುಕಾದಿಗಳಿಗೆ ಭಾರತ ಜ್ಞಾನೋಪದೇಶ ಮಾಡಿರುವುದೆಂದು ಹೇಳಿರುವುದರಿಂದ **ಮಹಾಭಾರತದ** ಪಾವಿತ್ರ್ಯತೆ ಹೆಚ್ಚಿತು. ಜನಮೇಜಯನಿಂದಲೂ, ಸಾವಿರಾರು ಬ್ರಾಹ್ಮಣರಿಂದಲೂ ಪ್ರಾರ್ಥಿತರಾದ ವೇದವ್ಯಾಸರು ತಮ್ಮ ಸಮೀಪದಲ್ಲೇ ಕುಳಿತಿದ್ದ **ವೈಶಂಪಾಯನರಿಗೆ** ಮಹಾಭಾರತ ಕಥಾಪ್ರವಚನ ಮಾಡುವಂತೆ ನಿರ್ದೇಶಿಸಿದರು. ಮೊತ್ತ ಮೊದಲು ಮಹಾಭಾರತವನ್ನು ವ್ಯಾಸರು **ಶುಕರಿಗೂ**, ಅನಂತರ ಶುಕರಂತೆ ಪಾಂಡಿತ್ಯವನ್ನು ಪಡೆದಿದ್ದ ಇತರ ಶಿಷ್ಯರಿಗೂ ಉಪದೇಶಿಸಿದರು. "ಕೃಷ್ಣದ್ವೈಪಾಯನರು ಉಪಕಥೆಗಳನ್ನು ಬಿಟ್ಟು **ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಿಂದ ಮಾತ್ರ ಮಹಾಭಾರತವನ್ನು** ರಚಿಸಿದರು."[೨೯] ಮಹಾಭಾರತವು ಐತಿಹಾಸಿಕವಾಗಿ ಮೂರು ಘಟ್ಟಗಳಲ್ಲಿ ಬೆಳೆದ ಗ್ರಂಥ. ಇದು ಒಬ್ಬನ ಕೃತಿಯಲ್ಲ. ಮೊದಲ ಘಟ್ಟದಲ್ಲಿ **ಜಯ** ವ್ಯಾಸರದ್ದು; ಸುಮಾರು ೨೪,೦೦೦ ಶ್ಲೋಕಗಳದ್ದು. ಅನಂತರ ಅದು ವೈಶಂಪಾಯನರ "**ಭಾರತ**'ವಾದದ್ದು ಸುಮಾರು ೭೫,೦೦೦ ಶ್ಲೋಕಗಳದ್ದು. ಮೂರನೆಯ ಘಟ್ಟ **ಸೌತಿಯ ಮಹಾಭಾರತವು** (ಶತ ಸಹಸ್ರೀ ಸಂಹಿತಾ) ೧,೦೦,೦೦೦ ಶ್ಲೋಕಗಳುಳ್ಳದ್ದು. ॥ ಅಷ್ಟೌ ಶ್ಲೋಕ ಸಹಸ್ರಾಣಿ ಅಷ್ಟೌಶ್ಲೋಕ ಶತಾನಿಚ । ಅಹಂ ವೇತ್ತಿ ಶುಕೋ ವೇತ್ತಿ ಸಂಚಯೋ ವೇತ್ತಿ ವಾನವಾ ॥ ಇದಂ ಶತಸಹಸ್ರಂತು ಶ್ಲೋಕಾನಾಂ ಪುಣ್ಯ ಕರ್ಮಣಾಂ । ಉಪಾಖ್ಯಾನ್ಯೈಃ ಸಹಜ್ಞೇಯಂ ಆದ್ಯಂ ಭಾರತ ಮುತ್ತಮಂ ॥ ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತ ಸಂಹಿತಾಂ ॥ ಉಪಾಖ್ಯಾನೈರ್ವಿನಾ ತಾ ವಧ್ ಭಾರತಂ ಪ್ರೋಚ್ಯತೇ ಬುಧೈಃ ॥ (ಆದಿಪರ್ವ ೧-೮೧: ೧೦೨-೧೦೩) "ಮಹಾಭಾರತ ಮೂರು ಘಟ್ಟಗಳಲ್ಲಿ ಇಪ್ಪತ್ನಾಲ್ಕು ಸಾವಿರದಿಂದ ಒಂದು ಲಕ್ಷ ಶ್ಲೋಕದವರೆಗೆ ಬೆಳೆಯಬೇಕಾದರೆ ಈ '**ಸೌತಿ**' ಪದದೊಳಗಿನ ಎಷ್ಟು ಸೂತ ಪುರಾಣಿಕರು ಸೇರಿದ್ದಾರೋ ತಿಳಿಯದು. ಎಷ್ಟು ಜನ '**ಉಗ್ರಶವ**'ರು ಅಂದರೆ ಗಟ್ಟಿ ಸ್ವರದವರ **ಲೋಮಹರ್ಷಣರ** – ಮೈರೋಮ ನವಿರೇಳುವಂತೆ ಕತೆ ಹೇಳುವವರ ಸೃಜನಾತ್ಮಕ ಚಿಂತನಾವಾಹಿನಿಯು ಈ **ಮಹಾಭಾರತ**ವೆಂಬ ಗಂಗೆಯಲ್ಲಿ ಸೇರಿಕೊಂಡಿದೆಯೋ ಗುರುತಿಸುವುದು ಕಷ್ಟ. ಮಹಾಭಾರತದ ಬೆಳವಣಿಗೆಯ ಕಾಲ ಕ್ರಿ.ಪೂ. ೪ನೇ ಶತಮಾನದಿಂದ ಕ್ರಿ.ಶ. ೪ನೇ ಶತಮಾನದವರೆವಿಗೂ ಚಾಚಿರುವ ಸಂಭವನೀಯತೆ ಇದೆ."[೩೦] ಮಹಾಭಾರತ ಕಾಲಕ್ಕೆ ಪುರಾಣ ಪ್ರತಿಷ್ಠಿತವಾಗಿರಲಿಲ್ಲ. ಇದು ಮಹಾಭಾರತ ಬೆಳವಣಿಗೆಯೊಂದಿಗೆ ಸೂತರು ಉಪನ್ಯಾಸ ಮಾಡುವಾಗ ತಮ್ಮಿಚ್ಛೆಯಂತೆ ತೋರಿದ ನೀತಿ–ಪಾತಿವ್ರತ್ಯಗಳನ್ನು ಹೇಳುವಾಗ ಭಕ್ತಿ ಪ್ರದಾನ ವಿಷಯವಾಗಿ ವೇದಾಧಾರಿತ ಅಮೂರ್ತ ರೂಪದ ದೇವತೆಗಳ ಆಧಾರವನ್ನು ಹೇಳಲು ವೇದದ ಆಮೂರ್ತ ರೂಪದ ದೇವತೆಗಳಿಗೆ ಮೂರ್ತ ರೂಪ ಆರೋಪಿಸಿ ಕಥೆಗಳನ್ನು ಸೃಷ್ಟಿಸಿ ಹೇಳತೊಡಗಿದರು. ಭೂಮಿ, ಸೂರ್ಯ, ಚಂದ್ರ, ನಕ್ಷತ್ರ ಇತ್ಯಾದಿಗಳೆಲ್ಲಾ ಪುರಾಣಗಳ ಸಶರೀರ ದೇವತೆಗಳಾಗಿ ಹುಟ್ಟು ಪಡೆದವು. ಆಚಾರ, ವಿಚಾರಗಳೂ ಸ್ಥಾನ ಪಡೆದವು. ಮನುಷ್ಯರು ಪ್ರಾಣಿಗಳಾಗಿ ಪರಿವರ್ತನೆ ಹೊಂದಬಹುದು: ಪ್ರಾಣಿಗಳು ಮನುಷ್ಯರಾಗಬಹುದು. ಎಂಬ ನಂಬಿಕೆಯಿದ್ದ ಪ್ರಾಚೀನ ಕಾಲವೊಂದಿತ್ತು. "ಪ್ರಾಣಿಗಳು ಮನುಷ್ಯರಂತೆ ಮಾತನಾಡಬಹುದೆಂಬ ಕಥೆಗಳಿಗೆ ಇದೇ ತಳಹದಿಯಾಗಿದೆ ಎಂದು **ಜಿ.ಎಚ್.ಲುಕ್ವಿಟ್** ಎಂಬಾತ '**ಪುರಾಣ ಜ್ಞಾನಕೋಶ**' ಎಂಬ ಗ್ರಂಥದಲ್ಲಿ ಅಭಿಪ್ರಾಯಪಟ್ಟಿದ್ದಾನೆ."[೩೧] ಈ ಉಪಾಖ್ಯಾನಗಳು ಋಗ್ವೇದ ಸಂಹಿತೆಯಲ್ಲಿಯೂ ಬೇಕಾದಷ್ಟು ಬಂದಿವೆ. **"ಮಾನವನ ಮನಸ್ಸು ತಪ್ಪು ಕಲ್ಪನೆ ಮಾಡಿದರೂ** ಪುರಾಣ ಕಥೆಗಳೂ ಅದನ್ನೇ **ಮಾಡುತ್ತವೆ. ಒಂದು ಜಾತಿಯ ಸಸ್ತನಿ ಮೀನು ನೀರಿನ ಮೇಲೆ ಎದ್ದು ಬರುವುದರಿಂದ ಜಲಕನ್ಯೆಯರ ಭ್ರಮೆ ಉಂಟಾಗುತ್ತದೆ."**[೩೨] ಪುರಾಣಿಕರು ಮೀನನ್ನೇ ಜಲಕನ್ಯೆಯನ್ನಾಗಿ ಜನ್ಮ ಕೊಡುತ್ತಾರೆ. ಮಹಾಭಾರತದ ಕೆಲವು ಪಾತ್ರಗಳ ಜನನ ಅವೈಜ್ಞಾನಿಕವಾಗಿವೆ. ಇವುಗಳನ್ನು ವ್ಯಾಸರೇ ಸೃಷ್ಟಿಸಿದರೋ ಅಥವಾ ಮಹಾಭಾರತದ ಬೆಳವಣಿಗೆಗೆ ಕಾರಣರಾದ ಸೌತಿಗಳ ಕೈವಾಡವೋ ಎಂಬ ಸಂದೇಹ ಉಂಟಾಗುವುದು ಸಹಜವಾಗಿದೆ. ಇದರಿಂದಾಗಿಯೇ ಮಹಾಭಾರತ । **ಮಹತ್ವಾತ್ ಭಾರವತ್ವಾಚ್ಚ ಮಹಾಭಾರತ ಮುಚ್ಯತೇ** । ಎಂದು ಪ್ರಸಿದ್ಧವಾಗಲು ಕಾರಣವಾಯಿತು. ಇತಿಹಾಸ–ಪುರಾಣಗಳ ಸೃಷ್ಟಿಗೂ ಆಧಾರವಾಯಿತು.

ಒಟ್ಟಿನಲ್ಲಿ, **"ವೇದಬೀಜದ ಜ್ಞಾನಾಂಕುರಗಳೇ ಇತಿಹಾಸ ಪುರಾಣಗಳು."**[೩೩] ಎಂದು ಖರಾರುವಕ್ಕಾಗಿ ನುಡಿದಿದ್ದಾರೆ. ಮಹಾಭಾರತ ಕಾಲದಲ್ಲಿ ಮಾನವ ಬದುಕಿನಲ್ಲಿ ಅವನು ರಾಜನಾಗಿರಬಹುದು, ಸಾಮಾನ್ಯಪ್ರಜೆಯಾಗಿರಬಹುದು ಸಂಭವಿಸಬಹುದಾದ ಒಳಿತು–ಕೆಡಕುಗಳ ಸಮಾನಾಂತರವಾಗಿ ಜರುಗಬಹುದಾದ ಬದುಕಿನಲ್ಲಿಯ ವಿನೋದ–ವಿಲಾಸಗಳ ಹೆಸರಿನ 'ಅಕ್ಷದ್ಯೂತ'ದ ಜೂಜಿನಂತಹ ದುಶ್ಚಟ ಕ್ರೀಡೆಗಳಿಗೆ ಮಾನವ ಅಲವತ್ತುಕೊಂಡಾಗ ಉಂಟಾಗುವ ಪರಿಣಾಮ ಯಾವ ಹಂತ ಮುಟ್ಟುತ್ತದೆ ಎನ್ನಬಹುದಾದ ಘಟನೆಯ ದೃಶ್ಯಾದೃಶ್ಯದ **ವಿರಾಟ್ ರಹಸ್ಯ** ಪ್ರತಿಮಿಸುವ ಮಹಾಶಬ್ದ 'ಕಾವ್ಯಪ್ರತಿಮೆ'ಯೇ ವ್ಯಾಸರು ರಚಿಸಿದ ಮೂಲ 'ಜಯ'ಗ್ರಂಥ. ವ್ಯಾಸರು ಈ ಗ್ರಂಥ ರಚಿಸುವಾಗ ಭೂತ, ಭವಿಷ್ಯತ್ ವರ್ತಮಾನಗಳ ಪರಮಾದ್ಭುತ ನಿಗೂಢ ಸಂವೇದನೆಗಳನ್ನನುಭವಿಸಿಯೇ ಗ್ರಂಥ ರಚಿಸಿರಲಿಕ್ಕಿಲ್ಲವೇ? ಎಂಬ ಅರ್ಥ ಹೊರಡುವ ಒಂದು ಶಂಕೆಯನ್ನು ವಿದ್ವಾಂಸರು ಮಂಡಿಸಿದರು. **"ಈ ಮೌಲಿಕ ಪ್ರಶ್ನೆ ಜಾಗತಿಕ ಸಂಸ್ಕೃತಿಗೆ ಮಹತ್ವದ್ದು ಮತ್ತು ಇದನ್ನು ಸತ್ಯದ ಒರೆಗೆ ಹಚ್ಚಿ ನೋಡುವುದು ವಿಚಾರವಂತರ ಕರ್ತವ್ಯವಾಗಿದೆ."**[೩೪] ಎಂದಿರುವ **ಡಾ॥ ಶಂ.ಬಾ. ಜೋಶಿ** ಅವರ ಈ ವ್ಯಾಖ್ಯಾನವಾಗಲೀ ಅಥವಾ **"ವೈಫಲ್ಯಭಾವವೇ ಈ ಮಹಾಕಾವ್ಯದ ಸ್ಥಾಯೀಭಾವ"** ಎಂದಿರುವ **ಡಾ॥ ಇರಾವತಿಬಾಯಿ ಕರ್ವೆ** ಅವರ ನಿರ್ಧಾರವಾಗಲೀ ***'ಮಹಾಭಾರತ'ದ ಕಥೆಯಲ್ಲಿ ಕ್ರಿಯಾರೂಪ ಪಡೆದು ಪಾತ್ರಗಳ ಪ್ರಚಲನದಲ್ಲಿ ಗೋಚರಿಸುತ್ತದೆ. 'ಕುರುಕ್ಷೇತ್ರ' ಯುದ್ಧದಲ್ಲಿ ಪರಿಸಮಾಪ್ತಿಗೊಳ್ಳುತ್ತದೆ. ವಿದ್ವಾಂಸರ ಈ ಅಭಿಪ್ರಾಯಗಳನ್ನು ಪರಸ್ಪರ ಮುಖಾಮುಖಿಗೊಳಿಸಿ ಅಧ್ಯಯನ ನಡೆಸಲಾಗಿದೆ.***

ಪ್ರಸಕ್ತ ಅಧ್ಯಯನದಲ್ಲಿ "ಮಹಾಭಾರತವನ್ನು ಆಧುನಿಕವಾಗಿ ಚಿಂತನೆ" ನಡೆಸುವ ಮೂಲಕ **'ಮಹಾಭಾರತದ ಪುನರ್ ಮೌಲೀಕರಣ'** ಮಾಡಲಾಗಿದೆ. ಶ್ರೀರಂಗನಾಥ ಶರ್ಮ ಅವರ ***'ಶ್ರೀಮನ್ಮಹಾಭಾರತ', ಭಾರತದರ್ಶನ ಪ್ರಕಾಶನ*** ಮತ್ತು ವ್ಯಾಸರ ಮಹಾಭಾರತಕ್ಕೆ ವಾದಿರಾಜರ 'ಲಕ್ಷಾಲಂಕಾರ' ಮತ್ತು ಮಧ್ವಾಚಾರ್ಯರ 'ಮಹಾಭಾರತ ತಾತ್ಪರ್ಯ ನಿರ್ಣಯದೊಂದಿಗೆ ಶ್ರೀ ಪಿ.ಎಸ್. ಶೇಷಗಿರಿ ಆಚಾರ್ಯ ಅವರ 'ತತ್ವ ಸಂಶೋಧನ ಸಂಸತ್', ಪಲಿಮಾರು ಮಠ, ಉಡುಪಿ.– ಕೃತಿಗಳನ್ನು ಈ ಹಿನ್ನೆಲೆಯಲ್ಲಿ ***ಮೂಲ ಆಕರ***ವಾಗಿ **"ಸೃಜನೇತರ ಕೃತಿಗಳನ್ನು ಮಾತ್ರ"** ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಮತ್ತು ಉಳಿದ ಪರಾಮರ್ಶನ ಕೃತಿಗಳ ಗ್ರಂಥಋಣವನ್ನು ಕೊನೆಯ ಭಾಗದಲ್ಲಿ ಕೊಡಲಾಗಿದೆ.

ಮೊದಲ ಅಧ್ಯಾಯದಲ್ಲಿ "ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ"ಯನ್ನೂ, ದ್ವಿತೀಯ ಅಧ್ಯಾಯವಾದ "ಈವರೆಗಿನ ಅಧ್ಯಯನಗಳ ಸಮೀಕ್ಷೆ"ಯಲ್ಲಿ **"ತಳಸಮುದಾಯ ಮತ್ತು ಅಲಕ್ಷಿತರ ಚಿಂತನೆ"**ಗಳನ್ನು ಪ್ರಮುಖವಾಗಿ ಮಹಾಕವಿ ಪಂಪ, ರನ್ನ ಮತ್ತು ಕುಮಾರವ್ಯಾಸರ 'ಭಾರತ' ಕೃತಿಗಳಲ್ಲಿ ಸಮೀಕ್ಷೆ ಮಾಡಲಾಗಿದೆ. ಆನಂತರ ***'ಮಹಾಭಾರತ'ಕ್ಕೇ ಪ್ರಪ್ರಥಮ ವಿಮರ್ಶಾಕೃತಿಯಾದಂತಹ ಉಡುಪಿ ಜಿಲ್ಲೆಯ ಪಾಜಕ ಕ್ಷೇತ್ರದ ಆಚಾರ್ಯಮಧ್ವರಾದ ಆನಂದತೀರ್ಥ ಮುನಿಗಳ 'ಮಹಾಭಾರತ ತಾತ್ಪರ್ಯ ನಿರ್ಣಯ'*** ಗ್ರಂಥವನ್ನು ವಿದ್ವಾನ್ ವ್ಯಾಸನಕೆರೆ **ಪ್ರಭಂಜನಾಚಾರ್ಯರು** ಅನುವಾದಿಸಿರುವ ಕೃತಿಯಾಗಿದೆ. ಇದನ್ನು ಸಮೀಕ್ಷಿಸಿದ ನಂತರ, ಮೈಸೂರು ವಿ.ವಿ.ಯಿಂದ ಚಿನ್ನದ ಪದಕವನ್ನು ಪಡೆದುಕೊಂಡಂತಹ ಡಾ॥ ಪ್ರಧಾನ ಗುರುದತ್ ಅವರ "ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ" ಪಿಎಚ್.ಡಿ ಮಹಾಪ್ರಬಂಧವನ್ನು ಸಮೀಕ್ಷೆ ಮಾಡಲಾಗಿದೆ. ನಂತರ ಡಾ॥ ವಿ.ಕೆ. ಮಣಿಮಾಲಿನಿ ಅವರು ಕನ್ನಡ ವಿಭಾಗ, ಮುಂಬೈ ವಿ.ವಿ.ಗೆ ಸಲ್ಲಿಸಿದ "ದ್ರೌಪದಿ ಸಮೀಕ್ಷೆ" ಪಿಎಚ್.ಡಿ ಮಹಾಪ್ರಬಂಧವನ್ನು, ಡಾ॥ ಶಾಂತಿನಾಥ ದಿಬ್ಬದ ಅವರ "ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ" ಕೃತಿಯನ್ನೂ ಹಾಗೂ ಎಸ್. ಆರ್. ರಾಮಸ್ವಾಮಿ ಅವರ "ಮಹಾಭಾರತದ ಬೆಳವಣಿಗೆ", ಶ್ರೀ ಎ.ಆರ್.ಕೃಷ್ಣಶಾಸ್ತ್ರಿ ಅವರ "ವಚನ ಭಾರತ", ವೈದ್ಯಗುರು ಎಂ.ಆರ್.ಭಟ್ ಅವರ "ಭಾರತ ಗಾಂಭೀರ್ಯ", ಲಕ್ಷ್ಮೀಶ ತೋಳ್ಪಾಡಿ ಅವರ "ಭಾರತ ಯಾತ್ರೆ", ಶ್ರೀಶೇಷನವರತ್ನ ಅವರ "ಮಹಾಭಾರತದಲ್ಲಿ ಧರ್ಮ" ಹೀಗೆ ಇನ್ನೂ ಅನೇಕ ಕನ್ನಡದಲ್ಲಿನ ಕೃತಿಗಳನ್ನು ಸಮೀಕ್ಷಿಸಲಾಗಿದೆ.

ಮೂರನೇ ಅಧ್ಯಾಯವಾದ **"ತಳಸಮುದಾಯ ಮತ್ತು ಅಲಕ್ಷಿತರ ಚಿಂತನೆ"**ಗಳನ್ನು ಕುರಿತಂತೆ "ಮಹಾಭಾರತ"ದಲ್ಲಿನ ಕೆಲವು ಮಹತ್ವಪೂರ್ಣ ಮತ್ತು ವೈಶಿಷ್ಟ್ಯತೆಯಿಂದ ಕೂಡಿದ ಪಾತ್ರಗಳನ್ನು ವಿಶ್ಲೇಷಿಸಿ, ವಿಮರ್ಶಿಸಲಾಗಿದೆ. ಈ ಮೂಲಕ "ಆಧುನಿಕ ಚಿಂತನೆ"ಗೊಳಪಡಿಸಿಕೊಳ್ಳಲಾದ ಕಥಾಭಾಗವನ್ನು ಅದರ ಮಹತ್ವದೊಂದಿಗೆ ಕೂಲಂಕಷವಾಗಿ ಪೀಠಿಕೆಯಿಂದ ಆರಂಭಿಸಿ ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯವಾದ "ಮಹಾಭಾರತದಲ್ಲಿನ ಆಶಯವು ಆಧುನಿಕತ್ವವನ್ನು ಪ್ರತಿನಿಧಿಸುವ ವಿಧಾನ" ಇದರಲ್ಲಿ "ಆಧುನಿಕ ಚಿಂತನೆ"ಯ ಉಪಕ್ರಮದಲ್ಲಿ ವಿವಿಧ ಚಿಂತಕರು ಈವರೆವಿಗೂ ನಡೆಸಿರುವ ಅಧ್ಯಯನಗಳ 'ಮಹಾಭಾರತ'ದ ಆಶಯದ ಒಳನೋಟದಲ್ಲಿ; ವಿ. ಸೀತಾರಾಮಯ್ಯ ಅವರ "ಕೃಷ್ಣ ಚಾರಿತ್ರ್ಯ" ಕೃತಿಯಲ್ಲಿ "ಮಹಾಭಾರತ" "ಶೀರ್ಷಿಕೆ ಮತ್ತು ಅದರ ವ್ಯಾಪ್ತಿ", ಮೂಲ ಪಾಠ ಮತ್ತು ಹಸ್ತಪ್ರತಿಗಳ ವಿವರ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ "ಭಾರತತೀರ್ಥ" "ಮಹಾಭಾರತ"ದ ಹೆಗ್ಗಳಿಕೆ ಮಾಸ್ತಿ ಅವರ ದೃಷ್ಟಿಯಲ್ಲಿ . "ಮಹಾಭಾರತ"ದ "ಕರ್ತೃತ್ವ ವಿಚಾರ"ದ ಚರ್ಚೆ ,"ಪ್ರಕ್ಷಿಪ್ತಗಳ ಸೇರುವಿಕೆ" ಮತ್ತು "ಮೂಲ ಮಹಾಭಾರತ"ದ ವಿಮರ್ಶೆ, "ಮಹಾಭಾರತ"ದಲ್ಲಿ "ಬಹುಪತಿತ್ವ ಪದ್ಧತಿ"ಯ ಸಮರ್ಥನೆ, "ಮಹಾಭಾರತ"ದಲ್ಲಿ 'ರಾಷ್ಟ್ರಪ್ರೇಮ'" ಎನ್ನುವ ಆದರ್ಶ ಮೌಲ್ಯ", "ಮಹಾಭಾರತ"ದಲ್ಲಿ ಮೇರು-ಮಂದರಗಳೆನಿಸಿದ ವ್ಯಕ್ತಿತ್ವದ ಪರಾಜಯ ಎಲ್ಲಿ ಮತ್ತು ಹೇಗೆ ಉಂಟಾಯಿತು? "ಮಹಾಭಾರತ"ದಲ್ಲಿ ಉಲ್ಲೇಖಗೊಂಡಂತೆ ಪಾಂಡವರೊಂದಿಗೆ ದ್ರೌಪದಿಯ ದಾಂಪತ್ಯ ಜೀವನ", "ಮಹಾಭಾರತ"ದಲ್ಲಿ ಕೃಷ್ಣ ಪಾತ್ರದ ಮಹತ್ವ, "ಮಹಾಭಾರತ" ಕಾವ್ಯ, ಸಂಸ್ಕೃತಿಯ ಮಹತ್ವ ಮತ್ತು ವೈಶಿಷ್ಟ್ಯತೆ", ಡಿ.ವಿ.ಜಿ. (ಮುನ್ನುಡಿ), ವ್ಯಾಸರಾವ್ ಅವರ "ಶ್ರೀಕೃಷ್ಣ ಚರಿತೆ", ವೈದ್ಯಗುರು ಎಂ.ಆರ್.ಭಟ್ ಅವರ "ಭಾರತ ಗಾಂಭೀರ್ಯ" ಕೃತಿಯಲ್ಲಿನ "ಅಪ್ಸರೆಯರೆಂದರೆ ಯಾರು?, ಸ್ವರ್ಗ ಮತ್ತು ಸ್ವರ್ಗಾರೋಹಣ ಎಂದರೇನು?, ಡಾ॥ ಸುಕ್ತಂಕರ್ ಅವರ 'ಮಹಾಭಾರತ'ದ ಬಗೆಗಿನ ಅಧ್ಯಯನಗಳು, "ಆನ್ ದಿ ಮೀನಿಂಗ್ ಆಫ್ ಮಹಾಭಾರತ್" ಕೃತಿಯಲ್ಲಿ ಮಂಡಿಸಿದ ಇವರ 'ಭಾರ್ಗವ ವಾದ' ಸಿದ್ಧಾಂತವು ಭಾರತೀಯರ ಮತ್ತು ಪಾಶ್ಚಾತ್ಯ ವಿದ್ವಾಂಸರ ಗಮನವನ್ನು ಸೆಳೆದದ್ದು, ಸುಕ್ತಂಕರ್ ಅವರು "ಶುದ್ಧಪಾಠ"ವನ್ನು ಕಂಡು ಹಿಡಿಯಲಿಕ್ಕಾಗಿ ನಡೆಸಿದ ಶೋಧನೆಗಳು ಇತ್ಯಾದಿ ಚಿಂತನೆಗಳನ್ನು ಆಧುನಿಕವಾಗಿ ಅಧ್ಯಯನಕ್ಕೊಳಪಡಿಸಲಾಗಿದ್ದು ವಿಶೇಷವಾಗಿದೆ. ಡಾ॥ ಇರಾವತಿ ಬಾಯಿ ಕರ್ವೆ ಅವರ 'ಯುಗಾಂತ' ಕೃತಿಯಲ್ಲಿ "ವೈಫಲ್ಯಭಾವವೇ ಈ ಮಹಾಕಾವ್ಯದ ಸ್ಥಾಯೀ ಭಾವ." ಆಗಿರುವುದೆಂಬ ನಿಷ್ಕರ್ಷಕ್ಕೆ ಅವರು ಬರುತ್ತಾರೆ. ಬಹುಶಃ ಇದಕ್ಕೆ ಮುಖ್ಯ ಕಾರಣ "ಪಗಡೆಯಾಟ" ಅಥವಾ "ಅಕ್ಷದ್ಯೂತ." ವ್ಯಾಸರ ಉದ್ದೇಶ, ಆಶಯವು ಮುಖ್ಯವಾಗಿ ಅಕ್ಷದ್ಯೂತದಂತಹ ಜೂಜಾಟದಿಂದ ಉಂಟಾಗುವ ಪರಿಣಾಮವನ್ನು ಲೋಕಕ್ಕೆ ಸಾರಿರುವ ಪರಿಯನ್ನು ಚರ್ಚಿಸಲಾಗಿದೆ. ಎಸ್.ಆರ್. ರಾಮಸ್ವಾಮಿ ಅವರ "ಮಹಾಭಾರತದ ಬೆಳವಣಿಗೆ" ಕೃತಿಯಲ್ಲಿ ದಕ್ಷಿಣಾತ್ಯ ಹಸ್ತಪ್ರತಿಗಳಲ್ಲಿ ಪ್ರಕ್ಷಿಪ್ತಗಳೆಂಬ ಕಟ್ಟುಕಥೆಗಳ ಸೇರ್ಪಡೆ ಯಾಕೆ ಮತ್ತು ಹೇಗೆ? ಎಂಬುದನ್ನು ವಿಶ್ಲೇಷಿಸಲಾಗಿದೆ. ಪರಿಶುದ್ಧ ಪಾಠವನ್ನು ಸಿದ್ಧಪಡಿಸಿದ ಕೀರ್ತಿ ಡಾ॥ ವಿ.ಎಸ್. ಸುಕ್ತಂಕರ್ ಅವರು ಸೇವೆ ಸಲ್ಲಿಸಿದ ಪುಣೆಯ ಭಂಡಾರ್‌ಕರ್ ಪ್ರಾಚ್ಯವಿದ್ಯಾ ಸಂಶೋಧನ ಮುಖ್ಯಸ್ಥರಾಗಿದ್ದು; ಡಾ॥ ಸುಕ್ತಂಕರ್, ಡಾ॥ ಶಂ.ಬಾ. ಜೋಶಿ ಮತ್ತು ಡಾ॥ ಇರಾವತಿಬಾಯಿ ಕರ್ವೆ ಅವರ ವಾದಗಳನ್ನು ಪರಸ್ಪರ ಮುಖಾಮುಖಿಗೊಳಿಸಿ ಚಿಂತನೆ ನಡೆಸಲಾಗಿದೆ.

ಐದನೇ ಅಧ್ಯಾಯವಾದ "ಮಹಾಭಾರತದಲ್ಲಿ ಸ್ತ್ರೀಯರ ಸಂಘರ್ಷ"ಗಳನ್ನು ಪ್ರಮುಖವಾದ ಪಾತ್ರಗಳನ್ನು ಅಂದಿನ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಸ್ಥಿತಿ-ಗತಿಗಳೊಂದಿಗೆ ಪರಾಮರ್ಶಿಸುವ ಮೂಲಕ "ಆಧುನಿಕ ಚಿಂತನೆ"ಯ ದೃಷ್ಟಿಯಿಂದ ಕೂಲಂಕಷವಾಗಿ ವಿಮರ್ಶಿಸುವುದರೊಂದಿಗೆ ಚರ್ಚಿಸಲಾಗಿದೆ.

ಆರನೇ ಅಧ್ಯಾಯವಾದ ಕನ್ನಡದಲ್ಲಿ ಮಹಾಭಾರತ ಕುರಿತು ಆಧುನಿಕ ಚಿಂತನೆಗಳ ವಿಮರ್ಶಾತ್ಮಕ ಅಧ್ಯಯನ.'ದಲ್ಲಿ "ಆಧುನಿಕ ಚಿಂತನೆ."ಯನ್ನು ವೈಜ್ಞಾನಿಕ ಅರ್ಥದಲ್ಲಿ ವಿಶ್ಲೇಷಿಸುವುದರೊಂದಿಗೆ,'ಮಹಾಭಾರತ'ದ 'ಆಶಯ', 'ಕಥಾವಸ್ತು' ಮತ್ತು 'ಪಾತ್ರಗಳ ಸೃಷ್ಟಿ'ಯ ಕುರಿತು ವಿಮರ್ಶಾತ್ಮಕ ಚಿಂತನೆ, ಸತ್ಯವತಿ ಜನನ, ಶಂತನು ಜನನ, ವಂಶವೃದ್ಧಿಗೆ ಸತ್ಯವತಿಗೆ ಪ್ರೇರಣೆ, ಕರ್ಣನ ಜನನ, ಗಾಂಧಾರೀ ವಿವಾಹ, ಪಾಂಡುವಿನ ಪುತ್ರಾಪೇಕ್ಷೆ, ಕುಂತಿಗೆ ಪಾಂಡುವಿನ ಉಪದೇಶ, ಪಾಂಡವರ ಜನನದ ಹಿನ್ನೆಲೆ, ಕೌರವರ ಜನನದ ನಿಗೂಢತೆ, ಪ್ರಸವವಾದ ಕೂಡಲೇ ಕನ್ಯಾವಸ್ಥೆಯು ಪ್ರಾಪ್ತಿಯಾಗುವುದು., ಯಜ್ಞಕುಂಡದಿಂದ ಧೃಷ್ಟದ್ಯುಮ್ನ ಮತ್ತು ದ್ರೌಪದಿ ಜನನ, 'ಮಹಾಭಾರತ'ದಲ್ಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ, ನೈತಿಕತೆಯ ಸ್ಥಿತಿ-ಗತಿಗಳು, 'ಮಹಾಭಾರತ'ದಲ್ಲಿ ಸಂತಾನಾಭಿವೃದ್ಧಿಯ ವೈವಿಧ್ಯತೆ ಕುರಿತು ವಿಮರ್ಶಾತ್ಮಕ ಅಧ್ಯಯನ, 'ಮಹಾಭಾರತ' ಮಹಾಕಾವ್ಯಕ್ಕೆ ಬುನಾದಿಯಾದ ಪಾತ್ರಗಳ ಸೃಷ್ಟಿಗೆ ಋಗ್ವೇದದ ಪ್ರಭಾವ, 'ಮಹಾಭಾರತ'ದಲ್ಲಿ ಮಹಿಳೆಯರ ಸ್ಥಾನಮಾನ., 'ಮಹಾಭಾರತ'ದ ಸಮಕಾಲೀನ ಸಮಾಜದಲ್ಲಿ ಋಷಿಗಳ ಪಾತ್ರ, ಋಷಿಗಳಿಗೆ ಸ್ತ್ರೀಸಂಗ ಸರಿಯೇ?, 'ಆಧುನಿಕ ಚಿಂತನೆ'ಯಲ್ಲಿ 'ಅಕ್ಷದ್ಯೂತ' ಮತ್ತು 'ದ್ರೌಪದಿ ವಸ್ತ್ರಾಪಹರಣ' ಪ್ರಸಂಗಗಳು., ರಾಜಕ್ರೀಡೆ 'ದ್ಯೂತ'ದ ದುಷ್ಪರಿಣಾಮಗಳು., ದ್ರೌಪದಿಯ 'ಪಂಚಪತಿತ್ವ', 'ಬಹುಪತಿತ್ವ'ದ ಸಮರ್ಥನೆ., 'ಮಹಾಭಾರತ'ದಲ್ಲಿ ಕೃಷ್ಣನೆಂಬ ರಾಜನೀತಜ್ಞ, ಗೋಗ್ರಹಣ ಪ್ರಸಂಗ, ಏಕಲವ್ಯನ ಪ್ರಸಂಗ.

ಏಳನೇ ಅಧ್ಯಾಯದಲ್ಲಿ "ಆಧುನಿಕ ಚಿಂತನೆ"ಯಲ್ಲಿ ಕಂಡುಬಂದಂತಹ 'ಮಹಾಭಾರತ'ದ ವೈಶಿಷ್ಟ್ಯತೆಗಳು ಮತ್ತು ವೈಜ್ಞಾನಿಕ ದೃಷ್ಟಿಕೋನದ ಮಹತ್ವ, 'ಇತಿಹಾಸ' ಎನಿಸಿದ ಮಹಾಕಾವ್ಯವಾದ 'ಮಹಾಭಾರತ'ವನ್ನು ಧಾರ್ಮಿಕ ಗ್ರಂಥ ಎನ್ನುವುದಕ್ಕಿಂತಲೂ ಹೆಚ್ಚಾಗಿ 'ನೈತಿಕ ಗ್ರಂಥ'ವನ್ನಾಗಿಸುವಲ್ಲಿ ವ್ಯಾಸ ಋಷಿಗಳಿಗಿರುವ ಅಪೂರ್ವ ಕಥಾವಸ್ತು ನಿರ್ಮಾಣ ಕೌಶಲತೆ, 'ಆಧುನಿಕ ಚಿಂತನೆ'ಗೆ ಪ್ರೇರಣೆ ನೀಡಿದ ಕೆಲವು ಮೂಲ ಪ್ರಸಂಗಗಳು, ಋಗ್ವೇದ, ರಾಮಾಯಣಾದಿ ಆಕರಗಳಿಂದ ವ್ಯಾಸ ಋಷಿಗಳು ಪ್ರೇರಣೆಗೊಂಡು ಐತಿಹಾಸಿಕ ಪಾತ್ರಗಳ ಮೂಲವನ್ನೇ ಕಥಾವಸ್ತುವಿನ ರಚನೆಗೆ ಸ್ಫೂರ್ತಿಗೊಂಡಿರುವುದನ್ನು ಶೋಧಿಸುವ ಕಾರ್ಯವನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ. 'ಮಹಾಭಾರತ'ದಲ್ಲಿ ಋಷಿಗಳ ಅವೈಜ್ಞಾನಿಕ ಸಂತಾನದ ಉಲ್ಲೇಖಗಳನ್ನೂ ವಿಮರ್ಶಿಸುವುದರೊಂದಿಗೆ ಚರ್ಚಿಸಲಾಗಿದೆ.'ಮಹಾಭಾರತ'ದಲ್ಲಿ ಪುರುಷಾರ್ಥಗಳ ಸಾರ್ಥಕತೆ ಹೇಗೆ ಸಾಧ್ಯ? ಮತ್ತು ಇದರ ಅವಶ್ಯಕತೆ ಏನು? ಎಂದು ಚಿಂತಿಸಲಾಗಿದೆ. ಯಜ್ಞ–ಯಾಗಾದಿಗಳ ಆಚರಣೆಯ ಅಗತ್ಯತೆಯನ್ನು ಕುರಿತು ಕೂಲಂಕಷವಾಗಿ ಚಿಂತಿಸಲಾಗಿದೆ. 'ಮಹಾಭಾರತ'ದ ಯುದ್ಧವನ್ನು ಕುರಿತು ಪುರಾತತ್ವ ಇತಿಹಾಸಜ್ಞರಾದ ಡಾ॥ ಡಿ.ಸಿ. ಸರ್ಕಾರ್, ಡಾ॥ ಎಚ್.ಡಿ. ಸಂಕಾಲಯಾ ಮೊದಲಾದವರ ಅಭಿಪ್ರಾಯಗಳನ್ನು ವ್ಯಾಸರ ಉದ್ದೇಶದೊಂದಿಗೆ ಹೋಲಿಸುವುದರ ಮೂಲಕ ಚರ್ಚಿಸಲಾಗಿದೆ. ಪ್ರಕ್ಷಿಪ್ತಗಳು ಹೇಗೆ ಉಂಟಾಗುತ್ತವೆ?, ರಾಮಾಯಣ ಮತ್ತು ಮಹಾಭಾರತಗಳ ನಡುವಿನ ಸಾಮ್ಯಗಳೇನು?, ಮಹಾಭಾರತ ಮಹಾಕಾವ್ಯದ ಕಾವ್ಯಸ್ವರೂಪದ ಲಕ್ಷಣಗಳೇನು? –ಇವೇ ಮೊದಲಾದ ಅಂಶಗಳನ್ನು ಚರ್ಚಿಸುವುದರೊಂದಿಗೆ ಕೊನೆಯದಾಗಿ ಪಾಶ್ಚಾತ್ಯರ ಆಕ್ಷೇಪಗಳು ಮತ್ತು ಅಭಿಪ್ರಾಯಗಳನ್ನು ವಿಶ್ಲೇಷಿಸುವಂತಹ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಇವುಗಳಿಗೆ ಅಗತ್ಯವಾಗುವಂಥ ಆಧಾರ–ಸಾಮಗ್ರಿಗಳನ್ನು ಇಲ್ಲಿ ಒದಗಿಸಲಾಗಿದೆ.

ವೈಜ್ಞಾನಿಕ ವಿಶ್ಲೇಷಣೆಗೆ ಅವಶ್ಯಕತೆಯನ್ನು ಪ್ರತಿನಿಧಿಸುವಂತಹ ಹಲವಾರು ಪ್ರಸಂಗಗಳನ್ನು 'ಆದಿಪರ್ವ'ದಿಂದ ಹಿಡಿದು 'ಸಭಾಪರ್ವ', 'ವನಪರ್ವ', 'ಉದ್ಯೋಗಪರ್ವ', 'ಭೀಷ್ಮಪರ್ವ'ದಲ್ಲಿ ಕಂಡುಬಂದಂತಹ ಹಾಗೂ "ಆಧುನಿಕ ಚಿಂತನೆ"ಯನ್ನು ಪ್ರತಿನಿಧಿಸುವ ಮೌಲ್ಯಗಳು ಮಹಾಭಾರತ ಕಾಲದ ಸಂಸ್ಕೃತಿಯ ಕೆಲವು ಪರಿಕಲ್ಪನೆಗಳು ಇಂದು ಅಸಂಬದ್ಧವೆನಿಸಲೂ ಬಹುದು. ಮಹಾಭಾರತ ಕಾಲದ ಅಂದಿನ "ಸಂತಾನೋತ್ಪತ್ತಿಯ ಪದ್ಧತಿಗಳು ಮತ್ತು ಸ್ತ್ರೀ–ಸಂವೇದನೆಯ ಕೆಲವು ಮುಖಗಳನ್ನು ಆಧುನಿಕ ಸ್ತ್ರೀಯ ಪ್ರಕ್ರಿಯೆಗೆ ಹೋಲಿಸಿ ಅಧ್ಯಯನದ "ವ್ಯಾಪ್ತಿ"ಗೊಳಪಡಿಸುವಾಗ ಕಂಡುಬರುವಂತಹ ಬದಲಾದ ಪ್ರತ್ಯಕ್ಷ ಮತ್ತು ಪರೋಕ್ಷ ಬದಲಾವಣೆಗೆ ಕಾರಣಗಳನ್ನು ಗುರ್ತಿಸುವುದು ಮತ್ತು ಇಂತಹ ಹಲವಾರು ಅವೈಜ್ಞಾನಿಕ, ಅನೈಸರ್ಗಿಕ ಪ್ರಸಂಗಗಳನ್ನು ಕುರಿತು ಕೂಲಂಕಷವಾಗಿ ಇಲ್ಲಿ ಅಧ್ಯಯನ ನಡೆಸಲಾಗಿದೆ. ಇದಕ್ಕಾಗಿ ಇಲ್ಲಿ ಯಾರನ್ನೂ ಹೊಗಳದೆ, ಯಾರನ್ನೂ ತೆಗಳದೆ ಕೇವಲ "ಆಧುನಿಕ ಚಿಂತನೆ"ಯನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಮಹಾಭಾರತದ "ಅನುಕ್ರಮಣಿಕಾ" ಅಧ್ಯಾಯದಲ್ಲಿರುವಂತೆ;

**"॥ ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತ ಸಂಃಹಿತಾಂ । ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ ॥"**

ಉಪಾಖ್ಯಾನಗಳನ್ನು ಬಿಟ್ಟು ಮೂಲ ಕೃತಿಯ ಮುಖ್ಯವಾದ ೨೪,೦೦೦ ಶ್ಲೋಕಗಳಿರುವ 'ಮಹಾಭಾರತ'ವು ನನ್ನ ಅಧ್ಯಯನದ ಕೇಂದ್ರ ವಸ್ತುವಾಗಿದೆ.

ಕಾವ್ಯ ರಚನೆಯ ಸಂದರ್ಭ, ಉದ್ದೇಶ, ಕಾವ್ಯವಸ್ತುವಿನಲ್ಲಿ ಮೂಡಿಬಂದಿರುವ 'ಸಂಸ್ಕೃತಿ'ಯ ಶೋಧ ನನ್ನ ಈ ಅಧ್ಯಯನದ ಮುಖ್ಯ ಗುರಿಯಾಗಿದೆ. ಈ ಕಾರ್ಯವನ್ನು "ಆಧುನಿಕ ದೃಷ್ಟಿಕೋನದ ವೈಜ್ಞಾನಿಕ ಶೋಧ"ದಿಂದ ನಡೆಸಿ ಹೊಸ ಅರ್ಥಗಳು, ಹೊಸ ವ್ಯಾಖ್ಯಾನಗಳನ್ನು ಹೊಸ ಆಯಾಮಗಳಿಂದ ನೀಡಲಾಗಿದೆ. "ವೈಜ್ಞಾನಿಕ ವಿಶ್ಲೇಷಣೆ"ಯಿಂದ ಮಾತ್ರ "ಆಧುನಿಕ ತಂತ್ರಜ್ಞಾನ"ದ ಬೆಳಕಿನಲ್ಲಿ ವಿಮರ್ಶೆಗೊಂಡು, ಹೊಸ, ಹೊಸ "ಪರಿಕಲ್ಪನೆ"ಗಳು ಈ ಅಧ್ಯಯನದೊಳಗೆ ಮೂಡಿ ಬಂದಿದೆ.

~~~***~~~
~~~

**ಅಡಿಟಿಪ್ಪಣಿಗಳು**

೧. ಡಾ॥ ಎಲ್.ಕೆ. ಗೋಪಾಲಕೃಷ್ಣಯ್ಯ, ಕ.ಸಾ.ಪ.ಪತ್ರಿಕೆ, ಕ.ಸಾ.ಪ. ಪ್ರಕಟಣೆ, ಬೆಂ. (೧೯೮೭), ಪು. ೧೧೭.
೨. ಡಾ॥ ವಿ. ಸೀ. "ಕೃಷ್ಣ ಚಾರಿತ್ರ್ಯ", ಇತಿಹಾಸ ಕಾವ್ಯಗಳು ಸಂ-೧, ಪು. ೨೦೪.
೩. ಎಸ್.ಆರ್. ರಾಮಸ್ವಾಮಿ, ಮಹಾಭಾರತ ಬೆಳವಣಿಗೆ, ಕಾವ್ಯಾಲಯ ಪ್ರಕಾಶನ, ಮೈಸೂರು. ಪು. ೧೬.
೪. ಎಸ್.ಆರ್. ರಾಮಸ್ವಾಮಿ, ಮಹಾಭಾರತ ಬೆಳವಣಿಗೆ, ಪು. ೧೫.
೫. ಎಸ್.ಆರ್. ರಾಮಸ್ವಾಮಿ, ಮಹಾಭಾರತ ಬೆಳವಣಿಗೆ, ಪು. ೨೨.
೬. ಪ್ರೊ॥ ಜಿ.ಎನ್. ಚಕ್ರವರ್ತಿ, ಧರ್ಮಚಕ್ರ (೧೯೯೩), ಪು. ೨೦.
೭. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, ಬೆಂ. (೧೯೮೫), ಲೇ: ಪ್ರೊ॥ ಸಾ.ಕೃ.ರಾಮಚಂದ್ರರಾಯರು, ಪು. ३४
೮. ಡಾ॥ ಶಂ.ಭಾ.ಜೋಶಿ, ಸ್ಥಿತ್ಯಂತರ., ಭಾರತೀಯ ಸಂಸ್ಕೃತಿ, ಪು. ೬೫.
೯. ಕೀರ್ತಿನಾಥ ಕುರ್ತುಕೋಟಿ, "ಕುಮಾರವ್ಯಾಸ" ೯೧೯೯೦), ಪು, ೧೯.
೧೦. ಡಾ॥ ಕೆ.ಎಲ್. ಗೋಪಾಲಕೃಷ್ಣಯ್ಯ "ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ" (೧೯೮೭) ಪು. ೧೨೩.
೧೧.— ಅದೇ — " —, ಪು. ೧೨೩.
೧೨. ಜಿ.ಟಿ. ನಾರಾಯಣರಾವ್, ವಜ್ರಪಥಸ್ಮರಣ ಗ್ರಂಥ (೧೯೯೩), ಕರ್ನಾಟಕ ಸಂಘ, ಶಿವಮೊಗ್ಗ, ಪು.೧೯೧.
೧೩. ಸಂ: ಗೀತಾಶರ್ಮ ಶ್ರೀನಿವಾಸ, " ", ಲೇ: ಗುಂಡ್ಮಿ ಚಂದ್ರಶೇಖರ ಐತಾಳರು, (೧೯೭೨), ಪು. ३८८.
೧೪. ಡಾ॥ ಜಿ.ಎಂ. ಹೆಗಡೆ, "ಮಾಸ್ತಿಯವರ ವಿಮರ್ಶೆ ಒಂದು ಅಧ್ಯಯನ." (೧೯೯೧), ಪು. ೮೦
೧೫. M. Winternitz, "A History of Indian Literature Vol. 1, P. 321.
೧೬. ಡಾ॥ ಜಿ.ಎಂ. ಹೆಗಡೆ, "ಮಾಸ್ತಿಯವರ ವಿಮರ್ಶೆ ಒಂದು ಅಧ್ಯಯನ." (೧೯೯೧), ಪು. ೩೨೧.
೧೭. ವೈದ್ಯಗುರು ಎಂ.ಆರ್.ಭಟ್, "ಭಾರತ ಗಾಂಭೀರ್ಯ", (೧೯೫೪), ಪು. ೬
೧೮. ಕೆ. ಅಂತೋನವ ಜಿ. ಬೊಂಗಾರ್ಡ್ ಲೆನಿನ್, "ಭಾರತದ ಇತಿಹಾಸ" (೧೯೮೭), ಪು. ೬೮.
೧೯. ರೋಮಿಲಾ ಥಾಪರ್, ಅನು: ಸೂರ್ಯನಾಥ ಕಾಮತ್, ಪು. ೭೨
೨೦. ಪ್ರೊ॥ ಕೆ.ಟಿ. ಪಾಂಡುರಂಗಿ, "ಸಂಸ್ಕೃತ ಕವಿ ಕಾವ್ಯದರ್ಶನ", ಪು. ೨೭೯.
೨೧. ಡಾ॥ ಶಂ.ಬಾ.ಜೋಶಿ, ಅನು: ಡಾ॥ ಗೌರೀಶ ಕಾಯ್ಕಿಣಿ (೧೯೯೯), ಪು. ೫೯.
೨೨. ಎಂ.ಎ.ಲಕ್ಷ್ಮೀತಾತಾ ಚರಿತ್ರೆ, ಸಭಾಪರ್ವ ಸಂಗ್ರಹ (೧೯೭೮), ಪು. v
೨೩. ವಿವಿಧ ಲೇಖಕರು ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ. ಪ್ರಸ್ತಾವನೆ : ಬರಗೂರು ರಾಮಚಂದ್ರಪ್ಪ, (೧೯೯೩), ಪು. ३८.
೨೪. ಪ್ರೊ. ಡಿ. ಪ್ರಹ್ಲಾದಾಚಾರ್ಯರು, ಶ್ರೀಮನ್ಮಧ್ವಾಚಾರ್ಯರ ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ, (೧೯೯೦), ಪು. ೧೨೬.
೨೫. — " — ಅದೇ — " —, ಪು, ೧೭೩
೨೬. — " — ಅದೇ — " —, ಪು, ೧೭೯.
೨೭. ಪ್ರೊ.ಪಿ.ವಿ.ತಂತ್ರಿ, ಸನಾತನ ಧರ್ಮದರ್ಶನ, (೨೦೧೩), ಪು. ೨೩.
೨೮. — " — ಅದೇ — " —, ಪು, ೨೫.
೨೯. ಶ್ರೀಮನ್ಮಹಾಭಾರತ ಭಾಗ-೧, (೧೯೭೮), ಪು.೩೯೦.
೩೦. — " — ಅದೇ — " —, ಪು, ೧೬.
೩೧. ಪ್ರೊ. ಪಿ.ಶ್ರೀಪತಿ ತಂತ್ರಿ "ಸನಾತನ ಧರ್ಮದರ್ಶನ" (೨೦೧೩), ಪು. ೪೫.
೩೨. ಡಾ॥ ಎಲ್.ಆರ್. ಹೆಗಡೆ, "ಪುರಾಣ ಜಿಜ್ಞಾಸೆ" (೧೯೭೬), ಪು.೧೦
೩೩. — " — ಅದೇ — " —, ಪು, ೬೯.
೩೪. ಪ್ರೊ. ಕೆ.ಎಸ್. ಕಣ್ಣನ್, "ಇತಿಹಾಸ-ಪುರಾಣ" (೨೦೦೨), ಪು. ೭.
೩೫. ಡಾ॥ ಶಂ.ಬಾ. ಜೋಶಿ, "ಸ್ಥಿತ್ಯಂತರ" (೧೯೯೯), ಪು. ೫೯.

~~~***~~~
~~~

## ಅಧ್ಯಾಯ-2

## ಈವರೆಗಿನ ಅಧ್ಯಯನದ ಸಮೀಕ್ಷೆ

ಕನ್ನಡದ ಪ್ರಪ್ರಥಮ ಲಿಖಿತರೂಪದ ದಾಖಲೆಯಿರುವ ಶಾಸನವೆಂದರೆ; ಕ್ರಿ.ಶ. ೪೫೦ ರ ಕಾಲದ ಹಲ್ಮಿಡಿ ಶಾಸನ. ಕನ್ನಡದಲ್ಲಿ ಉಪಲಬ್ಧವಿರುವ ಮೊಟ್ಟ ಮೊದಲ ಗ್ರಂಥವೆಂದರೆ ಕ್ರಿ.ಶ. ೮೧೪-೮೭೭ ರಲ್ಲಿ ಎಂದು ಗುರ್ತಿಸಲಾದ ಒಂಭತ್ತನೇ ಶತಮಾನದ ರಾಷ್ಟ್ರಕೂಟರ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಕಾಲದಲ್ಲಿ ರಚನೆಗೊಂಡಂತಹ 'ಕವಿರಾಜಮಾರ್ಗ' ಶಾಸ್ತ್ರಗ್ರಂಥ. ಅದೇರೀತಿ, ಕನ್ನಡದ ಪ್ರಪ್ರಥಮ 'ಮಹಾಭಾರತ'ವೆಂದರೆ; ಇಲ್ಲಿಂದ ಮುಂದೆ ಸುಮಾರು ನೂರು ವರ್ಷಗಳ ಅಂತರದಲ್ಲಿ ಕಿ.ಶ. ೧೦ನೇ ಶತಮಾನವನ್ನು "ಕನ್ನಡ ಸಾಹಿತ್ಯದ ಸುವರ್ಣಯುಗ"ವೆಂದೇ ಹೆಸರು ಪಡೆದಿದ್ದ ಆದಿಕವಿ ಪಂಪನ ಕಾಲವಾಗಿದ್ದು; ಈತನಿಂದ ರಚನೆಗೊಂಡ 'ಪಂಪ ಭಾರತ' ಅದೇ 'ವಿಕ್ರಮಾರ್ಜುನ ವಿಜಯ'.

ಪಂಪ 'ವ್ಯಾಸ ಭಾರತ'ವನ್ನು ಕನ್ನಡಿಸಿ ಕೃತಿ ರಚನೆ ಮಾಡಿದ್ದರಿಂದಲೇ ಕನ್ನಡ ಸಾಹಿತ್ಯಕ್ಕೆ ಏರೆತ್ತರದ ಆರಂಭ ದೊರಕಿತೆಂದು ವಿದ್ವಾಂಸರೆಲ್ಲರ ಅಭಿಪ್ರಯವಾಗಿದೆ.

'ಮಹಾಭಾರತ'ದಂತಹ ಮಹಾಕಾವ್ಯವನ್ನು ವಸ್ತುವನ್ನಾಗಿ ಹೊಂದಿಕೊಂಡು ಕಾವ್ಯ ರಚಿಸಿರುವುದನ್ನು ಗಮನಿಸಿದಾಗ ಭರತಖಂಡದ ಸೃಜನ ಸಾಮರ್ಥ್ಯದ ಪ್ರತೀಕವಾಗಿ ಶತಶತಮಾನಗಳಿಂದಲೂ ಎಲ್ಲಾ ಭಾಷೆಗಳಲ್ಲೂ, ಮತಗಳ ಕಾವ್ಯಗಳಲ್ಲೂ ಪುನರುಕ್ತವಾಗುತ್ತಾ ಬಂದಿರುವುದನ್ನೇ ಕಾಣುತ್ತೇವೆ. ಆದರೆ ಮೂಲ ಕೃತಿಯಲ್ಲಿರುವುದನ್ನು ಇರುವ ಹಾಗೆಯೇ ತೆಗೆದುಕೊಳ್ಳದೇ; ತಮ್ಮ ಉದ್ದೇಶಕ್ಕೆ ತಕ್ಕಂತೆ, ಒಗ್ಗುವಂತೆ ಮಾರ್ಪಾಡುಗಳನ್ನು ಮಾಡಿ-ಕೊಂಡಿರುವುದನ್ನೂ ಕಾಣುತ್ತೇವೆ.

ಉದಾಹರಣೆಗೆ : ಜೈನರು ಮತ್ತು ವೈದಿಕರು ರಚಿಸಿರುವ 'ಭಾರತ'ಗಳನ್ನು ಹೋಲಿಸಿ ನೋಡಬಹುದಾಗಿದೆ.

**ಪಂಪ 'ವಿಕ್ರಮಾರ್ಜುನ ವಿಜಯ'** ಹೆಸರೇ ಸೂಚಿಸುವಂತೆ ಅರ್ಜುನನನ್ನು ನಾಯಕನನ್ನಾಗಿ ಮಾಡಿಕೊಂಡು ರಚಿಸಿದಂತಹ ಭಾರತ. ವ್ಯಾಸರ ಭಾರತದ ಮೂಲ ಕಥೆಯನ್ನು, ಕೇಂದ್ರ ಪಾತ್ರಗಳ ಸುತ್ತ ಹೆಣೆಯುವಲ್ಲಿ ತನ್ನ ಆಶ್ರಯದಾತ, ರಾಜನ ಪಾತ್ರಗಳನ್ನು ಸಮೀಕರಿಸುವುದರ ಮೂಲಕ **ಲೌಕಿಕ ಕಾವ್ಯ**ವನ್ನಾಗಿ ಮಾಡಿದ್ದಾನೆ.

'ವ್ಯಾಸ ಭಾರತ'ವು ಧರ್ಮಸೂಕ್ಷ್ಮಗಳಿಗೆ ಹಿಡಿದ ಕೈಗನ್ನಡಿಯಾಗಿದ್ದು; ಶ್ರೀಕೃಷ್ಣನ ಮಹಿಮೆಗಳಿಂದ ತುಂಬಿದ್ದು; ಮಾನವನ ಉದ್ಧಾರಕ್ಕೆ ಇದು ಆಧಾರಗ್ರಂಥ ಎಂದು ಪಂಪ ಭಾವಿಸದೇ; ಅರಿಕೇಸರಿಯ ಬಿರುದು ಬಾವಲಿಗಳೆಲ್ಲವನ್ನೂ ಅರ್ಜುನನಿಗೆ ಸೇರಿಸಿ; ಅರ್ಜುನನ ಮಹಿಮೆಗಳೆಲ್ಲವನ್ನೂ ಅರಿಕೇಸರಿಯ ಪಾಲಿಗೆ ನೀಡಿದ್ದಾನೆ.

'ವ್ಯಾಸ ಭಾರತ'ದ ಕೃಷ್ಣನು 'ಮಮ ಪ್ರಾಣಾಹಿ ಪಾಂಡವಾಃ!' ಎಂದೂ ತನ್ನ ಪರಮಭಕ್ತನಾದ ಅರ್ಜುನನನ್ನು ಅಡಿಗಡಿಗೂ ಬೆನ್ನ ಹಿಂದೆ ನಿಂತು ರಕ್ಷಿಸುತ್ತಿದ್ದು; 'ಸಾಧು ಪರಿತ್ರಾಣಕ' ಎನ್ನುವ ತನ್ನ ಹೆಸರನ್ನು ಸಾರ್ಥಕ ಪಡಿಸಿಕೊಳ್ಳುತ್ತಾನೆ. ಆದರೆ ಪಂಪನ ಅರ್ಜುನನ ಬಹಳ ಸಾಹಸಿ, ಸ್ವಾಭಿಮಾನಿ. ಕೃಷ್ಣನ ನೆರಳಿನಲ್ಲೇ ಬೆಳೆಯಲು ಇಚ್ಛಿಸುವ ಪರಾವಲಂಬಿಯಲ್ಲ!!

ಅರಿಕೇಸರಿಯ ಆದರ್ಶ, ಪರಾಕ್ರಮಗಳನ್ನು ಸಾರಬೇಕೆಂದೇ 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿದ ಪಂಪ ತನ್ನ ಕಥಾ ನಾಯಕನನ್ನು ಪ್ರತೀಕ್ಷಣವೂ ಕೃಷ್ಣನ ಕೃಪಾಕಟಾಕ್ಷಕ್ಕಾಗಿ ಬೇಡುವಂತೆ ಮಾಡಿದರೆ ಅರಿಕೇಸರಿಯ ಸಾಹಸ, ಆದರ್ಶಗಳಿಗೆ ಧಕ್ಕೆ ಉಂಟು ಮಾಡಿದಂತಾಗುತ್ತದೆ. ಆದ್ದರಿಂದ ಇಲ್ಲಿ ಕೃಷ್ಣನ ಪಾತ್ರಕ್ಕೆ ಇರುವ ಮಹತ್ವ ಕಡಿಮೆಯಾಗಿದೆ.

**ಅ. 'ತಳಸಮುದಾಯ ಮತ್ತು ಅಲಕ್ಷಿತ'ರ ಪಾತ್ರಗಳ ಹಿನ್ನಲೆಯಲ್ಲಿ ಕರ್ಣ ಮತ್ತು ದುರ್ಯೋಧನ ಪಾತ್ರಗಳ ಕುರಿತಂತೆ ಪಂಪ, ರನ್ನ ಮತ್ತು ಕುಮಾರವ್ಯಾಸರ ದೃಷ್ಟಿಯಲ್ಲಿ ಕಂಡುಬಂದಿರುವಂತೆ ವಿಶ್ಲೇಷಣೆ :**

'ಪಂಪ ಭಾರತ'ದ ದುರ್ಯೋಧನನು ಛಲಕ್ಕೆ ಪ್ರತೀಕನು, ಸೂರ್ಯ ಪುತ್ರನಾದ ಕರ್ಣನು ಸತ್ಯಗುಣಕ್ಕೂ, ಭೀಮನು ಪರಾಕ್ರಮಕ್ಕೂ, ಭೀಷ್ಮನು ಔನ್ನತ್ಯ ಗುಣಕ್ಕೂ, ದ್ರೋಣನು ಬಿಲ್ವಿದ್ಯೆಯಲ್ಲೂ, ಅರ್ಜುನನು ಸಾಹಸಕ್ಕೂ ಧರ್ಮರಾಯನು ಧರ್ಮಗುಣದ ಶುದ್ಧಾತ್ಮನಾಗಿಯೂ ಬಿಂಬಿತಗೊಂಡಿದ್ದಾನೆ.

ಮತ್ತೊಂದು ಮಹತ್ವದ ಅಂಶವೆಂದರೆ, ಪಂಪನು ತನ್ನ ಈ 'ಭಾರತ ಕಾವ್ಯ'ದಲ್ಲಿ ಲೋಕ ಪೂಜ್ಯತೆಗೆ ಕಾರಣ-ರಾದವರ ಸಾಲಿನಲ್ಲಿ ದುರ್ಯೋಧನ, ಕರ್ಣರನ್ನೂ ಸೇರಿಸಿದ್ದಾನೆ. ವ್ಯಾಸರ ಮೂಲ ಭಾರತದಲ್ಲಿ ಇವರಿಬ್ಬರೂ ದುಷ್ಟ ಚತುಷ್ಟಯರ ಸಾಲಿಗೆ ಸೇರಿದವರು. ಆದರೆ ಪಂಪ ಚಿತ್ರಿಸಿರುವ ಕರ್ಣ, ದುರ್ಯೋಧನರ ಪಾತ್ರಗಳನ್ನು ನೋಡಿದಾಗ ನಮಗೆ ಕೂಡಲೇ ನೆನಪಾಗುವುದು ಗ್ರೀಕ್ ದುರಂತ ನಾಟಕಗಳ ನಾಯಕರ ಪಾತ್ರಗಳು!!

ಕರ್ಣರ ಪಾತ್ರವಂತೂ ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತದೆ. ದುರ್ಯೋಧನನು ಕೊನೆಯವರೆಗೂ ತನ್ನ ಛಲವನ್ನು ಸಾಧಿಸುತ್ತಾನೆ. ದೇಹ ಬಿದ್ದು ಹೋಗುತ್ತಿರುವ ಸಮಯದಲ್ಲೂ ಅವನ ಶೌರ್ಯ ಕುಂದುವುದಿಲ್ಲ. ಇದಕ್ಕಾಗಿ ಪಂಪ ದುರ್ಯೋಧನನನ್ನು 'ಅಭಿಮಾನಧನ' ಎಂದು ಕರೆದು ಗೌರವಿಸಿದ್ದಾನೆ.

**'ಪಂಪ ಭಾರತ' ಎಂಬ 'ವಿಕ್ರಮಾರ್ಜುನ ವಿಜಯ'ದಲ್ಲಿರುವ ಮುಖ್ಯವಾದ ಅಂಶಗಳ ಕುರಿತ ವಿಮರ್ಶೆ :**

ಪ್ರಧಾನ ಸಂಪಾದಕರು ಡಾ॥ ಕೆ.ವಿ. ಪುಟ್ಟಪ್ಪ, ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಾಂಗ, ಮೈಸೂರು ಕ್ರಿ.ಶ. ೧೯೭೩ ರಲ್ಲಿ ಪ್ರಕಟಿಸಿರುವ ಗ್ರಂಥ ಇದಾಗಿದೆ.

ಪಂಪ ವಿರಚಿತ 'ವಿಕ್ರಮಾರ್ಜುನ ವಿಜಯ'ದ ಪ್ರತಿಗಳು ಸಿಕ್ಕಿರುವುದು ಕೇವಲ ಮೂರು.

ಇದಕ್ಕೂ ಮೊದಲು ೧೮೯೮ರಲ್ಲಿ ಮೂರು ತಾಳೆಯೋಲೆ ಪ್ರತಿಗಳ ಸಹಾಯದಿಂದ ತಿದ್ದಿ, ಎರಡನೇ ಮುದ್ರಣವಾಗಿ 'ಪಂಪ ಭಾರತ'ವೆಂದು ಪ್ರಸಿದ್ಧಿ ಪಡೆದಿರುವ 'ವಿಕ್ರಮಾರ್ಜುನ ವಿಜಯ' ಚಂಪೂ ಗ್ರಂಥವನ್ನು ಮೈಸೂರು ಆರ್ಕಿಯಾಲಾಜಿಕಲ್ ರಿಸರ್ಚ್ ಸೆಂಟರ್‌ರವರಾಗಿ ಕನ್ನಡ ಭಾಷೆಯ ಮಹತ್ತ್ವವನ್ನು ಇಡೀ ಪ್ರಪಂಚದಲ್ಲಿ ಹರಡಿದ ಕೀರ್ತಿಗೆ ಪಾತ್ರರಾದ ಬಿ.ಎಲ್. ರೈಸ್‌ರವರು ಪ್ರಕಟಗೊಳಿಸಿದಾಗ; ಮೈಸೂರು ವಿದ್ಯಾಭ್ಯಾಸ ಇಲಾಖೆಯಲ್ಲಿ ಕನ್ನಡ ಟ್ರಾನ್ಸ್‌ಲೇಟರ್ ಆಗಿದ್ದ ಆರ್. ನರಸಿಂಹಾಚಾರ್‌ರವರು ಪ್ರತಿಯನ್ನು ಮುದ್ರಣಕ್ಕೆ ಸಿದ್ಧಗೊಳಿಸಿದ್ದರು.

೧೯೭೩ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಈಗಾಗಲೇ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ್ದ ಗ್ರಂಥವನ್ನು ಪುನರ್ಮುದ್ರಣ ಮಾಡಿದಾಗ ಉಪೋದ್ಘಾತ ಬರೆದ ಶ್ರೀ ಕೆ.ವಿ. ಪುಟ್ಟಪ್ಪನವರು "ಪಂಪನ ಭಾರತದ ಕಥೆಯಲ್ಲಿ ಜೈನ ಭಾರತಗಳಲ್ಲಿರುವ ಜೈನ ಪ್ರಕ್ರಿಯೆಗಳು ಇಲ್ಲವೆಂದೇ ಹೇಳಬೇಕು. ವ್ಯಾಸಭಟ್ಟಾರಕ, ವೈಮಾನಿಕ ದೇವರು, ಅಷ್ಟಶೋಭೆ, ಆಸನ ಕಂಪ, ರೂಪ ಪರಾವರ್ತನ - ಇವೇ ಮೊದಲಾದ ಕೆಲವು ಪದಗಳನ್ನು ಈ ಗ್ರಂಥದಿಂದ ಎತ್ತಿ ಹಾಕಿದರೆ ಈ ಭಾರತವನ್ನು ಜೈನ ಕವಿಯು ಬರೆದನೆಂದು ಹೇಳುವುದಕ್ಕೆ ಆಗುವುದೇ ಇಲ್ಲ." ಎಂದಿದ್ದಾರೆ. 'ವ್ಯಾಸಭಾರತ'ದೊಂದಿಗೆ ಪಂಪನ ಈ ಕಾವ್ಯವು ಅಲ್ಲಲ್ಲಿ ಸಾಮ್ಯವು ತೋರಿಬಂದರೂ 'ಜೈನಭಾರತ' ಎನ್ನುವುದೇ ಬೇರೆ ಎಂದು ಸ್ಪಷ್ಟವಾಗುತ್ತದೆ. ಈತನು ಅಲ್ಲಲ್ಲಿ ತನ್ನ ನಿರೂಪಣೆಗೆ ತಕ್ಕಂತಹ ಮಾರ್ಪಾಡುಗಳನ್ನು ಮಾಡಿಕೊಂಡಿರುವುದನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ.

ಈ ಗ್ರಂಥದಲ್ಲಿ ಒಟ್ಟು ೧೪ ಆಶ್ವಾಸಗಳಿವೆ. ಸಂಪಾದಕರ ಉಪೋದ್ಘಾತದ ನಂತರ 'ಪಂಪ ಭಾರತ'ದ ಕಥೆಯನ್ನು ವರ್ಣಿಸಲಾಗಿದೆ.

ವ್ಯಾಸಭಾರತದಲ್ಲಿ ಕರ್ಣ, ಕೌರವರು, ಪಾಂಡವರು ಮೊದಲಾದವರ ಉತ್ಪತ್ತಿಯನ್ನು ದೇವತೆಗಳ ಮೂಲವೆಂದು ವರ್ಣಿಸಲಾಗಿದೆ. ಆದರೆ ಇಲ್ಲಿ ಪಂಪನು ಇಂತಹ ಘಟನೆಗಳನ್ನು ಪ್ರಾಪಂಚಿಕವಾಗಿಸಿದ್ದು; ಜೈನಧರ್ಮವನ್ನು ಬೋಧಿಸುವುದಕ್ಕೆ ತಕ್ಕಂತಿರುವ ಸನ್ನಿವೇಶಗಳಿಂದ ಕೂಡಿರುವಂತೆ ವರ್ಣಿಸಿದ್ದಾನೆ.

ದ್ರೌಪದಿಯ 'ಪಂಚ ಪತಿತ್ವ'ವು ಜೈನ ಭಾರತದಲ್ಲಿ ದೂಷ್ಯಗೊಂಡಿದೆ. ಅಂದರೆ ದ್ರೌಪದಿಯ 'ಪಂಚ ಪತಿತ್ವ'ವನ್ನು ಪಂಪನು ಅಲ್ಲಗಳೆದು; ಮೂಢರಾದವರು ಇಂತಹ ನಂಬಿಕೆಗೆ ಆಸ್ಪದ ಕೊಡುವರೆಂದು ಹೇಳಿ, ದ್ರೌಪದಿಯು ಅರ್ಜುನನಿಗೆ ಮಾತ್ರ ಪತ್ನಿಯೆಂದು ಧರ್ಮರಾಜ, ಭೀಮ, ನಕುಲ-ಸಹದೇವರಿಗೆ ಬೇರೆ ಬೇರೆ ಪತ್ನಿಯರಿದ್ದರೆಂದು ವರ್ಣಿಸಿದ್ದಾನೆ. **"ಪಂಪನು ವ್ಯಾಸಭಾರತವನ್ನು ಬಿಟ್ಟು ಹೊರಬರಲು ಇಷ್ಟಪಡದೆ ಅಥವಾ ಆತನಿಂದ ಅದು ಸಾಧ್ಯವಾಗದೇ ಈ 'ಪಂಚ ಪತಿತ್ವ'ವನ್ನು ಮಾತ್ರ ಹೇಗಾದರೂ ಮಾಡಿ ತೇಲಿಸಿಬಿಡಬೇಕೆಂದು ಪ್ರಯತ್ನಪಟ್ಟು ದ್ರೌಪದಿಯನ್ನು ಅರ್ಜುನನಿಗೆ ಮಾತ್ರ ಮದುವೆ ಮಾಡಿಸಿದ್ದಾನೆ."**[೬] ಹಾಗೆಯೇ

ಕೃಷ್ಣನ ಪಾತ್ರ ಮತ್ತು ಆತನ ಕಾರ್ಯ ಭಾಗಗಳನ್ನೆಲ್ಲಾ ಪಂಪನು ಅತ್ಯಂತ ಪೇಲವಗೊಳಿಸಿದ್ದಾನೆ. ಶಾಂತಿ ಸಂಧಾನಕ್ಕಾಗಿ ಇಲ್ಲಿ ಕೃಷ್ಣನು ಹೋಗುವುದಿಲ್ಲ. ಬದಲಾಗಿ ಒಬ್ಬ ದೂತನು ಈ ಕಾರ್ಯವಹಿಸುತ್ತಾನೆ. ಆತನು ಅತ್ಯಂತ ಚಾಣಾಕ್ಷನೂ, ಸತುರ ಭಾಷಣಕಾರನೂ, ನೀತಿ ವೃದ್ಧನೂ ಆದ ಒಬ್ಬ ಅನ್ವಯ ಶುದ್ಧನಾದಂತಹ ಒಬ್ಬ ದೂತನಾಗಿರುತ್ತಾನೆ. ಹಾಗೆಯೇ ಅರ್ಜುನನ ಸಾರಥಿಯಾಗಿದ್ದವನೂ "ಮನದನ್ನನುಂ ಮಹಾರಥನು ಮಪ್ಪ ಕೃಷ್ಣ ಎಂಬುವವನು." ಎಂದಷ್ಟೇ ಹೇಳುತ್ತಾನೆ.

ಪಂಪನ ಗುರು ದೇವೇಂದ್ರನ ಮುನೀಂದ್ರ. ಈ ಮುನಿಯು ಮಹಾ ಪ್ರಖ್ಯಾತನಾಗಿ ರಾಜಾಧಿರಾಜರುಗಳಿಂದ ಪೂಜಿತನಾಗಿದ್ದನೆಂದು ಶ್ರವಣಬೆಳ್ಗೊಳದ ೪ನೇ ಶಾಸನದಲ್ಲಿ ಹೇಳಿರುವ ಶ್ಲೋಕದಿಂದ ತಿಳಿದುಬರುತ್ತದೆ.

ಪಂಪನು ಉದ್ದಾಮ ಕವಿ ಮಾತ್ರವಲ್ಲದೆ ಪ್ರಚಂಡ ಯೋಧನೂ ಆಗಿದ್ದನೆಂದೂ; ಈತನನ್ನು ಅರಿಕೇಸರಿಯು ಪ್ರೀತಿಯಿಂದ ತನ್ನ ಬಳಿಗೆ ಕರೆಯಿಸಿಕೊಂಡು ಸನ್ಮಾನ ಮಾಡಿ, ತನ್ನ ಕೀರ್ತಿಯನ್ನು ಭೂಮಿಯಲ್ಲಿ ನೆಲೆಗೊಳಿಸಲು ಈ ಇತಿಹಾಸ ಕಥೆಯನ್ನು ಬರೆಯುವಂತೆ ಒಪ್ಪಿಸಿದನೆಂದು 'ಪಂಪ ಭಾರತ'ದ ೧೪-೫೧, ಪ್ರ.ಆಶ್ವಾಸ, ಪದ್ಯ ೧೫-೪೧ರಿಂದ ನಮಗೆ ತಿಳಿದುಬರುತ್ತದೆ.

ಕಥಾವಸ್ತುವಿನಲ್ಲೂ, ಪಾತ್ರರಚನೆಯಲ್ಲೂ ಕವಿ ಇಲ್ಲಿ ಅನೇಕ ಸಣ್ಣ ಸಣ್ಣ ಮಾರ್ಪಾಡುಗಳನ್ನು ಮಾಡಿಗುವುದನ್ನು ನಾವು ಕಾಣುತ್ತೇವೆ.

* ಅರಿಕೇಸರಿಯನ್ನು ಕಥಾನಾಯಕನನ್ನಾಗಿ ಮಾಡಿ ಅರ್ಜುನನೊಡನೆ ಹೋಲಿಸಿ ಕಥೆ ಹೆಣೆದಿದ್ದಾನೆ. ಪ್ರತಿ ಆಶ್ವಾಸದ ಮೊದಲ ಪದ್ಯದಲ್ಲಿ ಕವಿಯು ಅರ್ಜುನನ ಪರವಾಗಿ ಅರಿಹ, ಹರಿಗನೆಂಬ ಹೆಸರುಗಳನ್ನು ಬಳಸಿದ್ದರೂ; ಕೆಲವು ಕಡೆಗಳಲ್ಲಿ 'ಪರಾಕ್ರಮ ದವಳಂ', 'ಉದಾತ್ತ ನಾರಾಯಣಂ' ಮೊದಲಾದ ಅರಿಕೇಸರಿಯ ಬಿರುದುಗಳನ್ನೇ ಬಳಸಿದ್ದಾನೆ. ಇದರಿಂದ ಕಥೆಗೆ ಯಾವ ಚ್ಯುತಿಯೂ, ಕುಂದೂ ಉಂಟಾಗುವುದಿಲ್ಲವಾದರೂ; ಯೌವ್ವನ ಪ್ರಾಪ್ತಿಯಾದಾಗ ಅರ್ಜುನನ ರೂಪನ್ನೂ, ಗುಣಗಳನ್ನೂ ವರ್ಣಿಸುವಲ್ಲಿ ಕವಿಯು ಅರಿಕೇಸರಿಯ ಅನೇಕ ಬಿರುದುಗಳನ್ನೆತ್ತಿಕೊಂಡು ಅವಕ್ಕೆ ಸಾಮಂಜಸ್ಯವನ್ನು ಕಲ್ಪಿಸಿದ್ದಾನೆ. ಇದೂ ಕೂಡಾ ಅಸಹಜವಾಗಿ ತೋರುವುದಿಲ್ಲ. ಆದರೆ ಅರ್ಜುನನ ಪರಾಕ್ರಮವನ್ನು ವರ್ಣಿಸುವಾಗ ಅರಿಕೇಸರಿಯ ವಿಚಾರವನ್ನು ಇದಕ್ಕೆ ಅಭೇದವಾಗಿರುವಂತೆ ಯೋಚಿಸುವುದರಲ್ಲಿ ಕಥೆಯು ಆಭಾಸವಾಗುವುದು.

ಉದಾಹರಣೆಗೆ : ದೂತಕಾರ್ಯಕ್ಕಾಗಿ ದುರ್ಯೋಧನನ ಸಭೆಗೆ ಹೋಗಿ ಅರ್ಜುನನ ಪ್ರತಾಪವನ್ನು ವರ್ಣಿಸುವ ಸಂದರ್ಭದಲ್ಲಿ ಕರ್ಣನನ್ನು ಅರ್ಜುನನು ಗೆಲ್ಲಲಾರನೆಂದೂ ತನಗೆ ಪಟ್ಟವಾಗಲಾರದೆಂದೂ ಧರ್ಮರಾಯನು ಕೋಪಿಸಿಕೊಂಡ ಸಂದರ್ಭದಲ್ಲಿ ಅರ್ಜುನನು ಅರಿಕೇಸರಿಯ ವಿಚಾರವನ್ನು ಸೇರಿಸಿ ಅರ್ಜುನನ ಪರಾಕ್ರಮವನ್ನು ಹೊಗಳಿರುವುದು ಸಮಂಜಸವೆನಿಸದೆ ಆಭಾಸವನ್ನು ಸೃಷ್ಟಿಸುವಂತಿದೆ.

ವ್ಯಾಸ ಭಾರತದಲ್ಲಿ ಕಾಣಬರುವ ಅನೌಚಿತ್ಯಗಳನ್ನು ಕೈಬಿಟ್ಟು ಕೆಲವನ್ನು ತಿದ್ದಿ ಸರಿಪಡಿಸಿಕೊಂಡು ಹೊಸದಾಗಿ ಸೇರಿಸಿದ್ದು; ಇನ್ನೂ ಅನೇಕ ಕಡೆಗಳಲ್ಲಿ ಸಣ್ಣ ಪುಟ್ಟ ಮಾರ್ಪಾಡುಗಳನ್ನು ಮಾಡಿದ್ದಾನೆ. ಅವುಗಳಲ್ಲಿ ಕೆಲವು ಮುಖ್ಯವಾದವುಗಳೆಂದರೆ;

೧) ದ್ರುಪದನ ರಾಣಿಗೆ ಮಗನಾಗಿ ಹುಟ್ಟಿ ಕಾರಣಾಂತರಗಳಿಂದ ಶಿಖಂಡಿಯಾದ ಅಂಬೆಯು ವ್ಯಾಸ ಭಾರತದಲ್ಲಿ ಮಗಳಾಗಿ ಹುಟ್ಟಿ ಪುರುಷ ವೇಷದಿಂದ ಶಿಖಂಡಿಯಾಗಿ ಬೆಳೆದು ಪುರುಷತ್ವವನ್ನು ಒಬ್ಬ ಯಕ್ಷನಿಂದ ಪಡೆದಂತೆ ಹೇಳಿದೆ. (ಉದ್ಯೋಗ ಪರ್ವ, ಅಧ್ಯಾಯ ೧೮೯-೧೯೩)

೨) ವ್ಯಾಸ ಭಾರತ (ಆದಿಪರ್ವ, ೧೦೬) ರಲ್ಲಿ ಅಂಬೆ, ಅಂಬಾಲಿಕೆಯರಿಬ್ಬರೂ ಪುತ್ರಾರ್ಥಿಗಳಾಗಿ ವ್ಯಾಸರಿಂದ ಹೊಂದಿದ ಗರ್ಭವು ದೇಹ ಸಂಬಂಧದಿಂದ ಎಂದೇ ವರ್ಣಿಸಿದೆ. ಆದರೆ ಪಂಪನು, 'ಮುನೀಂದ್ರನ ದಿವ್ಯದೃಷ್ಟಿ ಮಂತ್ರದೊಳೆ ಸತಿಯರೀರ್ವರೊಳಂ ನವ ಗರ್ಭ ವಿಭ್ರಮಂ ಪೊಂದುದು.' (೧– ೮೫) ಎಂದಿದ್ದಾನೆ.

೩) 'ವಿರಾಟ ಪರ್ವ'ದಲ್ಲಿ ವ್ಯಾಸರು ತಮ್ಮ ನಿರೂಪಣೆಯಲ್ಲಿ ವಿಶ್ಲೇಷಿಸಿರುವ ಕೀಚಕೋಪಾಖ್ಯಾನವು ವಿಶೇಷವಾಗಿದೆ. ಆದರೆ ಪಂಪನು ಅದನ್ನು ತೆಗೆದುಹಾಕಿದ್ದಾನೆ. ವಿರಾಟನಗರದಲ್ಲಿ ದ್ರೌಪದಿಯು ಕೀಚಕನಿಂದಾದ ಅವಮಾನವನ್ನು ಸೈರಿಸಲಾರದೆ ವೃಕೋದರರನ ಬಳಿಗೆ ಓಡಿಹೋಗಿ ರಕ್ಷಣೆಯಾಚಿಸುವುದು ಹೆಂಡತಿಯಲ್ಲದೆ ಬೇರೆ ಯಾರೂ ಈ ರೀತಿ ಮಾಡುವುದು ಸಹಜವಲ್ಲವೆಂದು ಈ ಭಾಗವನ್ನು ಜೈನಕವಿ ತೆಗೆದುಹಾಕಿದ್ದಾನೆ.

ಒಟ್ಟಾರೆಯಾಗಿ, ಕ್ರಿ.ಶ. ೧೦ ನೇ ಶತಮಾನದವರೆವಿಗೂ ಸಂಪೂರ್ಣವಾಗಿ 'ಮಹಾಭಾರತ'ವನ್ನು ಯಾರೂ ಬರೆದಿರಲಿಲ್ಲ. "ರಾಜಾ ಅರಕೇಸರಿಯ ಕೋರಿಕೆಯ ಮೇರೆಗೆ ಆದಿಕವಿ ಪಂಪನು ಕನ್ನಡದಲ್ಲಿ ಮೊಟ್ಟ ಮೊದಲ ಬಾರಿಗೆ 'ಭಾರತ'ವನ್ನು ಬರೆದನು."[2] ಎನ್ನುವುದು ಒಪ್ಪುವಂತಹ ಮಾತೇ ಹೌದು.

**೧೩. ರನ್ನರ 'ಗದಾಯುದ್ಧ'ದಲ್ಲಿ "ಕರ್ಣ" ಪಾತ್ರದ ವೈಶಿಷ್ಟ್ಯ ಮತ್ತು ಮಹತ್ವ :**

ರನ್ನನ 'ಗದಾಯುದ್ಧ'ವು 'ಕೃತಿರತ್ನ' ಎಂಬ ಕೀರ್ತಿಗೆ ಪಾತ್ರವಾಗಿದೆ. ತನ್ನೆಲ್ಲಾ ಕವಿತಾಶಕ್ತಿಯನ್ನೂ ಬಳಸಿ ಈತನು ರಚಿಸಿದ ಈ ಗ್ರಂಥಕ್ಕೆ ಭಟ್ಟನಾರಾಯಣನ, ಭಾಸನ ಪ್ರೇರಣೆ, ಪ್ರಭಾವಗಳನ್ನು ಪಡೆದಿರುವುದಲ್ಲದೇ, ಪಂಪನ ಕಿರಿಯ ಸಮಕಾಲೀನನಾದ ಈತನು ಲೌಕಿಕ ಕೃತಿಯಾಗಿ 'ಗದಾಯುದ್ಧ'ವನ್ನು ರಚಿಸುವಲ್ಲಿ, ಪಂಪ ರಚಿಸಿದ 'ವಿಕ್ರಮಾರ್ಜುನ ವಿಜಯ'ವನ್ನು ರನ್ನ ಎಲ್ಲಾ ರೀತಿಯಿಂದಲೂ ಅನುಕರಿಸಿದ್ದಾನೆ. ಅವನದು 'ವಿಕ್ರಮಾರ್ಜುನ ವಿಜಯ'ವಾದರೆ; ಇವನದು 'ಸಾಹಸ ಭೀಮ ವಿಜಯ'. ಅಲ್ಲಿ ಅರ್ಜುನ ನಾಯಕನಾದರೆ; ಇಲ್ಲಿ ಭೀಮ ಕಥಾನಾಯಕ. ಪಂಪ ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿದರೆ; ಇಲ್ಲಿ ರನ್ನ ಸತ್ಯಾಶ್ರಯನೊಡನೆ ಭೀಮ ಪಾತ್ರವನ್ನು ಅಭೇದವಾಗಿ ಸಮೀಕರಿಸಿ ಚಿತ್ರಿಸಿದ್ದಾನೆ.

'ಪಂಪ ಭಾರತ'ದಲ್ಲಿ ಅರ್ಜುನನಿಗೆ ಪಟ್ಟವಾದರೆ; ಇಲ್ಲಿ ಭೀಮನಿಗೆ ರನ್ನ ಪಟ್ಟಕಟ್ಟುತ್ತಾನೆ.

ಪಂಪ ತನ್ನ ಆಶ್ರಯದಾತನಾದ ಅರಿಕೇಸರಿಯ ವೃತ್ತಾಂತ, ಇತಿಹಾಸಗಳನ್ನು ವರ್ಣಿಸಿದ್ದರೆ; ಇಲ್ಲಿ ರನ್ನ ಸತ್ಯಾಶ್ರಯನ ವೃತ್ತಾಂತ, ಅವನ ಆದರ್ಶ, ಸಾಹಸಗಳನ್ನು ಸವಿಸ್ತಾರವಾಗಿ ವರ್ಣಿಸಿದ್ದಾನೆ.

ಪಂಪನಿಗಿಂತಲೂ ರನ್ನ ಅತೀ ಹೆಚ್ಚು ಸ್ವಾತಂತ್ರ್ಯ ವಹಿಸಿರುವುದನ್ನು ನಾವು ಕಾಣುತ್ತೇವೆ. ಉದಾಹರಣೆಗೆ : ಸತ್ಯಾಶ್ರಯನ ವಂಶವನ್ನು ಭೀಮನ ವಂಶಕ್ಕೆ ಸಮೀಕರಿಸಲು ಹೊರಟಾಗಿನ ಸಂದರ್ಭವು ಸ್ವಲ್ಪ ಮಟ್ಟಿಗಿನ ವಿಕೃತಿ ಮೂಡಿಸಿರುವುದಾಗಿ ಕಾಣಿಸುತ್ತದೆ.

ರನ್ನ ಸಂಸ್ಕೃತದ 'ವೇಣೀ ಸಂಹಾರ', 'ಊರುಭಂಗ' ನಾಟಕಗಳಿಂದ ಪ್ರಭಾವಿತನಾಗಿದ್ದಾನೆ. ಏಕೆಂದರೆ, ಇವುಗಳ ಪ್ರೇರಣೆಯಿರುವುದನ್ನು ಇವನ 'ಗದಾಯುದ್ಧ'ದಲ್ಲಿ ಸನ್ನಿವೇಶ ರಚನೆ, ಭಾವ ಭವ್ಯತೆಗಳ ಛಾಯೆಯನ್ನು ಕಾಣುತ್ತೇವೆ.

ಈ ಪುಟ್ಟ ಕಾವ್ಯದಲ್ಲಿ ಸಮಗ್ರ 'ಮಹಾಭಾರತ'ದ ಕಥೆಯನ್ನು ಕಿರಿದುಗೊಳಿಸಿ ಅಡಕ ಮಾಡಿದ್ದಾನೆ. ಈ ಬಗ್ಗೆ ಈತನೇ ತನ್ನ ಈ ಕೃತಿಯ ಬಗ್ಗೆ ರನ್ನನು,

"॥ ಒಳಪೊಕ್ಕು ನೋಡೇ ಭಾರತ । ದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂ ।
ತೊಳಕೊಂಡಿತ್ತೆನೆ ಸಿಂಹಾ । ವಲೋಕನ ಕ್ರಮದಿನಳಪಿದಂ ಕವಿ ರನ್ನಂ ॥

–ಎಂದಿದ್ದಾನೆ. ಅಂದರೆ, 'ಭಾರತದ ಮುಖ್ಯ ಘಟನೆಗಳೆಲ್ಲವನ್ನೂ ಓದುಗರಿಗೆ ನೆನಪು ಮಾಡಿಕೊಡುತ್ತದೆ. ಇದಕ್ಕೆ ಮುಖ್ಯ ಸಾಧನ ಈ ಕೃತಿಯ ನಾಟಕೀಯ ಶೈಲಿ. ಗದಾಯುದ್ಧ ಕಾವ್ಯವೇ ಆದರೂ ಹೊರ ಚೌಕಟ್ಟಿನಲ್ಲಿ ನಾಟಕವೊಂದು ಹುದುಗಿರುವಂತಿದೆ. ನಾಟಕೋಚಿತವಾದ ಕ್ರಿಯಾ ಸನ್ನಿವೇಶಗಳು, ರಸವತ್ತಾದ ನಿರೂಪಣೆ, ಸ್ವಾರಸ್ಯವಾದ ಸಂಭಾಷಣಾ ಶೈಲಿಯಿರುವುದರಿಂದ ಬಿ.ಎಂ.ಶ್ರೀ. ಅವರು,

"೫೭೬ ಪದ್ಯಗಳ ಕಾವ್ಯವನ್ನು ೧೪೭ ಪದ್ಯಗಳಿಗೆ ಭಟ್ಟಿ ಇಳಿಸಿ, ಅತ್ಯಲ್ಪವಾದ ಬದಲಾವಣೆಗಳೊಡನೆ ಇದನ್ನೊಂದು ಅದ್ಭುತ ರುದ್ರನಾಟಕವಾಗಿ ಪರಿವರ್ತಿಸಿದ್ದಾನೆ." ಎಂದಿದ್ದಾರೆ.

ರನ್ನನ 'ಸಾಹಸ ಭೀಮ ವಿಜಯ'ದ ಕಥಾನಾಯಕ ಭೀಮನಾದರೆ; ಪ್ರತಿನಾಯಕ ದುರ್ಯೋಧನ. ಆದರೂ ಪಂಪ ಕರ್ಣನಿಗೆ ಕೊಟ್ಟಿರುವ ಮಹತ್ವವನ್ನು ಇಲ್ಲಿ ರನ್ನ ದುರ್ಯೋಧನನಿಗೆ ಕೊಟ್ಟಿದ್ದಾನೆ. ಕವಿಯ ಅಪಾರ ಪ್ರೇಮ ಕರುಣೆಗಳಿಗೆ ಇವನು ಇಲ್ಲಿ ಆಸ್ಪದನಾಗಿದ್ದಾನೆ. ದುರ್ಯೋಧನ ಮತ್ತು ಅವನ ಪ್ರಾಣಸ್ನೇಹಿತನಾದ ಕರ್ಣನನ್ನು ಕವಿ ಬಾಯ್ತುಂಬ ಹೊಗಳುವುದು ರನ್ನ ಕವಿಯ ವಸ್ತುನಿಷ್ಠ ಕಾವ್ಯ ಪ್ರತಿಪಾದನೆಗೆ ಹಿಡಿದ ಕೈಗನ್ನಡಿಯಂತಿದೆ. ಪ್ರತಿನಾಯಕನನ್ನು ಮುಕ್ತಕಂಠದಿಂದ ಪ್ರಶಂಸಿಸಲು, ಹೊಗಳಲು ಸಹೃದಯವೂ ಬೇಕು, ಎದೆಗಾರಿಕೆಯೂ ಇರಬೇಕು. ಪೂರ್ವಗ್ರಹಪೀಡಿತ ಕವಿಯ ಮನಸ್ಸು ಕಲುಷಿತವಾದದ್ದು ಮತ್ತು ಅಶ್ರೀಮಂತವಾದುದು. ಆದರೆ ರನ್ನ ಕವಿಯ ಮನೋ ಸಂಸ್ಕಾರವು ಧರ್ಮಸಹಿತವಾದುದು ಮತ್ತು ಪರಿಮಿತವಾದುದೂ ಅಲ್ಲಾ, ಕಲುಷಿತವಾದುದೂ ಅಲ್ಲಾ. ಅಂತರಂಗದಲ್ಲಿ ಹೊಳೆದ ಸೂಕ್ಷ್ಮಗಳನ್ನು ಪ್ರಾಮಾಣಿಕವಾಗಿ ಅಭಿವ್ಯಕ್ತಿಸಿರುವುದೇ ಈತನ ಕಾವ್ಯಶಕ್ತಿ ಶ್ರೇಷ್ಠತೆಯ ಮಟ್ಟಕ್ಕೇರಿಸುತ್ತದೆ.

ಭೀಮಸೇನನು ನಾಯಕನಾಗಿ ದುರ್ಯೋಧನನು ಪ್ರತಿನಾಯಕನಾದರೂ; ದುರ್ಯೋಧನನು ದುರಂತ ನಾಯಕನೆಂಬ ಪರಿಕಲ್ಪನೆಯು ಪಾಶ್ಚಾತ್ಯ ಕಾವ್ಯಚಿಂತನೆಯ ಫಲದಿಂದ ಬಂದಿದೆ. ಗ್ರೀಕ್ ರುದ್ರನಾಟಕಗಳು ಅಥವಾ ದುರಂತ ನಾಟಕಗಳ ನಾಯಕನ ಮಾನದಂಡದಿಂದ ಮೂಡಿಬಂದಿದೆ. ಅಂತಹ ದುರಂತ ನಾಯಕ ದುರ್ಯೋಧನನನ್ನು ಕಾವ್ಯದ ಉದ್ದಕ್ಕೂ ಕಾಣುತ್ತೇವೆ. ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ತನ್ನವರು, ತನ್ನದನ್ನೆಲ್ಲಾ ಸಂಪೂರ್ಣ ಕಳೆದುಕೊಂಡು ಏಕಾಂಗಿಯಾಗಿ ಅಲೆಮಾರಿಯಂತೆ ಅಲೆದಾಡುವ ರನ್ನನ ಚಿತ್ರಣವು ಸಹೃದಯರ ಹೃದಯವನ್ನು ಆರ್ದ್ರಗೊಳಿಸುತ್ತದೆ. ರನ್ನನ ಕಾವ್ಯಸಿದ್ಧಿಯು ಈ ಭಾಗದಲ್ಲಿ ಅತ್ಯುತ್ಕೃಷ್ಟವಾಗಿ ಕೆನೆಕಟ್ಟಿರುವುದನ್ನು ಕಾಣುತ್ತೇವೆ.

ರನ್ನ ಕೊಡುವ ಉಪಮೆಗಳು ಕವಿಗಳಿಗೆ ಪ್ರಿಯವಾದ, ಕಾವ್ಯಕ್ಕೆ ಉಸಿರಾದ ಅಲಂಕಾರಗಳು. ಹಿತವಾದ, ಹದವಾದ ಚಂಪೂ ಶೈಲಿ, ನಿರೂಪಣೆಗಳು, ಶಬ್ದವಿನ್ಯಾಸಗಳಲ್ಲಿ ವಿಶೇಷತೆಯನ್ನು ತೋರುತ್ತದೆ.

ವೀರಾಧಿವೀರರೆಲ್ಲರೂ ಮಡಿದು ಬಿದ್ದಿರುವ ರಣರಂಗವನ್ನು ಪ್ರವೇಶಿಸಿದಾಗ ದುರ್ಯೋಧನನ ಕರುಳು ಕಿವಿಚಿದಂತಾಗುತ್ತದೆ. ಕರ್ಣ, ದುಶ್ಶಾಸನರು ಸತ್ತು ಬಿದ್ದಿರುವುದನ್ನಂತೂ ಕಂಡಾಗ ಅವನ ರೋಧನ ಮುಗಿಲು ಮುಟ್ಟುತ್ತದೆ. ಹೀಗೆ ರನ್ನನು ದುರ್ಯೋಧನನ ಪಾತ್ರವನ್ನು ಚಿತ್ರಿಸಿರುವಲ್ಲಿ ಸಹೃದಯರ ಹೃದಯವನ್ನೇ ಸೂರೆಗೊಂಡಿದ್ದಾನೆ.

ಇಲ್ಲಿನ ಮತ್ತೊಬ್ಬ ಅದ್ವಿತೀಯ ಪರಾಕ್ರಮಿ ಅಭಿಮನ್ಯು. ದುರ್ಯೋಧನನು ಇವನನ್ನು ಶತ್ರುವಿನ ಮಗನೆಂಬುದನ್ನು ತಲೆಯಲ್ಲಿಟ್ಟುಕೊಳ್ಳದೆ; ಅಭಿಮನ್ಯುವಿನ ಕಳೇಬರವನ್ನು ಕಂಡಾಗ ಅವನ ಪರಾಕ್ರಮ ಕಣ್ಣಿಗೆ ಕಟ್ಟಿದಂತಾಗಿ,

'ನಿನ್ನಂ ಪೆತ್ತಳ್ ವೀರಜನನಿವೆಸರಂ ಪೆತ್ತಳ್' ಎಂದು ಹೊಗಳುತ್ತಾನೆ.

'ಅದ್ವಿತೀಯ ಪರಾಕ್ರಮದ ನಿನ್ನ ಶೌರ್ಯ ಮತ್ತೊಬ್ಬರಲ್ಲಿ ಅಸಂಭವ. ನಿನ್ನ ಸಾಹಸದ ಒಂದು ಭಾಗ ರೂಪವಾದ ಮರಣ ನಮಗೂ ಬರಲಿ.'

–ಎಂದು ಹೇಳಿ ನಮಸ್ಕರಿಸುತ್ತಾನೆ.

–ಹೀಗೆ ರನ್ನನು ತನ್ನ 'ಗದಾಯುದ್ಧ'ದಲ್ಲಿ ದುರ್ಯೋಧನನನ್ನು ಸಾಹಸ ಧನ, ಛಲದಂಕ ಮಲ್ಲ ಹಾಗೂ ಮಹಾನುಭಾವನ ಪಟ್ಟಕ್ಕೆ ಏರಿಸಿರುವುದನ್ನು ಕಾಣುತ್ತೇವೆ.

'ಸರಸ್ವತಿಯ ಭಂಡಾರದ ಮುದ್ರೆಯನ್ನೊಡೆದ ಕವಿ' ಎಂಬ ಬಿರುದು, ಕೀರ್ತಿ, ಹೆಸರುಗಳಿಗೆ ಕಾರಣನಾದ ರನ್ನ ತನ್ನ ಈ ಗ್ರಂಥವನ್ನು ಉತ್ಕೃಷ್ಟ ಕಾವ್ಯಕ್ಕೆ ಲಕ್ಷಣಗಳಾದ ಉತ್ತಮವಾದ ಕಥೆ, ಕಲ್ಪನಾ ಚಾತುರ್ಯ, ಘನವಾದ ಶೈಲಿ, ಕಲ್ಪನಾ ಚಾತುರ್ಯ, ಸ್ವಾರಸ್ಯಕರವಾದ ನಿರೂಪಣೆಗಳೊಂದಿಗೆ ಸಾಬೀತುಪಡಿಸಿದ್ದಾನೆ.

ಕ್ರಿ.ಶ. ೧೯೭೮ರಲ್ಲಿ ಪ್ರಥಮ ಮುದ್ರಣಗೊಂಡ ಕವಿಚಕ್ರವರ್ತಿ ಕವಿ ರನ್ನ ವಿರಚಿತ ಕೃತಿ 'ಸಾಹಸ ಭೀಮ ವಿಜಯ' ಗ್ರಂಥವನ್ನು ವಜ್ರ ಮಹೋತ್ಸವದ ಸಂದರ್ಭದಲ್ಲಿ 'ಪಂಚ ವಾರ್ಷಿಕ ಯೋಜನೆಯ ಪುಸ್ತಕ ಮಾಲೆ'ಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಗೊಳಿಸಿದಾಗ ಈ ಕೃತಿಯ ಗದ್ಯಾನುವಾದ ಮಾಡುವ ಹೊಣೆಯನ್ನು ಶ್ರೀಯುತ ಆರ್. ವಿ. ಕುಲಕರ್ಣಿ ಅವರು ವಹಿಸಿಕೊಂಡಿರುತ್ತಾರೆ. 'ಪ್ರಸ್ತಾವನೆ'ಯನ್ನು ಮತ್ತು 'ಮುನ್ನುಡಿ'ಯನ್ನು ಆ ಸಮಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದಂತಹ ಶ್ರೀ ಹಂಪ ನಾಗರಾಜಯ್ಯ ಅವರು ಬರೆದಿರುತ್ತಾರೆ. ಮತ್ತು 'ಅರಿಕೆ'ಯನ್ನು ಆರ್.ವಿ. ಕುಲಕರ್ಣಿ ಅವರು ಬರೆದಿರುತ್ತಾರೆ.

ಒಟ್ಟು ಹತ್ತು ಆಶ್ವಾಸಗಳಲ್ಲಿ ಮುಖ್ಯ ಗ್ರಂಥಭಾಗವು ಹೊಂದಿಕೊಂಡು ರಚನೆಯಾಗಿದೆ.

**೧೪. ಕುಮಾರವ್ಯಾಸ ಭಾರತದಲ್ಲಿ "ಕರ್ಣ" ಪಾತ್ರದ ವೈಶಿಷ್ಟ್ಯತೆ ಮತ್ತು ಮಹತ್ವ :**

ಕ್ರಿ.ಶ. ೧೫ ನೇ ಶತಮಾನವನ್ನು 'ನ ಭೂತೋ ನ ಭವಿಷ್ಯತಿಃ' ಎನ್ನುವಂತೆ ಕೃಷ್ಣಭಕ್ತನಾದ ಕವಿ ಭಕ್ತಿಯುಗವನ್ನು ಆರಂಭಿಸಿ; 'ಭಕ್ತಿ ಕವಿ' ಎಂದೇ ಸುಪ್ರಸಿದ್ಧನಾಗಿದ್ದಾನೆ. ಆದ್ದರಿಂದ ಈತನ ಕಾಲವನ್ನು 'ಕುಮಾರವ್ಯಾಸನ ಯುಗ' ಎಂದೇ ಗುರ್ತಿಸಲಾಗಿದೆ. ಇದೂವರೆಗೂ ಹಿಂದಿನ ಕವಿಗಳಿಂದ ರಚಿತಗೊಂಡಂತಹ ಕೃತಿಗಳಲ್ಲಿ ಭಾಷೆ, ಶೈಲಿ, ನಿರೂಪಣೆ ಎಲ್ಲದರಲ್ಲೂ ಸಂಸ್ಕೃತವನ್ನೇ ಅನುಕರಿಸುತ್ತಾ ಪಾಂಡಿತ್ಯಪೂರ್ಣವಾದ ಚಂಪೂಶೈಲಿ ಆಳವಾಗಿ ಬೇರೂರಿಬಿಟ್ಟಿದ್ದು, ಹೆಮ್ಮರವಾಗಿ ಬೆಳೆದು ಬಿಟ್ಟಿತ್ತು. ಜನಸಾಮಾನ್ಯರಿಗೆ ಈ ಶೈಲಿ ಕಬ್ಬಿಣದ ಕಡಲೆಯಂತಾಗಿತ್ತು. ಹೀಗಾಗಿ ಜನಸಾಮಾನ್ಯರ ಭಾಷೆಯನ್ನೇ 'ಕಾವ್ಯಭಾಷೆ'ಯಾಗಿ ಸ್ವೀಕರಿಸುವುದು ಅನಿವಾರ್ಯವಾಗಿತ್ತು! ಕುಮಾರವ್ಯಾಸನಂತಹ ಅದ್ವಿತೀಯ ಮಹಾಕವಿಯಿಂದ ಈ ಸಮಸ್ಯೆಯು ಪರಿಹಾರವಾಯಿತು.

ಇದರ ನಡುವೆ ವೀರಶೈವದ ವಚನಸಾಹಿತ್ಯ, ವೈಷ್ಣವ ಸಂಪ್ರದಾಯದ ದಾಸಸಾಹಿತ್ಯ ಎಲ್ಲವೂ ಜನ್ಮ ತಳೆದುಬಿಟ್ಟಿದ್ದವು.

'ವ್ಯಾಸ ಭಾರತ'ವನ್ನು ಕನ್ನಡಕ್ಕೆ ಮೊಟ್ಟ ಮೊದಲು ತಂದವನು ಪಂಪ. ಈತನು ಅರಿಕೇಸರಿಯ ಆಸ್ಥಾನಕವಿಯಾಗಿದ್ದುಕೊಂಡು; ದಂಡನಾಯಕನಾಗಿ, ಅರಸನ ಗೆಳೆಯನಾಗಿ ಬಾಳಿದಂತಹವನು. ಈತನು 'ಮಹಾಭಾರತ'ವನ್ನು ರಚಿಸಿದಂತಹ ಕಾಲ 'ವೀರಯುಗ'ವಾಗಿತ್ತು. ಈತನ ಕಾವ್ಯದಲ್ಲಿ ಕಲಿತನವು ಬೆರೆತಿತ್ತು. ವೀರರಸ ಹೆಪ್ಪುಗಟ್ಟಿ ಈತನ ಕಾವ್ಯದುದ್ದಕ್ಕೂ ಹರಿದಿರುವುದನ್ನು ಕಾಣುತ್ತೇವೆ. ಆದರೆ ಕುಮಾರವ್ಯಾಸನು ಜೀವಿಸಿದ್ದಂತಹ ಕಾಲ, ಪರಿಸರಗಳು ಮತ್ತು ಉದ್ದೇಶಗಳು ಪಂಪನದಕ್ಕಿಂತಲೂ ಭಿನ್ನವಾಗಿಯೇ ಇದೆ. ಕುಮಾರವ್ಯಾಸನ ಕಾಲ 'ಭಕ್ತಿಯುಗ'ವಾಗಿತ್ತು. ಮೇಲಾಗಿ ಈತನು ಕೃಷ್ಣನು ಅನನ್ಯ ಭಕ್ತ! ಈತನು ಯಾವ ರಾಜರ ಆಶ್ರಯವನ್ನೂ ಪಡೆದಿರಲಿಲ್ಲ. ಯಾವ ಅರಸರನ್ನೂ ಈತನು ಕಂಡವನೂ ಅಲ್ಲಾ!! ಈತನ 'ಗದಾಯುದ್ಧ' ರಚನೆಗೆ ಎಲ್ಲಾ ಸ್ಫೂರ್ತಿ, ಪ್ರಭಾವ- ಪ್ರೇರಣೆಗಳೂ ಕೇವಲ 'ವೀರನಾರಾಯಣ'ನೇ ಆಗಿದ್ದನು.

ಆದರೆ ಪಂಪ 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿದ್ದು ಒಂದು ಲೌಕಿಕ ಕೃತಿಯಾಗಿ. ಹಾಗಾಗಿ ಎಲ್ಲೆಲ್ಲಿ ಅನಿವಾರ್ಯವಿತ್ತೋ ಅಲ್ಲೆಲ್ಲಾ ಕಡೆಯೂ ಕೃಷ್ಣನ ಪಾತ್ರದ ಅವಶ್ಯಕತೆಯು ಅನಿವಾರ್ಯವಾಗಿತ್ತೋ ಅಲ್ಲಲ್ಲಿ ಮಾತ್ರ ತಂದಿದ್ದಾನೆ. ಉಳಿದ ಎಲ್ಲಾ ಕಡೆ ಕೃಷ್ಣ ಪಾತ್ರಕ್ಕಿರುವ ಮಹತ್ವವನ್ನು ಕೈಬಿಟ್ಟಿದ್ದಾನೆ. 'ಕಾವ್ಯಶಕ್ತಿ'ಯೊಡನೆ ಈತನ ಧರ್ಮದೃಷ್ಟಿಯೂ ಬೆರೆತಿದೆ. ಕುಮಾರವ್ಯಾಸನ ಪ್ರಕಾರ 'ಮಹಾಭಾರತ'ವು ಕೌರವ-ಪಾಂಡವರ ಕಥೆಯಲ್ಲ 'ಕೃಷ್ಣ ಚಾರಿತ್ರ್ಯ'ವಾಗಿದೆ.

ಈ ದೃಷ್ಟಿಗಳಿಂದ ಪಂಪ-ಕುಮಾರವ್ಯಾಸ ಇಬ್ಬರೂ ತೀರಾ ವಿಭಿನ್ನ ಸ್ವರೂಪದವರೇ ಆಗಿದ್ದಾರೆ.

ಹದಿನೆಂಟು ಪರ್ವಗಳಿರುವಂತಹ 'ವ್ಯಾಸ ಭಾರತ'ವನ್ನು ಕುಮಾರವ್ಯಾಸ ತನ್ನ ಕೃತಿಗೆ ಮೂಲ ಸಂಪತ್ತನ್ನು ವ್ಯಾಸಭಾರತ ಪಡೆದು ಅದನ್ನು ಕನ್ನಡೀಕರಿಸಿದ್ದಾನೆ. ಆದರೆ, ಈತ ಹತ್ತು ಪರ್ವಗಳನ್ನು ಮಾತ್ರ ತನ್ನ ಕಾವ್ಯದಲ್ಲಿ

ತಂದಿದ್ದಾನೆ. ಪರ್ವಗಳನ್ನು 'ಸಂಧಿ'ಗಳಾಗಿ ಮಾಡಿಕೊಂಡಿದ್ದಾನೆ. ಮೂಲ ಭಾರತದ ಎಲ್ಲಾ ವಿವರಗಳನ್ನೂ ಈತನು ನೀಡಿಲ್ಲ, ನೀಡಿರುವ ವಿವರಗಳೂ ಸಂಗ್ರಹರೂಪದಲ್ಲಿವೆ. ತನ್ನ ಅಗತ್ಯಕ್ಕೆ ಬೇಕಾದಂತೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ತೆಗೆದುಕೊಂಡಿದ್ದಾನೆ. ಕೆಲವೆಡೆಗಳಲ್ಲಿ ಗಮನಾರ್ಹವಾದ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಅದನ್ನು ಕುರಿತು ಮುಂದೆ ಬರುವ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

ಶ್ರೀಕೃಷ್ಣನೇ ಈತನ ಕಥಾನಾಯಕನಾದ್ದರಿಂದ ಆ ಪಾತ್ರಕ್ಕೆ ಹೆಚ್ಚು ಮಹತ್ವ ನೀಡಿದ್ದಾನೆ. ಉಳಿದೆಲ್ಲಾ ಪಾತ್ರಗಳು ಕೃಷ್ಣನ ಪಾತ್ರದ ಪರಿಧಿಯೊಳಗೇ ಸುತ್ತುವಂತೆ ಅನಿಸುತ್ತದೆ. ಪಂಪನಂತೆಯೇ ಕುಮಾರವ್ಯಾಸನೂ ಕೂಡಾ ಬೇಕಾದ ಪಾತ್ರಗಳನ್ನು ಹಿಗ್ಗಿಸುವಂತಹ ಸಾಮರ್ಥ್ಯವಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಕರ್ಣನ ಪಾತ್ರ. 'ಕರ್ಣ ರಸಾಯನ'ವನ್ನು ಪಂಪನಂತೆಯೇ ಈತನೂ ಊದಿಸಿರುವುದನ್ನೇ ಕಾಣುತ್ತೇವೆ. ಒಂದು ಪಾತ್ರವು ಹೊಂದಿರುವಂತಹ ಗುಣ, ಸಾಮರ್ಥ್ಯಗಳನ್ನು ಪ್ರಕಟಗೊಳ್ಳುವಂತೆಯೂ ಅಭಿವ್ಯಕ್ತಿಸಿದ್ದಾನೆ. ಉದಾಹರಣೆ ಕರ್ಣನ ಪಾತ್ರ. ಕರ್ಣನ ಪರಾಕ್ರಮ, ಸ್ವಾಮಿಭಕ್ತಿ, ದಾನಗುಣ, ಸ್ನೇಹಗುಣ – ಇವೆಲ್ಲವನ್ನೂ ಕಿಂಚಿತ್ತೂ ಲೋಪವುಂಟಾಗದಂತೆ ವರ್ಣಿಸಿದ್ದಾನೆ.

'ರೂಪಕ ಸಾಮ್ರಾಜ್ಯ ಚಕ್ರವರ್ತಿ, 'ಷಟ್ಪದಿ ಬ್ರಹ್ಮ' ಎಂದು ಬಿರುದಾಂಕಿತ ಕುಮಾರವ್ಯಾಸನು ಇದನ್ನು ಅಂದಿನ ಕಾಲದಲ್ಲಿ ಅತೀ ಹೆಚ್ಚು ಪ್ರಚಲಿತದಲ್ಲಿದ್ದಂತಹ 'ಷಟ್ಪದಿ' ಕಾವ್ಯಪ್ರಕಾರದಲ್ಲಿಯೇ ರಚಿಸಿದ್ದಾನೆ.

ಪಂಪನ ನಿರೂಪಣಾ ಶೈಲಿ ಹಿತಮಿತ ರಚನೆಯಾದರೆ; ಕುಮಾರವ್ಯಾಸ ಉತ್ತಮ ಸಂಗ್ರಹಕಾರ.. ಒಂದು ಪದ್ಯದಲ್ಲಿ ಹೇಳಬಹುದಾದ ಸಂಗತಿಯನ್ನು ಹಲವು ಪದ್ಯಗಳಿಗೆ ವಿಸ್ತಾರಗೊಳಿಸುತ್ತಾನೆ. ಉದಾಹರಣೆಗೆ "ಕರ್ಣಾರ್ಜುನರ ಯುದ್ಧ ಪ್ರಸಂಗ"ದಲ್ಲಿ ಕರ್ಣನನ್ನು ಕೊಲ್ಲಬೇಕಾದಲ್ಲಿ ಅರ್ಜುನನ ಮನಸ್ಥಿತಿಯನ್ನು ಕವಿಯು ಮಾಡಿರುವ ವರ್ಣನೆ. ಜೊತೆಗೆ ಪಾತ್ರ ಮತ್ತು ಸನ್ನಿವೇಶಗಳನ್ನು ಕವಿ ಗಸವತ್ತಾಗಿ ಚಿತ್ರಿಸುತ್ತಾನೆ.

**ಆ. ವಿವಿಧ ಸಂಶೋಧಕರು ಈವರೆಗೂ ನಡೆಸಿರುವ 'ತಳಸಮುದಾಯ ಮತ್ತು ಅಲಕ್ಷಿತ'ರ ಪಾತ್ರಗಳ ಕುರಿತಾದ ಚಿಂತನೆಗಳ ವಿಶ್ಲೇಷಣೆ :**

## ೧. ಬೆರಳ್ಗೆ ಕೊರಳ್

ವ್ಯಾಸಕೃತ ಮಹಾಭಾರತದ ಆದಿಪರ್ವದಲ್ಲಿ ಬಂದಿರುವ ಉಪಕಥೆಯು ಈ ನಾಟಕ ಕೃತಿ ರಚನೆಗೆ ಮೂಲ ಆಕರ, ಆಧಾರ, ಆದರ್ಶವಾಗಿದೆ. ಕುವೆಂಪು ಅವರ ನಾಟಕ ಕೃತಿಗಳೆಲ್ಲಾ ರಚನೆಗಳಲ್ಲೂ ಇದು ಅತ್ಯಂತ ಶ್ರೇಷ್ಠವಾದ ಕೃತಿ.

ಈ ಮೂಲದ್ರವ್ಯವನ್ನು ತಮ್ಮ ಸಮಕಾಲೀನ ಸಂವೇದನೆಯ ಹಿನ್ನೆಲೆಯಲ್ಲಿ ಹಲವಾರು ಅರ್ಥಪೂರ್ಣ ಬದಲಾವಣೆಯ ಅಂಶಗಳಿಂದ ಪುನರ್ ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾಗೆ. ಏಕಲವ್ಯನ ಜೀವನವನ್ನು ಹೊಸ ಬಗೆಯಿಂದ ಕಟ್ಟಿಕೊಡುವ ಪ್ರಯತ್ನ ಕುವೆಂಪು ಅವರು ಇಲ್ಲಿ ಮಾಡಿದ್ದಾರೆ. ಹಾಗೆಯೇ ಅವನ ಬದುಕನ್ನು ಉದಾತ್ತಗೊಳಿಸಲು ಪ್ರಯತ್ನಪಟ್ಟಿದ್ದಾರೆ.

ಬೇಟೆಗಾರನ ಮಗನಾದ ಏಕಲವ್ಯನು ದ್ರೋಣನನ್ನು ತನ್ನ ಗುರುವಾಗಿ ಸ್ವೀಕರಿಸಲು ಅಪೇಕ್ಷಿಸುತ್ತಾನೆ. ಅದಕ್ಕಾಗಿ ಅವನ ಬಳಿಗೂ ಹೋಗುತ್ತಾನೆ. ಇದಕ್ಕೊಪ್ಪಿದ ದ್ರೋಣನು ಅವನನ್ನು ತನ್ನ ಶಿಷ್ಯನನ್ನಾಗಿ ಸ್ವೀಕರಿಸುತ್ತಾನೆ. ಆದರೆ ಅರಮನೆಯಲ್ಲಿ ಇದಕ್ಕೆ ಆಕ್ಷೇಪವಿದ್ದುದರಿಂದ ತನ್ನ ಮನೆಯಲ್ಲೇ ದ್ರೋಣ ಅವನಿಗೆ ವಿದ್ಯೆ ಕಲಿಸುತ್ತಾನೆ. ಆದರೆ ಏಕಲವ್ಯನ ತಂದೆಗೆ ಮರಣ ಸಂಭವಿಸಿದ್ದರಿಂದ ಆತನು ತನ್ನ ಮನೆಗೆ ಹಿಂತಿರುಗಿ ಹೋಗಿ ಬಿಡುತ್ತಾನೆ. ಆದರೂ ಏಕಲವ್ಯನಿಗೆ ವಿದ್ಯೆಯ ಮೇಲಿದ್ದ ಅಪಾರ ಶ್ರದ್ಧೆ, ಗುರುವಿನ ಮೇಲಿದ್ದ ಭಕ್ತಿಯಿಂದಾಗಿ ವಿದ್ಯಾಪಾರಂಗತನಾಗುತ್ತಾನೆ. ಇದಕ್ಕಾಗಿ ಅವನು ತನ್ನ ಗುರು ದ್ರೋಣನನ್ನು ಪ್ರತೀಕನಾಗಿ ಹೊಂದಿರುತ್ತಾನೆ. ಆಗ ದ್ರೋಣನು ಕೇವಲ ನಿಮಿತ್ತನಾಗಿ ಗುರುವಾಗಿರುತ್ತಾನಷ್ಟೇ.

ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ; ದ್ರೋಣನು ಈಗಾಗಲೇ ದ್ರುಪದ ರಾಜನಿಂದ ಅವಮಾನಿತಗೊಂಡು ತನ್ನ ಸೇಡನ್ನು ಅವನ ಮೇಲೆ ಅರ್ಜುನನ ಮೂಲಕವಾಗಿ ತೀರಿಸಿಕೊಳ್ಳಬೇಕೆಂದು ಬಯಸಿ ನಿರ್ಧರಿಸಿಯಾಗಿತ್ತು. ಇದನ್ನು ದೈವೇಚ್ಛೆ ಎಂದೂ ದ್ರೋಣನು ಬಗೆದಿದ್ದನು.

ಆದ್ದರಿಂದ ಅರ್ಜುನನನ್ನು ಮೀರಿಸುವ ತನ್ನ ಉಳಿದ ಶಿಷ್ಯರ್ಯಾರೂ ಇರಲೇಬಾರದೆಂದು ನಿರ್ಧರಿಸುವ ಮೂಲಕ ಏಕಲವ್ಯನಿಂದ ಗುರುದಕ್ಷಿಣೆಯನ್ನು ಕೇಳಿದ್ದೂ ಕೂಡಾ ಕರ್ಮಫಲ ಸ್ವರೂಪಿಯಾದ ಈಶ್ವರೇಚ್ಛೆಯ ಮುಂದೆ ಮನುಷ್ಯನ ಇಚ್ಛೆ ಪ್ರತಿಭಟಿಸಿ ಗೆಲ್ಲಲಾರದು. ಗೆದ್ದರೂ ಅದು ಅವನ ಅನುಮತಿಯಿಂದಲ್ಲದೆ ಅನ್ಯ ರೀತಿಯಿಂದಲ್ಲ. ಅದರ ಗತಿಯ ಮರ್ಮ ಮನುಷ್ಯನ ದೃಷ್ಟಿಗೆ ನಿಲುಕದು. ಆದ್ದರಿಂದ ತಾನೀಗ ಏಕಲವ್ಯನಿಗೆ ಕೇಡು ಬಯಸುತ್ತಿರುವುದೂ ಕೂಡಾ ತನ್ನಿಚ್ಛೆಯಿಂದಲ್ಲ. ಅದು ವಿಧಿಯ ಕಾರಣದಿಂದಾಗಿ ಎನ್ನುವುದು ದ್ರೋಣನ ನಿಲುವಾಗಿತ್ತು.

ಮೂಲ 'ಮಹಾಭಾರತ'ದಲ್ಲಿ ದ್ರೋಣ ಗುರುದಕ್ಷಿಣೆಯಾಗಿ ಬಲಗೈನ ಹೆಬ್ಬೆರಳನ್ನು ಮಾತ್ರ ಏಕಲವ್ಯನಲ್ಲಿ ಕೇಳುತ್ತಾನೆ. ಆದರೆ ಈ ನಾಟಕ ಕೃತಿಯಲ್ಲಿ ಕುವೆಂಪು ಅವರು ಯಜ್ಞದ ಪರಿಕಲ್ಪನೆಯನ್ನು ತಂದಿದ್ದಾರೆ. ಏಕಲವ್ಯನ ಆತ್ಮಾರ್ಪಣೆಯೇ ದ್ರೋಣನ ಗುರುದಕ್ಷಿಣೆಯಾಗಿದೆ. ಅಂದರೆ ಏಕಲವ್ಯನು ಗುರುದಕ್ಷಿಣೆಗೆ ಬಲಿಯಾಗುವುದು ಆತ್ಮಾರ್ಪಣೆಯ ರೂಪ ಯಜ್ಞದ ರೂಪವನ್ನು ಪಡೆದುಕೊಂಡಿದೆ. ಅಂದರೆ ದ್ರೋಣನಿಂದ ಕಲಿತ ಎಲ್ಲಾ ಸಂಪೂರ್ಣ ವಿದ್ಯೆಯು ತನ್ನ ಗುರುವಿಗಾಗಿಯೇ ಅದನ್ನು ಅರ್ಪಿಸುವುದಕ್ಕಾಗಿ ಏಕಲವ್ಯನು ಆತ್ಮಾರ್ಪಣೆ ಎಂಬ ಹೆಸರಿನಿಂದ ಬಲಿಯಾಗುವುದು ಇಲ್ಲಿ ಯಜ್ಞದ ಪ್ರತೀಕವಾಗಿದೆ.

ಮೂಲ ಮಹಾಭಾರತದಲ್ಲಿರುವಂತೆಯೇ ಬಿಲ್ವಿದ್ಯೆಯು ಕೇವಲ ಕ್ಷತ್ರಿಯರಿಗೆ ಮಾತ್ರ ಮೀಸಲಾದ ವಿದ್ಯೆ. ಆದರೆ ಏಕಲವ್ಯನು ಗುರುಪ್ರತಿಮೆಯನ್ನು ಮಣ್ಣಿನಿಂದ ತಯಾರಿಸಿ ಪ್ರತಿಷ್ಠಾಪಿಸಿ ಶ್ರದ್ಧಾಭಕ್ತಿಗಳಿಂದ ಬಿಲ್ವಿದ್ಯೆಯಲ್ಲಿ ಸಂಪೂರ್ಣ ಪರಿಣತಿಯನ್ನು ಸಾಧಿಸುತ್ತಾನೆ. ಮಹಾಭಾರತ ಕಾಲದ ಸಮಕಾಲೀನ ಸಮಾಜದಲ್ಲಿ ಮೇಲು-ಕೀಳಿನ ಕಲ್ಪನೆ ಪರಂಪರಾನುಗತವಾಗಿ ಬಂದಿದ್ದು ಅಸ್ತಿತ್ವದಲ್ಲಿದ್ದು ಅದೊಂದು ಕಪ್ಪುಚುಕ್ಕೆಯಂತೆ ಉಳಿದಿತ್ತು. ಈಗ ಏಕಲವ್ಯನು ಕ್ಷತ್ರಿಯರಿಗೆ ಉಚಿತವಾಗಿದ್ದ ಬಿಲ್ವಿದ್ಯೆಯಲ್ಲಿ ಸಂಪೂರ್ಣ ಪರಿಣತಿಯನ್ನು ಪಡೆದು ತನ್ನ ಗುರಿಯನ್ನು ಸಾಧಿಸಿ ಬಿಲ್ವಿದ್ಯಾಪಾರಂಗತನಾದದ್ದು ಅಂದಿನ ಸಾಮಾಜಿಕ ನಂಬಿಕೆಗಳನ್ನು ಬುಡಮೇಲು ಮಾಡಿದ್ದನ್ನು ಒಂದು ದೊಡ್ಡ ಪಾಪಕೃತ್ಯವೇ ಎಂದು ಭಾವಿಸಿದ್ದರು. ಏಕೆಂದರೆ ಶ್ರೇಣೀಕೃತ ಸಮಾಜದಲ್ಲಿ ಯಾವುದೇ ಪ್ರತಿಭೆಯನ್ನು ಹುಟ್ಟಿನಿಂದಲೇ ಸಹಜದತ್ತವಾದುದೆಂದು ಗುರ್ತಿಸಿ ನಿರ್ಧರಿಸಲಾಗಿತ್ತು.

ಒಟ್ಟಾರೆ, ಮೂಲ ಮಹಾಭಾರತದಲ್ಲಿದ್ದಂತೆಯೇ ಕುವೆಂಪು ಅವರು ತಮ್ಮ ಈ ನಾಟಕ ಕೃತಿಯಲ್ಲೂ ಮೂಲವನ್ನು ಅನುಸರಿಸಿದಂತೆಯೇ ಏಕಲವ್ಯನ ಬಲಗೈ ಹೆಬ್ಬೆರಳನ್ನು ಕತ್ತರಿಸಲಾಗಿದೆಯಾದರೂ ಅದರ ಸಂಪೂರ್ಣ ಕರ್ಮದ ಹೊರೆಯನ್ನು, ಫಲವನ್ನೂ ದ್ರೋಣನೇ ಅನುಭವಿಸುವಂತೆ ಚಿಂತಿಸಲಾಗಿದೆ.

ಕುವೆಂಪು ಇಲ್ಲಿ ಪೌರಾಣಿಕವಾದ ಆಶಯವನ್ನು ಬಲಿಯ ರೂಪದಲ್ಲಿ ಬಳಸಿಕೊಂಡಿರುವ ಬಗೆ ಮೂಲಭಾರತದ ಪುನರ್ ಮೌಲ್ಯೀಕರಣವನ್ನು ಮಾಡುವುದರೊಂದಿಗೆ ಅನನ್ಯವಾಗಿದೆ.

**೨. ಯಮನ ಸೋಲು :**

ಈ ನಾಟಕ ಕೃತಿಯ ಆಕರವೂ ಕೂಡಾ ವ್ಯಾಸಕೃತ 'ಮಹಾಭಾರತ'ವೇ ಆಗಿದೆ. ಇದು ಕುವೆಂಪು ಅವರ ಪೌರಾಣಿಕ ನಾಟಕಗಳಲ್ಲೇ ಪ್ರಮುಖವಾದುದಾಗಿದ್ದು ಅಂದಿನ ಕಾಲದ 'ಸ್ತ್ರೀಪಾತ್ರ'ದ ಮಹತ್ವವನ್ನು ಪ್ರತಿಬಿಂಬಿಸುವಂತಹ ಕೃತಿಯಾಗಿದೆ.

'ಮಹಾಭಾರತ'ದಲ್ಲಿ ಬರುವ ಒಂದು ಉಪಾಖ್ಯಾನವನ್ನು ಈ ಕೃತಿಯು ಆಧರಿಸಿದೆ. ಎಂಟು ದೃಶ್ಯಗಳನ್ನು ಈ ನಾಟಕ ಕೃತಿಯು ಹೊಂದಿದೆ. ಏಕಾಂಕದಲ್ಲಿ ಅಡಕವಾಗಿರುವ ಸಾವಿತ್ರಿ ಕಥೆಯನ್ನು ಕುವೆಂಪು ಅವರು ಬಹಳ ವಿಭಿನ್ನ ರೀತಿಯಿಂದ ಗ್ರಹಿಸಿ, ಚಿತ್ರಿಸಿದ್ದಾರೆ. ಆಕರ್ಷಣೆಯಿಂದ ಕೂಡಿದಂತಹ ಕಥೆಯ ಸ್ವರೂಪ ಈ ಕೃತಿಯದ್ದಾಗಿದೆ.

'ಪತಿವ್ರತೆಯಾದವಳು ಸತ್ತ ತನ್ನ ಪತಿಯನ್ನು ಬದುಕಿಸಿಕೊಳ್ಳಬಲ್ಲಳು' ಎಂಬುದೇ ಈ ವಿಶಿಷ್ಟ ನಾಟಕ ಕೃತಿಯ ಸಾರಾಂಶವಾಗಿದೆ.

ಆದರೆ ಪ್ರಸ್ತುತ ನಾಟಕ ಕೃತಿಯಲ್ಲಿ ಕುವೆಂಪು ಅವರು ಯಮನ ಪಾತ್ರಕ್ಕೆ ಉದಾತ್ತತೆಯನ್ನು ತಂದುಕೊಟ್ಟು ಅದರ ಘನತೆಯನ್ನು ಹೆಚ್ಚಿಸಿದ್ದಾರೆ.

'ಯಮ'ನೆಂದರೆ ಸಾಕು ಅವನನ್ನು 'ಸಾವಿನ ಸ್ವರೂಪಿ' ಎಂದು ಬಗೆದವರೇ ಹೆಚ್ಚು. ಆದರೆ ಇಲ್ಲಿ ಕುವೆಂಪು ಅವರು ಯಮನನ್ನು ಸುಂದರ ಪ್ರೇಮಮೂರ್ತಿಯಾಗಿ ಈ ನಾಟಕದಲ್ಲಿ ಚಿತ್ರಿಸಿದ್ದಾರೆ.

ಹುಟ್ಟಿದವರೆಲ್ಲರೂ ಒಂದು ದಿನ ಸಾಯಲೇ ಬೇಕು. ಇದು ಕಟು ಸತ್ಯ. ಸಾವನ್ನು ಎದುರಿಸುವಾಗ ಭಯಪಡುವುದೂ ಕೂಡಾ ವಾಸ್ತವದ ಸಂಗತಿಯೇ ಆಗಿದೆ. ಆದರೆ ಇಲ್ಲಿ ಸಾವಿತ್ರಿಯ ಮೂಲಕ ಸಾವನ್ನು ತಪಸ್ಸಿನಿಂದ ಗೆಲ್ಲಬಹುದು, ಮುಂದೂಡಬಹುದೆಂದು ತೋರಿಸಿದ್ದಾರೆ. ಆದರೆ ಅದಕ್ಕೆ ಅವಶ್ಯಕವಾಗಿ ಇರಬೇಕಾದದ್ದು ಪ್ರೀತಿ-ಪ್ರೇಮ. ಇದಕ್ಕಿರುವ ಪಾವಿತ್ರ್ಯತೆಯು ಒಂದು ಶಕ್ತಿಯಾಗಿ ರೂಪುಗೊಳ್ಳುತ್ತದೆ.

ಸತ್ಯವಾದ ಅತ್ಯಂತ ಸುಂದರನಾದರೂ ಸಾವಿತ್ರಿ ಆತನ ಸೌಂದರ್ಯಕ್ಕೆ ಮರುಳಾಗದೇ ಸೌಂದರ್ಯವನ್ನು ಮೀರಿಸುವಂತೆ ಆತನಲ್ಲಿ ನೆಲೆಗೊಂಡಿದ್ದ ಶುಚಿತ್ವವನ್ನು ಗಮನಿಸಿದಳು. ಸಾವಿತ್ರಿಯಲ್ಲಿನ ಆತಂಕ ಬೆರೆತ ಪ್ರೀತಿ ಮತ್ತು ಸತ್ಯವಾನನ ಶುದ್ಧ ಮನಸ್ಸುಗಳು ವಿವಾಹವಾದವು. ಸಾವು ಸನ್ನಿಹಿತವಾಗಿ ಸಮೀಪಿಸಿದಾಗ ಸಾವಿತ್ರಿ ತೀವ್ರತರವಾದ ತಪಚ್ಚರಣೆ ಮಾಡುತ್ತಾಳೆ. ಇಲ್ಲಿ ಸಂವಾದವೂ ಬರುತ್ತದೆ.

ಪ್ರೀತಿಗೆ ಒಂದು ಶುಚಿ, ಪಾವಿತ್ರ್ಯತೆ ಇರಬೇಕೆಂಬುದು ಕುವೆಂಪು ಅವರು ನಂಬಿದ್ದ ಪ್ರೇಮ ತತ್ವವನ್ನಿಲ್ಲಿ ಫಲಿಸಿದೆ. ಆದರೂ ಯಕ್ಷ ಯಮದೂತರಿಗೆ ಸಾವಿತ್ರಿ ಗೊತ್ತಿದ್ದೂ ಸಾವನ್ನೇಕೆ ಅಪ್ಪಿದಳು? ಎಂಬ ಪ್ರಶ್ನೆಯೇ ನಾಟಕದ ಕೇಂದ್ರಬಿಂದುವಾಗಿದೆ.

ಒಟ್ಟಾರೆಯಾಗಿ, ಯಮನು ತತ್ವದ ಪ್ರತಿನಿಧಿಯಾಗಿಯೂ ಸಾವಿತ್ರಿ ಇಲ್ಲಿ ಸಾಹಿತ್ಯದ ಅರ್ಥಪೂರ್ಣ ಪ್ರತೀಕವಾಗಿ ಕುವೆಂಪು ಅವರಿಂದ ಚಿತ್ರಿತಗೊಂಡಿದ್ದು ಅಂತಿಮವಾಗಿ ಸಾವಿತ್ರಿ ಗೆಲುವನ್ನೇ ಸಾಧಿಸುತ್ತಾಳೆಂಬುದು ಗಮನಾರ್ಹವಾಗಿದೆ.

**೩. ಸ್ಮಶಾನ ಕುರುಕ್ಷೇತ್ರ :**

ಈ ನಾಟಕ ಕೃತಿರಚನೆಗೆ ಕುವೆಂಪು ಅವರಿಗೆ ಸ್ಫೂರ್ತಿ, ಆಕರವಾದದ್ದು 'ಮಹಾಭಾರತ' ಮಹಾಕಾವ್ಯ. 'ಯುದ್ಧವನ್ನು ವರ್ಣಿಸುವ ಅದರ ರುದ್ರ ರಮಣೀಯ ವೈಭವವನ್ನು ಸಾರುವ ಜಗತ್ಪ್ರಸಿದ್ಧ ಕೃತಿಗಳು ನೂರಾರು ಇವೆ. ಆದರೆ ಯುದ್ಧದ ಘೋರವಾದ ಪರಿಣಾಮಗಳನ್ನು ಸಾರುವಂತಹವು ವಿರಳವಾಗಿವೆ. ಅಂಥ ವಿರಳ ಕೃತಿಗಳಲ್ಲಿ 'ಸ್ಮಶಾನ ಕುರುಕ್ಷೇತ್ರ'ವೂ ಒಂದಾಗಿದೆ. ಈ ನಾಟಕದ ಕಥಾವಸ್ತುವು ಮಹಾಭಾರತ ಯುದ್ಧದ ಕೊನೆಯ ದಿನದ ಯುದ್ಧದ ಭೀಕರ ಘಟನೆಯನ್ನು ಆಧರಿಸುವಂತಹದ್ದಾಗಿದೆ.

ಈ ನಾಟಕ ಕೃತಿಯು ಒಟ್ಟು ಹತ್ತು ದೃಶ್ಯಗಳಿಂದ ಕೂಡಿದೆ.

ಸತತವಾಗಿ ಹದಿನೆಂಟು ದಿನಗಳು ನಡೆದ ಘೋರವಾದ ಯುದ್ಧವು ಕೊನೆಗೊಂಡ ದಿನದ ರಾತ್ರಿಯ ಚಿತ್ರಣ ಈ ಕೃತಿಯಲ್ಲಿ ವರ್ಣಿತಗೊಂಡಿದೆ. ಘಟಾನುಘಟಿಗಳು , ಅಜಾನುಬಾಹುಗಳನ್ನು ಹೊಂದಿದ ರಣಕಲಿಗಳು ತಮ್ಮ ಸಾಹಸವನ್ನೆಲ್ಲಾ ಮೆರೆದು ಹೋರಾಡಿದ ಸ್ಥಳವಿದು. ಕುರುಕ್ಷೇತ್ರ ಈಗ ಸ್ಮಶಾನವಾಗಿ ಮಾರ್ಪಾಡಾಗಿದೆ. ಇಂತಹ ಈ ಭೀಕರ ದಿನದ ಕರಾಳ ರಾತ್ರಿಯೇ ದ್ವಾಪರ ಅಂತ್ಯಗೊಂಡು ಕಲಿಯುಗ ಆರಂಭದ ಪರ್ವಕಾಲವೂ ಆಗಿದೆ. ಇಂತಹ ಸಂದಿಕಾಲದಲ್ಲಿರುವ ಸಂಕ್ರಮಣ ಸ್ಥಿತಿಯನ್ನು ಎಲ್ಲಾ ದೃಷ್ಟಿಗಳಿಂದಲೂ ಸಂಕೇತಿಸಿದ್ದಾರೆ.

ನಿರಂತರವಾಗಿ ಹದಿನೆಂಟು ದಿನಗಳ ಕಾಲ ನಡೆದ ಭೀಕರ ಮಹಾಯುದ್ಧದಿಂದ ಉಂಟಾದ ಪರಿಣಾಮದ ದುಃಸ್ಥಿತಿಯನ್ನು ಕಂಡು ಕಲಿ ಪ್ರವೇಶಿಸುವ ದೃಶ್ಯದೊಂದಿಗೆ ನಾಟಕ ಆರಂಭಗೊಳ್ಳುತ್ತದೆ.

ಈ ಸಂದರ್ಭದಲ್ಲಿ ಇದೇ ದೃಶ್ಯದಲ್ಲಿ ದ್ವಾಪರನೂ ತನ್ನ ವಿಷಾದದೊಂದಿಗೆ ದುಃಖವನ್ನು ನಿವಾರಿಸುವ ಸಲುವಾಗಿ ನಾನಾ ವಿಧದಲ್ಲಿ ಸಮಾಧಾನಗೊಳಿಸುತ್ತಿರುವ ಸನ್ನಿವೇಶವಿದೆ. ಆಗ ಕಲಿ-ದ್ವಾಪರ ಈ ಇಬ್ಬರ ನಡುವೆ ನಡೆಯುವಂತಹ ಸುದೀರ್ಘವಾದ ಸಂಭಾಷಣೆಯಿದೆ. ಪಾಂಡವರ ಮಾನಸಿಕ ತೊಳಲಾಟವೂ ಇಲ್ಲಿ ಕಾಣಿಸುತ್ತದೆ. ಕೊನೆಯಲ್ಲಿ ಯುದ್ಧದ ಭೀಕರ ಪರಿಣಾಮದಿಂದ ಉಂಟಾದ ಲಾಭ-ನಷ್ಟಗಳನ್ನು ಕುರಿತು ತೀವ್ರವಾಗಿ ವಿಷಾದದಿಂದ ಪರಿಭಾವಿಸುವುದು ವ್ಯಕ್ತವಾಗಿದೆ.

ಒಟ್ಟಾರೆ, ಮಹಾಕಾವ್ಯದ ಕಥಾವಸ್ತು ವಿಷಯವನ್ನು ಈ ನಾಟಕ ಕೃತಿಗಾಗಿ ಆಕರವಾಗಿ ಹೊಂದಿದ್ದರೂ ಕುವೆಂಪು ಅವರು ತಮ್ಮ ಸಮಕಾಲೀನ ಜಾಗತಿಕ ಯುದ್ಧದ ವಾಸ್ತವತೆಯನ್ನಿಟ್ಟು ಸಾಂಕೇತಿಕವಾಗಿ ಚಿಂತಿಸುವ ಮೂಲಕ ಸಮಕಾಲೀನ ಸಮಸ್ಯೆಗಳಿಗೆ ಹಿಡಿದ ಕೈಗನ್ನಡಿಯಂತಿದೆ.

ಕಾಲಗಳಲ್ಲಿ ಯಾವುದು ಒಳ್ಳೆಯದು? ಯಾವುದು ಶ್ರೇಷ್ಠ? ಎಂಬ ಅಂಶವನ್ನು ಚಿಂತಿಸುವಲ್ಲಿ ಕುವೆಂಪು ಅವರು ಈ ಕೃತಿಯಲ್ಲಿ ಭೂತಕಾಲವನ್ನು ಪ್ರತಿನಿಧಿಸುವ ದ್ವಾಪರವನ್ನು ವರ್ತಮಾನಕಾಲವನ್ನು ಪ್ರತಿನಿಧಿಸುವ ಕಲಿಯುಗವನ್ನು ಕುರಿತಾಗಿ 'ಎರಡೂ ಕಾಲಗಳ ಅದರದೇ ಆದ ಶ್ರೇಷ್ಠತೆಗಳನ್ನು ಎತ್ತಿಹಿಡಿಯುವುದರೊಂದಿಗೆ ಇಂತಹ ಕಾಲಗಳಲ್ಲಿ ಬರುವಂತಹ ವ್ಯಕ್ತಿಗಳು ಯುಗವನ್ನು ಮೀರಿಸುವಂತಹ ಶ್ರೇಷ್ಠರಿರುತ್ತಾರೆ.' ಎನ್ನುವ ಆಶಯವನ್ನು ವೈಜ್ಞಾನಿಕ ರೀತಿಯಲ್ಲಿ ನಡೆಸಿರುವ ವಿಶ್ಲೇಷಣೆಯನ್ನು ನಾಟಕಗಳಲ್ಲಿ ಚಿತ್ರಿಸಿದ್ದಾರೆ.

~~~***~~~

**೪. ಯಯಾತಿ :**

ಕ್ರಿ.ಶ. ೧೯೬೧ ರಲ್ಲಿ ಶ್ರೀಯುತ ಗಿರೀಶ್ ಕಾರ್ನಾಡ್ ಅವರು ರಚಿಸಿದ ಪ್ರಥಮ ನಾಟಕವೇ 'ಯಯಾತಿ'.

ಈ ನಾಟಕ ಕೃತಿಯ ಕಥಾವಸ್ತು ವಿಷಯವು ವೇದಕ್ಕೆ ಸಂಬಂಧಪಟ್ಟಿದ್ದು ಮತ್ತು ಮಹಾಭಾರತದ ಆದಿಪರ್ವದಲ್ಲಿ ಬರುವಂತಹ ಉಪಾಖ್ಯಾನದಲ್ಲಿಯೂ ಇದರ ಉಲ್ಲೇಖ ಬರುತ್ತದೆ. ನಾಟಕಕಾರರು ತಮ್ಮ ಆಶಯಕ್ಕೆ ತಕ್ಕಂತೆ ಮೂಲ ಕಥೆಯಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡು ಇದನ್ನು ರಚಿಸಿದ್ದಾಗಿದ್ದು ಇದೊಂದು ಮಹತ್ವಪೂರ್ಣ ಪೌರಾಣಿಕ ಹಿನ್ನೆಲೆಯಿರುವ ಕೃತಿಯಾಗಿದೆ.

'ಯಯಾತಿ' ನಾಟಕದಲ್ಲಿ ಯಯಾತಿ ಮತ್ತು ಪುರು ಇಬ್ಬರೂ ತಂದೆ ಮತ್ತು ಮಗ. ಇಬರಿಬ್ಬರ ನಡುವಿನ ಸಂಘರ್ಷಣೆಯ ವಿವರಣೆಯಿದೆ. ಮುಪ್ಪು ಮತ್ತು ತಾರುಣ್ಯದ ನಡುವೆ ಜಟಾಪಟಿ ನಡೆದಂತೆಯೇ ಇದೆ ಈ ಸನ್ನಿವೇಶಗಳು. ಯೌವ್ವನ ಮತ್ತು ಭೋಗಗಳಲ್ಲೇ ಸಾಫಲ್ಯವನ್ನು ಹಂಬಲಿಸುವ ಆಕಾಂಕ್ಷೆ ಹೊಂದಿದ ಮನುಷ್ಯನೊಬ್ಬನ ವಿಫಲತೆ ಹಾಗೂ ಇದರ ಅರಿವು ನಾಟಕದ ಮುಖ್ಯ ಕಥಾವಸ್ತುವಾಗಿದೆ.

'ಯಯಾತಿ' ಯಲ್ಲಿ ಪಾತ್ರದ ಹೆಸರನ್ನೇ ನಾಟಕಕ್ಕೆ ಇಡಲಾಗಿದೆ. ಈ ಪಾತ್ರದ ಹೆಸರಿನ ವ್ಯಕ್ತಿಯೊಬ್ಬ ವೃದ್ಧ. ಆದರೂ ಅವನು ಸದಾಕಾಲವೂ ಯೌವ್ವನಾವಸ್ಥೆಯಲ್ಲಿ ಅನುಭವಿಸುವಂತಹ ಸುಖ ಲಾಲಸೆಯಲ್ಲೇ ತೇಲುತ್ತಿರಬೇಕೆಂಬ ಆಸೆಯನ್ನು ಹೊತ್ತಿದ್ದು ಇದಕ್ಕಾಗಿ ತನ್ನ ಮಗನಾದ ಪುರುವಿನ ಆಯುಷ್ಯದಲ್ಲಿನ ಯೌವ್ವನವನ್ನು ಕೇಳಿ ಧಾರೆ ಎರೆಸಿಕೊಳ್ಳುತ್ತಾನೆ. ಸ್ವಾರ್ಥ ಪ್ರೇರಿತವಾದ ಇಂತಹ ಅಸಹಜ ಕ್ರಿಯೆಯೇ ಎಲ್ಲಾ ದುರಂತಗಳಿಗೂ ಬೀಜವಾಗುತ್ತದೆ.

ಅಂತಿಮವಾಗಿ ಪುರುವಿನ ಹೆಂಡತಿ ಚಿತ್ರಲೇಖೆಯು ಅಸಹಾಯಕಳಾಗಿ ಆತ್ಮಹತ್ಯೆಗೆ ಶರಣಾಗುತ್ತಾಳೆ.

ಒಟ್ಟಾರೆ, ಈ ನಾಟಕದಲ್ಲಿ ಮನುಷ್ಯರಿಗೇ ಅನೇಕ ದೌರ್ಬಲ್ಯಗಳಿರುತ್ತವೆ. ಅವುಗಳ ಮೇಲಿನ ಹಂಬಲ ಸಂಪೂರ್ಣಗೊಳ್ಳುವುದಿಲ್ಲವೆಂಬುದನ್ನು ಈ ಕೃತಿಯು ದೃಢಪಡಿಸುತ್ತದೆ.

**೫. ಅಗ್ನಿ ಮತ್ತು ಮಳೆ :**

ಗಿರಿಶ್ ಕಾರ್ನಾಡರ ಅತ್ಯಂತ ಮಹತ್ವಾಕಾಂಕ್ಷೆಯ ಮತ್ತೊಂದು ನಾಟಕ ಕೃತಿಯೆಂದರೆ 'ಅಗ್ನಿ ಮತ್ತು ಮಳೆ.'

ಇದು ಮಹಾಭಾರತದಲ್ಲಿ ಬರುವಂತಹ ವನಪರ್ವದ ಉಪಾಖ್ಯಾನದಲ್ಲಿ ಉಲ್ಲೇಖಗೊಂಡಿರುವ ಕಥೆಯೊಂದನ್ನು ಆಧರಿಸಿದ ಕಥಾವಸ್ತುವನ್ನು ಹೊಂದಿರುವುದಾಗಿದೆ.

ಪಾಂಡವರು ವನವಾಸದಲ್ಲಿದ್ದಾಗ ಲೋಮಷ ಮಹರ್ಷಿಗಳು ಇವರಿದ್ದಲ್ಲಿಗೆ ಬಂದು ಯುಧಿಷ್ಠಿರನಿಗೆ ಹೇಳಿದ ಯುಕ್ರಿತನ ಕಥೆಯನ್ನು ಈ ನಾಟಕ ಕೃತಿಯು ಒಳಗೊಂಡಿದೆ. ಅಷ್ಟೇ ಅಲ್ಲ; ವಿಶೇಷವಾಗಿ ಅದರೊಂದಿಗೇ ಹಾಸುಹೊಕ್ಕಾಗಿ ನಾಟಕದೊಳಗಿನ ನಾಟಕವಾಗಿ ಬರುವ 'ಇಂದ್ರ ವಿಜಯ'ದ ಕಥೆಯ ಮೂಲಕ ಒಂದು ಸಮಗ್ರವಾದ ಸಾಂಸ್ಕೃತಿಕತೆ ವಿನ್ಯಾಸವನ್ನು ಸೃಷ್ಟಿಸುವಲ್ಲಿ ಹೆಚ್ಚಿನ ಆಸಕ್ತಿಯನ್ನು ನಾಟಕಕಾರರು ಹೊಂದಿರುವುದಾಗಿ ಸ್ಪಷ್ಟಪಡಿಸುತ್ತದೆ.

ಆದರೆ 'ಇಂದ್ರ ವಿಜಯ'ದ ಕಥೆಯಲ್ಲಿ ವೈದಿಕ ದೇವತೆಗಳು, ಆಶ್ರಮ ಹಾಗೂ ಯಜ್ಞಶಾಲೆಗಳನ್ನೊಳಗೊಂಡ ಬ್ರಾಹ್ಮಣರು – ಇವೇ ಮೊದಲಾದವುಗಳನ್ನು ಸಂಕೇತಿಸುತ್ತದೆ. ಆದರೆ ನಿತ್ತಿಲೆಯ ಕಥೆಯಲ್ಲಿ ಬರುವಂತಹ ವಿಷಾದರು ಒಂದು ರೀತಿಯ ಬಹಿಷ್ಕೃತ ವರ್ಗಗಳಿಗೆ ಸೇರಿದವರಾಗಿರುತ್ತಾರೆ. ಇದರಿಂದಾಗಿ ಪ್ರಧಾನ ಸಂಸ್ಕೃತಿಯೊಡನೆ ಉಪಸಂಸ್ಕೃತಿಯು ಬಂದು ಸೇರಿದಂತಾಗುವುದರಿಂದ ಸಮಗ್ರತೆಯ ಕಲ್ಪನೆಯನ್ನು ಮೂಡಿಸುತ್ತದೆ.
~~~

–ಹೀಗೆ ಮಹಾಕಾವ್ಯದಲ್ಲಿ ಬರುವ ಪೌರಾಣಿಕ ವಸ್ತುವನ್ನಾಧರಿಸಿದ ಈ ನಾಟಕ ಕೃತಿಯಲ್ಲಿ ನಾಟಕಕಾರರು ಮಾನವನ ಮೂಲಭೂತ ಅಸ್ತಿತ್ವಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತಾಗಿ ಮಾನವೀಯ ಸಂಬಂಧಗಳಲ್ಲಿ ಆಗಿಂದಾಗ್ಗೆ ತಲೆದೋರುವಂತಹ ಹಿಂಸೆ ಮತ್ತು ಪ್ರೇಮಗಳ ಬಗೆಗಿನ ದ್ವಂದ್ವವನ್ನು ಈ ನಾಟಕ ಕೃತಿಯು ತನ್ನ ಕಥಾಹಂದರಲ್ಲಿ ಪ್ರಮುಖ ಕೇಂದ್ರಬಿಂದುವಾಗಿ ಹೊಂದಿದೆ.

**೬. ಗದಾಯುದ್ಧ ನಾಟಕಂ :**

ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳಲ್ಲಿರುವಂತಹ ದುರ್ಯೋಧನ, ಕೀಚಕ, ಕರ್ಣ, ರಾವಣ, ಹಿರಣ್ಯಕಶಿಪು ಮೊದಲಾದಂತಹ ಪಾತ್ರಗಳನ್ನು ಕುರಿತಾಗಿ ಖಳನಾಯಕರುಗಳೆಂದು ಅಸಡ್ಡೆಯೋ, ಅವಹೇಳನವೋ ಮಾಡುವಂತಹ ದೃಷ್ಟಿಯಿಂದಲೇ ನೋಡಲಾಗುತ್ತಿತ್ತು. ಆದರೆ ಇಂತಹ ನಾಟಕರಚನಾಕಾರರಿಂದಾಗಿ ಖಳನಾಯಕರುಗಳಲ್ಲಿರುವ ಉದಾತ್ತ ಗುಣಗಳನ್ನೂ ಗುರ್ತಿಸಿ ಅವುಗಳನ್ನು ಶ್ಲಾಘನೆ ಮಾಡುವ ಹೊಸ ಸಂಪ್ರದಾಯವೊಂದು ಬಿ.ಎಂ.ಶ್ರೀ. ಅವರಿಂದ ಸೃಷ್ಟಿಯಾಗಲಾರಂಭಿಸಿತು. ಆಧುನಿಕ ನಾಟಕಕಾರರ ಸ್ಫೂರ್ತಿಯ ಸೆಲೆಯಿಂದಾಗಿ 'ಗದಾಯುದ್ಧ ನಾಟಕಂ'ನಂತಹ ನಾಟಕವು ರಚನೆಯಾಗಿರುವುದನ್ನು ಮರೆಯುವಂತಿಲ್ಲ. ಪದ್ಯ ನಾಟಕ ಪರಂಪರೆಯೊಂದನ್ನು ಬಿ.ಎಂ. ಶ್ರೀಕಂಠಯ್ಯ ಅವರು ಆರಂಭಿಸಿದರು. ಶ್ರೀ ಅವರು ರಚಿಸಿದ ಅಶ್ವತ್ಥಾಮನ್ ನಾಟಕ ಕೃತಿ ರಚನೆಯು ಕುವೆಂಪು ಅವರಿಗೂ ಸ್ಫೂರ್ತಿ, ಆದರ್ಶ, ಮಾರ್ಗದರ್ಶನವಾಯಿತೆಂದರೆ ಬಹುಶಃ ತಪ್ಪಾಗಲಾರದು. ಇದೇ ಸೂತ್ರವನ್ನು ಬಳಸಿ ವಸ್ತು, ಭಾಷೆ, ತಂತ್ರ – ಈ ಮೂರೂ ವಿಧದಿಂದಲೂ ಕನ್ನಡ ನವೋದಯ ಸಾಹಿತ್ಯದಲ್ಲಿ ನಾಟಕಕ್ಕೆ ಹೊಸದೊಂದು ದಾರಿಯಾಯಿತು. ಇದರೊಂದಿಗೆ ಗ್ರೀಕ್ ದುರಂತ ನಾಟಕಗಳು ಮತ್ತು ಷೇಕ್ಸ್‌ಪಿಯರ್ ನಾಟಕಗಳನ್ನು ಕನ್ನಡಕ್ಕೆ ತರುವ ಮಹದಾಸೆಯನ್ನು ಮುಂದಿನವರು ಪೂರ್ಣಗೊಳಿಸಿದರು.

ಕನ್ನಡ ಸಾಹಿತ್ಯ ರತ್ನತ್ರಯರಲ್ಲೇ ಒಬ್ಬನಾದ, ಸರಸ್ವತಿ ಭಂಡಾರದ ಬೀಗಮುದ್ರೆಯನ್ನೊಡೆದ ಕವಿಯೆಂದೇ ಪ್ರಖ್ಯಾತನಾದ ರನ್ನನು ರಚಿಸಿದ 'ಗದಾಯುದ್ಧ' ಅಥವಾ 'ಸಾಹಸ ಭೀಮ ವಿಜಯ' ಒಂದು ಸುಪ್ರಸಿದ್ಧ ಅದ್ವಿತೀಯ ಚಂಪೂಕಾವ್ಯ. ಇದು ಚಂಪೂಕಾವ್ಯವೇ ಆದರೂ ಅದು ತನ್ನ ಒಡಲಲ್ಲಿ ನಾಟಕೀಯತೆಯನ್ನು ಹೊಂದಿತ್ತು. ಇದನ್ನು ಶ್ರೀ ಅವರು ತಮ್ಮಲ್ಲಿದ್ದ ಕಾವ್ಯಕಲೆಯ ಕಣ್ಣಿನಿಂದ ನೋಡಿ 'ಪ್ರಕೃತಿಯ ಗರ್ಭದಿಂದ ಹೊರಬಂದು ಹೂವೊಂದು ನಗುವಂತೆ' ಇದನ್ನೊಂದು ಶ್ರೇಷ್ಠ ನಾಟಕವಾಗಿ ಅರಳಿಸಿದರು.

ಮಹಾಕಾವ್ಯಗಳು ಸಾಹಿತ್ಯ ವಸ್ತು ವಿಷಯಗಳ ಚಿನ್ನದ ಗಣಿಯಂತೆ. ಅಗೆದಷ್ಟೂ ಚಿನ್ನ ಹೊರಬರುತ್ತಲೇ ಇರುವುದಷ್ಟೇ ಹೊರತು ಅದೆಂದಿಗೂ ಬರಿದಾಗುವ ಮಾತೇ ಇಲ್ಲಾ.

ವ್ಯಾಸಕೃತ ಮಹಾಭಾರತ ಪಂಪನ 'ವಿಕ್ರಮಾರ್ಜುನ ವಿಜಯ' ಅಥವಾ ಪಂಪಭಾರತಕ್ಕೆ ಪ್ರೇರಕ ವಸ್ತುವಾಯಿತು. ಪಂಪಭಾರತವು ರನ್ನದ 'ಗದಾಯುದ್ಧ' ಅಥವಾ 'ಸಾಹಸ ಭೀಮ ವಿಜಯ'ದ ಕಾವ್ಯಸೃಷ್ಟಿಗೆ ಸ್ಫೂರ್ತಿಯ ವಸ್ತುವಾಯಿತು. ಇದೇರೀತಿ ಗದಾಯುದ್ಧ ಕಾವ್ಯವು ಅದೇ ಹೆಸರಿನ ನಾಟಕ ಸೃಷ್ಟಿಗೆ ಪ್ರೇರಕವೂ, ಕಾರಣವೂ ಆಯಿತು.

ಕವಿ ರನ್ನನ ಕಾವ್ಯ 'ಗದಾಯುದ್ಧ'ದಲ್ಲಿ ಭೀಮನೇ ನಾಯಕನು. ಈ ಕಾವ್ಯದಲ್ಲಿ ರನ್ನನು ಭೀಮನ ಘೋರವಾದ ಪ್ರತಿಜ್ಞೆಯಿಂದ ಆರಂಭಿಸಿ, ಆ ಪ್ರತಿಜ್ಞೆ ನೆರವೇರಿದ ನಂತರ ಭೀಮನಿಗೆ ಪಟ್ಟಾಭಿಷೇಕ ಮಾಡುವಲ್ಲಿ ಮುಕ್ತಾಯಗೊಳಿಸಿದ್ದಾನೆ. ಕಾವ್ಯದ ತುಂಬೆಲ್ಲಾ ಬರೀ ಭೀಮನ ಆಟಾಟೋಪಗಳಿಂದಲೇ ತುಂಬಿಸಿದ್ದಾನೆ.

ಕವಿ ರನ್ನನಿಗೆ ಈ ಚಂಪೂಕಾವ್ಯವನ್ನು ಸೃಷಿಸುವಾಗ ಆತನಲ್ಲಿ ಗ್ರೀಕ್ ರುದ್ರನಾಟಕದ ಮಾದರಿಯಂತೆಯೇ ತಾನೂ ಇದನ್ನು ರಚಿಸಬೇಕೆಂಬ ಮನೋಭಾವನೆಯನ್ನೇನೂ ಹೊಂದಿರಲಿಲ್ಲ. ಈತನ ಈ ಕಾವ್ಯದಲ್ಲಿ ನಾಯಕನಾದ ಭೀಮನು ರೋಷಜನ್ಯ ಅವಿನಯ ಪಾತ್ರದಂತೆ ಚಿತ್ರಿಸಿದ್ದಾನೆ. ಅಂದರೆ ಆತನ ಒರಟುತನವೇ ಹೆಚ್ಚು ವಿಜೃಂಭಿಸುವಂತೆ ಮೂಲಕಥೆಯಲ್ಲಿ ಸಣ್ಣಪುಟ್ಟ ಮಾರ್ಪಾಡುಗಳನ್ನು ಮಾಡಿಕೊಂಡು ಈ ಕಥೆಯನ್ನು ಹೆಣೆದಿದ್ದಾನೆ. ಹಾಗೆಯೇ, ನಾಟಕಕಾರರು 'ಗದಾಯುದ್ಧ' ನಾಟಕದಲ್ಲಿ ನಾಯಕನ ಸೃಷ್ಟಿಯಲ್ಲಿ ವ್ಯತ್ಯಾಸ ಮಾಡಿ, ಮೂಲ ಕಾವ್ಯದಲ್ಲಿರುವ ನಿಜವಾದ ನಾಯಕನನ್ನು ಹಿಂದಕ್ಕೆ ಒತ್ತಿ, ಪ್ರತಿನಾಯಕನನ್ನು ನಾಯಕನನ್ನಾಗಿ ಮುಂದಕ್ಕೆ ತಂದು, ಗ್ರೀಕ್ ರುದ್ರನಾಯಕನಲ್ಲಿ ಕಾಣಬರುವ ಛಲ ಮತ್ತು ಪ್ರತೀಕಾರ ಮನೋಧರ್ಮಗಳನ್ನು ಅವನಲ್ಲಿ ನೆಲೆಗೊಳಿಸಿ, ಇಡೀ ನಾಟಕವನ್ನು ಒಂದು ಗ್ರೀಕ್ ಮಾದರಿಯ ರುದ್ರ ನಾಟಕದಂತೆ ರೂಪಿಸಿರುವುದು ಬಹಳ ಗಮನಾರ್ಹವಾಗಿದೆ.

ಶ್ರೀ ಅವರ 'ಗದಾಯುದ್ಧ ನಾಟಕಂ' ಕನ್ನಡ ಸಾಹಿತ್ಯದಲ್ಲಿ ಮಹತ್ವವಾದ ಸ್ಥಾನವಿದೆ. ಪ್ರಾಚೀನ ಕಾವ್ಯವೊಂದರ ದುರಂತ ವಸ್ತು, ವಿನ್ಯಾಸವನ್ನು ಶ್ರೀ ಅವರು ಈ ಕೃತಿರಚನೆಯಲ್ಲಿ ಗುರ್ತಿಸಿದ್ದು ಕನ್ನಡ ಸಾಹಿತ್ಯದಲ್ಲೇ ಒಂದು ಮಹತ್ತರವಾದ ಸಾಧನೆಯಾಗಿದೆ.

**ಅಶ್ವತ್ಥಾಮನ್** :

ಶ್ರೀ ಅವರ ಈ ನಾಟಕ ಕೃತಿ ರಚನೆಯು ಗ್ರೀಕ್ ಮಾದರಿಯ ಒಂದು ರುದ್ರ ನಾಟಕದಂತೆಯೇ ಇದೆ. ಏಕೆಂದರೆ ಈ ನಾಟಕದ ಮೂಲ ರೂಪ ಸಾಫೋಕ್ಲಿಸ್‌ನ 'ಏಜಾಕ್ಸ್' ಅಥವಾ 'ಅಯಾಸ್' ನಾಟಕದ ರೂಪಾಂತರವಾಗಿದೆ. ಅನುವಾದವಾದರೂ ಇದನ್ನು ಶ್ರೀ ಅವರು ತಮ್ಮ ಸ್ವಂತ ಕೃತಿಯಂತೆಯೇ ರಚಿಸಿರುವುದರಿಂದ ಇದನ್ನೊಂದು ರೂಪಾಂತರ ನಾಟಕ ಕೃತಿ ಎನ್ನಬಹುದಾಗಿದೆ. ಇದರಲ್ಲಿ ಶ್ರೀ ಅವರು ತಮ್ಮ ಸೃಜನಶೀಲತೆಯನ್ನು ಸಂಪೂರ್ಣವಾಗಿ ಪ್ರತಿಬಿಂಬಿಸಿದ್ದಾರೆ. ವಿದ್ವಾಂಸರೆಲ್ಲರ ಅಭಿಪ್ರಾಯದಲ್ಲಿ ಕನ್ನಡ ಸಾಹಿತ್ಯದಲ್ಲಿ ಅವರು ನಡೆಸಿರುವ ಕೃತಿ ರಚನೆಗಳಲ್ಲೇ ಮುಕುಟಪ್ರಾಯವಾಗಿದೆ. ಏಕೆಂದರೆ ರನ್ನನ 'ಗದಾಯುದ್ಧ'ದಿಂದ ಸ್ಫೂರ್ತಿ ಪಡೆದು ಈ ನಾಟಕವನ್ನು ರಚಿಸುವಾಗ ಶ್ರೀ ಅವರು ಪೂರ್ವಹಳಗನ್ನಡದ ಚಂಪೂಕಾವ್ಯದಲ್ಲಿರುವ ಶಬ್ದಗಳೊಂದಿಗೆ ನಾಟಕದಲ್ಲಿರುವ ಹಳಗನ್ನಡಕ್ಕೂ ಹೊಂದಿಕೆಯಾಗುವಂತಹ ಶಬ್ದಗಳನ್ನು ಹವಣಿಸಿ ಒಂದು ಹೊಸ ಭಾಷಾಶೈಲಿಯನ್ನೇ ಈ ನಾಟಕದಲ್ಲಿ ನಿರ್ಮಿಸಿದ್ದಾರೆ.

**೭. ಪರಿಕಲ್ಪನೆ** :

**ಶ್ರೀ ಬಿ.ಜಿ. ಸತ್ಯಮೂರ್ತಿ ಅವರು** ಹೆಸರಾಂತ ಲೇಖಕರಾಗಿದ್ದು ಇವರು ಸುಮಾರು ಎರಡು ದಶಕಕ್ಕೂ ಹಿಂದೆ ರಚಿಸಿದ ಈ ಗ್ರಂಥವು ಸಂಶೋಧನಾತ್ಮಕ ಅಧ್ಯಯನದ ರೂಪದಲ್ಲಿದ್ದು; ಹಲವಾರು ಟಿಪ್ಪಣಿಗಳನ್ನು ಹೊಂದಿದ್ದು 'ತೌಲನಿಕ ಅಧ್ಯಯನ'ದ ಮಾದರಿಯಲ್ಲಿದೆ. ಅಧ್ಯಯನಕಾರರಿಗೆ ಹೆಚ್ಚು ಉಪಯುಕ್ತವಾಗುವಂತಹ ಗ್ರಂಥವಾಗಿದೆ. ಲೇಖಕರು ಈ ಕೃತಿಯಲ್ಲಿ ಜಾನಪದ, ಪುರಾಣ, ಇತಿಹಾಸಗಳ ಕುರಿತು ಕೂಲಂಕಷವಾಗಿ ಚರ್ಚಿಸಿರುವುದರಿಂದ ಎಲ್ಲಾ ಸಿಕ್ಕುಗಳನ್ನೂ ಬಿಡಿಸಿ ಈಗಿನ ಕಾಲದವರಿಗೆ ಓದಲು ಅನುಕೂಲವಾಗುವಂತೆ ಮಹಾಭಾರತದ ಮೂಲಕಥೆಯನ್ನು ಮಾತ್ರ ರಚಿಸಿ **'ಸರಳಭಾರತ'** ಎನ್ನುವಂತಹ ಗ್ರಂಥವನ್ನೂ ಕೂಡಾ ರಚಿಸಿದ್ದರು. ಆನಂತರ ಋಗ್ವೇದಗಳನ್ನು ಬಹು ದೀರ್ಘವಾಗಿ ಅಭ್ಯಸಿಸಿದ ನಂತರ ಅಲ್ಲಿನ ವ್ಯಕ್ತಿಗಳ ಹೆಸರು, ಘಟನೆಗಳು, ಸನ್ನಿವೇಶ ಇತ್ಯಾದಿಗಳು ಮಹಾಭಾರತದೊಂದಿಗೆ ಹೋಲಿಕೆ ಮತ್ತು ಕೆಲವು ಸಾಮ್ಯಗಳನ್ನು ಕಂಡಾಗ ಮಹಾಭಾರತದ ಮೂಲರೂಪವಾದ 'ಜಯ' ಆಖ್ಯಾನವನ್ನು ರಚಿಸಲು ಶ್ರುತಿ–ಸ್ಮೃತಿಗಳ ಪ್ರಭಾವ, ಪ್ರೇರಣೆಯಿರುವುದನ್ನು ಕಂಡು ಅದನ್ನು ತೌಲನಿಕವಾಗಿ ಅಧ್ಯಯನ ಈ ಗ್ರಂಥದಲ್ಲಿ ನಡೆಸಿದ್ದಾರೆ.

ಪ್ರಮುಖವಾಗಿ, ಮಹಾಭಾರತದ ಹಲವಾರು ಘಟನೆಗಳು, ಹೆಸರುಗಳು ಋಗ್ವೇದದಲ್ಲಿ ಬರುವ ಹೆಸರುಗಳು, ಸನ್ನಿವೇಶಗಳು, ಘಟನೆಗಳನ್ನು ಪುಷ್ಟೀಕರಿಸುತ್ತದೆ ಎನ್ನುವಲ್ಲಿ ಲೇಖಕರು ಬಹಳ ವ್ಯಾಪಕವಾದ ಅಧ್ಯಯನವನ್ನು ನಡೆಸಿ, ಮಹಾಭಾರತದ ಮೂಲ ಕಥೆಗೆ ಆಧಾರಗಳನ್ನು ಒದಗಿಸಿದ್ದಾರೆ. ಮತ್ತು ವ್ಯಾಸ ಋಷಿಗೆ 'ಮಹಾಭಾರತ' ಎಂಬ ಮಹಾಕಾವ್ಯದ ರಚನೆಗೆ ಪ್ರೇರಣೆ, ಪ್ರಭಾವಗಳೇನು? ಅದು ಹೇಗೆ ದೊರಕಿತು? ಎಂದು ಶೋಧನೆಯನ್ನು ಅಧ್ಯಯನದ ಮೂಲಕ ನಡೆಸಿದ್ದಾರೆ. ಈ ಗ್ರಂಥದಲ್ಲಿ ಲೇಖಕರು, 'ಋಗ್ವೇದವು ಜಗತ್ತಿನಲ್ಲೇ ಅತ್ಯಂತ ಪ್ರಾಚೀನ ಗ್ರಂಥ. ಅದರಲ್ಲಿ ಬರುವ ಆಖ್ಯಾನ, ಉಪಾಖ್ಯಾನಗಳು, ಘಟನೆಗಳು, ಪಾತ್ರಗಳು, ಊರು–ಕೇರಿಗಳನ್ನು ಬಳಸಿಕೊಂಡು ವ್ಯಾಸ ಋಷಿಗಳು, ವಾಲ್ಮೀಕಿ ಋಷಿಗಳು ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳನ್ನು ರಚಿಸಿರುವುದರಲ್ಲೂ ಒಂದು ಔಚಿತ್ಯವಿದೆ. ಇವುಗಳು 'ಆದಿಕಾವ್ಯ'ಗಳೆಂಬ ಪ್ರಸಿದ್ಧಿಗೂ ಪಾತ್ರವಾಗಿದೆ. ಒಂದು ಸಾಂಸಾರಿಕ ಮಹತ್ವವುಳ್ಳ ಕೃತಿಯಾದರೆ; ಮತ್ತೊಂದು ರಾಜಕಾರಣದ ಏಳು–ಬೀಳುಗಳನ್ನು ಚಿತ್ರಿಸಿರುವಂತಹ ಜಗತ್ತಿನ ಅತೀ ಪ್ರಾಚೀನ ವಿಶ್ವಕೋಶಗಳು' ಎಂದು ವರ್ಣಿಸುತ್ತಾರೆ. ಲೇಖಕರು ಮುಂದುವರೆಯುತ್ತಾ, 'ಕ್ರಿ.ಶ. ೧೯೨೨ರಲ್ಲಿ ಭಾರತಕ್ಕೆ ಆಗಮಿಸಿದಂತಹ ಪಾಶ್ಚಾತ್ಯ ವಿದ್ವಾಂಸನಾದ ವಿಂಟರ್‌ನಿಟ್ಸ್ ಎಂಬಾತನು 'ಭಾರತ' ಮಹಾಕಾವ್ಯದ ಮೂಲವನ್ನು ವೇದದಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾನೆ. ಪುಣೆಯ ಭಂಡಾರ್‌ಕರ್ ಪ್ರಾಚ್ಯ ಸಂಶೋಧನ ವಿದ್ಯಾಸಂಸ್ಥೆಯ ಮುಖಾಂತರ ಹಲವಾರು ಭಾರತೀಯರು, ಪಾಶ್ಚಾತ್ಯ ವಿದ್ವಾಂಸರು ಮಹಾಭಾರತದ ಬಗ್ಗೆ ಸಾಕಷ್ಟು ಕೆಲಸ ಮಾಡಿದ್ದಾರೆ. ಅವರಲ್ಲಿ ಪ್ರಮುಖರಾದವರೆಂದರೆ; ವೆಬರ್, ಆಲ್‌ಫ್ರೆಡ್ ಲುಡ್ವಿಗ್ ಮೊದಲಾದವರು.' ಎಂಬ ವಿಷಯಗಳ ಕುರಿತಾಗಿ ಕೂಲಂಕಷವಾಗಿ ಚರ್ಚಿಸಿದ್ದಾರೆ.

**೮. ಪರ್ವ :**

ಡಾ॥ ಎಸ್.ಎಲ್. ಭೈರಪ್ಪ ಅವರ 'ಪರ್ವ' ಕಾದಂಬರಿಯನ್ನು ವ್ಯಾಸಭಾರತದ ಮಾನದಂಡದ ನೆಲೆಯಲ್ಲಿ ಗ.ನಾ. ಭಟ್ಟ ಅವರು 'ಪರ್ವ-ಭಾರತ' ಎಂಬ ವಿಮರ್ಶಾ ಕೃತಿಯೊಂದನ್ನು ರಚಿಸಿದ್ದಾರೆ.

'ಪರ್ವ'ದಲ್ಲಿ ಭೈರಪ್ಪನವರ ಸೃಷ್ಟಿಶೀಲ ಬರವಣಿಗೆಯನ್ನು ನಾವು ಕಾಣುತ್ತೇವೆ. ವ್ಯಾಸಭಾರತದ ಪುನರ್‌ಸೃಷ್ಟಿಯಂತೆ ಒಂದೊಂದು ಪಾತ್ರವೂ ಹೊಸ ಹೊಳಹು, ಕಾಂತಿಗಳಿಂದ ಕೂಡಿದೆ.

ಭರತಖಂಡದ ಕೋಟ್ಯಾಂತರ ಜನಕ್ಕೆ ಸಾವಿರಾರು ವರ್ಷಗಳಿಂದಲೂ ಅವರ ಜೀವನ ಯಾತ್ರೆಯಲ್ಲಿ ಮಾರ್ಗಜ್ಯೋತಿಯಾಗಿ ನಿಂತಿರುವ ಅಮರ ಕಾವ್ಯಗಳೆಂದರೆ ರಾಮಾಯಣ, ಮಹಾಭಾರತ. ಅದರಲ್ಲೂ ಮಹಾಭಾರತವಂತೂ ಸಮುದ್ರದಂತೆ ವಿಸ್ತಾರ ಮತ್ತು ಪ್ರಕ್ಷುಬ್ಧವಾಗಿ ಜೀವನದ ಎಲ್ಲಾ ತೊಡಕುಗಳನ್ನೂ, ಪ್ರಸಂಗಗಳನ್ನೂ ತೋರಿಸಿಕೊಡುವಂಥಹ ಒಂದು ಅನಪಮ ಕಾವ್ಯ.

ಭೈರಪ್ಪನವರು ಈ ಕೃತಿಯನ್ನು ಮದ್ರ ದೇಶದ ರಾಜ ಶಲ್ಯನ ಕೌಟುಂಬಿಕ ಜೀವನದ ಚಿತ್ರಣದಿಂದ ಮೊದಲು ಮಾಡುತ್ತಾರೆ. ಈ ಕೃತಿಯಲ್ಲಿ ಬಹು ಮಟ್ಟಿನ ವಸ್ತು ಬಿಚ್ಚಿಕೊಳ್ಳುವುದು ಸ್ಮರಣ ತಂತ್ರ ಮತ್ತು ಅಂತರ್ಮುಖತೆಯ ಮೂಲಕ. ಗತಿಸಿಹೋದ ಘಟನೆಗಳನ್ನು ಆಯಾ ಪಾತ್ರಗಳು ಉತ್ತಮ ಪುರುಷದಲ್ಲಿ ನೆನೆಸಿಕೊಳ್ಳುವುದರ ಮೂಲಕ ಆ ಕಾಲದ ಭಾರತದಲ್ಲಿ ಇದ್ದಿರಬಹುದಾದಂತಹ ಜಾತಿ, ಧರ್ಮ, ಸಮಾಜ, ಕುಟುಂಬ ವ್ಯವಸ್ಥೆ, ಕುಲಾಚಾರ, ದೇಶಾಚಾರ, ಸಂಪ್ರದಾಯ, ರಾಜಕೀಯ ಸ್ಥಿತ್ಯಂತರ, ಆರ್ಯಾವರ್ತ, ಬ್ರಹ್ಮಾವರ್ತದ ಜನಜೀವನ, ಕ್ಷತ್ರಿಯ ರೀತಿ ರಿವಾಜು- ಮೊದಲಾದವರುಗಳನ್ನು ದರ್ಶಿಸುತ್ತಾ ಹೋಗುತ್ತದೆ. ಇದೇ ಈ ಕಾದಂಬರಿಯ ಪ್ರಧಾನ ಲಕ್ಷಣ.

ಈ ಕೃತಿಯಲ್ಲಿ ಭೈರಪ್ಪನವರು, ಭಾರತ ಕಥೆಯ ವಿವರಗಳ ಐತಿಹಾಸಿಕ ಸತ್ಯಕ್ಕಿಂತಲೂ ಅವುಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಸತ್ಯವೇ ಹೆಚ್ಚು ಮಹತ್ವವೆಂದು ಪರಿಭಾವಿಸುತ್ತಾರೆ. 'ಮಹಾಭಾರತ'ದ ಕಾಲವನ್ನು ಚಿಂತನೆಯೇ ಪ್ರಧಾನವಾದ ಉಪನಿಷತ್ತುಗಳ ಆರಂಭದ ಕಾಲ' ಎಂದು ಗುರ್ತಿಸುತ್ತಾರೆ.

ಈ ವೇಳೆಗಾಗಲೇ ವೈದಿಕ ಸಂಸ್ಕೃತಿಯು ಸಾಕಷ್ಟು ಬೆಳವಣಿಗೆ ಹೊಂದಿ ಒಂದು ಖಚಿತವಾದ ಘಟ್ಟವನ್ನು ತಲುಪಿ, ಯಾಗ-ಯಜ್ಞಾದಿಗಳು ವಿವರವಾಗಿ ಬೆಳೆದು ಮುಗಿದು, ಚಿಂತನೆಯೇ ಪ್ರಧಾನವಾಗಿ ನಡೆಯುತ್ತಿರುವ ಕಾಲವೆಂದು ಗುರ್ತಿಸುತ್ತಾರೆ. ಅವರು ತಮ್ಮ ಈ ಯೋಚನೆಯನ್ನು ಸ್ಪಷ್ಟಪಡಿಸಲು ಸಂಭಾಷಣೆಗಳನ್ನು ಬಳಸಿದ್ದಾರೆ.

'ವಂಶವೃಕ್ಷ' ಕಾದಂಬರಿಯಲ್ಲಿ ಸಾಮಾನ್ಯವಾಗಿ ಕಂಡುಬರುವಂತಹ ಸಂಗತಿಗಳೇ ಈ ಕೃತಿಯಲ್ಲೂ ಕೂಡಾ ಪಾರಂಪರಿಕ ನಂಬಿಕೆ ಮತ್ತು ಆಧುನಿಕ ವೈಚಾರಿಕತೆಗಳ ಮುಖಾಮುಖಿಯಾಗುವುದನ್ನು ಕಾಣುತ್ತೇವೆ. ಎರಡು-ಮೂರು ತಲೆಮಾರುಗಳ ಸಂಘರ್ಷ ಬಹುಪಾಲು ಭೈರಪ್ಪನವರ ಕಾದಂಬರಿಗಳಲ್ಲಿ ಕಂಡುಬರುವ ಸಾಮಾನ್ಯ ಸಂಗತಿಯಾಗಿದ್ದು; ಅದನ್ನೇ 'ಪರ್ವ' ಕೃತಿಯಲ್ಲೂ ಕಾಣುತ್ತೇವೆ.

ಉದಾಹರಣೆಗೆ : ಶಲ್ಯನ ವ್ಯಕ್ತಿತ್ವ ಮತ್ತು ಆತನ ಯೋಚನೆಗಳು.

ಶಲ್ಯ ಹಳೇ ಕಾಲದ ತಲೆಮಾರಿನ ಸಂಕೇತವಾಗಿ ಕಾಣಿಸಿಕೊಂಡರೆ; ಅದೇ ಅವನ ಮಗ ರುಕ್ಮರಥ ಮತ್ತು ಆತನ ಮಗಳು ಹಿರಣ್ಯವತಿ ಹೊಸ ತಲೆಮಾರಿನ ಸಂಕೇತವಾಗಿ ಕಾಣಿಸಿಕೊಳ್ಳುತ್ತಾರೆ.

ಕಾಲಮಾನಕ್ಕನುಗುಣವಾಗಿ ಆಚಾರ, ವಿಚಾರ, ಸಂಪ್ರದಾಯ ಬದಲಾಗುವುದನ್ನು ಭೈರಪ್ಪನವರು ಉದಾಹರಣೆಗಳೊಂದಿಗೆ ಸಮರ್ಥಿಸುತ್ತಾರೆ.

**೮. ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ :**

**ಡಾ॥ ಪ್ರಧಾನ ಗುರುದತ್** ಅವರು ಕನ್ನಡ ವಿಭಾಗ, **ಮೈಸೂರು** ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದ **"ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ"** ಎಂಬ ನಿಬಂಧಕ್ಕೆ ೧೯೬೮ರಲ್ಲಿ ಚಿನ್ನದ ಪದಕದ ಪ್ರಶಸ್ತಿ ಲಭಿಸಿದೆ. ಅಂದಿನ ಕಾಲದಲ್ಲಿ ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿಯ ನಿರ್ದೇಶಕರಾಗಿದ್ದ ಡಾ॥ ಸಿ.ಪಿ. ಕೃಷ್ಣಕುಮಾರ್ ಅವರು ಈ

ಗ್ರಂಥಕ್ಕೆ ಮುನ್ನುಡಿಯನ್ನು ಬರೆದಿದ್ದಾರೆ. ಈ ಗ್ರಂಥವನ್ನು ೧೯೯೦ರಲ್ಲಿ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದೆ.

ಈ ಗ್ರಂಥದ ಪ್ರಧಾನ ಸಂಪಾದಕರಾದ ಡಾ॥ ಸಿ.ಪಿ. ಕೃಷ್ಣಕುಮಾರ್ ಅವರು ಮುನ್ನುಡಿಯಲ್ಲಿ;

**"ಭಾರತೀಯ ಸಂಸ್ಕೃತಿಯ ಎರಡು ಕಣ್ಣುಗಳು ರಾಮ–ಕೃಷ್ಣರು. ಒಬ್ಬನು ರಾಮಾಯಣದ ನಾಯಕನಾದರೆ ಮತ್ತೊಬ್ಬನು ಮಹಾಭಾರತದ ನಾಯಕನಾಗಿದ್ದಾನೆ. ಏಕಪತ್ನೀ ವ್ರತಸ್ಥನು, ಪಿತೃವಾಕ್ಯಪರಿಪಾಲಕನಾದ ರಾಮನ ವ್ಯಕ್ತಿತ್ವ ಗಾಂಭೀರ್ಯಪೂರ್ಣವಾಗಿ ಚಿತ್ರಿತಗೊಂಡಿದ್ದರೆ; ಬಹುವರ್ಣರಂಜಿತವಾದ ಜೀವನ, ವ್ಯಕ್ತಿತ್ವವನ್ನು ಹೊಂದಿದ ಕೃಷ್ಣನು ಭಾರತೀಯ ಜೀವನ, ಸಂಸ್ಕೃತಿ, ಪರಂಪರೆಗಳಲ್ಲಿ ಕೃಷ್ಣ ಪೂರ್ಣಾವತಾರಿ ಎನಿಸಿಕೊಂಡಿದ್ದು; ಕೃಷ್ಣನಿಲ್ಲದೆ ಇದ್ದಿದ್ದರೆ ಯುಗ ಯುಗಗಳಿಂದಲೂ ಭಕ್ತಿ, ಶರಣಾಗತಿಗಳು ಆವಿಷ್ಕರಿಸುತ್ತ ಬಂದಿರುವಂತದ್ದು ಬಹುಮಟ್ಟಿಗೆ ಅರ್ಥವನ್ನೇ ಕಳೆದುಕೊಂಡು ಬಿಡುತ್ತಿತ್ತೇನೋ! ಎನ್ನುವಷ್ಟು ಭಾರತೀಯ ಸಾಹಿತ್ಯದ ಸೆಲೆಯಾಗಿ ಈ ಕೃಷ್ಣಭಕ್ತಿ, ಅನುರಕ್ತಿ ಸೆಲೆಯಾಗಿ ನಿಂತಿದೆ.**

**ಅಷ್ಟೇಅಲ್ಲ; ಐತಿಹಾಸಿಕ–ಪೌರಾಣಿಕ, ಪ್ರಾಕೃತ–ಅಪ್ರಾಕೃತ, ಆಧ್ಯಾತ್ಮಿಕ–ರಾಜಕೀಯ ಇತ್ಯಾದಿಯಾಗಿ ಹಲವು ಆಯಾಮಗಳು ಕೃಷ್ಣ ಚೇತನಕ್ಕೆ ಸೇರಿವೆ. ಪಂಪ, ಕುಮಾರವ್ಯಾಸರಲ್ಲಿ ಕೃಷ್ಣಪಾತ್ರಕ್ಕೆ ಅಪೂರ್ವವಾದ ಆಯಾಮಗಳು ಪ್ರಾಪ್ತವಾಗಿರುವುದು ಗಮನಾರ್ಹ. ಮತ್ತು ಕನ್ನಡಕ್ಕೆ ಈ ನಿಬಂಧ ಒಂದು ಮೌಲಿಕವಾದ ಕೊಡುಗೆ."** ಎನ್ನುತ್ತಾರೆ.

ಈ ಗ್ರಂಥದ ಆರಂಭದ ಪ್ರವೇಶದಲ್ಲಿ ಲೇಖಕರು ಅಥವಾ ಸಂಶೋಧಕರು 'ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ'ಯಲ್ಲಿ ಕೃಷ್ಣನ ಮೂಲ ಸ್ವರೂಪ ಏನು? ಆತನ ಬಗೆಗಿರುವ ಇಂದಿನ ನಮ್ಮ ಕಲ್ಪನೆ ಒಂದು ಸಮಗ್ರ ವ್ಯಕ್ತಿತ್ವದ ನೈಜ ಚಿತ್ರವೇ? ಅಥವಾ ಕಾಲಾನುಕ್ರಮದಲ್ಲಿ ಬೆಸೆದುಕೊಂಡ ಒಂದು ಸಮಷ್ಟಿ ರೂಪವೇ? ಹಾಗಿದ್ದರೆ ಕೃಷ್ಣರು ಎಷ್ಟು ಮಂದಿ ಇದ್ದರು? ಮೂಲಭೂತವಾಗಿ ಕೃಷ್ಣ ಒಬ್ಬ ಐತಿಹಾಸಿಕ ವ್ಯಕ್ತಿಯೇ? ನಮ್ಮ ಪ್ರಾಚೀನತಮ ಗ್ರಂಥವಾದ ಋಗ್ವೇದದಲ್ಲಿ ದೊರೆಯುವ ಕೃಷ್ಣನಾರು? ಛಾಂದೋಗ್ಯ ಉಪನಿಷತ್ತಿನಲ್ಲಿ ದೊರೆಯುವ ಪರಮ ದಾರ್ಶನಿಕ ಕೃಷ್ಣನಾರು? .............. ಹೀಗೆ ಶತಶತಮಾನಗಳೇ ಉರುಳಿ ಹೋದರೂ ಕೃಷ್ಣ ಅಚ್ಚಳಿಯದೆ ಉಳಿದುಕೊಂಡು ಆಕರ್ಷಣೆಯ ಕೇಂದ್ರಬಿಂದುವಾಗಿರುವುದರ ರಹಸ್ಯವೇನು? ಎಂಬುದರ ಜಿಜ್ಞಾಸೆ ವ್ಯಕ್ತಪಡಿಸುತ್ತಾ – **"ಹೀಗೆ ಕೃಷ್ಣ ಹಲವು ಹತ್ತು ಸಮಸ್ಯೆಗಳ ಕೇಂದ್ರಬಿಂದುವೂ ಆಗಿ ಉಳಿದಿದ್ದಾನೆ."**[೫] ಕೃಷ್ಣ ಕೇವಲ ವೈದಿಕ ಧರ್ಮದ ಆರಾಧ್ಯ ದೇವತೆ ಮಾತ್ರ ಆಗಿ ಉಳಿಯದೆ ಜೈನ, ಬೌದ್ಧ, ಶೈವ, ವೀರಶೈವ ಧರ್ಮಗಳಲ್ಲಿಯೂ ಒಂದಲ್ಲ ಒಂದು ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಆದರೆ ಸಹಜವಾಗಿ ಬದಲಾಗುವ ಒತ್ತು, ಸ್ವರೂಪ, ಲಕ್ಷಣ, ಪ್ರಾಧಾನ್ಯತೆಗಳನ್ನು ಕಾಣುತ್ತೇವೆ.

ಕೃಷ್ಣನ ಅವತಾರದ ಹಿನ್ನೆಲೆ, ಕಲ್ಪನೆ ಮತ್ತು ಐತಿಹಾಸಿಕತೆ, ಕೃಷ್ಣನಿಗೆ ಸಂಬಂಧಿಸಿದ ಶಾಸನಗಳು, ಧಾರ್ಮಿಕೇತರ ದೃಷ್ಟಿಯಲ್ಲಿ ಕೃಷ್ಣನ ಜೀವನದ ಕೆಲವು ಮುಖ್ಯ ಘಟನೆಗಳು, ಆಧ್ಯಾತ್ಮಿಕ ದೃಷ್ಟಿಯಿಂದ ಕೆಲವು ಪ್ರಸಂಗಗಳನ್ನು ಅದರ ಔಚಿತ್ಯಾಚಿತ್ಯಗಳ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ. ಶ್ವೇತಾಂಬರ ಮತ್ತು ದಿಗಂಬರ ಜೈನ ಸಂಪ್ರದಾಯಗಳಿಗೆ ಸೇರಿದ ಶಾಸ್ತ್ರಗಳಲ್ಲಿ ಕೃಷ್ಣಕಥೆ ಬೆಳೆದುಬಂದಿರುವ ಬಗೆಯನ್ನು ಹಾಗೂ ಪಡೆದುಕೊಂಡಿರುವ ಹೊಸಾ ಆಯಾಮಗಳನ್ನು ಗುರ್ತಿಸುವ ಪ್ರಯತ್ನವನ್ನು ಇಲ್ಲಿ ಅಧ್ಯಯನಕಾರರು ನಡೆಸಿದ್ದಾರೆ.

ವೈಷ್ಣವ ಮತ್ತು ಜೈನ ಸಾಹಿತ್ಯದಲ್ಲಿ ಒಟ್ಟಾರೆಯಾಗಿ ಕೃಷ್ಣಕಥೆ ಬೆಳೆದು ನಿಂತಿರುವ ಬಗೆಯನ್ನು ಮತ್ತು ಅದರಲ್ಲಿ ಮೂಡಿದ ಹೊಸ ಆಯಾಮಗಳನ್ನು ಗುರ್ತಿಸುವ ಪ್ರಯತ್ನ ಈ ಕೃತಿಯಲ್ಲಿ ನಡೆದಿದೆ.

**೯. ದ್ರೌಪದೀ ಸಮೀಕ್ಷೆ :**

ಡಾ॥ ವಿ. ಕೆ. ಮಣಿಮಾಲಿನಿ ಅವರು ಕನ್ನಡ ವಿಭಾಗ, ಮುಂಬೈ ವಿ.ವಿ.ಯಿಂದ ನಡೆಸಿದ ಪಿಎಚ್.ಡಿ. ಮಹಾಪ್ರಬಂಧದ ಅಧ್ಯಯನ ಇದಾಗಿದ್ದು; ೧೯೬೬ ರಲ್ಲಿ ಇದನ್ನು ಮುಂಬೈ ವಿ.ವಿ., ಕನ್ನಡ ವಿಭಾಗವು ಪ್ರಕಟಿಸಿದೆ.

ಈ ಗ್ರಂಥದಲ್ಲಿ ಸಂಶೋಧಕರಿಯು 'ವ್ಯಾಸಭಾರತ'ದ ಹಿನ್ನೆಲೆಯೊಂದಿಗೆ ಕನ್ನಡದ ಪರ್ವ, ಮರಾಠಿಯ ಮೃತ್ಯಂಜಯ ಮತ್ತು ಒರಿಯಾದ ಯಾಜ್ಞಸೇನಿ ಕಾದಂಬರಿಗಳಲ್ಲಿ ಮೂಡಿದ ದ್ರೌಪದಿಯ ತೌಲನಿಕ ವಿವೇಚನೆಯನ್ನು ಮಾಡಿದ್ದಾರೆ.

ಈ ಮಹಾ ಪ್ರಬಂಧದಲ್ಲಿ ಸಂಶೋಧಕಿಯು ದ್ರೌಪದಿಯ ಪಾತ್ರದ ಸಂಕೀರ್ಣತೆಯ ಕುರಿತಾಗಿ; ಅತೀ ಸೂಕ್ಷ್ಮ ನೆಲೆಯಲ್ಲಿ ದಮನಕ್ಕೆ ಒಳಗಾದ ರೀತಿ ಮತ್ತು ಪಂಚ ಪಾಂಡವರ ಪತ್ನಿಯಾಗಿ ನಲುಗುತ್ತಲೇ ಇದ್ದ ಅವಳ ಭಾವನೆಗಳು, ಬದುಕಿನುದ್ದಕ್ಕೂ ಒಂಟಿಯಾಗಿಯೇ ಉಳಿದ ಅವಳ ರಿಕ್ತತೆಗಳು ಆಕೆಯ ವ್ಯಕ್ತಿತ್ವದ ಹೊಸ ರೂಪಗಳನ್ನು ಹೊಳೆಯಿಸುತ್ತದೆ ಎಂದು ಹೀಗೆ ಮುಂತಾಗಿ ಚಿಂತಿಸಿದ್ದಾರೆ.

ಇಲ್ಲಿ ಒಟ್ಟು ಎಂಟು ಅಧ್ಯಾಯಗಳಿದ್ದು; ಮೊದಲನೆಯದು ಅಧ್ಯಯನದ ಉದ್ದೇಶದ ಪರಿಮಿತಿಯನ್ನೂ, ಎರಡನೆಯ ಅಧ್ಯಾಯವು ದ್ರೌಪದಿಯ ಬಹುಪತಿತ್ವದ ಸಾಂಪ್ರದಾಯಿಕತೆಯ ನೆಲೆಗಳನ್ನೂ, ಮೂರನೇ ಅಧ್ಯಾಯವು ದ್ರೌಪದಿಯ ಸ್ತ್ರೀತ್ವದ ಪ್ರತೀಕ, ಮುಂದಿನ ಅಧ್ಯಾಯವು ದ್ರೌಪದಿಯ ಸಂಬಂಧ ವಿನ್ಯಾಸಗಳು ಅರ್ಜುನ, ಭೀಮ, ಕರ್ಣ, ಕೃಷ್ಣರೊಂದಿಗಿನ ಸಂಬಂಧದ ಕುರಿತಾಗಿ ಅಧ್ಯಯನ ನಡೆಸಿದ್ದಾರೆ. ಎಂಟನೇ ಅಧ್ಯಾಯವು ದ್ರೌಪದಿಯ ಅಂತರ್ವಿರೋಧಗಳು ಕುರಿತಾಗಿಯೂ ಹಾಗೂ ಒಂಭತ್ತನೇ ಅಧ್ಯಾಯದಲ್ಲಿ ಸಮಾರೋಪವನ್ನು ಮಾಡಿದ್ದಾರೆ.

**೧೦. ಮಹಾಭಾರತದ ಬೆಳವಣಿಗೆ :**

ಕ್ರಿ.ಶ. ೧೯೭೭ ರಲ್ಲಿ ಎಸ್.ಆರ್. ರಾಮಸ್ವಾಮಿ ಅವರು ರಚಿಸಿರುವ ಈ ಗ್ರಂಥವನ್ನು ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು ಇವರು ಪ್ರಕಟಿಸಿದ್ದಾರೆ. ಮತ್ತು ಈ ಗ್ರಂಥವನ್ನು ಪ್ರಕಾಶನ ಸಂಸ್ಥೆ ಮತ್ತು ಲೇಖಕರು ಕ್ರಿ.ಶ. ೧೮೮೭ ರಲ್ಲಿ ಜನಿಸಿ, ಕ್ರಿ.ಶ. ೧೯೪೩ ರಲ್ಲಿ ನಿಧನರಾದ ಡಾ|| ಸುಕ್ತಂಕರ್ ಅವರಿಗೆ ಅರ್ಪಣೆ ಮಾಡಿದ್ದಾರೆ. ಡಾ|| ಸುಕ್ತಂಕರ್ ಅವರು 'ಮಹಾಭಾರತ'ದ ಪರಿಷ್ಕೃತ ಪಾಠದ ಪ್ರಧಾನ ಸಂಪಾದಕರಾಗಿ ಸುಮಾರು ಮೂರು ದಶಕಗಳ ಕಾಲ ಅವಿರತವಾಗಿ ಮಹಾಭಾರತದ ಅಧ್ಯಯನಕ್ಕಾಗಿ ಶ್ರಮಿಸಿ ಮುಂದಿನ ಸಂಶೋಧಕರಿಗೆ ಸ್ಫೂರ್ತಿದಾಯಕ ಚಿಲುಮೆಯಾಗಿದ್ದಾರೆ.

ಈ ಗ್ರಂಥದಲ್ಲಿರುವ ಪ್ರಬಂಧಗಳು ೧೯೬೮ ರಲ್ಲಿ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಸಾಪ್ತಾಹಿಕ ಪುರವಣಿಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿದ್ದವಾಗಿವೆ.

ಇದಕ್ಕೆ ಮೂಲ ಪ್ರೇರಣೆ, ಆ ವರ್ಷ ಪುಣೆಯ ಭಂಡಾರ್ಕರ್ ಪ್ರಾಚ್ಯ ವಿದ್ಯಾ ಸಂಶೋಧನೆಯ ಸಂಸ್ಥೆಯ ಸುವರ್ಣೋತ್ಸವದ ಸಂದರ್ಭದಲ್ಲಿ ಕ್ರಿ.ಶ. ೧೯ ಮತ್ತು ೨೦ ನೇ ಶತಮಾನಗಳಲ್ಲಿ ಪಾಶ್ಚಾತ್ಯ ಹಾಗೂ ಭಾರತೀಯ ವಿದ್ವಾಂಸರು ಮಹಾಭಾರತ ವಿಕಾಸದ ಬಗ್ಗೆ ಮಂಡಿಸಿದ ಹಲವಾರು ಸಿದ್ಧಾಂತಗಳನ್ನೂ, ಮಹಾಭಾರತ ಪಾಠ ಸಂಕುಲತೆಯ ಸ್ವರೂಪವನ್ನೂ, ಮಹಾಭಾರತದ ಅಧ್ಯಯನಕ್ಕೆ ಡಾ|| ಸುಕ್ತಂಕರ್ ಅವರು ನೀಡಿರುವ ಕೊಡುಗೆಗಳನ್ನೂ, ಪರಿಷ್ಕೃತ ಪಾಠದ ಸಂಪಾದನಾ ಕಾರ್ಯದ ವಿವರಗಳನ್ನೂ ಈ ಗ್ರಂಥದಲ್ಲಿ ಪ್ರಸ್ತಾಪಿಸಲಾಗಿದೆ.

ಮಹಾಭಾರತದ ಪಾಠ ವೈಚಿತ್ರ್ಯಗಳನ್ನು ಅಧ್ಯಯನ ಮಾಡಲು ಬಯಸುವವರಿಗೆ ಈ ಗ್ರಂಥ ಸ್ವಲ್ಪ ಮಟ್ಟಿಗೆ ನೆರವಾಗುತ್ತದೆ.

ಮಹಾಭಾರತದ "ಗ್ರಂಥ ಪಾಠ"ದ ಸ್ವರೂಪವೇ ಇಲ್ಲಿಯ ಮುಖ್ಯ ವಿಷಯ.

ಈ ಗ್ರಂಥದಲ್ಲಿ ಒಟ್ಟು ೭ ಅಧ್ಯಾಯಗಳಿವೆ. ಮೊದಲ ಅಧ್ಯಾಯದಲ್ಲಿ ಗ್ರಂಥದ ಸ್ವರೂಪ ಇದೆ. ಈ ಅಧ್ಯಾಯದಲ್ಲಿ ಮಹಾಭಾರತದ ಪ್ರಾಚೀನ ಪರಂಪರೆಯ ಕುರಿತಾದ ಮಹತ್ವ, ವ್ಯಾಖ್ಯಾನಗಳು, ವಿಮರ್ಶೆಗಳು, ಅನುವಾದಗಳು, ಸಂಗ್ರಹಗಳು, ಗ್ರಂಥಾಂತರ ಪಾಠಗಳ ವಿಶ್ಲೇಷಣೆ, ಗ್ರಂಥ ವಿಸ್ತಾರವಾದ ಬಗೆ, ಪಾಠಭೇದ ಬಾಹುಳ್ಯ, ಕರ್ತೃತ್ವ, ಪ್ರಾಮಾಣಿಕ ಪಾಠ, ಪಾಠ ಭೇದಗಳಿಗೆ ಕಾರಣ, ಪ್ರಕ್ಷಿಪ್ತಗಳು, ಪ್ರಕ್ಷಿಪ್ತಗೊಂಡ ಭಾಗಗಳು, ಸಾಂಪ್ರದಾಯಿಕ ವಾದ – ಇವೇ ಮೊದಲಾದ ವಿಚಾರಗಳನ್ನು ಇಲ್ಲಿ ಅಡಕಗೊಳಿಸಲಾಗಿದೆ.

ಉಳಿದ ಅಧ್ಯಾಯಗಳಲ್ಲಿ, ಪಾಶ್ಚಾತ್ಯ ಪಂಡಿತರ ಕೆಲವು ವಾದಗಳು, ಸುಕ್ತಂಕರ್ ಅವರ ಭಾರ್ಗವವಾದ, ಪರಿಷ್ಕರಣ ಪೂರ್ವದ ಅನುಪೂರ್ವಿ, ಪಾಠ ಸಂಕುಲತೆ, ಪಾಠ ಪರಿಷ್ಕರಣ ವಿಧಾನ, ಭಂಡಾರ್ಕರ್ ಸಂಸ್ಥೆಯ ಮಹತ್ಸಾಧನೆ ಮತ್ತು ಅನುಬಂಧದಲ್ಲಿ ಭಂಡಾರ್ಕರ್ ಸಂಶೋಧನಾ ಮಂದಿರದ ಬಹುಮುಖ ಸೇವೆ – ಇತ್ಯಾದಿ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ.

**೧೧. ಭಾರತ ಗಾಂಭೀರ್ಯ :**

ಕ್ರಿ.ಶ. ೧೯೫೪ ರಲ್ಲಿ ವೈದ್ಯಗುರು ಎಂ.ಆರ್. ಭಟ್ ಅವರು ರಚಿಸಿದ ಈ ಗ್ರಂಥವನ್ನು ಅವರೇ ಪ್ರಕಟಿಸಿದ್ದಾರೆ. ಇದಕ್ಕೆ ಮುನ್ನುಡಿಯನ್ನು ರಾಷ್ಟ್ರಕವಿ ಶ್ರೀ ಗೋವಿಂದ ಪೈ ಅವರು ಬರೆದಿದ್ದಾರೆ. 'ಸಂಶೋಧನಾತ್ಮಕವಾದ ಗ್ರಂಥಗಳ ತಳಹದಿಯಲ್ಲಿ ಈ ಗ್ರಂಥ ರಚಿಸಲ್ಪಟ್ಟಿದೆ.' ಎಂದಿದ್ದಾರೆ.

ವೇದವ್ಯಾಸನೆಂದರೆ ಯಾರು? ಅವನ ಮಹತ್ತ್ವವೇನು? ಗಣೇಶನೆಂದು ಪೂಜಿಸಲ್ಪಡುತ್ತಿದ್ದ ಅಂದಿನ ದೇವತೆ ಯಾರು? ದ್ರೌಪದಿ ಎಂದರೆ ಸೀತೆಯಂತೆ ಒಬ್ಬ ಆದರ್ಶ ಮಹಿಳೆ, ಆದರ್ಶ ಸ್ತ್ರೀತ್ವದ ಒಂದು ಬದಿಯಾದರೆ ಮತ್ತೊಂದು ಬದಿ ದ್ರೌಪದಿ, ಕುಂತಿ ಎಂದರೆ ಒಬ್ಬ ಆದರ್ಶ ಮಾತೆ, ಅಂದಿನ ಕಾಲದ ವಿದ್ಯಾಭ್ಯಾಸವೆಂದರೆ ತೀರಾ ಕರ್ಮಯೋಗ ಪ್ರಧಾನವಾದುದು.' ಎನ್ನುತ್ತಾರೆ.

ವೈದ್ಯಗುರು ಎಂ.ಆರ್.ಭಟ್ ಅವರು ಪೀಠಿಕೆಯನ್ನು ಬರೆಯುತ್ತಾ,

'ಸಮಕಾಲೀನ ಸಾಹಿತ್ಯವು ಹೇಗೆ ನಮ್ಮ ಕಾಲದ ಜೀವನವನ್ನು ವಿಸ್ತರಿಸುವುದೋ ಅದೇರೀತಿ 'ಮಹಾಭಾರತ'ವು ಆ ಕಾಲದ ಜನಜೀವನವನ್ನು ಚಿತ್ರಿಸುತ್ತದೆ. ಆದ್ದರಿಂದ ಅದನ್ನು ಕೇವಲ ಮೂಢ ದೃಷ್ಟಿಯಿಂದ ಮಹಾಭಾರತವನ್ನು ವಿಚಾರಿಸುವುದರಿಂದ ಲಾಭವಿಲ್ಲ, ಚಾರಿತ್ರಿಕ ದೃಷ್ಟಿಯಿಂದ ಅದರ ವಿಶೇಷತೆಗಳನ್ನು ತಿಳಿದುಕೊಳ್ಳಬೇಕಾಗಿದೆ.

ಈ ಗ್ರಂಥದಲ್ಲಿ ಒಟ್ಟು ೫೬ ಅಧ್ಯಾಯಗಳಿದ್ದು; ಪುರಾಣ ಮತ್ತು ಇತಿಹಾಸ, ಮಹಾಭಾರತ ಅಧ್ಯಯನ, ಮಹಾಭಾರತ ಕಾಲದ ವಿವಿಧ ದೇಶಗಳು, ಬಕಾಸುರನ ಲೀಲೆ, ಬಕಾಸುರ ವಧೆ, ಪ್ರಪಂಚ ಮತ್ತು ಮಹಾಭಾರತ, ಗಣದೇವ ಮತ್ತು ಮಹಾಭಾರತ, ಅಂದಿನ ಗಣಿಕೆಯರು ಮತ್ತು ಇಂದಿನ ವೇಶ್ಯೆಯರು, ಕ್ರಾಂತಿದೂತ ಶ್ರೀಕೃಷ್ಣ, ಮಹಾಭಾರತದ ಶ್ರೀಕೃಷ್ಣ, ರಾಜನೀತಜ್ಞ ಹಾಗೂ ತತ್ತ್ವವೇತ್ತ ಶ್ರೀಕೃಷ್ಣ, ವೇದವ್ಯಾಸ – ಹೀಗೆ ಇತ್ಯಾದಿ ಲೇಖನಗಳಿವೆ.

**೧೧. ಕುಂತಿಯ ಅಂತರಾಳ :**

ಶ್ರೀಮತಿ ತಾರಾಮೂರ್ತಿ ಅವರು ರಚಿಸಿದಂತಹ ಈ ಗ್ರಂಥವನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ಇವರು ಕ್ರಿ.ಶ. ೨೦೦೮ರಲ್ಲಿ ಪ್ರಕಟಿಸಿದ್ದಾರೆ.

ಜಿ. ವೆಂಕಟಸುಬ್ಬಯ್ಯ ಅವರು 'ಮುನ್ನುಡಿ'ಯನ್ನು ಬರೆಯುತ್ತಾ,

'ವ್ಯಾಸ ರಚಿತ ಮಹಾಭಾರತದಲ್ಲಿ ಓದುಗರ ಮೇಲೆ ಅಧಿಕವಾದ ಪ್ರಭಾವ ಬೀರುವ ಅನೇಕ ಸ್ತ್ರೀಪಾತ್ರಗಳಿವೆ. ದ್ರೌಪದಿ ಅಂಥಹವರಲ್ಲಿ ಪ್ರಥಮಳು. ಗಾಂಧಾರಿ, ಕುಂತಿ, ಮಾದ್ರಿ, ಭಾನುಮತಿ ಮುಂತಾದ ಇತರರೂ ಇದ್ದಾರೆ. ಮಾದ್ರಿ ಸತ್ತು ಬದುಕಿದಳು. ಮಿಕ್ಕ ಮೂವರೂ ಬದುಕಿದ್ದರೂ ಸತ್ತಂತೆ ಕಷ್ಟವನ್ನು ಅನುಭವಿಸಿದರು. ಕುಂತಿಯ ಮೂಲಕ ಭಾರತ ಕಥೆಯನ್ನು ಪುನರಪಿ ನೋಡುವ ಪ್ರಯತ್ನ ಈ ದೀರ್ಘ ಲೇಖನದಲ್ಲಿ ನಡೆದಿದೆ.

ಕೃಷ್ಣನು ಕುಂತಿಯ ಸೋದರಳಿಯನಾಗಿ, ಕುಂತಿಯ ಆಶೀರ್ವಾದ ಪಡೆದು ನಂತರ ತನ್ನ ಕೆಲಸ ಕಾರ್ಯಗಳಲ್ಲಿ ಮುಂದುವರೆಯುತ್ತಿದ್ದನು. ಆದರೆ ಅವನೆಂದಿಗೂ ತನ್ನ ಉದ್ದೇಶವೇನೆಂಬುದನ್ನು ಯಾರಿಗೂ ಬಿಡಿಸಿ ವಿವರಿಸಿದವನಲ್ಲ. ಹೀಗಿರುವಾಗ ಕೃಷ್ಣನ ಬಗ್ಗೆ ಕುಂತಿಯ ಅಭಿಪ್ರಾಯವೇನೆಂಬುದನ್ನು ಲೇಖಕರು ಈ ಗ್ರಂಥದಲ್ಲಿ ಚಿಂತಿಸಿದ್ದಾರೆ.

ಕುಂತಿಯ ಜೀವನದಲ್ಲಿ ಏನೆಲ್ಲಾ ನಡೆಯಿತು?! ಕರ್ಣನನ್ನು ಹೆತ್ತು ಗಂಗೆಯಲ್ಲಿ ತೇಲಿ ಬಿಟ್ಟದ್ದು ಯಾರಿಗೂ ತಿಳಿಯದ ವಿಷಯವಾಗಿತ್ತು.. ಇಂಥಹದ್ದು ಕೃಷ್ಣನಿಗೆ ತಿಳಿದಿತ್ತು!! ಅವನು ಕುಂತಿಗೆ ಮಾರ್ಗದರ್ಶನ ನೀಡುತ್ತಾನೆ. ಇಲ್ಲಿಂದ ಆರಂಭವಾಗಿ ಕುಂತಿಯು ಧೃತರಾಷ್ಟ್ರ ಮತ್ತು ಗಾಂಧಾರಿಯೊಡನೆ ವಾನಪ್ರಸ್ಥಾನಾಶ್ರಮಕ್ಕೆ ತೆರಳುವವರೆಗೂ ಈತನೇ ಇವಳಿಗೆ ಮಾರ್ಗದರ್ಶಿ. ಈ ನಂಬಿಕೆಯು ರಚಿತವಾದ ಈ ಕೃತಿಯು ಹೊಸ ಅನುಭವ ನೀಡುತ್ತದೆ. ಕುಂತಿಗೆ ಬಂದ ಎಲ್ಲಾ ಕಷ್ಟಗಳನ್ನೂ ಪರಿಹರಿಸಿ ಅವಳ ಬಾಳವನ್ನು ಆದಷ್ಟೂ ಸಹ್ಯಗೊಳಿಸಲು ಮುಂದಾಗುತ್ತಾನೆ.

ವೇದವ್ಯಾಸರು ಕುಂತಿಯನ್ನು ಪರಿವಾರ ಮತ್ತು ಸಮಾಜದ ಮೇಲೆ ಪರೋಕ್ಷ ಪ್ರಭಾವ ಬೀರುವ ಸ್ತ್ರೀಶಕ್ತಿಯಾಗಿ, ತಾಯಿಯಾಗಿ ಕಂಡರಿಸಿದ್ದಾರೆ.

ಕುಂತಿಯು ಮಗಳಾಗಿ, ತಂಗಿಯಾಗಿ, ಪತ್ನಿಯಾಗಿ, ಸೊಸೆಯಾಗಿ, ಸವತಿಯಾಗಿ ಬಾಳನ್ನು ಅನುಭವಿಸಿದ್ದಕ್ಕಿಂತಲೂ ತಾಯಿಯಾಗಿ ಅನುಭವಿಸುವುದು ತೀವ್ರತರವಾದ್ದು ಹಾಗೂ ದೀರ್ಘಕಾಲದ್ದು. ಹೆತ್ತ ಮೊದಲ ಮಗವುನ್ನು ತ್ಯಜಿಸಿದ ಕನ್ಯೆ ತಾಯಿ!. ಪತಿಯೇ ನಿಯೋಗಕ್ಕೆ ಸಮರ್ಥಿಸಿ ಮೂರು ಮಕ್ಕಳನ್ನು ಹೆತ್ತ ತಾಯಿ, ಮತ್ತೆರಡು ಮಕ್ಕಳ ಸಾಕುತಾಯಿ, ಕುರುಕುಲದ ರಾಜಪರಿವಾರಕ್ಕೆ ಸೇರಿದವಳಾಗಿ ಅಂದಿನ ರೂಢಿಯಂತೆ ಸಕಲರಿಗೂ ತಾಯಿ! ಕೌರವರು-ಪಾಂಡವರಿಂದ ಪಟ್ಟ ಪಾಡು-ಭವಣೆಗಳೇ ಈ ಕುಂತಿಯ ಬಾಳು!

ಕರ್ಣನನ್ನು ದೈಹಿಕವಾಗಿ ದೂರಮಾಡಿಕೊಂಡರೂ ಮನಸ್ಸಿನಿಂದ ತೆರೆಯಲಾರದೇ ಹೋಗುತ್ತಾಳೆ. ಅವನು ಸತ್ತಮೇಲೂ ಅವನ ಅಸ್ತಿತ್ವವಿರುವುದಾಗಿಯೇ ಮಾನಸಿಕವಾಗಿ ಅನುಭವಿಸುತ್ತಾಳೆ. ಆದರೆ ಧರ್ಮಜನನ್ನು ತಾನೇ ಹೆತ್ತು ಹೊತ್ತು ಬೆಳೆಸಿದರೂ ಮಾನಸಿಕವಾಗಿ ಹತ್ತಿರ ಮಾಡಿಕೊಳ್ಳುವಲ್ಲಿ ವಿಫಲಳಾಗುತ್ತಾಳೆ. ತನ್ನ ಕರ್ತವ್ಯ ಮುಗಿದೊಡನೇ ಧೃತರಾಷ್ಟ್ರ ಮತ್ತು ಗಾಂಧಾರಿಯೊಡನೆ ಕಾಡಿಗೆ ಹೊರಟುಬಿಡುತ್ತಾಳೆ. ಬಾಳಿನುದ್ದಕ್ಕೂ ನಡೆಸಿದ ಇವಳ ಮಾನಸಿಕ ಹೋರಾಟ ಬಹಳ ವೈವಿಧ್ಯಮಯವಾದುದು!

ಕುಂತಿಯ ಅಂತರಂಗದಲ್ಲಿ ಹುಟ್ಟಿದ ಗೊಂದಲಮಯವಾದ ಚಿಂತೆಗಳೆಷ್ಟೋ?! ನಡೆಸಿದ ವಿಮರ್ಶೆಗಳೆಷ್ಟೋ, ನಿರ್ಧರಿಸಿದ ತೀರ್ಮಾನಗಳೆಷ್ಟೋ.. ಇವುಗಳಿಗಾಗಿ ಕೈಗೊಂಡಂತಹ ಕಾರ್ಯಗಳು ಮತ್ತು ಅದರ ಪರಿಣಾಮಗಳು ಎಲ್ಲವೂ ಜಗತ್ತಿನಲ್ಲಿರುವ ಸ್ತ್ರೀಯರಿಗೆ ಬೋಧಪ್ರದವಾದವುಗಳು ಹಾಗೂ ಮಾನವೀಯವಾದವು.' ಎನ್ನುತ್ತಾರೆ.

**೧೨. ಮಹಾಭಾರತ ತಾತ್ಪರ್ಯ ನಿರ್ಣಯ :**

ಮಹಾಕವಿ ಪಂಪ, ರನ್ನ, ಕುಮಾರವ್ಯಾಸರಂತಹ ಕವಿಗಳು ಕನ್ನಡದಲ್ಲಿ 'ಮಹಾಭಾರತ'ವನ್ನು ರಚಿಸಿದವರಾದರೆ; 'ಮಹಾಭಾರತ'ಕ್ಕೆ ಬರೆದಂತಹ ಪ್ರಪ್ರಥಮ ವಿಮರ್ಶಾ ಕೃತಿಯೇ 'ಮಹಾಭಾರತ ತಾತ್ಪರ್ಯ ನಿರ್ಣಯ' ಗ್ರಂಥವಾಗಿದೆ. ಇದನ್ನು ರಚಿಸಿದವರು ಉಡುಪಿ ಜಿಲ್ಲೆ ಪಾಜಕ ಕ್ಷೇತ್ರ ನಿವಾಸಿಯಾದಂತಹ ಆನಂದತೀರ್ಥರೆನ್ನುವ ಮುನಿಗಳು ಮಧ್ವಾಚಾರ್ಯರೆಂಬ ಹೆಸರಿನಲ್ಲಿ ರಚಿಸಿದ್ದಾರೆ.

ವಾಸ್ತವವಾಗಿ, ವೈಷ್ಣವ ಧರ್ಮ ಪ್ರಮುಖವಾಗಿ ಎರಡು ನಿರ್ಧಿಷ್ಟ ಶಾಖೆಗಳಾಗಿ ವಿಭಜನೆ ಹೊಂದಿದ್ದು ರಾಮಾನುಜಾಚಾರ್ಯದ ನೇತೃತ್ವದಲ್ಲಿ ಶ್ರೀವೈಷ್ಣವ ಪಂಥ ಮತ್ತು ಮಧ್ವಾಚಾರ್ಯರ ನೇತೃತ್ವದ ದ್ವೈತ ಪಂಥಗಳಾದವು. ಹೀಗೆ ದ್ವೈತ ಪಂಥ ಪ್ರವರ್ತಕರಾದ ವೈಷ್ಣವ ಧರ್ಮವನ್ನು ಸಾರಿದ ಆಚಾರ್ಯ ಶ್ರೀಮಧ್ವರು ಮೂವತ್ತೆಂಟು ಕೃತಿಗಳ ಸೈದ್ಧಾಂತಿಕ ಸಾಹಿತ್ಯವನ್ನು ರಚಿಸಿದರು. ಇವುಗಳಲ್ಲೆಲ್ಲಾ ಅತ್ಯಂತ ಮುಕುಟಪ್ರಾಯವಾದದ್ದೇ "ಮಹಾಭಾರತ ತಾತ್ಪರ್ಯ ನಿರ್ಣಯ" ಗ್ರಂಥವಾಗಿದೆ. ಇದನ್ನು ಅಖಿಲ ಭಾರತ ಮಾಧ್ವ ಮಹಾಮಂಡಲ ಮತ್ತು ಆನಂದತೀರ್ಥ ಪ್ರತಿಷ್ಠಾನ, ಬೆಂಗಳೂರು, ಪ್ರೊ॥ ವ್ಯಾಸನಕೆರೆ ಪ್ರಭಂಜನಾಚಾರ್ಯರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟಿಸಿದೆ. ಈ ಗ್ರಂಥಕ್ಕೆ ಪೇಜಾವರ ಅಧೋಕ್ಷಜ ಮಠದ ಶ್ರೀಪಾದರಾದ ಶ್ರೀ ವಿಶ್ವೇಶತೀರ್ಥರು 'ಅನುಗ್ರಹ ಸಂದೇಶ'ವನ್ನು ಬರೆದಿದ್ದಾರೆ ಮತ್ತು ಕೃಷ್ಣ ಪಾಂಡವರ ಹಾಗೂ ಇತರರ ವ್ಯಕ್ತಿತ್ವಗಳ ಸುತ್ತ 'ಮಹಾಭಾರತ' ಕೇಂದ್ರಬಿಂದುವಾಗಿದೆ. ಪಾಂಡವರು ಬಹಳ ಆಸ್ತೀಕರೆಂದು ಹೆಸರಾಗಿದ್ದು ಕೃಷ್ಣನಲ್ಲಿ ಅವರು ಅಪಾರ ನಂಬಿಕೆಯನ್ನಿಟ್ಟಿದ್ದರು. ಮನ್ವಾದಿ : Virtues represented Yudhistira, Bhima etc.

* Yudhistira represents Dharma

* Bhimasena represents Bhakthi, Jnana, Prajna, Medha and etc ten virtues.

* Kaurava represents certain evil tendencies.

* ಅರ್ಜುನನು ಶ್ರವಣ, ಮನನ, ನಿಧಿಧ್ಯಾಸನ

* ನಕುಲ- ಸಹದೇವರು ಶೀಲ ಮತ್ತು ವಿನಯ.

* ದ್ರೌಪದಿ- ವೇದಗಳನ್ನು ಪ್ರತಿಪಾದಿಸುತ್ತಾಳೆ.

ಉಪರಿಚರ : Is that meaning which brings out Narayana as the meaning of each and every word of Mahabharata.

"ಮಹಾಭಾರತ ತಾತ್ಪರ್ಯ ನಿರ್ಣಯ" ಗ್ರಂಥವು ಬಹಳ ವಿಸ್ತಾರವಾದ ಗ್ರಂಥವಾಗಿದ್ದು ಒಟ್ಟು ನಾಲ್ಕು ಸಂಪುಟಗಳಲ್ಲಿವೆ. ಇದಕ್ಕೆ ಪ್ರಧಾನವಾಗಿ ವಾದಿರಾಜರು, ಆದ್ಯವರದರಾಜರು ಮತ್ತು ಶ್ರೀಜನಾರ್ದನ ಭಟ್ಟರು ಟಿಪ್ಪಣಿಗಳನ್ನು ಬರೆದಿದ್ದಾರೆ.

ಈ ಗ್ರಂಥದ ಆರಂಭದಲ್ಲಿ ಮುನ್ನುಡಿಯನ್ನು ಬರೆದ **ಶ್ರೀಪೇಜಾವರ ಮಠದ ಶ್ರೀಪಾದರಾದ ಶ್ರೀವಿಶ್ವೇಶ ತೀರ್ಥರು; "ಮಹಾಭಾರತವು ಕೇವಲ ಪಾಂಡವರ ಇತಿಹಾಸವಲ್ಲ. ಇದರಲ್ಲಿ ಇಡೀ ಮನುಕುಲದ ಇತಿಹಾಸವೇ ಅಡಗಿದೆ. ಮಾನವರ ಅಂತರಂಗ ಭಾವನೆಗಳ ತುಮುಲ, ತಿಕ್ಕಾಟಗಳ ಚಿತ್ರಣವನ್ನೂ ನಾವು ಕಾಣಬಹುದು."**[1] ಎಂದಿದ್ದಾರೆ.

ಆಚಾರ್ಯ ಶ್ರೀಮಧ್ವರು ಮಹಾಭಾರತದ ಇತಿಹಾಸವನ್ನು ನಿರೂಪಿಸುವಾಗ ಜೊತೆಗೆ ಶ್ರೀಕೃಷ್ಣನ ಕಥೆಯನ್ನೂ ಹೆಣೆಯುವುದರ ಜೊತೆಗೆ ಪಾಂಡವರ ಜೀವನದ ಘಟನೆಗಳನ್ನೂ ವಿವರಿಸಿದ್ದಾರೆ. "ಮಹಾಭಾರತ ತಾತ್ಪರ್ಯ ನಿರ್ಣಯ"ವನ್ನು ಬಿಟ್ಟರೆ ಇಂತಹ ಜೋಡಣೆಯನ್ನು ನಾವು ಬೇರೆ ಯಾವ ಗ್ರಂಥದಿಂದಲೂ ತಿಳಿಯಲು ಸಾಧ್ಯವಿಲ್ಲ. **"ಇತಿಹಾಸ ಪುರಾಣಗಳೆಂಬ ಅಗಾಧವೂ, ವಿಶಾಲವೂ ಆದ ಸಾಗರವನ್ನು ತಮ್ಮ ಮಹೋನ್ನತವಾದ ಬುದ್ಧಿಯ ಬೆಟ್ಟದಿಂದ ಮಥಿಸಿ ಪಡೆದ ಅಮೃತವೇ ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ."**[2] ತಮ್ಮ ಈ ಗ್ರಂಥದಲ್ಲಿ ಮಧ್ವರು ವಾಸ್ತವಾಂಶಗಳನ್ನು ವಿಶ್ಲೇಷಿಸಿ, ವಿಮರ್ಶಿಸಿದ್ದಾರೆ.

**ಮಹಾಭಾರತದ ಮಹಾಪುರುಷರ ಅನೇಕ ವರ್ಣನೆಗಳು ನಮಗೆ ವಿಚಿತ್ರವಾಗಿ ತೋರುತ್ತದೆ.**

**ಉದಾಹರಣೆಗೆ :**

೧) ಗಂಗಾಮಾತೆಯು ತನ್ನ ಹುಟ್ಟಿದ ೭ ಮಕ್ಕಳನ್ನೂ ನಿರ್ದಯವಾಗಿ ಗಂಗಾ ನದಿಗೆ ಎಸೆದು ಕೊಲ್ಲುವುದು ಅತ್ಯಂತ ಅಮಾನವೀಯ ಘಟನೆಯಾಗಿದೆ. ತಾಯಿಯು ತನ್ನ ಕರುಳಿನ ಕುಡಿಗಳನ್ನು ಈ ರೀತಿಯಾಗಿ ಕೊಲ್ಲುವುದು ಎಲ್ಲಿಯಾದರೂ ಇದೆಯೇ? ಪ್ರಾಣಿಗಳಲ್ಲೂ ಸಹ ಇಂತಹ ವರ್ತನೆಯನ್ನು ನಾವು ಕಾಣಲಾರೆವು.

೨) ದ್ರೌಪದಿಗೆ ಐದು ಮಂದಿ ಪತಿಗಳಿರುವ ಹಿನ್ನೆಲೆಯನ್ನು ವಿಶದೀಕರಿಸಿದ್ದಾರೆ. ಮಹಾಭಾರತದಿಂದಲೂ ನಮಗೆ ದೊರೆಯದ ಅನೇಕ ಮಾಹಿತಿಗಳ ಕಡೆಗೆ ಬೆಳಕು ಚೆಲ್ಲಿದ್ದಾರೆ.

೩) ಕ್ಷತ್ರಿಯರಾದ ಪಾಂಡವರು ಏಕಚಕ್ರಾನಗರದಲ್ಲಿ ಬ್ರಾಹ್ಮಣ ವೇಷದಲ್ಲಿರುವಾಗ ಆಹಾರಕ್ಕಾಗಿ ಭಿಕ್ಷಾಟನೆ ಹೇಗೆ ಮಾಡಿದರು? ಈ ಸಂದರ್ಭದಲ್ಲಿ ಭೀಮನ ವಿಶೇಷವಾದ ವ್ಯಕ್ತಿತ್ವ ಮತ್ತು ತತ್ವನಿಷ್ಠೆಯನ್ನು ತಮ್ಮ ಈ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಹಾಗೆಯೇ ಕೃಷ್ಣನ ವ್ಯಕ್ತಿತ್ವದ ಬಗೆಗೆ ಸ್ವಲ್ಪವೂ ತಪ್ಪು ಕಲ್ಪನೆಯಾಗದಂತೆ ಆತನ ವ್ಯಕ್ತಿತ್ವವನ್ನು ವರ್ಣಿಸಿದ್ದಾರೆ.

೪) ಕೌರವರಂತಹ ದುಷ್ಟರ ಸೈನ್ಯದೊಡನೆ ಹೇಗೆ ಜಾಣ್ಮೆಯಿಂದ ವ್ಯವಹರಿಸಬೇಕೆಂಬ ರಾಜನೀತಿಯನ್ನು ವಿವರಿಸಿರುವುದರ ಕುರಿತಾಗಿ ವಿಮರ್ಶಿಸಿದ್ದಾರೆ.

೫) ದುರ್ಯೋಧನನ ದುಷ್ಟತನದ ಮೂಲ ಯಾವುದು? ಅವನ ದುಷ್ಟ ಪ್ರವೃತ್ತಿಯ ಹಿಂದಿರುವ ಸಿದ್ಧಾಂತವೇನು? ಕೃಷ್ಣನು ಪಾಂಡವ ಪಕ್ಷ ಯಾಕೆ? ಎಂಬುದನ್ನು ನಿರೂಪಿಸಿದ್ದಾರೆ.

**ಕುತಂತ್ರ ರಾಜನೀತಿಯಲ್ಲಿ ಪರಿಣಿತನಾದ ಕಲಿಂಗನೆಂಬ ಅಸುರ ಪ್ರವೃತ್ತಿಯ ಬ್ರಾಹ್ಮಣನೊಬ್ಬನು ಗುರುವಾಗಿ ದುರ್ಯೋಧನನಿಗೆ ದೊರೆತಿದ್ದನು.** ಅವನು ಬಾಲ್ಯದಿಂದಲೇ ದುರ್ಯೋಧನನಿಗೆ ಸ್ವಾರ್ಥಪರವಾದ ಕುಟಿಲ, ಅಧಾರ್ಮಿಕ ರಾಜನೀತಿಯನ್ನು ಬೋಧಿಸುತ್ತಾನೆ. **ಸ್ವಾರ್ಥ ಸಾಧನೆಗಾಗಿ ಅನ್ಯಾಯ-ವಂಚನೆಗಳ ಮಾರ್ಗ ಹಿಡಿಯಲು ಸಂಕೋಚಪಡಬಾರದು. ಇದಕ್ಕೆ ನಾಸ್ತಿಕ್ಯ ನೀತಿಯೇ ತಳಹದಿಯಾಗಿದ್ದು ಯಾವ ನಿಯಮ-ನಿರ್ಬಂಧವೂ ಇಲ್ಲದ ಸಿದ್ಧಾಂತ. ಅದನ್ನೇ ದುರ್ಯೋಧನನು ತನ್ನ ಜೀವನದುದ್ದಕ್ಕೂ ಪಾಲಿಸಿಕೊಂಡು ಬಂದಿದ್ದಾನೆ.** ಇದನ್ನು ಕಂಡ ಮೇಲೆಯೇ ಕೃಷ್ಣನು ಲೋಕದ ಹಿತಕ್ಕಾಗಿ ಕುಟಿಲ ರಾಜನೀತಿಯಿಂದ ಸಮಾಜಕ್ಕೆ ಆಗಬಹುದಾದ ನೀತಿಯನ್ನು ಗಮನಿಸಿಯೇ ಕೃಷ್ಣನು ಕೌರವರ ವಿರುದ್ಧ ಮತ್ತು ಪಾಂಡವರ ಪಕ್ಷಪಾತಿಯಾಗಿ ವರ್ತಿಸಿದನು. ಆದ್ದರಿಂದ **ಕೃಷ್ಣನ ರಾಜನೀತಿಯಲ್ಲಿ ಯಾವ ಸ್ವಾರ್ಥವೂ ಇರದೆ; ಗುಂಪುಗಾರಿಕೆ ಇರದೆ ಕೇವಲ ತತ್ವನಿಷ್ಠೆ, ಧರ್ಮರಕ್ಷಣೆ ಉದ್ದೇಶ ಮಾತ್ರ ಹೊಂದಿದ್ದನು.** ಬಾಲ್ಯದ ಕುಸಂಸ್ಕಾರವು ಹೇಗೆ ಜೀವನವನ್ನು ಕೆಟ್ಟದಾಗಿ ರೂಪಿಸುತ್ತದೆ ಎನ್ನುವುದಕ್ಕೆ ದುರ್ಯೋಧನನೇ ಒಂದು ಬಹುದೊಡ್ಡ ಉತ್ತಮ ಉದಾಹರಣೆಯಾಗಿದ್ದಾನೆ.

೬) ದ್ರೌಪದಿ ಸ್ವಯಂವರದಲ್ಲಿ ದ್ರುಪದನ ಘೋಷಣೆಯಂತೆ ಕರ್ಣನು ಬಿಲ್ಲನ್ನು ಏರಿಸಿ ಪಂದ್ಯದಲ್ಲಿ ವಿಜಯಿಯಾದಾಗ ದ್ರೌಪದಿಯು ಸೂತಪುತ್ರನನ್ನು ತಾನು ವರಿಸಲಾರೆನೆಂದು ತನ್ನ ಉದ್ಧಟತನದಿಂದ ಹೇಳಿ ಕರ್ಣನನ್ನು ಅವಮಾನಿಸುವಾಗ **ಜಾತಿನೀತಿ** ಮುಖ್ಯವಾಗಿ ಎದ್ದು ನಿಲ್ಲುವ **ಈ ಪ್ರಸಂಗವನ್ನು ಆಚಾರ್ಯ ಶ್ರೀಮಧ್ವರು ಪ್ರಚಲಿತದಲ್ಲಿದ್ದಂತಹ ಮಹಾಭಾರತ ಪಾಠಗಳನ್ನೆಲ್ಲಾ ಸಂಗ್ರಹಿಸಿ ಅಧಿಕೃತಪಾಠವನ್ನು ಕಂಡು ಹಿಡಿದು ಅಲ್ಲಿಯ ವಾಸ್ತವ ಘಟನೆಗಳನ್ನು ವಿಶ್ಲೇಷಿಸಿದ್ದಾರೆ.**

೭) ಅಂದಿನ ಯುಗಧರ್ಮಕ್ಕನುಸಾರವಾಗಿ ಅಂದಿನ ಪ್ರಸ್ತುತ ಸಮಾಜದಲ್ಲಿದ್ದಂತಹ **ಸ್ತ್ರೀ ಸ್ಥಾನ-ಮಾನಕ್ಕೆ** ಸಂಬಂಧಿಸಿದಂತೆ **ಜೂಜಿನ ಸಭೆಯಲ್ಲಿ ದ್ರೌಪದಿಯ ಮಾರ್ಮಿಕ ಪ್ರಶ್ನೆಗೆ ಭೀಷ್ಮ, ದ್ರೋಣ ಮೊದಲಾದವರು ಏನನ್ನೂ ಉತ್ತರಿಸಿದೆ ಮೌನವಾಗಿದ್ದರು.** ಆ **ಪ್ರಶ್ನೆಯ ಹಿಂದಿರುವ ಮೌಲ್ಯಗಳನ್ನು ಆಚಾರ್ಯ ಶ್ರೀಮಧ್ವರು ತಾತ್ಪರ್ಯ ನಿರ್ಣಯದಲ್ಲಿ ಸ್ಪಷ್ಟಪಡಿಸುತ್ತಾರೆ.**

ಜೂಜಿನಲ್ಲಿ ಧರ್ಮರಾಯನು ದ್ರೌಪದಿಯನ್ನು ಪಣವಿಟ್ಟು ಸೋತಿರುವುದರಿಂದ ಅವಳು ತನ್ನ ದಾಸಿ, ಅವಳ ಮೇಲೆ ಅಧಿಕಾರವನ್ನು ಚಲಾಯಿಸಬಹುದೆಂದು ದ್ರೌಪದಿಯನ್ನು ಅರಮನೆಗೆ ತರಲು ದುರ್ಯೋಧನನು ಪ್ರವೃತ್ತಿಸಿದಾಗ, **ಧರ್ಮ ಹಾಗೂ ಕಾನೂನು** ಈ ಎರಡೂ ದೃಷ್ಟಿಯಿಂದ ದ್ರೌಪದಿಯು ಇದನ್ನು ಎದುರಿಸುತ್ತಾಳೆ.

ಅಕ್ರಮದಿಂದ ಪಡೆದ ಯಾವ ವಸ್ತುವೂ ಅವನ ಸೊತ್ತಾಗಲಾರದು. ಕಳ್ಳತನ ಮಾಡಿ ಅಪಹರಿಸಿದ ವಸ್ತುಗಳು ಕಳ್ಳನ ಸೊತ್ತಾಗುತ್ತವೆಯೇ? ಅದರಂತೆ ಜೂಜು ಧರ್ಮವಿರುದ್ಧ ಹಾಗೂ ಕಾನೂನು ಬಾಹಿರ. ಆದ್ದರಿಂದ ಜೂಜಿನಲ್ಲಿ ತಾನಾಗಲಿ ಧರ್ಮರಾಜನಾಗಲಿ ಸೋತಿದ್ದರೂ ಇಬ್ಬರೂ ವಾಸ್ತವವಾಗಿ ದಾಸರಾಗಲಾರರು. ಮಾತ್ರವಲ್ಲದೆ ಮಹಿಳೆಯು ಗುಲಾಮಳಾಗಿ ಇರುವಾಗಲೂ ಪತಿಯ ಜೊತೆಗೇ ದುಡಿಯಬೇಕಲ್ಲದೆ, ಪತಿಯನ್ನು ಬಿಟ್ಟು ಪ್ರತ್ಯೇಕವಾಗಿ ದಾಸಿಯಾಗಿರಲು ಸಾಧ್ಯವಿಲ್ಲ. ಆದ್ದರಿಂದ ಧರ್ಮರಾಜನಿಂದ ಬೇರ್ಪಡಿಸಿ ತನ್ನ ಮೇಲೆ ಗುಲಾಮಗಿರಿಯನ್ನು ಹೇರಿರುವುದು ಸರ್ವಥಾ ತಪ್ಪು ಎನ್ನುವ ದ್ರೌಪದಿಯ ಪ್ರಶ್ನೆಯಲ್ಲಿ ಅಡಕವಾಗಿರುವ ಧರ್ಮ ಹಾಗೂ ಕಾನೂನಿನ ಅಂಶಗಳಿಗೆ ಉತ್ತರಿಸಲಾಗದೆ ಎಲ್ಲರೂ ತಡವರಿಸುತ್ತಾರೆ.

**೮) ಪಂಚಮಹಾಕನ್ಯೆಯರಲ್ಲಿ ಪ್ರಮುಖಳಾದ ದ್ರೌಪದಿಯು ಭಾರತೀಯ ಮಹಿಳೆಯರಲ್ಲಿ ಆದರ್ಶಳೆನಿಸಿದ್ದಾಳೆ.**

ಜೂಜಿನ ಪ್ರಸಂಗದಲ್ಲಿ ದುರ್ಯೋಧನ, ದುಶ್ಶಾಸನರ ಅತಿರೇಕದ, ಅವ್ಯವಹಾರದ ನಂತರ ಎಚ್ಚರಗೊಂಡ ಧೃತರಾಷ್ಟ್ರನು ದ್ರೌಪದಿಗೆ ಬೇಕಾದ ವರವನ್ನು ಕೇಳಲು ಒತ್ತಾಯಿಸಿದನು. ಆಗ ಆಕೆಯು **ಜೂಜಿನಲ್ಲಿ ಕಳೆದುಕೊಂಡ ರಾಜ್ಯವನ್ನು, ಸಂಪತ್ತುಗಳನ್ನು ಪಡೆಯುತ್ತಾಳೆ. ಅನ್ಯರಾರನ್ನೂ ಬೇಡದ ದ್ರೌಪದಿಯು ಧೃತರಾಷ್ಟ್ರನಿಂದ ರಾಜ್ಯ-ಸಂಪತ್ತುಗಳನ್ನು ಬೇಡಿ ಪಡೆಯಬಹುದೇ?** ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಆಚಾರ್ಯ ಶ್ರೀಮಧ್ವರು ತಮ್ಮ ಕೃತಿಯಲ್ಲಿ; "ಜೂಜಿನಿಂದ ಯಾವುದೇ ಸೊತ್ತನ್ನು ಪಡೆಯುವುದು ಅಕ್ರಮವಾಗಿರುವಾಗ ದುರ್ಯೋಧನನು

ಅನ್ಯಾಯಮಾರ್ಗದಿಂದ ಅಕ್ರಮವಾಗಿ ಅಪಹರಿಸಿದ ರಾಜ್ಯ-ಸಂಪತ್ತು ಅವನ ಸೊತ್ತಾಗಲು ಸಾಧ್ಯವೇ? ಕಳ್ಳನು ಅಪಹರಿಸಿದ ರಾಜ್ಯ-ಸಂಪತ್ತು ಅವನ ಸೊತ್ತಾಗಲು ಸಾಧ್ಯವೇ? ಕಳ್ಳನು ಅಪಹರಿಸಿದ ವಸ್ತುಗಳು ಅವನ ಸೊತ್ತಲ್ಲ. ಅದನ್ನು ನಾವು ತಿರುಗಿ ಪಡೆದರೆ ಅದು ಭಿಕ್ಷೆಯಾಗಲಾರದು. ಅದರಂತೆ ಅಕ್ರಮವಾಗಿ ಸ್ವಾಧೀನಗೊಳಿಸಿದ ರಾಜ್ಯದ ಮೇಲೆ ಪಾಂಡವರಿಗೆಯೇ ವಾಸ್ತವವಾದ ಹಕ್ಕು ಇರುವುದಾಗಿದೆ. ಇದು ಅವರ ಹಕ್ಕಿನ ಪ್ರತಿಪಾದನೆ ಎನಿಸುತ್ತದೆ. ತಮ್ಮದೇ ಆದ ರಾಜ್ಯವನ್ನು ಪಡೆಯುತ್ತಾರೆ ಎಂದು ವಿಶದೀಕರಿಸಿದ್ದಾರೆ.

೯) ದುರ್ಯೋಧನನು ಇಷ್ಟೆಲ್ಲ ಅನ್ಯಾಯ ಅಕ್ರಮಗಳನ್ನು ಮಾಡಿದ್ದರೂ ಪ್ರತಿಭಟಿಸುವುದು ಬೇಡ ಎಲ್ಲವನ್ನೂ ಕ್ಷಮಿಸಿಬಿಡೋಣ. **ಕ್ಷಮೆಯೇ ಪರಮ ಧರ್ಮ ಎಂಬು ಧರ್ಮರಾಜನ ಅಭಿಮತವಾಗಿರುತ್ತದೆ.** ಆದರೆ ಭೀಮ ಮತ್ತು ದ್ರೌಪದಿ ಇದನ್ನು ತಿರಸ್ಕರಿಸುತ್ತಾರೆ. "ಕ್ಷಮೆಯು ಉತ್ತಮವಾದ ಧರ್ಮವೆಂಬುದು ನಿಜ. ಆದರೆ ಅದನ್ನು ಯೋಗ್ಯ ರೀತಿಯಿಂದ ಬಳಸಬೇಕು. **ಕಳ್ಳರು, ಅತ್ಯಾಚಾರಿಗಳು ಮತ್ತು ಕೊಲೆಗಾರರನ್ನೂ ಕ್ಷಮಿಸುತ್ತ ಹೋದರೆ ರಾಷ್ಟ್ರದಲ್ಲಿ ಅರಾಜಕತೆ, ಅಶಾಂತಿಗಳು ಸಂಭವಿಸುವುದಿಲ್ಲವೇ? ಕ್ಷಮೆಯೇ ಧರ್ಮವಾದರೆ ಸರ್ಕಾರದ ಕೆಲಸವೇನು? ಲೂಟಿ, ಗೂಂಡಾಗಿರಿಗಳು ನಡೆದರೂ ನಾವು ತೆಪ್ಪಗಿರಬೇಕೇ? ಆದ್ದರಿಂದ ಕ್ಷಮೆಯ ಜೊತೆಗೆ ಅನ್ಯಾಯದ ವಿರುದ್ಧ ಆಕ್ರೋಶ, ಪ್ರತಿಭಟನೆಗಳೂ ಅಷ್ಟೇ ಅವಶ್ಯಕ."- ಎಂದು ಹೀಗೆ ವಾದಿಸುತ್ತಾರೆ.**

ಪಾಂಡವರು ಅರಣ್ಯವಾಸದಲ್ಲಿದ್ದಾಗ ಮಹಾಭಾರತದ ಸಂದೇಶದ ಸಾರವೇ ಇಲ್ಲಿ ಅಡಕವಾಗಿದೆ. ಧರ್ಮರಾಜ, ದ್ರೌಪದಿ, ಭೀಮಸೇನರ ಸಂವಾದವು ಮಹಾಭಾರತದಲ್ಲೇ ಅತ್ಯಂತ ಉದ್ಬೋಧಕವಾಗಿ ಚಿತ್ರಿತಗೊಂಡಿರುವುದನ್ನು ಸಂಕ್ಷಿಪ್ತವಾಗಿ ಆಚಾರ್ಯರು ವಿಮರ್ಶಿಸಿದ್ದಾರೆ.

ನಂತರ ೪ನೇ ಸಂಪುಟದಲ್ಲಿ ವಿರಾಟಪರ್ವದಿಂದ ಕೊನೆಯವರೆಗಿನ ಮಹಾಭಾರತದ ನೈಜ ಕಥೆಯ ನಿರೂಪಣೆ ಮಾಡಿದ್ದಾರೆ. ಕುರುಕ್ಷೇತ್ರದಲ್ಲಿ ನಡೆದ ಯುದ್ಧದ ಪೂರ್ಣ ಚಿತ್ರಣವನ್ನು ಮಹಾಭಾರತವು ನಾಲ್ಕೈದು ಪರ್ವಗಳಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾರೆ.

**ಅಡಿಟಿಪ್ಪಣಿಗಳು**

೧) ನ. ಸುಬ್ರಹ್ಮಣ್ಯಂ - ಮಹಾಭಾರತ ಸಮೀಕ್ಷೆ (೧೯೭೩) ಪು. ೫೬
೨) ತ.ಸು.ಶಾಮರಾಯರು -ಸಂಪಾದಕರ ಬಿನ್ನಹ, ಪು. ೬೫.
೩) --- ಅದೇ --- ಪು. ೩೯.
೪) ನ. ಸುಬ್ರಹ್ಮಣ್ಯಂ - ಮ.ಭಾ.ಸ. ಪು. ೭೮೧
೫) ಎಸ್.ಎಸ್. ತಾಡಪತ್ರೀಕರ್ "The Krishna Problem" ಸುದೀರ್ಘ ಲೇಖನ, ಪು-೧.
೬) ಪ್ರಧಾನ ಸಂಪಾದಕರು, ಡಾ॥ ಕೆ.ವಿ. ಪುಟ್ಟಪ್ಪ, ಪಂಪಭಾರತ ಎಂಬ ವಿಕ್ರಮಾರ್ಜುನ ವಿಜಯ, ಮೈಸೂರು ವಿ.ವಿ., ಪ-೩-೭೪, ಪು. ೪೦೪,
೭) ॥ ಕಥೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾ
ರತವನ ಪೂರ್ವ ಮಾಗೆ ಸಲೆ ಪೇಳ್ದಕವೀಶ್ವರರಿಲ್ಲ. ವರ್ಣಕಂ
ಕತೆಯೊಳಡಂಬಡಂ ಪಡೆಯ ಪೇಳ್ವೊಡೆ ಪಂಪನೆ ಪೇಳ್ಗುಂ ॥
-(ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ಮೈಸೂರು ವಿ.ವಿ. (೧೯೭೩), ಆಶ್ವಾಶ -೧, ಪು.೨.)

~~~***~~~
~~~

## ಅಧ್ಯಾಯ-೩

## ತಳಸಮುದಾಯ ಮತ್ತು ಅಲಕ್ಷಿತರ ಚಿಂತನೆಗಳೊಂದಿಗೆ 'ಮಹಾಭಾರತ'ದ ಸ್ಥೂಲ ಪರಿಚಯ

'ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು' ವಿಷಯಕ್ಕೆ ಸಂಬಂಧಪಟ್ಟಂತೆ ಈ ಅಧ್ಯಯನದ ಮೂಲಕ ನಡೆಸಲಾದ ವಿಶ್ಲೇಷಣೆ–ವ್ಯಾಖ್ಯಾನಗಳ ಶೋಧವೆಲ್ಲ ಪ್ರಮಾಣಬದ್ಧ ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡುವುದರಿಂದ 'ಮಹಾಭಾರತ'ದಲ್ಲಿ ಬರುವ ನನ್ನ ಈ ಅಧ್ಯಯನಕ್ಕೆ ಸೀಮಿತವಾದ ಪರ್ವಗಳಲ್ಲಿ ಬರುವ 'ತಳಸಮುದಾಯ ಮತ್ತು ಅಲಕ್ಷಿತ'ಕ್ಕೆ ಒಳಗಾದ ಪ್ರಮುಖ ಪಾತ್ರಗಳಲ್ಲಿ ಸ್ತ್ರೀಪಾತ್ರಗಳೇ ಹೆಚ್ಚಾಗಿ ಕಂಡುಬರುತ್ತದೆ. ಮತ್ತು ಈ ಸ್ತ್ರೀಪಾತ್ರಗಳೆಲ್ಲಾ ಪುರುಷರ ಲೈಂಗಿಕ ಶೋಷಣೆಗೆ ಕಾಮೋಪಭೋಗ ವಸ್ತುವಾಗಿ ದೌರ್ಜನ್ಯಕ್ಕೆ ಒಳಗಾದ ಪಾತ್ರಗಳೇ ಆಗಿವೆ. ಇವರೆಲ್ಲಾ ದೇವವೇಶ್ಯೆಯರೆನಿಸಿದ ಅಪ್ಸರೆಯರು, ಬೆಸ್ತ ಕನ್ಯೆಯರು, ರಾಜಕುಮಾರಿಯರು, ಬ್ರಾಹ್ಮಣ ಪತ್ನಿಯರು, ಗುಡ್ಡಗಾಡು ಸ್ತ್ರೀಯರು ಮೊದಲಾದವರಾಗಿದ್ದಾರೆ. ಮತ್ತೊಂದು ಪುರುಷ ಪಾತ್ರವೆಂದರೆ; ಸೂತಪುತ್ರನಾದ ಕರ್ಣ. ವಿವಿಧ ಕವಿಗಳು ಈ ಪಾತ್ರವನ್ನು ವಿವಿಧವಾಗಿ ತಮ್ಮ ಕೃತಿಗಳಲ್ಲಿ ಬಣ್ಣಿಸಿರುವುದನ್ನು ನಾವು ಕಾಣುತ್ತೇವೆ.

'ಸ್ತ್ರೀ' ವಿಷಯಕ್ಕೆ ಬಂದಾಗ ವರ್ಣ, ಜಾತಿ–ಭೇದಗಳ ವ್ಯತ್ಯಾಸ ಸಂತಾನಕ್ಕೆ ಅಡ್ಡಿಯಾದಂತೆ ಕಾಣುವುದಿಲ್ಲ. 'ಮದನನ ಪುಷ್ಪಬಾಣದ ಪ್ರಭಾವಕ್ಕೆ ಒಳಗಾದ ಯಾವ ಪುರುಷನಾದರೂ ಸ್ತ್ರೀಯ ಅಧೀನಕ್ಕೆ ಒಳಗಾಗಲೇಬೇಕು. ಮನೋನಿಗ್ರಹ ಪರೀಕ್ಷೆಯಲ್ಲಿ ಸೋಲಲೇಬೇಕು' ಎನ್ನುವುದಾದರೆ ಇದಕ್ಕೆ ಕಾರಣ; **'ಸ್ತ್ರೀ ಎಂಬುವವಳೇ ಪ್ರಪಂಚದ ಉತ್ಪತ್ತಿಗೆ ಕಾರಣಳು.'** 'ಸ್ತ್ರೀಯು ಮಾನವನ ಜನ್ಮಕ್ಷೇತ್ರ, ಜನ್ಮಭೂಮಿ' ಪವಿತ್ರವಾದುದೆನ್ನುವುದಾದರೆ, ಜನ್ಮಕ್ಷೇತ್ರವೂ ಪವಿತ್ರವಾದುದಾಗಿರಲೇಬೇಕು. ಆದ್ದರಿಂದಲೇ ಸ್ತ್ರೀಯರು ತಮ್ಮ ಪತಿಗಳಿಗೆ ಸನಾತನವಾದ ಪುಣ್ಯಕ್ಷೇತ್ರವೂ ಆಗಿದ್ದಾರೆ. **"ಋಷಿ–ಮಹರ್ಷಿಗಳು ಮಹಾತಪಸ್ವಿಗಳೂ ಆಗಿರಬಹುದು. ಅಘಟಿತ ಘಟನಾ ಸಾಮರ್ಥ್ಯವುಳ್ಳವರಾಗಿಯೂ ಇರಬಹುದು. ಅವರಾದರೂ ಸ್ತ್ರೀಯರಿಲ್ಲದೇ ಪ್ರಜೋತ್ಪತ್ತಿ ಮಾಡಲಾರರು. ಎಂತಹ ಶಕ್ತಿಯಿಂದಲೂ ಅವರಿಗೆ ಆ ಶಕ್ತಿ ಪ್ರಾಪ್ತವಾಗುವುದಿಲ್ಲ. ಮೇಲಾಗಿ ಎಲ್ಲಾ ಋಷಿಗಳೂ ಮಹರ್ಷಿಗಳೂ ಸ್ತ್ರೀಯರಿಂದಲೇ ಜನ್ಮತಾಳಿದಂತಹವರಾಗಿದ್ದಾರೆ."**[1] ಎಂದು 'ಮಹಾಭಾರತ'ದಲ್ಲೇ ಹೇಳಿದೆ. ಈ ಸೂತ್ರವಾಕ್ಯದಿಂದ ಮಹಾಭಾರತದಲ್ಲಿ ಸ್ತ್ರೀ ಸಂಪರ್ಕವಿಲ್ಲದೇ ದೊನ್ನೆ, ನೀರು, ಮೀನು, ಅರಣಿ ಇತ್ಯಾದಿಗಳ ಮೂಲಕ ಬಿದ್ದಂತಹ ಋಷಿಗಳ ವೀರ್ಯಾಣು ಒಂದರಿಂದಲೇ ಶಿಶು ಜನನವಾಗುವುದರಿಂದ ಅಸಂಬದ್ಧವೆಂದು ದೃಢವಾಗುತ್ತದೆ. ವೈಜ್ಞಾನಿಕತೆಯನ್ನು ಮರೆಮಾಚಿ, ಋಷಿವಾಕ್ಯವೇ ವೇದವಾಕ್ಯವೆಂದು ನಂಬಿಸಲು ಪುರಾಣಿಕರು ಸೃಷ್ಟಿಸಿರುವ ಅಂಡಾಣುವಿನ ಸಂಪರ್ಕವಿಲ್ಲದ ಸಂತಾನಪ್ರಾಪ್ತಿಯ ಪ್ರಕರಣಗಳು ಕೇವಲ ಪುರಾಣ ಕಥೆಯಾಗಿದೆ.

'ಮಹಾಭಾರತ' ಕಾಲದ ಸಂಸ್ಕೃತಿಗೆ ಇಂದಿನ ಕಾಲದ ನಾವು ಉತ್ತರಾಧಿಕಾರಿಗಳಾಗಿರುವುದು ಪರಂಪರೆಯ ಕಾರಣಗಳಿಗೆ ಮಾತ್ರ, ಇಂದಿನ ಸಂಪ್ರದಾಯಗಳಿಗೂ ಅಂದಿನ ಸಂಪ್ರದಾಯಗಳಿಗೂ ತುಂಬಾ ವ್ಯತ್ಯಾಸವುಂಟು. ಅಂದಿನ ಜನ ದೇವರು–ಧರ್ಮ ಮುಂತಾದ ಅಮೂರ್ತ ಭಾವನೆಗಳಿಗೂ, ಮೂಢನಂಬಿಕೆಗಳಿಗೂ, ಪವಾಡಗಳಿಗೂ ಮಾರು ಹೋಗುತ್ತಿದ್ದರು. ವಿಶೇಷವಾಗಿ ಋಷಿಗಳನ್ನು ದೇವಾಂಶ ಸಂಭೂತರೆಂದೂ, ಋಷಿವಾಕ್ಯಗಳೇ ದೇವವಾಣಿಯೆಂದೂ ಪರಿಭಾವಿಸುತ್ತಿದ್ದರು. "ಪರಮಾತ್ಮನ ಸಂದೇಶವನ್ನು ಬಿತ್ತರಿಸುವವರೇ ಋಷಿಗಳು ಎಂಬ ಬಲವಾದ ನಂಬಿಕೆ, ಅಚಲ ವಿಶ್ವಾಸವುಳ್ಳವರಾಗಿದ್ದರು. ಆದರೆ ಋಷಿಗಳೂ ಕೂಡಾ ಮೂಲತಃ ಮನುಷ್ಯರೇ! ಆದರೆ ಅವರು ಸ್ವಪ್ರಯತ್ನದಿಂದ ಮಾತ್ರ ಪೂರ್ಣ ಮಾನವತ್ವದತ್ತ ವಿಕಸಿಸಿರುವಂತಹವರು ಅಷ್ಟೇ ಎಂಬ ವಸ್ತುಸ್ಥಿತಿಯನ್ನು ಅಂದಿನ ಜನ ತಿಳಿದಿರಲಿಲ್ಲ. ಮಾನವೀಯತೆಯ ಅತಿರೇಕವಾದಾಗ ವ್ಯಕ್ತಿಯ ಅಸ್ತಿತ್ವ ಮತ್ತು ಅನನ್ಯತೆ ನಾಶವಾಗುತ್ತದೆ. ನೈತಿಕತೆ ಔಚಿತ್ಯದ ಸರಹದ್ದು ಮೀರಿದಾಗ ವ್ಯಕ್ತಿ ಶಾಸ್ತ್ರಾಂಧನಾಗಿ ವರ್ತಮಾನ

ಜೀವನ ಮುಖಿಯಾಗುತ್ತಾನೆ.[2] ಎನ್ನುವ ವೈಜ್ಞಾನಿಕ ಮನೋಧರ್ಮದ ವಿಶ್ಲೇಷಣೆ ಅಂದಿನ ಋಷಿಗಳ ದೃಷ್ಟಾಂತಗಳನ್ನು ಅನಾವರಣಗೊಳಿಸುತ್ತದೆ.

**೮. ತಳಸಮುದಾಯ ಮತ್ತು ಅಲಕ್ಷಿತರ ಪಾತ್ರಗಳ ಸೃಷ್ಟಿಗೆ ಪ್ರೇರಣೆ, ಪ್ರಭಾವಗಳು ಹಾಗೂ ಅದರ ಹುಟ್ಟು ಮತ್ತು ಬೆಳವಣಿಗೆ :**

"ದಾಸ", "ದಸ್ಯು" ಶಬ್ದಗಳು "ದಸ್ಯತಿ" ("ದಸ್") ಧಾತುವಿನಿಂದ ನಿಷ್ಪನ್ನವಾಗಿದೆ. ಇದು 'ಶೋಷಿಸಲ್ಪಡುವನು, ನಾಶಗೊಳಿಸಲ್ಪಡುವವನು' ಮೊದಲಾದ ಅರ್ಥಗಳನ್ನು ಹೊಂದಿದೆ.

'ದಾಸ' ಶಬ್ದವನ್ನು ಅಸುರರನ್ನು ಮಾತ್ರವಲ್ಲದೇ 'ಆರ್ಯ' ಜನಾಂಗದೊಡನೆ ಪದೇ ಪದೆ ಯುದ್ಧ ಮಾಡುತ್ತಿದ್ದ ಈ ದೇಶದ ಪೂರ್ವ ನಿವಾಸಿಗಳಾದ ಮಾನವ ಶತ್ರುಗಳನ್ನು ಸೂಚಿಸುವುದಕ್ಕೂ ಉಪಯೋಗಿಸಲಾಗಿದೆ. ಈ ದಾಸರು ಕಪ್ಪು ಜನರಾಗಿದ್ದು ಅಲ್ಲಲ್ಲಿ ಕೋಟೆಗಳನ್ನು ಕಟ್ಟಿಕೊಂಡು ಗುಂಪಾಗಿ ವಾಸಿಸುತ್ತಿದ್ದರು. ಇವರು ಆರ್ಯದೇವತೆಗಳನ್ನು ಪೂಜಿಸುತ್ತಿರಲಿಲ್ಲ. ಯಜ್ಞ-ಯಾಗಾದಿಗಳನ್ನೂ ಮಾಡುತ್ತಿರಲಿಲ್ಲ. ಆರ್ಯರು ಈ ಕಪ್ಪು ಜನರನ್ನು ತಮ್ಮ ಗುಲಾಮರನ್ನಾಗಿ ಮಾಡಿಕೊಂಡಿದ್ದರು. 'ದಾಸ' ಶಬ್ದಕ್ಕೆ ಗುಲಾಮ, ಸೇವಕ ಎಂಬ ಅರ್ಥಗಳು ರೂಢಿಗೆ ಬಂದಿತು. That ದಸ್ಯು and 'Dasa', both as aborigines independent of Aryan control as subjugated slaves; it is resonable to reckon the 'Shudra' (ಶೂದ್ರ) of the later texts as belonging to the aborigines who had been realised to subjection by Aryans strictly speaking, the defeated."[3] ಮ್ಯಾಕ್‌ಡೊನೆಲ್ಡ್ ಮತ್ತು ಕೀಟ್ ಅಭಿಪ್ರಾಯಪಡುತ್ತಾರೆ.

ಈ ದಾಸ ಜನರ ಸ್ತ್ರೀಯರಿಗೆ "ದಾಸಿ" ಎಂದು ಹೆಸರಿತ್ತು. ಇವರ ಪತಿಗಳು ಯುದ್ಧದಲ್ಲಿ ಮೃತರಾದರೆ ಆರ್ಯ ಜನರ ಸೇವಕರಾಗಿ ಕೆಲಸ ಮಾಡುತ್ತಿದ್ದರು. ಆರ್ಯ ಜನರು ಇವರ ಸಂಗವನ್ನೂ ಮಾಡುತ್ತಿದ್ದರು. ಆದರೆ ಇವರಲ್ಲಿ ಜನಿಸಿದ ಪುತ್ರರಿಗೆ ಆರ್ಯರೊಡನೆ ಸವ್ಯವಹಾರವಿರುತ್ತಿರಲಿಲ್ಲ. ಅಂದರೆ ದಾಸಿಯ ಪುತ್ರರು ಋಷಿಗಳೊಡನೆ ವ್ಯವಹಾರಕ್ಕೆ ಯೋಗ್ಯರಾಗುತ್ತಿರಲಿಲ್ಲ. ನಿರ್ಲಕ್ಷ್ಯಕ್ಕೆ ಒಳಗಾಗುತ್ತಿದ್ದರು.

ಈ ದಾಸ ಜನರಲ್ಲಿ, ಧುನಿ, ವಪ್ರುವರ್ಚಿನ್, ಶುಷ್ಣ, ಶಂಬಕ ಮೊದಲಾದ ಮುಖಂಡರೂ, ಕಿರಾತ, ಕೀಟ, ಚಂಡಾಲ, ಪರ್ಣಕ, ಶಿಮ್ಯೂ ಎಂಬ ಪಂಗಡಗಳು ಇದ್ದುವೆಂದು ಋಗ್ವೇದದಿಂದ ತಿಳಿದು ಬರುತ್ತದೆ.

ಋಗ್ವೇದ ಕಾಲದಲ್ಲಿಯೇ 'ಗುಲಾಮಗಿರಿ' ಎನ್ನುವಂತಹ ಅನಿಷ್ಟ ಪಿಡುಗು ಅಸ್ತಿತ್ವದಲ್ಲಿದ್ದುದಕ್ಕೆ ನಮಗೆ ಅನೇಕ ಉಲ್ಲೇಖಗಳು ದೊರಕುತ್ತವೆ. ಇದು ಆಸ್ತಿ ಹಾಗೂ ಸಾಮಾಜಿಕ ಅಸಮಾನತೆಯ ಬೆಳವಣಿಗೆಗೆ ಸ್ಪಷ್ಟ ಸೂಚಕವಾಗಿದ್ದಿತು. ಆರಂಭದಲ್ಲಿ ಯುದ್ಧಬಂಧಿಗಳು ಗುಲಾಮ (ದಾಸ)ರಾಗುತ್ತಿದ್ದರು. ('ದಾಸ' ಎಂಬ ಪದವನ್ನು 'ದಸ್ಯು' ಎಂಬ ಶಬ್ದದಿಂದ ತೆಗೆದುಕೊಳ್ಳಲಾಗಿದ್ದರೂ) ಆನಂತರ ಬುಡಕಟ್ಟಿನ ಕೆಲವು ಸದಸ್ಯರೂ ತಮ್ಮ ಬುಡಕಟ್ಟಿನೊಳಗೇ ಗುಲಾಮಗಿರಿಗೆ ಸಮನಾದ ಪರಾಧೀನತೆಗೆ ಇಳಿದುದನ್ನು ಕಾಣಬರುತ್ತದೆ. ಈ 'ದಾಸ' ಎಂಬ ಪದವನ್ನು ಆರ್ಯರಿಂದ ಭಿನ್ನರಾದ ಕುಲಕ್ಕೆ ಸೇರಿದ ಬುಡಕಟ್ಟಿಗೆ ಸೇರಿದ ಜನರನ್ನು ಸೂಚಿಸಲು ಬಳಸಲಾಗುತ್ತಿತ್ತು. ( ಕೆ. ಅಂತೋನವ. ಜಿ. ಬೊಂಗಾರ್ಡ್‌ಲೆವಿನ್,"ಭಾರತದ ಇತಿಹಾಸ" ಪು. ೪೮)

'ಆರ್ಯ'ರು ಈ ದೇಶವನ್ನು ಕ್ರಮಕ್ರಮವಾಗಿ ಆಕ್ರಮಿಸುತ್ತಿರುವಾಗ ಆರ್ಯರಿಗೂ ಈ ದೇಶದ ನಿಷಾದರು, ಚಂಡಾಲರು, ಅಸ್ಪೃಶ್ಯರು ಇತ್ಯಾದಿ ಪೂರ್ವದಲ್ಲಿದ್ದಂತಹ ಮೂಲನಿವಾಸಿಗಳಿಗೂ ಯಾವಾಗಲೂ ಯುದ್ಧವು ನಡೆಯುತ್ತಲೇ ಇರುತ್ತಿತ್ತು. ವ್ಯವಸಾಯದಲ್ಲಿ ಇವರಿಗೆ ಹೆಚ್ಚಿನ ಆಸಕ್ತಿ ಇರಲಿಲ್ಲ. ಮೃಗಗಳ ಬೇಟೆಯೇ ಇವರ ಮುಖ್ಯ ಕಸುಬು, ಆಹಾರ ಮತ್ತು ಜೀವನಾಧಾರವಾಗಿತ್ತು. ಇವರನ್ನು ಆರ್ಯರು ತಮ್ಮೊಡನೆ ಸೇರಿಸಿಕೊಳ್ಳುತ್ತಿರಲಿಲ್ಲ. ಪ್ರತಿಗ್ರಾಮದಲ್ಲಿಯೂ ಇವರು ಊರಿನಿಂದಾಚೆ ಪ್ರತ್ಯೇಕವಾಗಿಯೇ ವಾಸಮಾಡಬೇಕಾಗಿತ್ತು ಎಂದು **ಋಗ್ವೇದ ಸಂಹಿತೆ ಭಾ-೧, ಪು. ೯೨೮ರಲ್ಲಿ ನಮಗೆ ಉಲ್ಲೇಖವಿರುವುದು ತಿಳಿಯುತ್ತದೆ.** ಈ ಪದ್ಧತಿಯೇ ಆಧುನಿಕ ಕಾಲದ ಊರ ಹೊರಗಿನ ಹರಿಜನಕೇರಿಗಳಲ್ಲಿ ಇಂದಿಗೂ ವಾಸಿಸುತ್ತಿರುವ ಚಿತ್ರಣಗಳಿಗೊಂದು ಒಳನೋಟಕ್ಕೆ ಅವಕಾಶಕಲ್ಪಿಸುತ್ತದೆ.

## ೪. 'ಮಹಾಭಾರತ' ಮಹಾಕಾವ್ಯದಲ್ಲಿ ತಳಸಮುದಾಯದ ಪಾತ್ರಗಳ ಸೃಷ್ಟಿಯ ಮೂಲ :

ವೇದವ್ಯಾಸರಿಗೆ ಋಗ್ವೇದದ '೧೦ನೇ ಮಂಡಲ'ದ 'ದ್ಯೂತ' ಪ್ರಕರಣ ಹಾಗೂ ರಾಮಾಯಣ ಮಹಾಕಾವ್ಯ ಇವರಿಗೆ 'ಮಹಾಭಾರತ'ದಂತಹ ಮಹಾಕಾವ್ಯ ರಚಿಸಲು ಹೇಗೆ ಪ್ರೇರಣೆಯಾಯಿತೋ ಅದೇರೀತಿ ಈ ಕೆಳಕಂಡ ತಳಸಮುದಾಯದ ಪಾತ್ರಗಳಿಗೂ ಋಗ್ವೇದವೇ ಪ್ರಭಾವ ಬೀರಿದೆ.

೧. ಆದ್ರಿಕೆಯೆಂಬ ಅಪ್ಸರೆ ಸ್ತ್ರೀ– ಸತ್ಯವತಿಯ ತಾಯಿ.

೨. ಸತ್ಯವತಿ – ಯೋಜನಗಂಧಿ.

೩. ಕೃಷ್ಣದ್ವೈಪಾಯನ

೪. ಕರ್ಣ

೫. ವಿದುರ

೬. ಗಂಗಾ

೭. ಹಿಡಂಬಿ

೮. ಘಟೋತ್ಕಚ

೯. ದ್ರೋಣ, ಏಕಲವ್ಯ ಮತ್ತು ಇವೇ ಇತ್ಯಾದಿ ಪ್ರಮುಖ ಪಾತ್ರಗಳು..

೧೦. ಅಪ್ಸರೆಯರೆಂಬ ಸುಂದರಿಯರು.

'ತಳಸಮುದಾಯ'ದ ವರ್ಗಕ್ಕೆ ಸೇರಿದ ಸ್ತ್ರೀಯರಿಗೇ ಶೋಷಣೆ ಹೆಚ್ಚಾಗಿ ಸಂಬಂಧಿಸಿದೆ. ಈ ವರ್ಗ ಬಹಳ ಪ್ರಾಚೀನ ಕಾಲದಿಂದಲೂ ತನ್ನ ಅಸ್ತಿತ್ವವನ್ನು ಹೊಂದಿದೆ. ಇದು ಋಗ್ವೇದದಲ್ಲಿ ಹುಟ್ಟಿ, ಮಹಾಭಾರತದಲ್ಲಿ ಬೆಳೆದು, ಮಹಾಭಾರತೋತ್ತರದ ಕಾಲದಲ್ಲಿ ವೃತ್ತಿಪರ ಪಂಗಡಗಳಾಗಿ ಬೆಳೆದು ನಿಂತು ಅವು ಆನಂತರದ ಕಾಲದಲ್ಲಿ ಹಲವಾರು ಉಪಜಾತಿಗಳಾಗಿಯೂ ರೂಪ ಪಡೆದಿದೆ.

**೧. ಆದ್ರಿಕೆಯೆಂಬ ಅಪ್ಸರೆ– ಸತ್ಯವತಿಯ ತಾಯಿ :**

**ಪ್ರಾರಂಭ : 'ಮಹಾಭಾರತ', ಆದಿಪರ್ವ, ೬೩ನೇ ಅಧ್ಯಾಯ**ದಲ್ಲಿ ಹೇಳುವಂತೆ, ಉಪರಿಚರ ರಾಜ ಚೇದಿ ರಾಜ್ಯವನ್ನು ಆಳುತ್ತಿರುತ್ತಾನೆ. ಈತನಿಗೆ ಬೇಟೆ ಆಡುವುದು ನಿತ್ಯ ಕರ್ಮ. ಚೇದಿರಾಜ್ಯ ಸಂಪತ್ತಿನಿಂದ ಸಮೃದ್ಧವಾಗಿರುತ್ತದೆ. "ಇವನನ್ನು ಅರಣ್ಯದಲ್ಲಿರುವಾಗಲೆಲ್ಲಾ 'ಗಂಧರ್ವಾಪ್ಸರೆಯರು' ಸೇವಿಸುತ್ತಿದ್ದರು."[೪] ಈ ರಾಜನಿಗೆ 'ಗಿರಿಕೆ' ಎಂಬ ಪತ್ನಿ ಇರುತ್ತಾಳೆ. ಉಪರಿಚರ ಇಲ್ಲದಿರುವಾಗ ರಾಜ್ಯಾಡಳಿತವನ್ನು ಅಮಾತ್ಯರೇ ನೋಡಿ–ಕೊಳ್ಳುತ್ತಿರುತ್ತಾರೆ. ಉಪರಿಚರ ಅರಣ್ಯದಲ್ಲಿ ಆಶ್ರಮದಲ್ಲಿ ವಾಸ ಮಾಡುತ್ತಿದ್ದನು. ಅದು ವಸಂತ ಕಾಲ. ಪತ್ನಿ ಗಿರಿಕೆಯ ನವತಾರುಣ್ಯದ ಅಗಲಿಕೆಯನ್ನು ಕ್ಷಣಮಾತ್ರವೂ ತಾಳಲಾರದವನಾಗಿ ಪುಷ್ಪಭರಿತ ಅಶೋಕವೃಕ್ಷದಡಿ ಪವಡಿಸಿದ್ದನು, ಪತ್ನಿಯದೇ ಚಿಂತೆಯಲ್ಲಿದ್ದಾಗ ಗಂಧ ಹೊತ್ತು ತರುತ್ತಿದ್ದ ಮಂದಮಾರುತದ ಸ್ಪರ್ಶಕ್ಕೆ ಅಲ್ಲಿ ಕಾಣಿಸಿಕೊಂಡ ಆದ್ರಿಕೆಯೆಂಬ ಅಪ್ಸರೆಯ ಹಾವಭಾವಗಳಿಂದ ಅಪ್ಸರೆಯ ಸೌಂದರ್ಯಕ್ಕೆ ಮಾರುಹೋಗಿ ಕಾಮೋನ್ಮಾದಕ್ಕೊಳಗಾಗುತ್ತಾನೆ. ಹತ್ತಿರ ಬಂದ ಅವಳ ಮೈ ಸ್ಪರ್ಶಸುಖದಲ್ಲಿ ಸಮಾಗಮವಾಗುತ್ತದೆ. ನಂತರ ರಾಜ ಆದ್ರಿಕೆಯನ್ನು ಆಶ್ರಮದಲ್ಲಿ ಬಿಟ್ಟು ಹೊರಟು ಹೋಗುತ್ತಾನೆ. ಆದ್ರಿಕೆ ಗರ್ಭವತಿಯಾಗಿ ನವಮಾಸಗಳು ತುಂಬಿದೊಡನೆ ವಿಧಿನಿಯಮಾನುಸಾರ ಅವಳಿ ಮಕ್ಕಳಿಗೆ ಜನ್ಮ ಕೊಟ್ಟು ಆ ಶಿಶುಗಳನ್ನು ನದೀ ತೀರದಲ್ಲೇ ಬಿಸಾಡಿ ಹೊರಟು ಹೋಗುತ್ತಾಳೆ. ಕ್ಷತ್ರಿಯರಿಗೆ, ಋಷಿಗಳಿಗೆ ಹೆಣ್ಣು ಕಾಮೋಪಭೋಗಕ್ಕೆ ಮಾತ್ರ ಬೇಕಾಗುತ್ತಾಳೆ. ಇದು ಅಂದಿನ ತಳಸಮುದಾಯದ ಹೆಣ್ಣುಗಳ ಶೋಚನೀಯ ಪರಿಸ್ಥಿತಿಯಾಗಿತ್ತು.

**ದೃಷ್ಟಾಂತ** : ಅಪ್ಸರೆಯರೂ ತಳಸಮುದಾಯದ ವರ್ಗಕ್ಕೇ ಸೇರುತ್ತಾರೆ. "ನಿರ್ದಯಳಾದ, ವೇಶ್ಯೆಯಾದ ಮೇನಕೆ ನಿನ್ನ ತಾಯಿ. ನಿರ್ಮಾಲ್ಯವನ್ನು ತೆಗೆಸೆಯುವಂತೆ ನಿನ್ನನ್ನು ಆಕೆ ಹಿಮವತ್ಪರ್ವತದ ತಪ್ಪಲಿನಲ್ಲಿ ವಿಸರ್ಜಿಸಿ ಹೊರಟು ಹೋದಳು. ನಿನ್ನ ತಂದೆಯೂ ಅಷ್ಟೇ ನಿರ್ದಯನಾದ ಕ್ಷತ್ರಿಯನು. ನೀನು ಮೇನಕೆಯಲ್ಲಿ ಹುಟ್ಟಿದವಳೆಂದು ಒಪ್ಪಿಕೊಳ್ಳಬೇಕಾಗುತ್ತದೆ. ವೇಶ್ಯಾವೃತ್ತಿಯಲ್ಲಿರಬೇಕಾದ ಗುಣಗಳೆಲ್ಲವೂ ನಿನ್ನಲ್ಲಿದೆ."[೫] ಎಂದು ದುಷ್ಯಂತನು ಶಕುಂತಲೆಗೆ ಹೇಳುತ್ತಾನೆ.

ಮೀನು ಹಿಡಿಯಲು ನದೀತೀರಕ್ಕೆ ಬಂದ ಸ್ಥಳೀಯ ಬೆಸ್ತ ದಂಪತಿಗಳಿಗೆ ಶಿಶು ಅಳುವುದನ್ನು ಕೇಳಿಸಿಕೊಂಡು ಅಲ್ಲಿ ಹೋಗಿ ಆ ದಂಪತಿಗಳು ನೋಡಿದಾಗ ಅಲ್ಲೆರಡು ಹೆಣ್ಣು-ಗಂಡು ಶಿಶುಗಳು ಕಾಣಿಸುತ್ತವೆ. ಆ ಬೆಸ್ತರು ಆ ಶಿಶುಗಳನ್ನು ಚೇದಿರಾಜ್ಯದ ರಾಜನಿಗೆ ಒಪ್ಪಿಸುತ್ತಾರೆ. ನಡೆದ ವೃತ್ತಾಂತವನ್ನೆಲ್ಲಾ ಹೇಳುತ್ತಾರೆ. ದಿವ್ಯರೂಪ ಧರಿಸಿದ ಶಿಶುಗಳನ್ನು ನೋಡಿದ ರಾಜನಿಗೆ ಹಿಂದಿನದೆಲ್ಲ ನೆನಪಾಗಿ ಅದು ತನ್ನ ಮಕ್ಕಳೇ ಎಂದು ತಿಳಿಯಲು ಕಷ್ಟವಾಗುವುದಿಲ್ಲ. ಆದರೆ ಆ ವಿಷಯವನ್ನು ಹೊರಗೆಡಹದೇ ಗಂಡುಮಗುವನ್ನು ತಾನೇ ಇಟ್ಟುಕೊಂಡು ಹೆಣ್ಣುಮಗುವನ್ನು ಮಾತ್ರ ಸಾಕಿಕೊಳ್ಳುವಂತೆ ಹೇಳಿ ಬೆಸ್ತರಿಗೇ ಕೊಟ್ಟುಬಿಡುತ್ತಾನೆ. ಆ ಹೆಣ್ಣುಮಗುವನ್ನೇ ಇವರು 'ಸತ್ಯವತೀ' ಎಂದು ನಾಮಕರಣ ಮಾಡುತ್ತಾರೆ.

**೨. ಕೃಷ್ಣದ್ವೈಪಾಯನ (ವೇದವ್ಯಾಸರ ಜನನ)**

ಸತ್ಯವತಿ ಬಾಲ್ಯಾವಸ್ಥೆಯನ್ನು ಕಳೆದು ಕುಮಾರಿಯಾದ ಮೇಲೆ ಬೆಸ್ತರವನು ಆಟಕ್ಕೆಂದು ಒಂದು ದೋಣಿಯನ್ನು ಮಾಡಿಕೊಟ್ಟನು. ಸತ್ಯವತಿ ಆ ದೋಣಿಯಲ್ಲಿ ಯಮುನೆಯ ಒಂದು ದಡದಿಂದ ಮತ್ತೊಂದು ದಡಕ್ಕೆ ಒಬ್ಬೊಬ್ಬರನ್ನೇ ಸಾಗಿಸುತ್ತಾ ಹಣವನ್ನೂ ಗಳಿಸುತ್ತಿದ್ದಳು. ಮಹರ್ಷಿ ಪರಾಶರರಿಗೂ ಒಂದು ದಿನ ನದೀ ದಾಟಬೇಕಾಗಿತ್ತು. ದಡದಲ್ಲಿ ಸತ್ಯವತಿಯಲ್ಲದೆ ಬೇರೆ ಯಾರೂ ಇರಲಿಲ್ಲ. ಆ ಯುವತಿಯ ತುಂಬು ಚೆಲುವನ್ನು ಕಂಡು ಮುನಿಗಳ ಮನಸ್ಸು ಕದಡಿಹೋಯಿತು. ಮುನಿಗಳು ನಿನ್ನನ್ನೊಮ್ಮೆ ಆಲಂಗಿಸಬಹುದೇ? ಎಂದು ಕೇಳಿದರು. ಕೌಮಾರ್ಯಾದಲ್ಲಿದ್ದ ಆ ತರುಣಿಗೆ ಆಲಿಂಗನದ ಅನುಭವವೇನು ತಿಳಿದೀತು? ಆದರೂ ಸತ್ಯವತಿ ನದಿಯ ಎರಡೂ ದಂಡೆಗಳಲ್ಲಿ ಹಲವಾರು ಋಷಿಗಳು ನೋಡುತ್ತಿರುವಾಗ ನಮ್ಮ ಆಲಿಂಗನ ಹೇಗೆ ಸಾಧ್ಯ? ಎಂದಳು. ಕೋಲಿನಿಂದ ಮೀಟುತ್ತಾ ಸ್ವಲ್ಪ ದೂರ ಬಂದಾಗ ದಟ್ಟವಾದ ಮಂಜು ಆವರಿಸಿದ ಜಾಗದಲ್ಲಿ ದೋಣಿ ಕಾಣಿಸದಾಯಿತು. ಪರಾಶರರು-ಸತ್ಯವತಿಯರ ಸಮಾಗಮವಾಯಿತು. ನಂತರ ಋಷಿಗಳು ದೋಣಿ ಇಳಿದು ಹೊರಟು ಹೋದರು. ಬೆಸ್ತರ ಕನ್ಯೆ ಗರ್ಭವತಿಯಾದಳು. ನವಮಾಸಗಳು ತುಂಬಿದಾಗ ಗಂಡು ಶಿಶುವಿನ ಜನನವೂ ಆಯಿತು. ಅದು ನದಿಯ ಮಧ್ಯದಲ್ಲಿದ್ದ ದ್ವೀಪದಲ್ಲಿ ಹುಟ್ಟಿದ್ದರಿಂದ ಅವನಿಗೆ ಕೃಷ್ಣದ್ವೈಪಾಯನನೆಂದು ಹೆಸರಿಟ್ಟಳು. ಅಲ್ಲೇ ದಡದಲ್ಲಿದ್ದ ಋಷಿಗಳ ಆಶ್ರಮದಲ್ಲಿ ಮಗನ ವಿದ್ಯಾಭ್ಯಾಸ ಮಾಡಿಸಿದಳು. ನಂತರ ಈತನು ವೇದಗಳನ್ನು ವಿಭಾಗಿಸಿದ್ದರಿಂದ ವೇದವ್ಯಾಸನಾದನು. ಈತ ಕೂಡ ಒಬ್ಬ ಶೂದ್ರ ಋಷಿ.

**೩. ಅಪ್ಸರೆಯಾದ ಘೃತಾಚಿ :**

ಭೃಗು ಪುತ್ರನಾದ ಚ್ಯವನನಿಗೆ ಸುಕನ್ಯೆಯಲ್ಲಿ ಮಹಾ ತೇಜಸ್ವಿಯಾದ ಪ್ರಮತಿ ಎಂಬ ಮಗನು ಹುಟ್ಟಿದನು. ಈ ಪ್ರಮತಿಯ ಅಪ್ಸರೆಯಾದ ಘೃತಾಚಿ ಎಂಬುವವಳಲ್ಲಿ **'ರುರು'** ಎಂಬ ಪುತ್ರನನ್ನು ಪಡೆದಳು.

**೪. ಮೇನಕಾ ಎಂಬ ಅಪ್ಸರಾ :**

ಮೇನಕಾ ಎಂಬ ಈ ಅಪ್ಸರೆ ವಿಶ್ವಾವಸು ಎಂಬ ಗಂಧರ್ವ ರಾಜನಿಂದ ಗರ್ಭವತಿಯಾದಳು. ಗಂಧರ್ವ ರಾಜ ಹೊರಟು ಹೋದನು. ಮೇನಕೆಗೆ ನವಮಾಸಗಳು ತುಂಬಿ ಪ್ರಸವದ ಸಮಯ ಸಮೀಪಿಸಿದಾಗ ತಪೋ ವಿದ್ಯಾ ಸಮನ್ವಿತರಾದ 'ಸ್ಥೂಲಕೇಶ'ರೆಂಬ ಹೆಸರಿನ ಋಷಿಗಳೊಬ್ಬರಿದ್ದರು. ಇವರ ಆಶ್ರಮದ ಸಮೀಪ ನದಿ ಹರಿಯುತ್ತಿತ್ತು. ನದಿಯ ಪಕ್ಕ ಪೊದರಿನಲ್ಲಿ ಮೇನಕೆ ಪ್ರಸವಿಸಿ ಮಗುವನ್ನು ಅಲ್ಲಿಯೇ ಮಲಗಿಸಿ ಹೊರಟು ಹೋದಳು. ಆಕೆಗೆ ಮಗುವನ್ನು ಬಿಟ್ಟು ಹೋಗುವೆನಲ್ಲಾ ಎಂಬ ಕಿಂಚಿತ್‌ಯೋಚನೆಯೂ ಇರಲಿಲ್ಲ. ಅವಳು ದಯಾರಹಿತಳೂ, ನಿರ್ಲಜ್ಜಳೂ ಆಗಿದ್ದಳು. ದೇವವೇಶ್ಯೆಯಾದ ತನ್ನ ಧರ್ಮವೇ ಇದೆಂದು ಆಕೆ ಭಾವಿಸಿದ್ದಳು.

"ಸ್ಥೂಲಕೇಶರು ನಿರ್ಜನವಾದ ಸ್ಥಳದಲ್ಲಿ ಮಗು ಅಳುವ ಶಬ್ದ ಕೇಳಿ ಪೊದರಿನ ಕಡೆ ಧಾವಿಸಿ ಮಗುವನ್ನು ಕೈಗೆತ್ತಿಕೊಂಡು ಆಶ್ರಮದ ಕಡೆ ಹೊರಟರು. ಆ ಹೆಣ್ಣು ಮಗುವಿಗೆ ಮಹರ್ಷಿಗಳು 'ಪ್ರಮದ್ವರಾ' ಎಂದು ನಾಮಕರಣ ಮಾಡಿದರು."[1]

**೫. ಜಾನಪಪದೀ ಎಂಬ ಅಪ್ಸರೆ : ಕೃಪ–ಕೃಪೀ ಜನನ :**

ಮಹರ್ಷಿಗಳಾದ ಗೌತಮರಿಗೆ ಶರದ್ವಂತನೆಂಬ ಮಗನಿದ್ದನು. ಅವನಿಗೆ ಹುಟ್ಟಿದಾಗಿನಿಂದಲೇ ಧನುರ್ಬಾಣಗಳೆಂದರೆ ಇಷ್ಟವಾಗಿ ಶರದ್ವಂತ ಎಂದು ಅವನಿಗೆ ಅನ್ವರ್ಥನಾಮವಾಯಿತು. ಅವನಿಗೆ ವೇದಾಧ್ಯಯನಕ್ಕಿಂತಲೂ ಧನುರ್ವಿದ್ಯೆಯಲ್ಲಿಯೇ ಆಸಕ್ತಿ. ಬಹಳ ಕಠೋರವಾದ ತಪಸ್ಸು ಮಾಡಲು ಅರಣ್ಯಕ್ಕೆ ಬಂದನು.

ಆ ತಪಸ್ವಿಗೆ ಕುಳಿತಿರುವ ಕಡೆ ಜಾನಪದೀ ಎಂಬ ಅಪ್ಸರೆ ಬಂದು ತನ್ನ ಹಾವಭಾವಗಳಿಂದ ಶರದ್ವಂತನನ್ನು ಮೋಹಗೊಳಿಸಲು ಪ್ರಾರಂಭಿಸಿದಳು. ಆತ ಅವಳ ಕಡೆ ಗಮನ ಕೊಡದಿದ್ದಾಗ ಆಶ್ರಮಕ್ಕೇ ಅವನು ಕಾಣುವಂತೆ ಓಡಾಡತೊಡಗಿದಳು. ಅವಳ ಅನಿರ್ವಾಚ್ಯ ಸೌಂದರ್ಯರಾಶಿಯೇ ತನ್ನೆದುರು ನಿಂತಿರುವುದನ್ನು ಕಂಡು ಶರದ್ವಂತನ ಕಣ್ಣುಗಳು ಪ್ರಫುಲ್ಲವಾದವು. ಅವನ ಕೈಗಳಲ್ಲಿದ್ದ ಧನುರ್ಬಾಣಗಳು ಕೈಜಾರಿ ಬಿದ್ದವು. ರೋಮಾಂಚಿತನಾಗಿ ಹೋದನು. ಶರದ್ವಂತನು ಮಹಾಜ್ಞಾನಿಯಾಗಿದ್ದ, ಮಹಾತಪಸ್ವಿಯೂ ಆಗಿದ್ದ. ಆದರೆ, "ಕಡಿವಾಣ ತಪ್ಪಿದ ಮನಸ್ಸೆಂಬ ಕುದುರೆಯನ್ನು ಎಷ್ಟು ಪ್ರಯಾಸಪಟ್ಟರೂ ಸೆಳೆದುಕೊಳ್ಳದಾದ. ನಿಮಿಷಾರ್ಧದಲ್ಲೆ ಅಸ್ಖಲಿತ ಬ್ರಹ್ಮಚರ್ಯೆಯಿಂದ ತಡೆಹಿಡಿದಿದ್ದ ರೇತಸ್ಸು ಮನೋವಿಕಾರಕ್ಕೊಳಗಾಗಿ ಅಪ್ಸರೆಯ ಗರ್ಭ ಸೇರಿ ಹೋಯಿತು. ಕೂಡಲೇ ಶರದ್ವಂತನು ಧನುರ್ಬಾಣ, ಕೃಷ್ಣಾಜಿನಗಳನ್ನೆಲ್ಲಾ ಆಶ್ರಮದಲ್ಲೇ ಬಿಟ್ಟು ಅಪ್ಸರೆಯನ್ನೂ ಬಿಟ್ಟು ಭಯದಿಂದ ಓಡಿಬಿಟ್ಟನು."[2] ಜಾನಪದೀ ಅಪ್ಸರೆ ಗರ್ಭವತಿಯಾಗಿ ನವಮಾಸಗಳ ನಂತರ ಅವಳಿ ಮಕ್ಕಳಿಗೆ ಜನ್ಮ ನೀಡಿದಳು. ಆ ಮಕ್ಕಳನ್ನು ಅಲ್ಲೇ ಬಿಟ್ಟು ಹೊರಟು ಹೋದಳು.

ಶಂತನು ಚಕ್ರವರ್ತಿ ಬೇಟೆಯಾಡಲು ಅರಣ್ಯಕ್ಕೆ ಬಂದಿದ್ದಾಗ ಅವನ ಸೈನಿಕನೊಬ್ಬನು ಪಾಲಕರಿಲ್ಲದೇ ಅಳುತ್ತಿದ್ದ ಮಕ್ಕಳನ್ನು ಕಂಡು ಧನುರ್ಬಾಣ, ಕೃಷ್ಣಾಜಿನಗಳೊಂದಿಗೆ ಮಕ್ಕಳನ್ನೂ ತಂದು ಶಂತನು ಚಕ್ರವರ್ತಿಗೆ ಒಪ್ಪಿಸಿದನು. ಶಂತನು ರಾಜನು ಆ ಮಕ್ಕಳಿಗೆ ಬಾಲಕನಿಗೆ ಕೃಪ ಎಂದೂ ಬಾಲಕಿಗೆ ಕೃಪೀ ಎಂದೂ ನಾಮಕರಣ ಮಾಡಿದನು. ಯಥೋಚಿತವಾಗಿ ಜಾತಕರ್ಮ ನಾಮಕರ್ಣಗಳನ್ನೂ ಮಾಡಿದನು. ಮುಂದೆ ಇದೇ ಕೃಪಾಚಾರ್ಯರೇ ಕುರು–ಪಾಂಡವ ರಾಜಕುಮಾರರ ಧನುರ್ವಿದ್ಯೆಯ ಅಭ್ಯಾದ ಗುರುಗಳಾಗುತ್ತಾರೆ.

**೬. ಘೃತಾಚೀ ಎಂಬ ಅಪ್ಸರೆಯ ಮಗ – ದ್ರೋಣ :**

ಭಾರದ್ವಾಜನೆಂಬ ಮಹರ್ಷಿಯು ಗಂಗಾತೀರದಲ್ಲಿ ಕಠೋರವಾದ ವ್ರತನಿಯಮಗಳನ್ನು ಆಚರಿಸುತ್ತಿರುತ್ತಾನೆ. ಒಂದು ದಿನ ಸ್ನಾನ ಮಾಡಲೆಂದು ಗಂಗಾನದಿಗೆ ತೆರಳುತ್ತಾನೆ. ಅದೇ ಸಮಯಕ್ಕೆ ಸರಿಯಾಗಿ ಅಲ್ಲಿ ಘೃತಾಚೀ ಎಂಬ ಅಪ್ಸರೆ ನದಿಯಲ್ಲಿ ಸ್ನಾನ ಮಾಡಿ ಬರುತ್ತಿರುವುದನ್ನು ಭಾರದ್ವಾಜ ಮಹರ್ಷಿ ನೋಡುತ್ತಾನೆ. ಘೃತಾಚೀ ದಡದ ಮೇಲೆ ನಿಂತು ತನ್ನ ಒದ್ದೆಯಾದ ವಸ್ತ್ರವನ್ನು ಬಿಚ್ಚಿ ಬೇರೆ ವಸ್ತ್ರವನ್ನು ಧರಿಸುತ್ತಿರುವುದನ್ನು ಮಹರ್ಷಿ ನೋಡಿಬಿಡುತ್ತಾನೆ. ಕೂಡಲೇ ಅವನ ಮನ ವಿಕಲ್ಪವಾಗುತ್ತದೆ. ಮಹರ್ಷಿಯಾದರೇನು ಯಾರಾದರೇನು ಹೆಣ್ಣನ್ನು ನಗ್ನರೂಪದಲ್ಲಿ ನೋಡಿದ ಮರುಕ್ಷಣವೇ ಮಾನಸಿಕ ಪರಿವರ್ತನೆಯಾಗಿ ಮಾನಸಿಕ ಪರಿಭ್ರಮಣದಿಂದ ಚ್ಯುತನಾದ ಅಗ್ನಿರೂಪವಾದ ಭಾರದ್ವಾಜ ಘೃತಾಚಿಯ ಪ್ರೇಮಪಾಶಕ್ಕೆ ಬಿದ್ದು ಇಬ್ಬರ ಸಮಾಗಮವಾಗುತ್ತದೆ. ಘೃತಾಚೀ ಗರ್ಭಿಣಿಯಾಗುತ್ತಾಳೆ. ನವಮಾಸ ತುಂಬಿ ಪ್ರಸವವಾದ ಶಿಶುವನ್ನು ಭಾರದ್ವಾಜನ ಆಶ್ರಮದಲ್ಲೇ ಬಿಟ್ಟು ಹೊರಟು ಹೋಗುತ್ತಾಳೆ. ಆ ಶಿಶುವಿಗೆ ಭಾರದ್ವಾಜರು ದ್ರೋಣನೆಂದು ನಾಮಕರಣ ಮಾಡಿ, ಆಶ್ರಮದಲ್ಲೇ ಬೆಳೆಸಿ, ಧನುರ್ವಿದ್ಯೆಯಲ್ಲಿ ಪಾರಂಗತನನ್ನಾಗಿ ಮಾಡುತ್ತಾನೆ.

**೭. ಶೂದ್ರ ಸ್ತ್ರೀ– ಅಪ್ಸರ ಚೇಟಿಯ ಮಗ – ವಿದುರ :**

ಸತ್ಯವತಿಯು ಬಹಳ ಕಷ್ಟದಿಂದ ಸೊಸೆ ಅಂಬಿಕೆಯನ್ನು ವ್ಯಾಸರೊಂದಿಗೆ ನಿಯೋಗದಿಂದ ಸಂತಾನ ಪಡೆಯಲು ಒಪ್ಪಿಸುತ್ತಾಳೆ. ಶಯನ ಮಂದಿರಕ್ಕೆ ಬಂದ ಮಹರ್ಷಿಗಳ ರೂಪ, ವೇಷ–ಭೂಷಣಗಳು, ಕೆದರಿದ

ಲೆಗೂದಲು, ಕೆಂಪಗಿನ ಕಣ್ಣು, ಗಡ್ಡ ಇತ್ಯಾದಿಗಳನ್ನು ಕಂಡ ರಾಜಕುಮಾರಿ ಕಣ್ಣುಗಳನ್ನು ಮುಚ್ಚಿಕೊಂಡಿದ್ದರಿಂದ ವಳಿಗೆ ಹುಟ್ಟಿದ ಶಿಶುವೂ ಕುರುಡಾಯಿತು. ಸತ್ಯವತೀ ಅಂಬಿಕೆಯನ್ನು ಬಹಳ ಕಷ್ಟಪಟ್ಟು ಮತ್ತೊಮ್ಮೆ ುಹರ್ಷಿಗಳೊಂದಿಗೆ ಸಮಾಗಮಕ್ಕೆ ಒಪ್ಪಿಸಿದಳು. ಆದರೆ ಆಂಬಿಕೆ ಮಹರ್ಷಿಗಳ ಸಮಾಗಮ ಸಾಧ್ಯವೇ ಲ್ಲವೆಂದು ನಿರ್ಧರಿಸಿ ತನ್ನ ಪ್ರೀತಿವಿಶ್ವಾಸಕ್ಕೆ ಪಾತ್ರಳಾದ ಅಪ್ಸರೆಯಂತಿದ್ದ ಚೇಟಿಗೆ ತನ್ನ ಆಭರಣಗಳನ್ನೆಲ್ಲಾ ೊಡಿಸಿ, ಸಿಂಗರಿಸಿ ಶಯನಮಂದಿರಕ್ಕೆ ಕಳುಹಿಸಿದಳು. ಅದೇ ವಿರೂಪದಲ್ಲೇಯೇ ಆಗಮಿಸಿದ ವ್ಯಾಸರನ್ನು ಕಂಡ ೇಟಿ ಸ್ವಾಗತಿಸಿ ಸತ್ಕರಿಸಿ ಉಪಚರಿಸಿದಳು. ಅಬರಿಬ್ಬರಿಂದ ಹುಟ್ಟಿದ ಶಿಶು ಮಾತ್ರ ರಾಜವಂಶಕ್ಕೆ ಸೇರಿದವನಾಗಲಿಲ್ಲ. ದುರನೆಂಬ ಹೆಸರಿನಿಂದ ಪ್ರಸಿದ್ಧನಾದನು. ಧೃತರಾಷ್ಟ್ರ, ಪಾಂಡುವಿನ ಅನುಜನೆನಿಸಿದರೂ ದಾಸೀಪುತ್ರನಾಗೇ ೊನೇವರೆಗೂ ಉಳಿದನು. ಶೂದ್ರಸ್ತ್ರೀಯಲ್ಲಿ ಹುಟ್ಟಿದ ವಿದುರ ಅರಮನೆಯಲ್ಲಿ ಅಲಕ್ಷ್ಯಕ್ಕೆ ಈಡಾದನು.

**೮. ಹಿಡಂಬಿ – ಭೀಮ :**

ಅರಗಿನಮನೆಯ ಅಗ್ನಿ ದುರಂತದಿಂದ ಪಾರಾದ ಪಾಂಡವರು ವಾರಣಾವತ ಪಟ್ಟಣದಿಂದ ತಪ್ಪಿಸಿಕೊಂಡು ಂದ ಮೇಲೆ ಘೋರಾರಣ್ಯದಲ್ಲಿ ದಾರುಣಾವಸ್ಥೆಯಲ್ಲಿದ್ದಾಗ ಭೀಮನಿಗೆ ಹಿಡಂಬೆಯ ಪರಿಚಯವಾಯ್ತು. ರಣ್ಯದಲ್ಲಿ ವಾಸವಾಗಿದ್ದ ಹಿಡಂಬನೆಂಬ ಭಯಂಕರ ಆಕೃತಿಯನ್ನು ಹೊಂದಿದ ನರಭಕ್ಷಕನಿದ್ದ. ಮರದ ಬುಡದಲ್ಲಿ ಲಗಿದ್ದ ಪಾಂಡವರನ್ನು ಕಂಡು ತನಗೀದಿನ ಭೂರೀಭೋಜನ ದೊರಕಿತೆಂದು ಉತ್ಸಾಹಗೊಂಡು ತನ್ನ ಸೋದರಿ ಡಿಂಬೆಯನ್ನು ಕರೆದು ಅಲ್ಲಿ ಮಲಗಿರುವವರು ಯಾರೆಂದು ತಿಳಿದು ಬಾ ಎಂದು ಹೇಳಿ ಕಳುಹಿಸುತ್ತಾನೆ. ಡಿಂಬೆ ಆ ಸ್ಥಳವನ್ನು ತಲುಪಿದಾಗ ಭೀಮಸೇನ ಇವರೆಲ್ಲರನ್ನೂ ಕಾವಲು ಕಾಯುತ್ತಾ ಕುಳಿತಿರುವುದನ್ನು ಣುತ್ತಾಳೆ. ಅವರನ್ನು ಕೊಲ್ಲಲು ಬಂದ ಹಿಡಿಂಬೆ ಭೀಮನ ಸುಂದರವಾದ ಅದ್ಭುತ ಆಕಾರವನ್ನು ಕಂಡು ವಳು ಕಾಮಜ್ಯೋತಿಯಿಂದ ಉದ್ದೀಪ್ತಳಾಗುತ್ತಾಳೆ. ಇಂತಹ ಸರ್ವಾಂಗ ಸುಂದರ ತನ್ನ ಪತಿಯಾಗಲು ೋಗ್ಯನಾಗಿದ್ದಾನೆ ಇವನನ್ನೇ ಒಲಿಸಿಕೊಳ್ಳಬೇಕೆಂದುಕೊಂಡು ಸುಂದರವಾದ ವೇಷಭೂಷಣಗಳಿಂದ ಮಾನವ ೇಲ್ವರ್ಗದ ಸುಸಂಸ್ಕಾರ ಹೆಣ್ಣಿನಂತೆ ಭೀಮನ ಬಳಿಗೆ ಬರುತ್ತಾಳೆ. ಅರಣ್ಯವಾಸಿಯಾದ ಈಕೆ ಭೀಮನನ್ನು ಮಿಸಿರುವುದು ಅವನಿಗೂ ತಿಳಿಯುತ್ತದೆ. ಅಷ್ಟರಲ್ಲಿ ಅಲ್ಲಿಗೆ ಬಂದ ಹಿಡಿಂಬನಿಗೂ ಭೀಮನಿಗೂ ದೊಡ್ಡ ವಾದ-ವಾದಗಳುಂಟಾಗಿ ಸೆಣಸಾಟವೇ ಆರಂಭವಾಗುತ್ತದೆ. ಈ ರಾದ್ಧಾಂತದಿಂದ ಕುಂತಿ, ಯುಧಿಷ್ಠಿರ ಎಲ್ಲರೂ ಚ್ಚರಗೊಳ್ಳುತ್ತಾರೆ. ಸಮೀಪದಲ್ಲೇ ನಿಂತಿದ್ದವಳನ್ನು ನೋಡುತ್ತಾರೆ. "ತೆಳುವಾದ ಸೀರೆಯುಟ್ಟು, ಹೂ ುಡಿದುಕೊಂಡು, ಆಭರಣಗಳಿಂದ ಅಲಂಕೃತಳಾಗಿದ್ದ ಅವಳ ಮುಖವು ಪೂರ್ಣಚಂದ್ರನ ಕಾಂತಿಯನ್ನು ೊಂದಿತ್ತು."[೮] ಅಪ್ಸರೆಯಂತೆ ಮನೋಹರ ರೂಪವನ್ನು ಧರಿಸಿದ್ದ ಹಿಡಿಂಬೆಯನ್ನು ನೋಡಿ ಅಚ್ಚರಿಗೊಳ್ಳುತ್ತಾರೆ. ಾನು ನಿನ್ನ ಮಗನನ್ನು ಪತಿಯೆಂದು ನಿಶ್ಚಯಿಸಿರುವೆನು. ನನ್ನ ಬಂಧುಮಿತ್ರರೆಲ್ಲರನ್ನೂ ವಿಸರ್ಜಿಸಿ, ಲಧರ್ಮವನ್ನೂ ಸಹ ಬದಿಗೊತ್ತಿ ಪುರುಷ ವ್ಯಾಘ್ರನಾದವನನ್ನು ಪತಿಯನ್ನಾಗಿ ವರಿಸುವೆನು. ನನ್ನನ್ನು ಾಸಿಯೆಂದಾದರೂ ಭಾವಿಸಿ ನನ್ನನ್ನು ಪರಿಗ್ರಹಿಸುವಂತೆ ಮಾಡು. ಆಪತ್ಕಾಲದಲ್ಲಿ ಅಧರ್ಮಾಚರಣೆ ಮಾಡಿ ನಂತರದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬಹುದು.' ಎಂದಾಗ ಕುಂತಿ, ಯುಧಿಷ್ಠಿರರೂ ಭೀಮ-ಹಿಡಿಂಬೆಯರ ಮಾಗಮಕ್ಕೆ ಒಪ್ಪಿಗೆ ನೀಡುತ್ತಾರೆ. ಹಿಡಿಂಬೆಗೆ ಒಬ್ಬ ಮಗನಾಗುವವರೆಗೆ ಮಾತ್ರ ಭೀಮ ಅವಳನ್ನು ತಮ್ಮ ತೆಯಲ್ಲಿಟ್ಟುಕೊಂಡಿರುತ್ತಾನೆ. ಹಿಡಿಂಬೆ ಗರ್ಭವತಿಯಾಗಿ ನವಮಾಸಗಳು ಕಳೆದ ನಂತರ ಗಂಡು ಮಗುವನ್ನು ಸವಿಸುತ್ತಾಳೆ. ತಂದೆ-ತಾಯಿಗಳು ಆ ಮಗುವಿಗೆ 'ಘಟೋತ್ಕಚ'ನೆಂದು ನಾಮಕರಣ ಮಾಡುತ್ತಾರೆ. ಮುಂದೆ ಹಾಭಾರತದ ಕುರುಕ್ಷೇತ್ರ ಯುದ್ಧದಲ್ಲಿ ಈತನ ಪಾತ್ರ ಬಹಳ ಮಹತ್ವವನ್ನು ಪಡೆದುಕೊಳ್ಳುವುದನ್ನು ನಾವು ಣುತ್ತೇವೆ.

ತಳಸಮುದಾಯದ ಜನರ ಅದರಲ್ಲೂ ಸ್ತ್ರೀಯರ ಸಂಸ್ಕೃತಿಯ ಪ್ರತೀಕದಂತಿರುವುದನ್ನು 'ಹಿಡಂಬಿ'ಯಲ್ಲಿ ನಾವು ಣುತ್ತೇವೆ. ಒಬ್ಬ ನರಭಕ್ಷಕನಂತಹವನ ತಂಗಿಯಾದರೂ ಆಕೆಯಲ್ಲಿ ಮೇಲ್ವರ್ಗದ ಒಬ್ಬ ಶಿಷ್ಟ ಸಂಪ್ರದಾಯವನ್ನು ೊಂದಿದ ಹೆಣ್ಣುಮಗಳಲ್ಲಿರುವಂತಹ ಎಲ್ಲಾ ಗುಣಗಳೂ ಇರುವುದನ್ನು ಆಕೆಯಲ್ಲಿ ಸಹಜವಾಗಿ ಕಂಡುಬರುತ್ತದೆ.

## ೯. ಬೇಡರ ರಾಜ ನಿಷಾದನ ಮಗ – ಏಕಲವ್ಯ :

ದ್ರೋಣರು ಕೌರವ–ಪಾಂಡವರನ್ನು ವಿದ್ಯಾಭ್ಯಾಸಕ್ಕಾಗಿ ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿದರು. ಅನೇಕ ವಿಧವಾದ ಶಸ್ತ್ರಾಸ್ತ್ರಗಳನ್ನು ಉಪದೇಶಿಸಿದರು. ಧನುರ್ವಿದ್ಯಾ ಕೌಶಲದಲ್ಲಿ ದ್ರೋಣರ ಕೀರ್ತಿಯು ದೇಶ–ವಿದೇಶಗಳಲ್ಲಿ ವ್ಯಾಪಿಸಿತ್ತು. ನಾನಾ ದೇಶದ ರಾಜಕುಮಾರರು ವಿದ್ಯಾಭ್ಯಾಸಕ್ಕಾಗಿ ದ್ರೋಣರಲ್ಲಿಗೆ ಬಂದರು. ಎಲ್ಲರಿಗೂ ಒಂದೇ ಸಮನಾಗಿ ಧನುರ್ವಿದ್ಯೆಯ್ನು ಉಪದೇಶಿಸಿದರೂ ಅರ್ಜುನನ ಬಾಣಪ್ರಯೋಗದ ಕೈಚಳಕ, ನೈಪುಣ್ಯತೆ ಮತ್ತಾರಿಗೂ ಬರಲಿಲ್ಲ. ಅರ್ಜುನನ ಗುರುಭಕ್ತಿಯೂ, ಧನುರ್ವಿದ್ಯಾಭ್ಯಾಸದ ಆಸಕ್ತಿಯೂ ಅಪಾರವಾಗಿತ್ತು. ಅದನ್ನು ಕಂಡು ದ್ರೋಣರು 'ಅರ್ಜುನಾ! ನಿನ್ನನ್ನು ನಾನು ಧನುರ್ವಿದ್ಯೆಯಲ್ಲಿ ಅದ್ವಿತೀಯನನ್ನಾಗಿ ಮಾಡುವೆನು ಇದು ಸತ್ಯ.' ಎಂದು ಪ್ರಮಾಣ ಮಾಡುತ್ತಾರೆ. ಕೊಟ್ಟ ಮಾತನ್ನವರು ಉಳಿಸಲೇಕೊಳ್ಳಬೇಕಾಗುತ್ತದೆ.

ಪಾಠ–ಪ್ರವಚನಗಳ ವಿಷಯದಲ್ಲಿ ಒಂದು ನಿಯಮವನ್ನು ಅನುಸರಿಸಬೇಕಾಗಿತ್ತು. ರಾಜಕುಮಾರರು ವಂಶಾನುಕ್ರಮವಾಗಿ ಶಸ್ತ್ರವಿದ್ಯೆ ಕಲಿಯಬೇಕಾಗಿತ್ತು. ನಿಷದ ರಾಜನಾದ ಹಿರಣ್ಯಧನುಷನ ಮಗ ಏಕಲವ್ಯ ಧನುರ್ವಿದ್ಯೆಯನ್ನು ಕಲಿಯಲು ಹಸ್ತಿನಾಪುರಕ್ಕೆ ದ್ರೋಣರ ಬಳಿ ಬರುತ್ತಾನೆ. ವಿದ್ಯೆ ಕ್ಷತ್ರಿಯ ರಾಜಕುಮಾರರಿಗೆ ಮಾತ್ರ ಸೀಮಿತವಾಗಿತ್ತು. ನಿಷಾದ ಬಿಲ್ ವಿದ್ಯಾ ಪಾರಂಗತನಾಗುವುದು ಅರಣ್ಯದಲ್ಲಿ ಮೃಗಯಾ ವಿಹಾರಕ್ಕೆ. ಅದು ಅವನ ಪರಂಪರಾನುಗತ ವಿದ್ಯೆ, ಕುಲ ಕಸುಬು. ಕ್ಷತ್ರಿಯರು ಶಸ್ತ್ರ ವಿದ್ಯೆ ಕಲಿಯುವುದು ಯುದ್ಧ ಮಾಡಲಿಕ್ಕಾಗಿ. ಅದು ಅವರ ವೃತ್ತಿ. ಏಕಲವ್ಯ ನಿಷದನಾಗಿದ್ದುದರಿಂದ ಕ್ಷತ್ರಿಯರಿಗೆ ಮೀಸಲಾಗಿದ್ದ ವಿದ್ಯೆಯನ್ನು ಅವನು ಕಲಿಯುವಂತಿರಲಿಲ್ಲ. ಅನರ್ಹರಾದವರನ್ನು ಹಾಗೆ ಸೇರಿಸಿಕೊಂಡರೆ ರಾಜಾಜ್ಞೆಯನ್ನು ಧಿಕ್ಕರಿಸಿದ ಅಪರಾಧಕ್ಕೆ ದ್ರೋಣರು ಒಳಗಾಗಬೇಕಾಗಿತ್ತು.

ನಿಷಾದ ಬೇಡರವನಾಗಿದ್ದು ಬಿಲ್ಲು–ಬಾಣಗಳಲ್ಲಿ ನಿಪುಣರಾಗಿರಬಹುದು ಆದರೆ ಕ್ಷತ್ರಿಯ ರಾಜಕುಮಾರರೊಡನೆ ಸೇರಿ ಅವರಿಗೆ ಮೀಸಲಾಗಿದ್ದ ಯುದ್ಧ ಶಸ್ತ್ರ ಅಸ್ತ್ರಗಳ ವಿದ್ಯೆಯನ್ನು ಕಲಿಯುವ ಅವಕಾಶವಿರಲಿಲ್ಲ.

ಏಕಲವ್ಯ ಕಾಡಿನಲ್ಲಿಯೇ ಒಂದು ಕಡೆ ದ್ರೋಣರ ಮಣ್ಣಿನ ವಿಗ್ರಹ ಮಾಡಿ ಅದನ್ನೇ ತನ್ನ ಗುರುಗಳೆಂದು ಭಾವಿಸಿ ಭಕ್ತಿಯಿಂದ ಧನುರ್ವಿದ್ಯೆಯನ್ನು ಅಭ್ಯಾಸ ಮಾಡಿ ಶಬ್ದವೇದಿ ವಿದ್ಯೆಯಲ್ಲಿ ಅದ್ವಿತೀಯ ಯಶಸ್ಸು ಗಳಿಸಿದ.

ಈ ವಿಚಾರ ತಿಳಿದ ಅರ್ಜುನನಿಗೆ ಹೆಚ್ಚಿನ ಆತಂಕ ಉಂಟಾಯಿತು. ಗುರುಗಳ ಬಳಿ ಬಂದು 'ತಾವು ನನ್ನನ್ನು ಧನುರ್ವಿದ್ಯೆಯಲ್ಲಿ ಅದ್ವಿತೀಯನನ್ನಾಗಿ ಮಾಡುವುದಾಗಿ ಮಾತು ಕೊಟ್ಟಿದ್ದಿರಿ.' ಎಂದು ಅರ್ಜುನನು ಏಕಲವ್ಯನ ವಿಚಾರವನ್ನು ತಿಳಿಸುತ್ತಾನೆ. ಎಲ್ಲರೂ ಏಕಲವ್ಯನ ಆಶ್ರಮಕ್ಕೆ ಬರುತ್ತಾರೆ. ಏಕಲವ್ಯ ಗುರುಗಳಿಗೆ ಪ್ರಣಾಮ ಮಾಡಿದ. ಗುರುಗಳು ಗುರುದಕ್ಷಿಣೆ ಕೇಳಿದರು. ಏನನ್ನು ಕೊಡಲಿ ಎಂದನು. 'ನಿನ್ನ ಬಲಗೈ ಹೆಬ್ಬೆರಳನ್ನು ಕೊಡು' ಎಂದರು. ಕ್ಷಣವೂ ತಡಮಾಡದೇ ಏಕಲವ್ಯ ಹೆಬ್ಬೆರಳನ್ನು ಕತ್ತರಿಸಿ ಗುರುದಕ್ಷಿಣೆ ಕೊಟ್ಟ. ಇದು ದ್ರೋಣರು ಅರ್ಜುನನಿಗೆ ಕೊಟ್ಟ ಮಾತಿನ ಫಲ. ಅವರು ವಚನಭ್ರಷ್ಟರಾಗದೇ ಆಡಿದ ಮಾತನ್ನು ಉಳಿಸಿಕೊಳ್ಳಬೇಕಾದರೆ ಉಳಿದ ಮಾರ್ಗ ಇದೊಂದೇ.

ಆದರೆ ಈ ಪ್ರಸಂಗ ಕುರಿತ ನಾನಾ ವಿದ್ವಾಂಸರು ನಾನಾ ವಿಧವಾಗಿ ಅಸಂಬದ್ಧ ಪ್ರಲಾಪ ಮಾಡಿದ್ದಾರೆ. ಜಾತೀಯತೆಯನ್ನು ತಂದು ಇಲ್ಲಸಲ್ಲದನ್ನೆಲ್ಲಾ ಹೇಳಿದ್ದಾರೆ. ಇಲ್ಲಿ ಅದೆಲ್ಲಾ ಯಾವುದಕ್ಕೂ ಅವಕಾಶವಿಲ್ಲ.

೧. ಸಮರ ವಿದ್ಯೆ ಆ ಕಾಲದಲ್ಲಿ ಕ್ಷತ್ರಿಯರಿಗಷ್ಟೇ ಮೀಸಲಾಗಿತ್ತು.

೨. ದ್ರೋಣರು ಅರ್ಜುನನಿಗೆ ಕೊಟ್ಟ ವಚನದ ಪರಿಪಾಲನೆ ಮಾಡಬೇಕಾಗಿತ್ತು.

ಈ ಎರಡನ್ನೂ ನೆರವೇರಿಸಬೇಕಾದರೆ ದ್ರೋಣರಿಗಿದ್ದ ಮಾರ್ಗ 'ಗುರುದಕ್ಷಿಣೆ'ಯ ಪ್ರಸಂಗ.

ಇಲ್ಲಿ, ಆ ಕಾಲದ ನಿಯಮ ಹೇಗಿತ್ತೆಂಬುದಕ್ಕೆ ಪರಶುರಾಮನಿಂದ ದಿವ್ಯಾಸ್ತ್ರ ಪಡೆಯಲೆಂದು ಬ್ರಾಹ್ಮಣವೇಷದಿಂದ ಗುರುವಿನ ಬಳಿ ಹೋದ ಕರ್ಣನ ದೃಷ್ಟಾಂತವನ್ನು ಸ್ಮರಿಸಿಕೊಳ್ಳಬಹುದಾಗಿವೆ.

ಒಂದು ದಿನ ಪರಶುರಾಮನು ಶಿಷ್ಯನಾದ ಕರ್ಣನ ತೊಡೆಯ ಮೇಲೆ ತನ್ನ ತಲೆಯನ್ನಿಟ್ಟುಕೊಂಡು ಮಲಗಿದ್ದನು. ಕೀಟವೊಂದು ಬಂದು ಕರ್ಣನ ತೊಡೆಯನ್ನು ಕೊರೆಯತೊಡಗಿತು. ಗಾಯವಾದ ಆ ಸ್ಥಳದಿಂದ ರಕ್ತ ಪ್ರವಾಹವಾಗಿ ಹರಿಯಿತು. ಎಚ್ಚರಗೊಂಡ ಪರಶುರಾಮನಿಗೆ ವಿಚಾರ ತಿಳಿಯಿತು. ಅಷ್ಟಾದರೂ ವಿಚಲಿತನಾಗದೇ ಮೌನದಿಂದಲೇ ಕುಳಿತು ಬಾಧೆಯನ್ನು ಸಹಿಸಿಕೊಂಡಿದ್ದ ಕರ್ಣ ಬ್ರಾಹ್ಮಣನಲ್ಲವೆಂಬುದು ದೃಢವಾಯಿತು. ತಾನು ಸೂತ ಜಾತಿಯವನೆಂದು ಕರ್ಣ ಹೇಳಿಯೂ ಬಿಟ್ಟ. ಬ್ರಾಹ್ಮಣನಿಗೆ ಮಾತ್ರ ಸಲ್ಲಬೇಕಾದ 'ಬ್ರಹ್ಮಾಸ್ತ್ರ'ವು ಕ್ಷಣಕಾಲದಲ್ಲಿ ಸ್ಮರಣೆಗೆ ಬರದಂತೆ ಗುರು ಶಾಪವನ್ನು ಕೊಟ್ಟುಬಿಟ್ಟ. ಹೀಗಿರುವಾಗ ನಿಷಾದನಾದ ಬೇಡ ಜಾತಿಯ ಏಕಲವ್ಯನಿಗೆ ಕ್ಷತ್ರಿಯವಿದ್ಯೆ ಕಲಿಸಲು ದ್ರೋಣರು ನಿರಾಕರಿಸಿದ್ದರಲ್ಲಿ ಯಾವ ತಪ್ಪೂ ಇಲ್ಲ.

**ಆದರೆ 'ಹಿರಣ್ಯ ಧನುಷ'ನೆಂಬ ನಿಷಾದರಾಜನ ಮಗನಾಗಿ ಹುಟ್ಟಿದ ಏಕಲವ್ಯ ಒಬ್ಬ ಬೇಡರ ವರ್ಗಕ್ಕೆ ಸೇರಿದವನೇ ಆದರೂ, ಕ್ಷತ್ರಿಯ ರಾಜಕುಮಾರರಿಗಷ್ಟೇ ಧನುರ್ಬಾಣ ವಿದ್ಯೆಯನ್ನು ಕಲಿಯಲು ಅವಕಾಶವಿದ್ದರೂ ಏಕಲವ್ಯ ನಿರಾಸನಾಗದೇ; ದ್ರೋಣನ ಮಣ್ಣಿನ ಪ್ರತಿಮೆಯನ್ನು ಮಾಡಿಟ್ಟುಕೊಂಡು 'ಗುರುಪೂಜೆ' ಮಾಡುತ್ತಾ ಅನನ್ಯ ಭಕ್ತಿ-ಶ್ರದ್ಧೆ ಭಾವಗಳೊಂದಿಗೆ ಶರಪ್ರಯೋಗದ ವಿದ್ಯೆಯ ಕೈಚಳಕವನ್ನು ಕರಗತ ಮಾಡಿಕೊಳ್ಳುತ್ತಾನೆ. ದ್ರೋಣರ ಪ್ರತ್ಯಕ್ಷ ಶಿಷ್ಯರನ್ನೂ ಮೀರಿಸುವಷ್ಟು ವಿದ್ಯೆಯನ್ನು ಕಲಿತುಕೊಂಡು ಎತ್ತರಕ್ಕೆ ಬೆಳೆಯುತ್ತಾನೆ. ಈ ಘಟನೆ ಸಾರ್ವಕಾಲಿಕವಾದ ಮಾದರಿಯಾ-ಗಿಯೂ, ಉತ್ತಮ ನಿದರ್ಶನವಾಗಿಯೂ ಇರುವುದಷ್ಟೇ ಅಲ್ಲದೆ; ವಿದ್ಯೆ ಕಲಿಯುವವರಿಗೆಲ್ಲಾ ಇರಬೇಕಾದ್ದು ಶ್ರದ್ಧಾ-ಭಕ್ತಿ, ಆಸಕ್ತಿಗಳೇ ಹೊರತು ಕುಲ, ವರ್ಗಗಳಲ್ಲ ಎಂಬ ಅಂಶವನ್ನು ಪ್ರತಿನಿಧಿಸುತ್ತದೆ.**

### ೧೦. 'ಅಪ್ಸರೆಯರು' ಎಂಬ ಸುಂದರಿಯರು :

ಊರ್ವಶಿ, ಪೂರ್ವಚಿತ್ತ, ಸಹಜನ್ಯಾ, ಮೇನಕಾ, ವಿಶ್ವಾಚೀ ಮತ್ತು ಘೃತಾಚಿ ಎಂಬ ಆರುಮಂದಿ ಅಪ್ಸರೆಯರಲ್ಲಿಯೂ ಬ್ರಹ್ಮನ ಮಾನಸಪುತ್ರಿಯಾದ ಮೇನಕೆಯು ಪರಮಶ್ರೇಷ್ಠಳೆಂಬ ಪ್ರತೀತಿಯಿದೆ. ಈ ಅಪ್ಸರೆಯರು ಬೇರೆಯವರಿಂದ ತಮ್ಮಲ್ಲಿ ಹುಟ್ಟಿದ ಶಿಶುಗಳನ್ನು ನಿರ್ದಯವಾಗಿ ಎಲ್ಲಂದರಲ್ಲಿ ಬಿಟ್ಟು ಹೋಗುತ್ತಿದ್ದರು ಎನ್ನುವುದಕ್ಕೆ ನಮಗೆ 'ಮಹಾಭಾರತ'ದಲ್ಲಿಯೇ (ಭಾ-೧, ಪು. ೪೮೦, ೧೫೧, ೩೮೫, ೬೬೪) ಉಲ್ಲೇಖಗಳಿವೆ.

ಈ ಅಪ್ಸರೆಯರು ದೇವವೇಶ್ಯೆಯರಾದ ತಮ್ಮ ಧರ್ಮವೇ ಇದೆಂದು ಭಾವಿಸಿದ್ದರು. ಒಮ್ಮೆ ಹಿಂದಿರುಗಿಯೂ ನೋಡದೆ ಹೊರಟು ಹೋಗುತ್ತಿದ್ದರು. "ಆದ್ರಿಕೆಯೆಂಬ ಅಪ್ಸರೆಯು, ರೇತಸ್ಸು ನೀರಿನಲ್ಲಿ ಬಿದ್ದೊಡನೆಯೇ ಸಂತೋಷದಿಂದ ವಿಶ್ವಾಸಪೂರ್ವಕವಾಗಿ ಧಾರಣೆ ಮಾಡಿ ಗರ್ಭಧರಿಸಿದಳು. ಅಪ್ಸರೆಯಿಂದಲೇ ವಸಿಷ್ಠನು ಜನಿಸಿದನು. ಅಪ್ಸರೆಯರು ಗಂಧರ್ವರ ಪತ್ನಿಯರು. ಅಪ್ಸರ ಸ್ತ್ರೀಯರು ನದಿ ಮತ್ತು ಸರೋವರ, ಗಂಗಾನದಿಗೆ ಬರುವುದು ಸಾಧಾರಣವಾಗಿ ಭೂಲೋಕದಲ್ಲಿ ಅದರಲ್ಲಿಯೂ ವೃಕ್ಷಗಳು ಅವರ ಕ್ರೀಡಾ ಕ್ಷೇತ್ರವಾಗಿದ್ದು ಅವರ ಪ್ರೇಮವು ಮನುಷ್ಯರಿಗೂ ಉಂಟು." ಎನ್ನುವುದಕ್ಕೆ ಉಲ್ಲೇಖಗಳಿವೆ.

### ೧೨. ಘೃತಾಚಿ ಅಪ್ಸರೆಯ ಮಗ -ಶುಕನ ಜನ್ಮ :

ಮೇರು ಪರ್ವತದ ಶಿಖರದಲ್ಲಿ ಕೃಷ್ಣದ್ವೈಪಾಯನ ಪುತ್ರನನ್ನು ಪಡೆಯುವ ಸಲುವಾಗಿ ತಪಸ್ಸು ಮಾಡುತ್ತಿದ್ದನು. ಕೆಲವು ಕಾಲಾನಂತರ ವ್ಯಾಸರು ಆಶ್ರಮಕ್ಕೆ ಹಿಂತಿರುಗಿ ಬಂದರು. ಅಗ್ನಿಯನ್ನು ಪಡೆಯಲೆಂದು ಮಂಥನ ದಂಡಗಳಿಂದ ಮಥಿಸ ತೊಡಗಿದರು. ಅದೇ ಸಮಯಕ್ಕೆ ಅನುಪಮ ಸುಂದರಿಯಾದ ಘೃತಾಚಿ ಎಂಬ ಅಪ್ಸರೆಯನ್ನು ನೋಡಿದರು. ಒಡನೆಯೇ ವ್ಯಾಸರು ಕಾಮಾಭಿಭೂತರಾದರು. ವ್ಯಾಸರು ಕಾಮದಿಂದ ವ್ಯಾಕುಲಗೊಂಡಿರುವುದನ್ನು ಘೃತಾಚಿಯೂ ನೋಡಿದಳು. ಅವರ ಸಮೀಪಕ್ಕೂ ಬಂದಳು. ವ್ಯಾಸರ ಅಂಗಾಂಗಗಳಲ್ಲಿ ಕಾಮವೇದನೆವುಂಟಾಯಿತು. ವ್ಯಾಸರು ಮಹಾಧೈರ್ಯ ವಹಿಸಿ ಕಾಮವನ್ನು ನಿಗ್ರಹಿಸಲು ಪ್ರಯತ್ನಿಸಿದರು. ಆದರೆ ಅಪ್ಸರೆಯ ಕಡೆಗೆ ಹೋದ ಮನಸ್ಸನ್ನು ನಿಯಂತ್ರಿಸಲು ಸಾಧ್ಯವಾಗಲೇ ಇಲ್ಲ. ಘೃತಾಚಿ ವ್ಯಾಸರ ಸಮಾಗಮ ಆಯಿತು. ಗರ್ಭವತಿಯಾದ ಘೃತಾಚಿಗೆ ನವಮಾಸಗಳು ತುಂಬಿ ಗಂಡುಮಗುವಿಗೆ ಜನ್ಮ ನೀಡಿದಳು.- ಆ ಮಗುವಿಗೆ "ಶುಕ"ನೆಂದು ಅವರು ನಾಮಕರಣ ಮಾಡಿದರು.

ಭೀಷ್ಮನು "ಇಂದ್ರಿಯಗಳನ್ನು ಅಂಕೆಯಲ್ಲಿಟ್ಟುಕೊಳ್ಳುವುದೇ ತಪಸ್ಸು. ಇಂದ್ರಿಯಗಳ ಸ್ವೇಚ್ಛಾಚಾರ ವೃತ್ತಿಯಿಂದಲೇ ಪಾಪಯುಕ್ತನಾಗುತ್ತಾನೆಂಬುದರಲ್ಲಿ ಸಂಶಯವೇ ಇಲ್ಲ."[೯] ಎಂದು ಯುಧಿಷ್ಠಿರನಿಗೆ ಹೇಳುತ್ತಾನೆ.

ಆದರೆ 'ಮಹಾಭಾರತ'ದಲ್ಲಿ ಬರುವ ಋಷಿಗಳೆಲ್ಲರೂ ಇಂದ್ರಿಯಗಳನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲಾರದವರಾಗಿದ್ದಾರೆ. ಇನ್ನೊಂದು ವಿಶೇಷವೆಂದರೆ ಯುಧಿಷ್ಠಿರನು ಭೀಷ್ಮನನ್ನು **ತಪೋಧನರಾದ ವ್ಯಾಸರು ಯಾವ ಸ್ತ್ರೀಯ ಗರ್ಭದಿಂದ ಶುಕನನ್ನು ಪಡೆದರು**? ಎಂದು ಕೇಳುವುದರಿಂದ ಘೃತಾಚಿ ಗಿಣಿಯ ರೂಪ ಧರಿಸಿದ್ದು; ವ್ಯಾಸರ ವೀರ್ಯ ಅರಣಿಯಲ್ಲಿ ಬಿದ್ದು, ಅಗ್ನಿಗೆ ಬದಲಾಗಿ ಶುಕನು ಜನ್ಮ ತಾಳಿದನೆಂದು ಹೇಳುವುದೆಲ್ಲ ಅನೈಸರ್ಗಿಕ, ಅಸಂಬದ್ಧ ಪ್ರಲಾಪವಾಗಿದೆ.

ಹೀಗಾಗಿ "ಶುಕದೇವ"ನೂ ಕೂಡಾ ಒಬ್ಬ ತಳಸಮುದಾಯದ ಉತ್ಪನ್ನ ಶೂದ್ರನೆನ್ನುವುದರಲ್ಲಿ ಎರಡು ಮಾತಿಲ್ಲವೆಂದು ಸ್ಪಷ್ಟವಾಗುತ್ತದೆ.

**ಅಡಿಟಿಪ್ಪಣಿಗಳು :**

೧. ಭಾಗ–೧, ಪು, ೪೭೬.
೨. ಜಿ.ಟಿ. ನಾರಾಯಣರಾವ್, ವಿಜ್ಞಾನ ವರ್ತಮಾನ, ಪು. ೮೧.
೩. ಯಜುರ್ವೇದ ಸಂಹಿತೆ, ಭಾ–೧, ಪು. ೧೯೯.
೪. ಮಹಾಭಾರತ, ಭಾ–೧, ಪು. ೩೮೩.
೫. ಮಹಾಭಾರತ, ಭಾ–೧, ಪು. ೪೮೧.
೬. ಮಹಾಭಾರತ, ಭಾ–೧. ಪು. ೧೫೧.
೭. ಮಹಾಭಾರತ, ಭಾ–೨, ಪು. ೮೫೨.
೮. ಮಹಾಭಾರತ, ಭಾ–೨, ಪು. ೧೦೧೬.
೯. ಮಹಾಭಾರತ, ಭಾ–೨೬, ಪು. ೩೦೨೪.

~~~\*\*\*~~~
~~~

## ಅಧ್ಯಾಯ-4

## 'ಮಹಾಭಾರತ' ಕುರಿತ ಆಧುನಿಕ ಚಿಂತನೆಗಳ ಸಮೀಕ್ಷೆ.

'ವೈಜ್ಞಾನಿಕ ಮನೋಧರ್ಮ'ವು ನಮ್ಮ ಬದುಕಿನ ಪುನರ್ ಮೌಲೀಕರಣದ ಫಲವಾಗಿ ರೂಪುಗೊಳ್ಳುವ ಒಂದು ಮನೋವಲಯ. "ಮನೋವಲಯಕ್ಕೂ ಸಾಹಿತ್ಯಕ್ಕೂ ಸಂಬಂಧವಿರುವುದರಿಂದ **ವೈಜ್ಞಾನಿಕ ಮನೋಧರ್ಮವು ಸಾಹಿತ್ಯದ ಪುನರ್ ಮೌಲ್ಯೀಕರಣ ಸಂದರ್ಭದಲ್ಲಿ** ವಹಿಸಿರುವ **ಪಾತ್ರ ಹಾಗೂ ಎದುರಿಸುವ ಸಮಸ್ಯೆಗಳ ಶೋಧ** ಆಸಕ್ತಿದಾಯಕವಾದುದು."[೧] ಮಹಾಭಾರತ ಕಾಲದ ನಡೆದ ಅವೈಜ್ಞಾನಿಕ ಘಟನೆಗಳಿಗೆ ಕಾರಣವೇನು? ಎಂಬ ಪ್ರಶ್ನೆ ನಮ್ಮಲ್ಲಿ ಉದ್ಭವಿಸುವುದು ಸಹಜ. "ಆ ಪ್ರಾಚೀನ ದಿನಗಳಂದು ಚಿಂತನಶೀಲರು ನೀಡಿದ ಪ್ರತಿಯೊಂದು ವಿವರಣೆಯೂ **ಧಾರ್ಮಿಕ – ಪೌರಾಣಿಕ – ಮಾಂತ್ರಿಕ – ರೂಪಕ ಪೋಷಾಕನ್ನು ಪಡೆದದ್ದು ಸಹಜವೇ.**"[೨] ಎನ್ನುವುದಾದರೆ, ಕಾರ್ಯರಹಿತ ಕಾರಣವಿಲ್ಲ, ಅಂತೆಯೇ ಕಾರಣರಹಿತ ಕಾರ್ಯವೂ ಇಲ್ಲ. ಈ ದೃಷ್ಟಿಯ ಮನಸ್ಸಿನ ಸ್ಥಿತಿಯೇ **ವೈಚಾರಿಕತೆ, ವೈಜ್ಞಾನಿಕತೆ, ಆಧುನಿಕ ಚಿಂತನೆ** ಇತ್ಯಾದಿ. ಮಹಾಭಾರತ ಅವೈಜ್ಞಾನಿಕ ಪ್ರಕರಣಗಳನ್ನೆಲ್ಲ ವೈಚಾರಿಕತೆಯ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸುವುದೇ ಆಧುನಿಕ ಚಿಂತನೆಯ ಉದ್ದೇಶ. ಪ್ರಯೋಗ ಮತ್ತು ತರ್ಕಸಹಿತ ವಿವರಣೆ ಅರಸುವಾಗ ಮಾಡುವ ಅರಿವೇ **ವಿಜ್ಞಾನ.**"[೩] ಮಹಾಭಾರತದಲ್ಲಿನ ಸಮಸ್ಯೆಗಳನ್ನು ಆಧುನಿಕವಾಗಿ ಚಿಂತಿಸಲು ಎದುರಾಗುವ ಸಮಸ್ಯೆಗಳನ್ನು ವಿಜ್ಞಾನದ ಮೂರು ಆಧಾರಗಳ ಅನುಸಾರ ಪರಿಹರಿಸಲು ಯತ್ನಿಸುವ ಕ್ರಮಗಳೆಂದರೆ;

೧. ಸಾಮಾನ್ಯ ನಿರೂಪಣೆ
೨. ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ
೩. ವಾದರೂಪಣೆ
೪. ಪ್ರಾಯೋಗಿಕ ಪರೀಕ್ಷಣೆ
೫. ಸಿದ್ಧಾಂತ ಮಂಡನೆ.

– ಇವೇ **"ವೈಜ್ಞಾನಿಕ ವಿಧಾನ (Scientific Method)** ಎಂದು ಹೆಸರು. ಇದರ ಸೋಪಾನಗಳು."[೪]

ಪ್ರಾಯೋಗಿಕ ತಪಾಸಣೆಯಲ್ಲಿ ಉತ್ತೀರ್ಣವಾಗುವ ವಾದಕ್ಕೆ "ಸಿದ್ಧಾಂತ" **(Theory)** ಎಂದು ಹೆಸರು. ಕನ್ನಡದಲ್ಲಿ ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು' ಎಂಬ ಈ ಅಧ್ಯಯನಕ್ಕೂ ಇದೇ ಪದ್ಧತಿಯನ್ನು ಅನುಸರಿಸಲಾಗಿದೆ.

### ಅ. ಮಹಾಭಾರತದಲ್ಲಿರುವ ಆಶಯಗಳು "ಆಧುನಿಕತ್ವ"ವನ್ನು ಪ್ರತಿನಿಧಿಸುವ ವಿಧಾನ

***"ಆಧುನಿಕ ಚಿಂತನೆ"ಯ ಉಪಕ್ರಮದಲ್ಲಿ ವಿವಿಧ ಚಿಂತಕರು ಈವರೆವಿಗೂ ನಡೆಸಿರುವ ಅಧ್ಯಯನಗಳ ಕುರಿತು ವಿಶ್ಲೇಷಿಸಲಾದ 'ಮಹಾಭಾರತ'ದ ಆಶಯದ ಒಳನೋಟ :***

### ೧. ವಿ. ಸೀತಾರಾಮಯ್ಯ ಅವರ "ಕೃಷ್ಣ ಚಾರಿತ್ರ್ಯ" ಕೃತಿಯಲ್ಲಿ "ಮಹಾಭಾರತ" "ಶೀರ್ಷಿಕೆ ಮತ್ತು ಅದರ ವ್ಯಾಪ್ತಿ" :

ವಿ.ಸೀ. ಅವರು, ತಮ್ಮ "ಕೃಷ್ಣ ಚಾರಿತ್ರ್ಯ" ಗ್ರಂಥದಲ್ಲಿ 'ಮಹಾಭಾರತ'ದ ಶೀರ್ಷಿಕೆ ಮತ್ತು ಅದರ ವ್ಯಾಪ್ತಿಯ ಕುರಿತಂತೆ ಹೀಗೆ ಹೇಳುತ್ತಾರೆ;

**"ಮಹಾಭಾರತದ ಮೊದಲ ಹೆಸರು 'ಜಯ'. 'ಜಯಂ ಉದರಯೇತ್' ಎಂಬ ಮಾತೂ ಪ್ರಸಿದ್ಧ. ಈ 'ಜಯ' ಕೌರವರ ಮೇಲಿನ ಪಾಂಡವರ ಜಯ. ಮೂಲ ಪಾಠದ ವಿವರಗಳನ್ನು ವ್ಯಾಸರು ಹೇಳಿರುವುದು ಅಂದರೆ; ೨೪,೦೦೦ ಶ್ಲೋಕಗಳಿದ್ದುದು, ೭,೫೦೦ ಆಗಿ ಆಮೇಲೆ ಒಂದು ಲಕ್ಷಕ್ಕೆ ಮೀರಿ ಬೆಳೆದಿದೆ."**[೫] ಎಂದಿದ್ದಾರೆ.

**೨. ಮೂಲ ಪಾಠ ಮತ್ತು ಹಸ್ತಪ್ರತಿಗಳ ವಿವರ :**

**ಪುಣೆಯ ಡಾ॥ ಸುಕ್ತಂಕರ್ ಅವರು ಸೇವೆ ಸಲ್ಲಿಸುತ್ತಿದ್ದ ಭಂಡಾರ್‌ಕರ್ ಸಂಸ್ಥೆಯು** ಸಂಪಾದಿಸಿರುವ 'ಮಹಾಭಾರತ'ದ ಗ್ರಂಥದ ಪಾಠ ಪ್ರಧಾನವಾಗಿರುವಂತೆ ೧೦ ಮುಖ್ಯ ಪಾಠಗಳಲಿದ್ದ ಹಸ್ತಪ್ರತಿಗಳಿಂದ ತಯಾರಿಸಿದ್ದು. ಕೆಲವು ಪರ್ವಗಳನ್ನು ೨೦, ೩೦, ೪೦ ರಿಂದ ತೆಗೆದಿದೆ. ಆದಿಪರ್ವಕ್ಕೂ ೬೦ ಹಸ್ತಪ್ರತಿಗಳನ್ನು ಬಳಸಲಾಗಿದೆ. ೨೩೫ ಹಸ್ತಪ್ರತಿಗಳಾದರೂ ಆದಿಪರ್ವಕ್ಕೆ ಇವೆಯೆಂದು ತಿಳಿದು ಬಂದಿದೆ. ಮುಖ್ಯವಾಗಿ ಎರಡು ಸಂಪ್ರದಾಯಗಳಿರುವುದಾಗಿ ತಿಳಿದು ಬಂದಿದೆ. ಒಂದು ಉತ್ತರದ್ದು. ಇನ್ನೊಂದು ದಕ್ಷಿಣದ್ದು. ಉತ್ತರದಲ್ಲಿ ೨ ಮಹಾಸಂಪ್ರದಾಯಗಳಿವೆ. ಕಾಶ್ಮೀರದ ಶಾರದ, ಎರಡನೆಯದು ನೇಪಾಳಿ, ಮೈಥಿಲಿ, ಬಂಗಾಳಿ. ಇನ್ನೊಂದು ಕಾಶ್ಮೀರದಲ್ಲಿದ್ದ ದೇವನಾಗರಿ ಪಾಠ. ಬಂಗಾಳದ್ದೊಂದು. ದಕ್ಷಿಣದ್ದು ೨ ಬಗೆಯವು. ತೆಲುಗು ಮತ್ತು ಮಲೆಯಾಳಂ.

ಸದ್ಯಕ್ಕೆ ಇರುವ ಪ್ರಕಾರಗಳಲ್ಲಿ ಅತೀವ ಪ್ರಯಾಸಪಟ್ಟು ಪರಿಶೋಧನೆಯನ್ನು ಪಾಠದ ಔಚಿತ್ಯವನ್ನು ದೇಶ-ವಿದೇಶಗಳವರ ನೆರವಿನಿಂದ ಭಂಡಾರ್‌ಕರ್ ಸಂಸ್ಥೆಯ ಪಾಠ ಸ್ಥಾಪಿಸಿದ್ದಾಗಿದೆ.

**೩. ಕೃಷ್ಣನು ಯಾರು ?**

ಸಾಮಾನ್ಯವಾಗಿ ಎಲ್ಲರೂ ತಿಳಿದಿರುವಂತೆ ಕೃಷ್ಣನು ವಿಷ್ಣುವಿನ ಅವತಾರಿ, ದೇವರು, ಭಗವಂತ ಇವೇ ಮುಂತಾಗಿ ಹೇಳುವುದುಂಟು. ಏಕೆಂದರೆ; ಸುಮಾರು ಕ್ರಿ.ಪೂ. ೬ನೇ ಶತಮಾನದ ಹೊತ್ತಿಗೆ ಭಗವಾನ್ ವಾಸುದೇವ. ಗರುಡಧ್ವಜನೆಂಬ ಹೆಸರಿನ ನಂಬಿಕೆ ಬೆಳೆದಿರುತ್ತದೆ. ವೃಷ್ಣಿ ವಂಶದ ವಸುದೇವನ ಮಗನಾದ ವಾಸುದೇವ-'ವೃಷ್ಣಿನಾಂ ವಾಸುದೇವೋಸ್ಮಿ'-ಕೃಷ್ಣ- ಇವನನ್ನೇ ಮೂಲ ವಾಸುದೇವನೆಂದು ಮಹಾಭಾರತದಲ್ಲಿ ಉಲ್ಲೇಖಿಸಿರುವುದು. ಕೃಷ್ಣನ ವೀರ, ಧೈರ್ಯ, ಆತ್ಮವಿಶ್ವಾಸ ಬಹಳ ದೊಡ್ಡದು. ಯುದ್ಧಕ್ರಿಯೆಗಳಲ್ಲಿ ಕೂಡಾ ಎಂತಹ ಸಂದರ್ಭದಲ್ಲೂ ಎದೆಗೆಡದೆ ಮನಸ್ಸನ್ನು ನಿಸ್ಸಾಹಯಕ ಅಥವಾ ದುರ್ಬಲ ಮಾಡಿಕೊಳ್ಳದೇ ಸಮಯಜ್ಞಾನ ತಿಳಿದಂತಹವನು ಈತನು.

"ಭೀಷ್ಮ ಪರ್ವ"ದಲ್ಲಿ ಬರುವ ಗೀತೋಪದೇಶದ ಭಾಗ ಆತನ ಜೀವನಕ್ಕೆ ಸಂಬಂಧಿಸಿದ ಒಂದು ಮಹಾ ಪ್ರಕರಣ.

ಯುದ್ಧದಲ್ಲಿ ತೊಡಗುವ ಮುಂಚೆ ಸಂಜಯನು ಧೃತರಾಷ್ಟ್ರನಿಗೆ ಈ ರೀತಿ ಕೃಷ್ಣಾರ್ಜುನರ ಮಾತುಕತೆ ಬೆಳೆಯಿತು ಎನ್ನುವುದನ್ನು ಸುಮಾರು ೧೮ ಅಧ್ಯಾಯಗಳು ೭೦೦ ಶ್ಲೋಕಗಳಲ್ಲಿ ಆತನು ಬಹುಶಃ ಸಾರವತ್ತಾಗಿ ಏನನ್ನು ಎಷ್ಟು ಪ್ರಮಾಣದಲ್ಲಿ ಹೇಳಿರಬಹುದು? ಎಂಬುದನ್ನು ಪರಿಶೀಲಿಸಬೇಕು. ವಿಶ್ವರೂಪ ದರ್ಶನ, ನಾನಾ ಬಗೆಯ ಯೋಗಗಳ ಕುರಿತು ಸಾವಿರ ವರ್ಷಗಳಲ್ಲಿ ಬೆಳೆಸಲಾಗಿದೆ.

'ಮಹಾಭಾರತ'ದಲ್ಲಿ ಅವನ ಪ್ರವೇಶವಾಗುವುದು 'ದ್ರೌಪದೀ ಸ್ವಯಂವರ'ದ ಕಾಲದಲ್ಲಿ. ಅರಣ್ಯಪರ್ವ, ವಿರಾಟಪರ್ವಗಳಲ್ಲಿ ಕೃಷ್ಣನ ಅಂಶಗಳು ಹೆಚ್ಚಾಗಿ ಬರುವುದಿಲ್ಲ. ಉದ್ಯೋಗಪರ್ವದ ಬಹುಮಟ್ಟಿಗೆ ಆತನದೇ ಕಾರ್ಯ. ಪ್ರಧಾನಪಾತ್ರ ವಹಿಸಿ ಆತನೇ ನಾಯಕನಾಗಿ ನಡೆಯಲೇ ಬೇಕಾದ ಯುದ್ಧದ ಸಂಬಂಧದಲ್ಲಿ ಕಾವ್ಯವನ್ನೆಲ್ಲಾ ಪಾಂಡವರ ಕಡೆಯಿಂದ ಮಾಡಿಸಿದಾತನು ಈತನು.

ಹಾಗೂ ಅವನು ಮಾಡಿದ ಕಾರ್ಯಗಳನ್ನು ಉಲ್ಲೇಖಿಸುತ್ತಾ 'ಕಪಟನಾಟಕ ಸೂತ್ರಧಾರಿ' ಎಂಬ ಮಾತೂ ಬೆಳೆಯುತ್ತದೆ. ಆದರೆ ಯಾವುದನ್ನು ನಮ್ಮ ಕುಲದವರು ಮತಧರ್ಮ ಎಂದು ಪರಿಗಣಿಸಲಾರರೋ ಅಂಥದು ಈ ಬೆಲೆಗಾಣ್ಕೆಯಲ್ಲಿ ಮುಖ್ಯ ಸ್ಥಾನವನ್ನು ಪಡೆಯುವರು. 'ಮಹಾಭಾರತ'ದಲ್ಲಿ ಕೃಷ್ಣನ ವ್ಯಕ್ತಿತ್ವ, ಕಾವ್ಯ ಕಾಣುವುದು ವ್ಯವಹಾರ ಪ್ರಪಂಚದಲ್ಲಿ. ಆತನು ನಡೆದುಕೊಂಡ ಆತನ ಸ್ಥಾನ-ಮಾನ ಏನು? ಎಂಬುದಿಲ್ಲ ಪ್ರಧಾನ. ಕೆಲವು ಕಡೆ ಆತನು ಅತಿಮಾನುಷ ವ್ಯಕ್ತಿ ಎನ್ನಲಾಗಿದೆ. ಆದರೆ "ಮಹಾಭಾರತ ಎಂದು ಈಗ ನಮಗೆ ದೊರೆತಿರುವ

ಗ್ರಂಥದಲ್ಲಿ ಪ್ರಕ್ಷಿಪ್ತವೆಂದೂ ಆಮೇಲಿನವರು ಸೇರಿಸಿರುವ ಭಾಗಗಳಿರಬಹುದೆಂದೂ ಸ್ಪಷ್ಟವಾಗುವ ಭಾಗಗಳು ಹಲವಾರು ಇರುತ್ತವೆ. ಮೂಲ ಭಾರತದಕ್ಕೆ ಸಂಬಂಧಿಸಿದಂತೆ ಮಾತ್ರ ಪ್ರಸಂಗಗಳನ್ನು ಆಯಬಹುದೇನೋ."[೬]

"ಗ್ರಂಥದುದ್ದಕ್ಕೂ ಕೃಷ್ಣನು ಮನುಷ್ಯನಾಗಿ ಮನುಷ್ಯ ಧರ್ಮದಿಂದಲೇ ವ್ಯವಹರಿಸಿದ್ದಾನೆ, ಮನುಷ್ಯಾತೀತವಾದ ಯಾವ ಕಾರ್ಯವನ್ನೂ ಆತನು ಮಾಡಿಲ್ಲ, ತಾನು ಈಶ್ವರನೆಂದು ಅವನೆಲ್ಲಿಯೂ ಹೇಳಿಕೊಂಡಿಲ್ಲ."[೭] ಎಲ್ಲೆಲ್ಲಿ ಕೃಷ್ಣನು ಈಶ್ವರನೆಂಬ ವರ್ಣನೆ ಇದೆಯೋ ಈಶ್ವರೀಯ ಶಕ್ತಿಯು ಪ್ರಕಟವಾಗಿದೆಯೋ ಅವೆಲ್ಲವೂ ಪ್ರಕ್ಷಿಪ್ತವೆಂದು ಆಧುನಿಕ ನಿರ್ಮಿತವೆಂದು ವಾದಿಸುತ್ತಾರೆ.

ವಿ.ಸೀ. ಅವರ 'ಕೃಷ್ಣಚಾರಿತ್ರ್ಯ'ವು ಕೃಷ್ಣನ ಚರಿತ್ರೆಯನ್ನು ಪರಿಶೀಲಿಸಲು ಉದ್ಯುಕ್ತವಾಗಿರುವುದಕ್ಕಿಂತಲೂ ಹೆಚ್ಚಾಗಿ ಶ್ರೀಕೃಷ್ಣನ ಹಿಂದೆ ನೆರಳಿನಂತೆ, ಪರಿವಾರದಂತೆ 'ಮಹಾಭಾರತ' ಕಥೆಯೇ ಬರುತ್ತದೆ. ಉದ್ಯೋಗಪರ್ವದಿಂದ ಹಿಡಿದು ಭಾರತದ ಸಮಾಪ್ತಿಯವರೆಗೂ ಕೃಷ್ಣನ ವ್ಯಕ್ತಿತ್ವವೇ ಎದ್ದು ಕಾಣುತ್ತದೆ. ಹೆಸರಿಗೆ ಕೌರವ–ಪಾಂಡವರ ಯುದ್ಧವಾದರೂ ಇದಕ್ಕೆ ಸೂತ್ರಧಾರೀ ಕೃಷ್ಣನೇ ಆಗಿದ್ದಾನೆ.

ಹೀಗೆ ಡಾ॥ ವಿ.ಸೀ. ಅವರು "ಆಧುನಿಕ ಮನೋಭಾವನೆ"ಯೊಂದಿಗೆ ರಾಮಾಯಣದಲ್ಲಿ ರಾಮನೂ, ಮಹಾಭಾರತದಲ್ಲಿ ಕೃಷ್ಣನೂ ಮನುಷ್ಯರೆಂಬ ನಿಲುವನ್ನು ತಳೆದಿದ್ದಾರೆ."[೮]

**ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ "ಭಾರತತೀರ್ಥ ಕೃತಿಯಲ್ಲಿ "ಮಹಾಭಾರತ"ದ ಹೆಗ್ಗಳಿಕೆ ಮಾಸ್ತಿ ಅವರ ದೃಷ್ಟಿಯಲ್ಲಿ :**

"ಪ್ರಾಚೀನ ಭಾರತ ಸಂಶೋಧನೆಯ ಇತಿಹಾಸವೆಂದು ಪ್ರಸಿದ್ಧವಾದ 'ಮಹಾಭಾರತ'ವು ಜಗತ್ತಿನ ಮಹಾಕಾವ್ಯಗಳಲ್ಲಿ ಅಗ್ರಗಣ್ಯವಾದುದು."[೯] ಎಂದು ಮಾಸ್ತಿ ಅವರು 'ಮಹಾಭಾರತ'ದ ಮಹತ್ವದ ಹೆಗ್ಗಳಿಕೆಯ ಕುರಿತಾಗಿ ಚಿಂತಿಸುತ್ತಾರೆ.

**೨. "ಮಹಾಭಾರತ"ದ "ಕರ್ತೃತ್ವ ವಿಚಾರ"ದ ಚರ್ಚೆ :**

'ಮಹಾಭಾರತವು ಸಂಶೋಧಕರಿಗೆ, ವಿಮರ್ಶಕರಿಗೆ ಗಣಿಯಿದ್ದಂತೆ. ಮಹಾಭಾರತದಲ್ಲಿ ಹಲವಾರು ಸಂಶೋಧನ ಸಮಸ್ಯೆಗಳಿದ್ದು "ಕರ್ತೃತ್ವ ವಿಚಾರ"ದಿಂದ ಹಿಡಿದು ಅದು ನೀಡುವ ಸಂಸ್ಕೃತಿಯ ವಿವೇಚನೆಯವರೆಗೆ ವ್ಯಾಪ್ತಿಯನ್ನು ಹೊಂದಿದೆ. ಮಾಸ್ತಿಯವರು ಸಂಪ್ರದಾಯಿಕ ಮತ್ತು ಆಧುನಿಕ ಚಿಂತನೆಗಳೆರಡರಿಂದಲೂ ಜಿಜ್ಞಾಸೆಗೆ ಗುರಿಪಡಿಸುವುದನ್ನು ತಮ್ಮ 'ಭಾರತತೀರ್ಥ' ಗ್ರಂಥದಲ್ಲಿ ಸಮಾಲೋಚಿಸಿದ್ದಾರೆ.

"ವ್ಯಾಸ ಎನ್ನುವುದೊಂದು ಗುರು ಪರಂಪರೆಯ ಹೆಸರಿರಬಹುದು. 'ಮಹಾಭಾರತ'ಕ್ಕೆ ಸಂಬಂಧಿಸಿದಂತೆ 'ವ್ಯಾಸ' ಎನ್ನುವುದೊಂದು 'ಕೂಟ' ಅಥವಾ ಒಂದು ಕುಟುಂಬದ ಹೆಸರಾಗಿರಬೇಕೆಂದು ಕೆಲವರು ಊಹಿಸಿದ್ದಾರೆ." ಎನ್ನುತ್ತಾರೆ. ಹೀಗೆ ಮಾಸ್ತಿಯವರು 'ಮಹಾಭಾರತ' ಸಂಶೋಧನಾ ಸಮಸ್ಯೆಗಳಲ್ಲಿ ಕರ್ತೃತ್ವದ ವಿಚಾರವನ್ನು ಆಧುನಿಕ ಚಿಂತನೆಯ ಮಾದರಿಯಲ್ಲಿ ವಿಚಾರ ಮಾಡಿರುವುದೊಂದು ಕುತೂಹಲಕರವಾದ ವಿಷಯ.

'ಇತಿಹಾಸ' ಎನಿಸಿರುವ 'ಮಹಾಕಾವ್ಯ'ವಾದ 'ಮಹಾಭಾರತ'ವನ್ನು ವೇದವ್ಯಾಸರೇ ರಚಿಸಿದರೆನ್ನುವುದು ಸಂಪ್ರದಾಯ. ವ್ಯಾಸ ಋಷಿಗಳು ಭಾರತದ ಇತಿಹಾಸ ನಡೆಯುವ ಕಾವ್ಯಕ್ಕೆ ಜೀವಂತರಾಗಿದ್ದರು. ವೇದಗಳನ್ನು ನಾಲ್ಕು ಭಾಗ ಮಾಡಿದರು, ೧೮ ಪುರಾಣಗಳನ್ನು ರಚಿಸಿದರು ಇತ್ಯಾದಿಯಾಗಿ 'ಮಹಾಭಾರತ'ದ ಕರ್ತೃವಿಗೆ ಬಹು ವಿಶಿಷ್ಟವಾದ ಸ್ಥಾನವನ್ನು ಕಲ್ಪಿಸಿದೆ. "ವ್ಯಾಸ ಎನ್ನುವುದು ಒಬ್ಬರ ಹೆಸರು ಮಾತ್ರವಲ್ಲ, ಒಂದು ಕುಟುಂಬ ಅಥವಾ ಗುರುಪರಂಪರೆಯ ಹೆಸರಿರಬೇಕೆನ್ನುವುದು ಹೊಸ ದೃಷ್ಟಿಯ ಜನರ ಕೆಲವರ ಊಹೆ."[೧೦] ಇದನ್ನು ಅವರು ಸಂಪ್ರದಾಯ ಮತ್ತು ಆಧುನಿಕ ಸಮನ್ವಯಗಳ ನಿರ್ಣಯವೆಂದು ಸ್ಪಷ್ಟವಾಗುತ್ತದೆ.

**೩. "ಪ್ರಕ್ಷಿಪ್ತಗಳ ಸೇರುವಿಕೆ" ಮತ್ತು "ಮೂಲ ಮಹಾಭಾರತ"ದ ವಿಮರ್ಶೆ :**

"ಸಹಸ್ರಾರು ವರ್ಷಗಳಲ್ಲಿ ಬೆಳೆದು ಬಂದ 'ಮಹಾಭಾರತ'ದಲ್ಲಿ ಅನೇಕ ಪ್ರಕ್ಷಿಪ್ತಗಳು ಬಂದು ಸೇರಿ ಸೇರಿ ಇಂದಿಗೆ ಸುಮಾರು ಒಂದು ಲಕ್ಷ ಶ್ಲೋಕಗಳಷ್ಟು ಬೃಹತ್ ಗಾತ್ರವನ್ನು ಹೊಂದಿದೆ."[೧೧] ಅದನ್ನು ಹೊರತು

ಪಡಿಸಿದರೆ ಉಳಿಯುವ ೨೪,೦೦೦ ಶ್ಲೋಕಗಳೇ ವ್ಯಾಸಕೃತ 'ಭಾರತ'ವೆಂದೂ, ಉಪಾಖ್ಯಾನಗಳಿಂದ ಕೂಡಿರುವುದು 'ಮಹಾಭಾರತ'ವೆಂದೂ ಮಾಸ್ತಿ ಅವರು ಬಹಳ ಸಮರ್ಪಕವಾಗಿ ನಿರೂಪಿಸಿದ್ದಾರೆ.

### ೪. "ಮಹಾಭಾರತ"ದಲ್ಲಿ "ಬಹುಪತಿತ್ವ ಪದ್ಧತಿ"ಯ ಸಮರ್ಥನೆ :

'ಬಹುಪತಿತ್ವ' ಪದ್ಧತಿಯನ್ನು ಸಮರ್ಥಿಸುವಂತೆ, 'ಹಲವರು ಸೋದರರು ಒಬ್ಬ ಪತ್ನಿಯನ್ನು ವಿವಾಹ ಮಾಡಿ-ಕೊಳ್ಳುವುದು ತಮ್ಮ ಕುಲದಲ್ಲಿ ಉಂಟು.'[೧೨] ಎಂದು ಯುಧಿಷ್ಠಿರನು ಹೇಳಿದ ಮಾತು ಈ ಪ್ರಸಂಗದಲ್ಲಿ ದೊರೆಯುತ್ತದೆ. ಹಲವರು ಒಬ್ಬ ಹೆಂಡತಿಯನ್ನು ವಿವಾಹ ಮಾಡಿಕೊಳ್ಳುವುದು ಪಾಂಡವರಿಗೆ ಕುಲಧರ್ಮವಾಗಿದ್ದಂತೆಯೇ ಪಾಂಚಾಲರಿಗೂ ಆ ಧರ್ಮ ಪರಿಚಿತವಾದ ಧರ್ಮವೇ ಆಗಿತ್ತು. "ಈಗಲೂ ಹಿಮಾಲಯದ ಒಂದು ಪ್ರಾಂತ್ಯದಲ್ಲಿ ಒಂದು ಮನೆತನದ ಹಲವು ಸೋದರರು ಒಬ್ಬ ಹೆಂಗಸನ್ನು ಮದುವೆಯಾಗುವ ಪದ್ಧತಿ ಇದೆ. ಈ ಪ್ರಾಂತ್ಯಗಳು ಪಾಂಚಾಲ ದೇಶಕ್ಕೆ ಸಮೀಪದಲ್ಲಿವೆ."[೧೩]

### ೫. "ಮಹಾಭಾರತ"ದಲ್ಲಿ 'ರಾಷ್ಟ್ರಪ್ರೇಮ' ಎನ್ನುವ ಆದರ್ಶ ಮೌಲ್ಯ :

ಮಾಸ್ತಿ ಅವರ "ಆಧುನಿಕ ಚಿಂತನೆ"ಯ ಗುರಿಯು ರಾಷ್ಟ್ರದ ಬಗೆಗಿನ "ನೀತಿಸಂಹಿತೆ"ಯೇ ಆಗಿರುವಂತಿದೆ. ಅವರ ಮಾತುಗಳು ಒಂದೊಂದೂ ಮಾಣಿಕ್ಯದಂತೆ ಇದ್ದು; ಒಂದು ರಾಷ್ಟ್ರದ ಆದರ್ಶ ಪ್ರಜೆಯ ರಾಷ್ಟ್ರಪ್ರೇಮದ ಬಗೆಗಿರುವ ಮೌಲ್ಯವನ್ನು ಎತ್ತಿ ಹಿಡಿದಿದೆ. ಅದೇರೀತಿ; ಆದರ್ಶ ಮೌಲ್ಯಗಳ ನೆರಳಿನಲ್ಲಿ ಬಾಳಲು ಬಯಸುವ ರಾಷ್ಟ್ರ ಪಾಲಿಸಬೇಕಾದ ಮಾಸ್ತಿಯವರ ಸೂತ್ರ ಎಲ್ಲರ ಗಮನವನ್ನೂ ಸೆಳೆಯುತ್ತದೆ.

"ಸಾಧುಜನರ ರಕ್ಷಣೆ, ಪ್ರಜೆಗಳ ಹಿತ, ಆರ್ಜವದಿಂದಲೋ ಅನಾರ್ಜವದಿಂದಲೋ ಹೇಗಾದರೂ ಮಾಡಿ ಶತ್ರುಪಕ್ಷ ಬೆಳೆಯದಂತೆ ನೋಡಿಕೊಳ್ಳುವುದು, ಅವಿಶ್ವಾಸಿಗಳು ಕಲೆತು ಸುಚು ನಡೆಸದಂತೆ ನೋಡಿಕೊಳ್ಳುವುದು, ಶತ್ರುಗಳ ಮಧ್ಯೆ ಇರುವ ಮಿತ್ರರನ್ನು ಆದಷ್ಟೂ ಕಾಪಾಡುವುದು. ಅತೀ ಧೈರ್ಯ ಮಾಡದೇ ಇರುವುದು, ದುಷ್ಟರನ್ನು ಹತ್ತಿರ ಬಿಡದಿರುವುದು, ಹಗೆಯನ್ನು ಉಪೇಕ್ಷಿಸುವುದು-ಇವು ರಾಷ್ಟ್ರದ ಕರ್ತವ್ಯ."[೧೪] ಮಹಾಭಾರತ ಹೇಳಿರುವ ರಾಷ್ಟ್ರ ಸುಭಾಷಿತಗಳನ್ನು ಮಾಸ್ತಿಯವರು ಹೇಳಿರುವ ರೀತಿ ಬಹಳ ಅರ್ಥಪೂರ್ಣವಾದುದು.

### ೬. "ಮಹಾಭಾರತ"ದಲ್ಲಿ ಮೇರು-ಮಂದರಗಳೆನಿಸಿದ ವ್ಯಕ್ತಿತ್ವದ ಪರಾಜಯ ಎಲ್ಲಿ ಮತ್ತು ಹೇಗೆ ಉಂಟಾಯಿತು? :

ಮೇರು-ಮಂದರಗಳು, ವಿಂಧ್ಯ ಹಿಮಾಚಲಗಳಂತೆ ಬಹಳ ಔನ್ನತ್ಯದ ವ್ಯಕ್ತಿತ್ವವನ್ನು ಹೊಂದಿದಂತಹ, ಎಂದೆಂದಿಗೂ ಸೇಡಿನ ಭಾವನೆಯನ್ನೇ ಪ್ರಕಟಿಸದಂತಹ, ಹೊಂದಿರದಂತಹ ಭೀಷ್ಮನಿಗೆ ಪಾಂಡವರು "ದ್ಯೂತ ಪ್ರಸಂಗ"ದಿಂದ ಅನುಭವಿಸಿದ ಸೋಲು ಅವರ ವನವಾಸಕ್ಕೆ, ಅಜ್ಞಾತವಾಸಕ್ಕೆ ಕಾರಣವಾದಾಗ ಏನನ್ನೂ ಮಾಡಲಾಗದಂತಹ ದುಃಸ್ಥಿತಿ ಎದುರಾದಾಗ ಭೀಷ್ಮನ ಸರ್ವ ಪ್ರಯತ್ನಗಳೂ ವಿಧಿಯ ಬೆಂಕಿಯ ಬಲೆಯಲ್ಲಿ ಸಿಲುಕಿ ನಿಷ್ಫಲವೇ ಆದಾಗಿ ಮಾಸ್ತಿಯವರಿಗೂ ಶ್ರೀಮತಿ ಇರಾವತಿಬಾಯಿ ಕರ್ವೆ ಅವರು ತಳೆದಂತಹ ಅಭಿಪ್ರಾಯಕ್ಕೇ ಸಹಮತವುಳ್ಳವರಾಗುತ್ತಾರೆ.

ದಾಸೀ ಪುತ್ರನಾದರೂ, ಉತ್ತಮ ವಿದ್ಯಾಭ್ಯಾಸದಿಂದ ಮೇಧಾವಿ, ಉತ್ತಮ ಹಿರಿಯ ನೀತಜ್ಞನಾದ ವಿದುರನ ನೀತಿಯಿಂದ ದುರ್ಯೋಧನ ಯಾವ ಸಹಾಯವನ್ನೂ ಪಡೆಯಲಿಲ್ಲವೆಂದು ಮಾಸ್ತಿ ಹೊಂದಿದ ಅಭಿಮತವು ಮಾನವನ ವಿಫಲತೆಯನ್ನು ಮತ್ತೆ ಸೂಚಿಸುತ್ತದೆ.

ಭೀಮ ಮತ್ತು ಅರ್ಜುನರಂಥಹ ಪರಾಕ್ರಮಿಗಳಿರುವಾಗ ಮಹಾಭಾರತದ ಕಥೆಯ ಮುಖ್ಯ ನಾಯಕನು ಯುಧಿಷ್ಠಿರನೇ ಆಗಲು ಕಾರಣ ಅವನಲ್ಲಿರುವ "ಗುಣ ಪರಾಕ್ರಮ". ಇಂತಹವನು "ದ್ಯೂತ" ಪ್ರಕರಣದಲ್ಲಿ ನಡೆದುಕೊಂಡ ರೀತಿ ಸರಿಯಲ್ಲ. 'ದ್ಯೂತ'ವು ಕ್ಷತ್ರಿಯರ ಅಥವಾ ಇವನ ಜೀವನದ ನಿಯಮವೇ?' ಎಂದು ಪ್ರಶ್ನಿಸುತ್ತಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ೬ನೇ ಅಧ್ಯಾಯದಲ್ಲಿ 'ಆಧುನಿಕ ಚಿಂತನೆಗಳ ವಿಮರ್ಶಾತ್ಮಕ ಅಧ್ಯಯನ'ದಲ್ಲಿ ವಿವರಣೆಯನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ. ಮಹಾಭಾರತ ಕಾಲದಲ್ಲಿ 'ದ್ಯೂತ'ವು

ರಾಜಕ್ರೀಡೆಯಾಗಿತ್ತು. ಇದಕ್ಕೆ ಆಹ್ವಾನ ಬಂದಾಗ ಅದನ್ನು ನಿರಾಕರಿಸುವುದನ್ನು 'ಹೇಡಿಗಳ ಲಕ್ಷಣ' ಎಂದು ತೀರ್ಮಾನಿಸಲಾಗುತ್ತಿತ್ತು. ಒಂದು ರೀತಿಯಲ್ಲಿ "ಯುದ್ಧ" ಮತ್ತು "ದ್ಯೂತ" ಎರಡೂ ಒಂದೇ ಸಮನಾದ ಹೆಜ್ಜೆಯ ಲಕ್ಷಣಗಳನ್ನು ಹೊಂದಿದ್ದವು. ಏಕೆಂದರೆ ಈ ಎರಡಕ್ಕೂ ನಿಜವಾದ ಕ್ಷತ್ರಿಯ ಅರಸನೆನಿಸಿಕೊಂಡವನಿಗೆ ಎದುರಿಸಲು 'ಗಟ್ಟಿಯಾದ ಗುಂಡಿಗೆ'ಯನ್ನೇ ಹೊಂದಿರಬೇಕಾಗಿತ್ತು.

### ೭. "ಮಹಾಭಾರತ"ದಲ್ಲಿ ಉಲ್ಲೇಖಗೊಂಡಂತೆ ಪಾಂಡವರೊಂದಿಗೆ ದ್ರೌಪದಿಯ ದಾಂಪತ್ಯ ಜೀವನ :

'ಪಂಚ ಪಾಂಡವ'ರಲ್ಲೇ ದ್ರೌಪದಿಗೆ ಬಹಳ ಪ್ರಿಯನಾದವನು ಭೀಮ. ಭೀಮ–ದ್ರೌಪದಿ ಇವರಿಬ್ಬರ ಅಗಾಧವಾದ ದಾಂಪತ್ಯ ಪ್ರೇಮವು ಒಂದು ಸುಂದರ ಕಾವ್ಯದಂತೆ ಇತ್ತು. ದುರ್ಯೋಧನನು ತನ್ನ ದುರಾಚಾರದಿಂದಾಗಿ ತನ್ನ ಪತ್ನಿಗೆ ತುಂಬಿದ ರಾಜಸಭೆಯಲ್ಲಿ ಕೊಟ್ಟಂತಹ ಕಿರುಕುಳ, ಮಾಡಿದಂತಹ ಹೀನಾಯವಾದ ಅಪಮಾನಗಳಿಂದಾಗಿ ಭೀಮನು ಕೆರಳಿ ಕೆಂಡವಾದದ್ದು ಸಹಜವೇ! ಕೃಷ್ಣನ ಕುಟಿಲತೆಯಿಂದಾಗಿ ದುರ್ಯೋಧನನು ಪ್ರಾಣ ಬಿಟ್ಟನು ಎನ್ನುವ ಹೇಳಿಕೆ ಆನಂತರ ಬೆಳೆದ ಕಥೆಯಾಗಿದೆ. ದುರ್ಯೋಧನನ ಊರುಭಂಗ ಮಾಡುವ ಭೀಮನ ಪ್ರತಿಜ್ಞೆ ಸಹಜವಾದುದು. ದುರ್ಯೋಧನನು ಮಾಡಿದ ನೂರಾರು ತಪ್ಪುಗಳಿಗೆ ಭೀಮನ ಇದೊಂದು ರೀತಿಯ ವರ್ತನೆಯು ತೀರಾ ಕ್ಷಮ್ಯವಾದ ತಪ್ಪು ಎಂದುಕೊಳ್ಳಬಹುದು. "ಕ್ಷಮ್ಯವೆಂದು ಹೇಳಿ ನಾವು ಪಕ್ಷಪಾತಿಗಳಾಗಬೇಕಾದ ಕಾರಣವೇನೂ ಇಲ್ಲ. ಸಹಜ ಎಂದು ಒಪ್ಪಿಕೊಂಡರೆ ಮನುಷ್ಯ ಸ್ವಭಾವವನ್ನು ಬಲ್ಲವರು ಆದೇವು."[೧೫]

### ೮. "ಮಹಾಭಾರತ"ದಲ್ಲಿ ಕೃಷ್ಣ ಪಾತ್ರದ ಮಹತ್ವ :

"ಕೃಷ್ಣನ ಪರಾಕ್ರಮ, ಧರ್ಮ ಪಕ್ಷಪಾತ, ಶಾಂತಿಪ್ರೇಮ, ಸೌಜನ್ಯ, ವಿನಯ, ಆಶ್ರಿತ ವಾತ್ಸಲ್ಯ –ಇವೆಲ್ಲಾ ಕೃಷ್ಣನೊಬ್ಬನಿಗೇ ಮಾತ್ರ ಸಾಧ್ಯವೇ ಹೊರತು ಉಳಿದವರಿಗಲ್ಲ."[೧೬] ಆದರ್ಶ ರಾಜನೀತಜ್ಞನಾದ ಕೃಷ್ಣ ಒಬ್ಬ ಉದಾತ್ತ ವ್ಯಕ್ತಿಯಾಗಿ ಪ್ರಕಟಗೊಂಡಿದ್ದಾನೆ.

"ಜೀವನದ ಪ್ರತಿಯೊಂದು ರಂಗದಲ್ಲಿಯೂ ಮಾನವನ ಯೋಗ್ಯತೆಯ ಪರಮಾವಧಿಯನ್ನು ತೋರಿಸಿದ್ದಾನೆ. ಕೇವಲ ದೇವರು ಹೀಗೆಲ್ಲಾ ಮಾಡಿದನೆಂದರೆ ಹೆಚ್ಚಿಗೆಯೇನೂ ಇಲ್ಲ. ಮನುಷ್ಯನಾಗಿ ಈ ಬಗೆಯ ಗರಿಮೆಯಿಂದ ದೈವತ್ವವನ್ನು ಪಡೆದನೆಂದರೆ ಮಾನವವರ್ಗಕ್ಕೆ ಗೌರವ. ಎಲ್ಲಾ ಯತ್ನಗಳಿಗೂ ಭರವಸೆ, ನಂಬಿಕೆ, ಮೇಲ್ಪಂಕ್ತಿಯ ಉತ್ತೇಜನ."[೧೭]

### ೯. "ಮಹಾಭಾರತ" ಕಾವ್ಯ, ಸಂಸ್ಕೃತಿಯ ಮಹತ್ವ ಮತ್ತು ವೈಶಿಷ್ಟ್ಯತೆ :

ಮಹಾಭಾರತವು ಸಾಹಿತ್ಯ ದೃಷ್ಟಿಗಿಂತಲೂ ಸಾಂಸ್ಕೃತಿಕ ದೃಷ್ಟಿಯಿಂದಲೇ ಹೆಚ್ಚು ಮಹತ್ವ ಪಡೆದಿದೆ. ಇದೊಂದು 'ಇತಿಹಾಸ ಕಾವ್ಯ'ವಾದರೂ ಕಾವ್ಯಗುಣವನ್ನೂ ಹೊಂದಿದೆ. ಭಾರತೀಯ ಸಂಸ್ಕೃತಿ ಪರಂಪರೆಯನ್ನು ಅವ್ಯಾಹತವಾಗಿ ಪ್ರತಿನಿಧಿಸುವ ಈ ಮಹಾಭಾರತವು ಜೀವನ ಮೌಲ್ಯಗಳನ್ನು ಪ್ರತಿಪಾದಿಸುವುದರಿಂದ ಲೋಕಮಾನ್ಯತೆ ಪಡೆದಿದೆ.

## ೩. ಡಿ.ವಿ.ಜಿ. (ಮುನ್ನುಡಿ), ವ್ಯಾಸರಾವ್ ಅವರ "ಶ್ರೀಕೃಷ್ಣ ಚರಿತೆ"

ಈ ಕೃತಿಯಲ್ಲಿ "ಮಹಾಭಾರತದಲ್ಲಿ ಹೆಚ್ಚಾಗಿ ಹೇಳದಿರುವ ಕೃಷ್ಣ ವಿಚಾರವನ್ನು ಭಾಗವತ ಕವಿಗಳು ವಿಸ್ತಾರಪಡಿಸಿ 'ಕೃಷ್ಣಚರಿತೆ'ಯನ್ನು ಸಮಗ್ರಗೊಳಿಸಿದ್ದಾರೆ."[೧೮] "ಕೃಷ್ಣನು ಸಾಮಾನ್ಯನೂ ಹೌದು, ಅದ್ಭುತನೂ ಹೌದು, ಮನುಷ್ಯನಾದವನು ಏನೇನನ್ನು ಬಯಸಬಹುದೋ ಏನೇನನ್ನು ಉತ್ತಮವೆಂದು ಭಾವಿಸಬಹುದೋ, ಮನುಷ್ಯನಿಗೆ ಯಾವ ಯಾವುದು ಶ್ರೇಯಸ್ಸೆಂದು ಅನ್ನಿಸುತ್ತದೆಯೋ ಆ ಎಲ್ಲಾ ಜಾತಿಯ ಭಾಗ್ಯಗಳ ಸಮ್ಮೇಳನ ಮೂರ್ತಿಯೇ ಶ್ರೀಕೃಷ್ಣ."[೧೯] ಎಂದಿದ್ದಾರೆ.

'ಇತಿಹಾಸ' ಎನಿಸಿರುವ ಮಹಾಕಾವ್ಯ ಮಹಾಭಾರತ ಎನ್ನುವಾಗ; ಇತಿಹಾಸದಲ್ಲಿ ಬಹಿರಂಗ ಘಟನೆಗಳು ಮುಖ್ಯವಾಗುತ್ತದೆ. ಅದೇರೀತಿ ಕಾವ್ಯಪ್ರಪಂಚದಲ್ಲಿ ಅಂತರಂಗ ಘಟನೆಗಳು ಮುಖ್ಯ. 'ಇತಿಹಾಸ'–ಎಂದರೆ

ಚರಿತ್ರಾಂಶಗಳಿಂದ ಕೂಡಿದ ವಿಷಯ. "ಶ್ರೀಕೃಷ್ಣನೆಂಬ ಮನುಷ್ಯ ಶಕ್ತಿ ಚಾರಿತ್ರಿಕವಾದದ್ದು ಅದು ವಾಸ್ತವವಲ್ಲ. ಆ ವ್ಯಕ್ತಿಯ ಮಹಾಮಹಿಮೆಯನ್ನು ವರ್ಣಿಸಿ ಒಂದು ವಿಶ್ವಧರ್ಮ ತತ್ವವನ್ನು ಲೋಕಕ್ಕೆ ಮನದಟ್ಟು ಮಾಡಬೇಕೆಂಬುದು ವ್ಯಾಸರ ತಾತ್ಪರ್ಯ."[೨೦]

**೮. ಶೇಷನವರತ್ನ ಅವರ "ಮಹಾಭಾರತದಲ್ಲಿ ಧರ್ಮ"** ಕೃತಿಯಲ್ಲಿ ವ್ಯಾಸ ಋಷಿಗೆ ಕೃಷ್ಣನ ವ್ಯಕ್ತಿತ್ವದ ಬಗ್ಗೆ ಪ್ರಾಗಾಢವಾದ ಆಕರ್ಷಣೆ ಉಂಟಾಗಿದೆ. ಅಂತೆಯೇ "ಕೃಷ್ಣನಿಗೆ ಅತಿಮಾನವತ್ವದ (Supter Human) ಪಟ್ಟಗಟ್ಟಿ ವ್ಯಾಸನು ಅವನನ್ನು ಲೌಕಿಕ ಸುಖ-ದುಃಖಗಳ ವಿಕಾರದಿಂದ ನಿರ್ಲಿಪ್ತನಾದ, ನಿರ್ದ್ವಂದ್ವನಾದ ಮಹಾಪುರುಷನನ್ನಾಗಿ ರೂಪಿಸಿದ್ದಾನೆ. ಈ ಹಿನ್ನೆಲೆಯಲ್ಲಿ ಶ್ರೀಕೃಷ್ಣನು ವ್ಯಾಸ ಮಹರ್ಷಿಯ ಸಕಲ-ದೈವೀ ಸ್ವಪ್ನಗಳ ಸಾಕಾರರೂಪವಾಗಿ ಅಲ್ಲಿ ವಿಜೃಂಭಿಸಿದ್ದಾನೆ. ಕಾಲ, ಕರ್ಮಗಳ ವಶನಾಗಿ ಮಾನವನು ಮಾಡುವ ಯಾವ ಪ್ರಮಾದಗಳಿಂದಲೂ ಶ್ರೀಕೃಷ್ಣ ದೂರ."[೨೧]

### ೯. ವೈದ್ಯಗುರು ಎಂ.ಆರ್. ಭಟ್ ಅವರ "ಭಾರತ ಗಾಂಭೀರ್ಯ"

### ೧. 'ಅಪ್ಸರೆಯರು' ಎಂದರೆ ಯಾರು?

'ಮಹಾಭಾರತ'ದ ಕಾಲದಲ್ಲಿ ಅಂದರೆ; ಕೌರವರು-ಪಾಂಡವರು ಜೀವಿಸಿದ್ದಂತಹ ಕಾಲದಲ್ಲಿ ಈ ಭೂಮಿಯ ಮೇಲೆ ವಾಸ್ತವವಾಗಿ ಮೂರು ಜನಾಂಗದವರು ಜೀವಿಸಿದ್ದರು. "ಭರತವರ್ಷದಲ್ಲಿ ಆರ್ಯ ಜನರು, ತ್ರಿವಿಷ್ಟಪದಲ್ಲಿ (ಟಿಬೇಟ್) ದೇವಜನರು (ದೇವಾಂಗ ಜನಾಂಗದವರು) ಮತ್ತು ಟಿಬೇಟ್‌ನ ಪಶ್ಚಿಮ ಭೂ-ಭಾಗದಲ್ಲಿ ಅಸುರ ಜನಾಂಗದವರು ನೆಲೆಸಿದ್ದರು. ಪ್ರತ್ಯೇಕ ಜನಾಂಗದವರಲ್ಲಿ, ಅನೇಕ ಉಪಪಂಗಡ (ಉಪಜನಾಂಗ)ಗಳಿದ್ದವು. ಈ ಮೂರೂ ಜನಾಂಗದವರು ಪರಸ್ಪರ ಯುದ್ಧ ಮಾಡುತ್ತಲಿದ್ದರು."[೨೨] ಪರಸ್ಪರ ಇವರೊಳಗೆ ವಿವಾಹಗಳೂ ನಡೆಯುತಲಿದ್ದವು. ಪರಸ್ಪರ ಮೈತ್ರ್ಯ, ದ್ವೇಷ ಮೊದಲಾದವುಗಳೆಲ್ಲಾ ಇದ್ದುದರಿಂದ ಇವರೆಲ್ಲರೂ ಮಾನವ ಜಾತಿಯವರೇ ಆಗಿದ್ದರೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಟಿಬೇಟ್‌ನಲ್ಲಿ ಪ್ರಾಚೀನ ಕಾಲದಲ್ಲಿ ನೆಲೆಸಿದ್ದ ಮಾನವ ಜಾತಿಯ ಜನಾಂಗವೇ ದೇವಜನಾಂಗವೆಂದು ಕರೆಯಲ್ಪಟ್ಟಿತು. ಅವರೆಲ್ಲಾ ಮನುಷ್ಯರೇ ಆಗಿದ್ದುದು ಗಮನಾರ್ಹ ಸಂಗತಿಯಾಗಿದೆ. ಇಂತಹ ದೇವಜಾತಿಯ ಪುರುಷನು ಒಂದು ಸುಂದರ ಸ್ತ್ರೀಯೊಡನೆ ಮಾಡಿದ ಸಂಬಂಧದಿಂದ ಜನಿಸುವ ಸುಂದರ ಸ್ತ್ರೀಯರು ಅಂದರೆ 'ಅಪ್ಸರೆಯರು' ಹುಟ್ಟಿದರು. ಈ ಜಾತಿಯ ಪುರುಷರು ವಿದ್ಯಾಧರ ಮೊದಲಾದ ಹೆಸರುಗಳಿಂದ ಕರೆಯಲ್ಪಟ್ಟರು. ಸ್ತ್ರೀಯರು ಅಪ್ಸರೆಯರು. ಈ ಅಪ್ಸರೆಯರು ಗಣದೇವರ ಹಾಗೂ ಬೇರೆ ಬೇರೆ ದೇವಾಂಗ ಜನರ ವಿಲಾಸಕ್ಕಾಗಿಯೇ ಕಾದಿಟ್ಟವರಾಗಿದ್ದರು. ನರ್ತನ, ಸಂಗೀತ ಮೊದಲಾದ ವ್ಯವಸಾಯಗಳು ಅವರದ್ದಾಗಿದ್ದವು. ಅಂದರೆ ದೇವಾಂಗ ಜನಾಂಗದ ಯೋನಿಗಳೊಳಗೆ ಜನಿಸಿದ ಅಪ್ಸರರು ಒಂದು ಜಾತಿಯವರು. ಇವರು ಮಿಶ್ರಜಾತಿಯಾದ ದೇವಯೋನಿಯರು. ದೇವಜಾತಿಯ ಪುರುಷ ಮತ್ತು ಅನ್ಯಜಾತಿಯ ಸ್ತ್ರೀಯಲ್ಲಿ ಹುಟ್ಟಿದ ದೇವಯೋನಿಯ ಸ್ತ್ರೀಯನ್ನು ಅಪ್ಸರೆಯರು ಎಂದು ಕರೆಯಲಾಗುತ್ತಿತ್ತು.

### ೨. ಸ್ವರ್ಗ ಮತ್ತು ಸ್ವರ್ಗಾರೋಹಣ ಎಂದರೇನು?

ಈಗಾಗಲೇ ತಿಳಿಸಿದಂತೆ ಟಿಬೇಟ್‌ನಲ್ಲಿ ವಾಸಿಸುತ್ತಿದ್ದಂತಹ ದೇವಾಂಗ ಜನರು ನೆಲೆಸಿದ್ದಂತಹ ಪ್ರದೇಶವು 'ಸ್ವರ್ಗ'ವಾಗಿತ್ತು. ಟಿಬೇಟ್‌ನ ಪೂರ್ವಭಾಗವು ತ್ರಿವಿಷ್ಟಪವಾಗಿದ್ದು; ಪಶ್ಚಿಮ ಭಾಗವು ಸ್ವರ್ಗವಾಗಿತ್ತು. ಗಂಗೋತ್ರಿ, ಬದ್ರಿನಾಥ, ಕೇದಾರನಾಥ ಮೊದಲಾದ ಸ್ಥಾನಗಳ ಉತ್ತರ ಪದ್ರೇಶದಲ್ಲಿ ಸ್ವರ್ಗದ್ವಾರವೆಂಬ ಸ್ಥಾನವೂ ಇದೆ.

ಸ್ವರ್ಗಾರೋಹಣ ಎಂದರೆ ಸ್ವರ್ಗಲೋಕವನ್ನು ಏರುವುದು, ಹತ್ತುವುದು, ಆರೋಹಣ ಎಂದರೆ ಪರ್ವತಗಳ ಮೇಲೇರಿ ಹೋಗುವುದೆಂದು ಸೂಚಿಸುತ್ತದೆ. ಪಾಂಡವರ ಸ್ವರ್ಗಾರೋಹಣ ವೃತ್ತಾಂತವು ಮಹಾಭಾರತದ ಅಂತ್ಯದಲ್ಲಿದೆ. ಟಿಬೇಟ್‌ನ್ನು "ಸ್ವರ್ಗಧಾಮ" ಎಂದು ಮಹಾಭಾರತ ಸಮಕಾಲೀನದಲ್ಲಿ ಹೆಸರಾಗಿತ್ತು.

ಭಾರತ ವರ್ಷದ ಉತ್ತರದಿಕ್ಕಿನಲ್ಲಿ ಗಂಗೆ ಮತ್ತು ಹಿಮಾಲಯದ ಆಚೆ ಕರೆಯು ಸ್ವರ್ಗಧಾಮವಾಗಿತ್ತೆಂದೂ ಸ್ಪಷ್ಟವಾಗುವುದರೊಂದಿಗೆ ಧರ್ಮರಾಜ ಮೊದಲಾದವರೆಲ್ಲಾ ಅಲ್ಲಿಗೆ ಹೋದರು ಎನ್ನುವುದರ ಸಂಕೇತ; ಈ ಸತ್ಕಾರದ ರೀತಿಯು ಕೇವಲ ವಿಜಯೀಪುರುಷರಿಗೆ ಮಾತ್ರ ಯೋಗ್ಯವಾಗಿತ್ತು!' ಎಂದು ಸ್ಪಷ್ಟವಾಗುತ್ತದೆ.

### ೬. ಡಾ॥ ಸುಕ್ತಂಕರ್ ಅವರ 'ಮಹಾಭಾರತ'ದ ಬಗೆಗಿನ ಅಧ್ಯಯನಗಳು

**ಡಾ॥ ವಿ.ಎಸ್. ಸುಕ್ತಂಕರ್** ಅವರು ಮಹಾಭಾರತದ ಸಂಶೋಧಿತ ಆವೃತ್ತಿಯನ್ನು ತಯಾರಿಸುವ ಕಾರ್ಯದಲ್ಲಿ ತೊಡಗಿದಾಗ ಮುಂಬಯಿ ವಿಶ್ವವಿದ್ಯಾಲಯದಲ್ಲಿ **"ಆನ್ ದಿ ಮೀನಿಂಗ್ ಆಫ್ ಮಹಾಭಾರತ್"** ಎಂಬ ವಿಷಯವನ್ನು ಸಾಹಿತ್ಯ ಕ್ಷೇತ್ರಕ್ಕೆ ಸಮರ್ಪಿಸಿದಾಗ ಅದರಲ್ಲಿದ್ದ ವ್ಯಾಖ್ಯಾನಗಳು ಹೊಸದರಂತೆ ಬೇರೆಯದೇ ಆಗಿಯೂ ಕಂಡವು. ಪುಣೆಯ ಭಂಡಾರ್‌ಕರ್ ಪ್ರಾಚ್ಯ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ೧೯೧೯ರಲ್ಲಿ ಆರಂಭವಾದ ಮಹಾಭಾರತ ಪಾಠಪರಿಷ್ಕರಣದ ಬೃಹತ್ ಯೋಜನೆಯ ನಿಯಂತ್ರತ್ವವನ್ನು ವಹಿಸಿಕೊಂಡು, ಸತತವಾಗಿ ೧೮ ವರ್ಷಗಳ ಕಾಲ ಅಹರ್ನಿಷಿಯಾಗಿ ದುಡಿದು, ಭಾರತೀಯ ವಿದ್ವತ್ತೆಗೆ ಮುಕುಟಪ್ರಾಯವಾದದ್ದೆಂದೂ ಸಂಸ್ಕೃತ ಭಾಷಾಧ್ಯಾಯನದ ಇತಿಹಾಸದಲ್ಲೇ ಅಭೂತಪೂರ್ವದ್ದೆಂದು ವಿಶ್ವವಿಖ್ಯಾತಿಗಳಿಸಿದ ಸಾರಸ್ವತ ಸಾಧನೆಗೆ ಜೀವನಾಡಿಯಾಗಿದ್ದವರು ಸುಖ್‌ಟಣ್‌ಖರ್‌ರವರು, **"ಮಹಾಭಾರತದ ಶುದ್ಧಪಾಠ"**ವನ್ನು ಶೋಧಿಸಲು ತಮ್ಮನ್ನು ತಾವು ಮೀಸಲಾಗಿಟ್ಟುಕೊಂಡರು. ಮತ್ತು ಇಡೀ ಮಹಾಭಾರತದಲ್ಲಿ **ಭೃಗು ಸಂಪ್ರದಾಯದ ಕೈಚಳಕ ಎಲ್ಲೆಡೆ ಕಂಡು ಬರುವುದರ ಕುರಿತಾಗಿ ಮಂಡಿಸಿದ "ಭಾರ್ಗವವಾದ" ಸಿದ್ಧಾಂತವು ಭಾರತೀಯ ಹಾಗೂ ಪಾಶ್ಚಾತ್ಯ ಪಂಡಿತ ಶ್ರೇಷ್ಠರ ಗಮನವನ್ನು ಸೆಳೆಯಿತು. "ಭಾರತ"ವು "ಮಹಾಭಾರತ"ವಾಗಿ ಬೆಳೆಯಲು ಭಾರ್ಗವ ವಂಶೀಯರೇ ಬಹುಮಟ್ಟಿಗೆ ಕಾರಣ ಎಂಬುದು ಇವರ ವಾದ.** ಉತ್ತಮೋತ್ತಮ ಶ್ರೇಷ್ಠ ಸಂಶೋಧಕರೆಂದು ವಿಖ್ಯಾತರಾದ ಡಾ॥ ಸುಕ್ತಂಕರ್‌ರವರು ತಮ್ಮ ಇಡೀ ಆಯುಷ್ಯವನ್ನು ಮಹಾಭಾರತದ ಚಿಂತನೆಯಲ್ಲೇ ಸವೆಸಿದರು. ಇಷ್ಟಾದರೂ ಅವರು ಮಹಾಭಾರತದ ಕುರಿತಾಗಿ,

"We in India still stand under the spell of MahaBharath" ಎಂದಿರುವ ಈ ವಾಕ್ಯವು- ಬಹಳ ಮಹತ್ವದ್ದು ಹಾಗೂ ಗಮನಾರ್ಹವಾಗಿದೆ.



### ಡಾ॥ ಸುಕ್ತಂಕರ್ ಅವರ "ಭಾರ್ಗವ ವಾದ"

ಡಾ॥ ಸುಕ್ತಂಕರ್ ಅವರು 'ಮಹಾಭಾರತ'ದಲ್ಲಿ ಈ 'ಭಾರ್ಗವ'ರ ಪ್ರಭಾವವನ್ನು ಎತ್ತಿ ತೋರಿಸಿದ್ದಾರೆ. ಅವರ ಪ್ರಕಾರ, 'ಮಹಾಭಾರತ'ದಲ್ಲಿ ಬರುವ ಅನೇಕ ಉಪಾಖ್ಯಾನಗಳು ಮೊದಲಿನ ಕೃತಿಯಾದ **"ಭಾರತ"**ದಲ್ಲಿಲ್ಲ. **ಅವು ಮೂಲದ ವ್ಯಾಸನ ಕಾವ್ಯವಲ್ಲ.** ಅವೆಲ್ಲವೂ ಮುಂದಕ್ಕೆ ಈ ಭಾರ್ಗವರ ಸೇರ್ಪಡೆಯಾಗಿರುವುವು. 'ಮಹಾಭಾರತ'ದ 'ಸೌತಿ' ಎನ್ನುವುದು ಒಂದು ವ್ಯಕ್ತಿಯಲ್ಲ. ಅದೊಂದು ಕಲ್ಪನೆಯಷ್ಟೇ. ಅನೇಕ ಸೌತಿಯರು ಹೇಳುವ ಕಥೆಯೆಂಬ ಅರ್ಥದಲ್ಲಿ ಒಟ್ಟು **ಮಹಾಭಾರತ** ರಚನೆ, 'ಭಾರ್ಗವ-ಶೌನಕರದ್ದು', ಅವರು ಈ ಕತೆಯನ್ನು ಕೇಳಿಸಿಕೊಳ್ಳುವವರಾಗಿ ಚಿತ್ರಿತರಾಗಿದ್ದಾರೆ. ವಾಸ್ತವವಾಗಿ ಇವರು ಕೇಳಿಸಿಕೊಂಡವರಾಗಿರದೇ; ಮಹಾಭಾರತಕ್ಕೆ ಅಷ್ಟು ದೊಡ್ಡ ಗಾತ್ರದ ಸುಸಂಬದ್ಧ ರೂಪವನ್ನು ಕೊಟ್ಟವರಿರಬೇಕು. "ಮೊದಲಿನ **ಭಾರತ**ದ ಕತೆಯನ್ನು ಒಂದು ಮಹತ್ತರವಾದ ಧರ್ಮ ಮತ್ತು ನೀತಿಯ ಗ್ರಂಥವಾಗಿ, ಸಂಹಿತೆಯಾಗಿ ಪರಿವರ್ತಿಸಿದವರು. ಇವರ ಕೈವಾಡದ ಅಚ್ಚನ್ನು ವಿಶೇಷವಾಗಿ **ಶಾಂತಿಪರ್ವ** ಮತ್ತು **ಅನುಶಾಸನಪರ್ವ, ವನಪರ್ವ**ಗಳಲ್ಲಿ ಕಾಣುತ್ತೇವೆ. ಮಹಾಭಾರತವನ್ನು ಬ್ರಾಹ್ಮಣರ ಧರ್ಮ-ನೀತಿಗಳಿಗೆ ಸಂಬಂಧಿಸಿದ ಸ್ಮೃತಿಗಳ, ಸಂಹಿತೆಗಳ ಸಾಲಿಗೆ, ಎತ್ತರಕ್ಕೆ ತಂದು ನಿಲ್ಲಿಸಿದವರು ಈ ಭಾರ್ಗವ-ಶೌನಕ ಬ್ರಾಹ್ಮಣರು."[೨೩] ಭಾರ್ಗವ 'ಭೃಗು' ವಂಶದಲ್ಲಿ ಜನಿಸಿದವನು. ಋಚೀಕ, ಜಮದಗ್ನಿ, ಪರಶುರಾಮ, ಶುಕ್ರಾಚಾರ್ಯ, ಶೌನಕ-ಇವರೆಲ್ಲಾ ಭೃಗುವಂಶೀಯರು. ಶೌನಕ ಮಹರ್ಷಿ ನೈಮಿಷಾರಣ್ಯದಲ್ಲಿ ವಾಸವಾಗಿದ್ದ ಕುಲಪತಿ ಸೂತ ಪುರಾಣಿಕನಿಂದ ಪುರಾಣಗಳನ್ನೂ, ಇತಿಹಾಸಗಳನ್ನೂ ಕೇಳಿದ ಮಹರ್ಷಿಗಳಲ್ಲಿ ಒಬ್ಬ ಮುಖ್ಯಋಷಿ. ಸೌತಿಯೂ ಒಬ್ಬ ಮಹರ್ಷಿ. ಲೋಮಹರ್ಷಣರ ಮಗ. ಸೂತ ಪುರಾಣಿಕರ ಮಗನಾದ್ದರಿಂದ ಉಗ್ರಶವ ಸೌತಿಯಾದ. ಈತ ನೈಮಿಷಾರಣ್ಯವಾಸಿಗಳಾಗಿದ್ದ ಮಹರ್ಷಿಗಳಿಗೆ ಅನೇಕ ಪುರಾಣೇತಿಹಾಸ, ಮಹಾಭಾರತಗಳನ್ನು ಹೇಳಿದ.

## ೮. ಡಾ॥ ಇರಾವತಿಬಾಯಿ ಕರ್ವೆ ಅವರ "ಯುಗಾಂತ" :

ನಂತರ ಮೊಳಗಿದ ಡಾ॥ ಇರಾವತಿ ಬಾಯಿ ಕರ್ವೆ ಅವರ "ಯುಗಾಂತ"ದ ಕುರಿತು ಹೇಳುವುದಾದರೆ; ಕರ್ವೆ ಅವರ ಪ್ರಕಾರ, ಮಹಾಭಾರತದ ಆಶಯವು, "ಮಾನವೀ ಪ್ರಯತ್ನಗಳು ನಿಷ್ಪಲವಾಗಿರುತ್ತದೆ. ಮಾನವೀಯ ಜೀವನವು ವಿಫಲವೇ ಆಗಿರುವುದು ಈ ಪಾಠವನ್ನು ಮನಸ್ಸಿನಲ್ಲಿ ಬಿಂಬಿಸಲಿಕ್ಕೆ ಮಹಾಭಾರತವನ್ನು ವ್ಯಾಸರು ರಚಿಸಿರಲಿಕ್ಕಿಲ್ಲವೇ?"[೭] ಎಂದು ಹೀಗೆ ಅವರಿಗೆ ಅನಿಸಿತು. ಇರಾವತಿ ಕರ್ವೆಯವರಿಗೆ ಮಹಾಭಾರತದಲ್ಲಿನ ಪ್ರತಿಯೊಂದು ಪಾತ್ರವೂ ವ್ಯಥೆಯಿಂದ ವೈಫಲ್ಯತೆಗೊಂಡಂತೆ ಕಾಣಿಸಿ; ಈ ಸಂಶೋಧನೆಯಲ್ಲಿ ಅವರೊಂದು ವಿಚಾರಿಕವಾದ ತಾತ್ವಿಕ ಸೂತ್ರ ಕಂಡು ಬಂದಿತು; ಅದೇ– "ವೈಫಲ್ಯಭಾವವೇ ಈ ಮಹಾಕಾವ್ಯದ ಸ್ಥಾಯೀ ಭಾವ." ಆಗಿರುವುದೆಂಬ ನಿಷ್ಕರ್ಷಕ್ಕೆ ಅವರು ಬರುತ್ತಾರೆ. ಬಹುಶಃ ಇದಕ್ಕೆ ಮುಖ್ಯ ಕಾರಣ "ಪಗಡೆಯಾಟ" ಅಥವಾ "ಅಕ್ಷದ್ಯೂತ." ವ್ಯಾಸರ ಉದ್ದೇಶ, ಆಶಯವು ಮುಖ್ಯವಾಗಿ ಅಕ್ಷದ್ಯೂತದಂತಹ ಜೂಜಾಟದಿಂದ ಉಂಟಾಗುವ ಪರಿಣಾಮವನ್ನು ಲೋಕಕ್ಕೆ ಸಾರುವುದು ಮತ್ತು ಜೂಜಾಟವನ್ನು ಆಡದಂತೆ ಜನರನ್ನು ಎಚ್ಚರಿಸುವುದು ಆಗಿದೆ.

ಹೀಗೆ ಇಲ್ಲಿಂದ ಮುಂದೆ ಡಾ॥ ಇರಾವತಿ ಬಾಯಿ ಕರ್ವೆ ಅವರ ಮಹಾಭಾರತ ಕುರಿತಾದ ಸಂಶೋಧನೆಯು ಸಾಗಿದಂತೆ ನೂತನ ಸಂಶೋಧನಾ ಮಾರ್ಗಗಳು ಉಪಲಬ್ಧವಾಗುತ್ತಾ ಹೋಗುತ್ತವೆ. ಹಿಂದಿನ ಸಂಶೋಧಕರು ಎಸಗಿದ ದೋಷಗಳು ಕಂಡು ಬರುತ್ತವೆ. ಆದ್ದರಿಂದ ಯಾವುದೇ ಸಂಶೋಧನೆ ಅಥವಾ ಅಧ್ಯಯನ ಎಂದರೆ ಅಂತಿಮ ದೋಷರಹಿತ ಸಂಶೋಧನೆ ಎಂದು ಅನ್ನಲಾಗುವುದಿಲ್ಲ ಎಂದಿರುವಂತೆ ನಾನೂ ನನ್ನ ಅಧ್ಯಯನವನ್ನು ಮುಂದುವರೆಸುತ್ತಿದ್ದೇನೆ. ನನ್ನ ಈ "ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು" ವಿಚಾರ ಸರಣಿಯ ಸಂಶೋಧನೆಗೆ ಮೂಲಾಧಾರ "ಋಗ್ವೇದ" ಮಹಾಭಾರತವು ಹೇಗೆ ಭಾರತೀಯ ಲೇಖಕರ ಸಾಹಿತ್ಯ ಸೃಷ್ಟಿಗೆ ಒಂದು "ವಸ್ತು"ವಿನ ಗಣಿಯಾಯಿತೋ ಹಾಗೇಯೇ ಅದು ಭಾರತೀಯ ಭಾಷಾ ಸಾಹಿತ್ಯ ಕ್ಷೇತ್ರಕ್ಕೆ ಒಂದು ಅಕ್ಷಯ ಭಂಡಾರವೂ ಆಗಿದೆ.

## ೭. ಎಸ್.ಆರ್. ರಾಮಸ್ವಾಮಿ ಅವರ "ಮಹಾಭಾರತದ ಬೆಳವಣಿಗೆ" :

### ೧. ದಕ್ಷಿಣಾತ್ಯ ಹಸ್ತಪ್ರತಿಗಳಲ್ಲಿ ಪ್ರಕ್ಷಿಪ್ತಗಳೆಂಬ ಕಟ್ಟುಕಥೆಗಳ ಸೇರ್ಪಡೆ ಯಾಕೆ ಮತ್ತು ಹೇಗೆ? :

ಇತ್ತೀಚಿನ ದಾಕ್ಷಿಣಾತ್ಯ ಹಸ್ತಪ್ರತಿಗಳಲ್ಲಿ ಮಾತ್ರ ಇಂತಹ ಪ್ರಕ್ಷಿಪ್ತದ ಕಟ್ಟುಕಥೆಗಳು ಉಪಲಬ್ಧವಿರುವುದಾಗಿದೆ. "ಅರ್ಜುನಮಿಶ್ರವ್ಯಾಖ್ಯಾನ, ಬಂಗಾಳದ ಮಹಾಭಾರತ ಪಾಠಗಳು, ಕಾಶ್ಮೀರದ ಪಾಠ, ಮೈಥಿಲೀ ಪಾಠ, ಮಲಯಾಳದ ಪಾಠ, ಕ್ರಿ.ಶ. ೧೧ನೇ ಶತಮಾನದ ನನ್ನಯಭಟ್ಟನ 'ಆಂದ್ರಭಾರತ', ಕ್ಷೇಮೇಂದ್ರನ "ಭಾರತಮಂಜರಿ"– ಇವೇ ಮೊದಲಾದ ಯಾವ ಆಧಾರಗ್ರಂಥಗಳಲ್ಲಿಯೂ ಇರದಂತಹ ಕಥೆಗಳು ದಾಕ್ಷಿಣಾತ್ಯ ಪಾಠಗಳಲ್ಲಿ ಬಂದುಸೇರಿವೆ. ಇದು ಈಚಿನ ನೂರು ವರ್ಷಗಳಲ್ಲಿ ದಾಕ್ಷಿಣಾತ್ಯರು ಸೇರಿಸಿರುವ ಕಟ್ಟುಕಥೆಯೆಂಬ ಊಹೆಗೆ ಗ್ರಂಥಶೈಲಿ, ಸಂಭವನೀಯತೆ ಮೊದಲಾದ ಆಂತರಿಕ ಪ್ರಮಾಣಗಳಲ್ಲದೇ ಹಸ್ತಪ್ರತಿಗಳ ಬಾಹ್ಯಪ್ರಮಾಣವೂ ಸಮರ್ಥನೆಯನ್ನೊದಗಿಸಿದೆ."[೨೪] ಈಚಿನ ಸೇರಿಕೆಗಳು ಇನ್ನೂ ಹಲವಾರು ಇವೆ. ಅವುಗಳಲ್ಲಿ ಕೆಲವು ಪ್ರಮುಖವಾದವುಗಳೆಂದರೆ; "೧) ಪರಶುರಾಮನಿಗೂ ಅವನ ಪೂರ್ವಜರಿಗೂ ನಡೆಯಿತೆಂಬ ಸಂಭಾಷಣೆಯ ವರದಿ. ಮತ್ತು ೨) 'ಕಣಿಕನ ನೀತಿ'. ಇಂತಹವು 'ಕಾವ್ಯದೃಷ್ಟಿ'ಯಿಂದ ಅಸಂಗತಗಳೆಂದು ತೋರುವ ಎಷ್ಟೋ ಭಾಗಗಳು ಈಚಿನ ಸೇರಿಕೆಗಳೆಂಬುದನ್ನು ದೇಶದ ಇತರ ಭಾಗಗಳ ಹಸ್ತಪ್ರತಿಗಳು ಪುಷ್ಟೀಕರಿಸಿದಾಗ ಅಂಥಾ 'ಖೋಟಾ' ಪಾಠಗಳನ್ನು ಮೂಲಬಾಹಿರವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ೩) ಸುಭದ್ರಾಪಹರಣ ೪) ಶಕುಂತಲೋಪಾಖ್ಯಾನ ೫) ಹಿಡಿಂಬೆಯ ಪ್ರಕರಣ ೬) ಸಭಾಪರ್ವದಲ್ಲಿ ದ್ರೌಪದಿಯು ವಿವಸಿತಳಾದಾಗ ಕೃಷ್ಣಮಹಿಮೆಯಿಂದ ಅವಳುಟ್ಟಿದ್ದ ಸೀರೆಯು ಥಾನುಥಾನು ಹಿಗ್ಗಿ ಅಕ್ಷಯವಾಗುವುದು. –ಇವುಗಳಿಗೆ ಸಂಬಂಧಿಸಿದಂತೆ ದಾಕ್ಷಿಣಾತ್ಯ ಪಾಠಗಳಲ್ಲಿ ತೋರುವ ಹತ್ತಾರು ವಿವರಗಳ ಪ್ರಸ್ತಾಪವೇ ಉತ್ತರೀಯ ಪಾಠಗಳಲ್ಲಿಲ್ಲ."[೨೫]

**ಪಾಶ್ಚಾತ್ಯರ ವಾಕ್ಯಸರಣಿಗಳು :**

'ಮಹಾಭಾರತ'ದ ಮೂಲ ಭಾಗವನ್ನು ಪಾಶ್ಚಾತ್ಯ-ಪೌರವಾತ್ಯ ಹಲವಾರು ವಿದ್ವಾಂಸರು ಹುಡುಕುವ ಪ್ರಯತ್ನ ಮಾಡಿದ್ದಾರೆ. "ಮಹಾಭಾರತದಲ್ಲಿಯ ಮೂಲ ಭಾಗವನ್ನು ಹುಡುಕುವ ಸುದೀರ್ಘ ಪ್ರಯತ್ನವನ್ನು ಕೈಗೊಂಡವರಲ್ಲಿ **ಸುರೇನ್‌ಸನ್** ಎಂಬ ಸ್ಕಾಂಡಿನೇವಿಯಾದ ಪಂಡಿತನು ಬಹಳ ಪ್ರಮುಖನು."[೨೬] ಈತನಂತೆಯೇ ಮತ್ತೊಬ್ಬ **ಲ್ಯುಡ್‌ವಿಗ್‌**ನೆಂಬ ಪ್ರಸಿದ್ಧ ವಿದ್ವಾಂಸನು ಪ್ರಕ್ಷಿಪ್ತ ಭಾಗಗಳನ್ನು ಹುಡುಕಿ ತೆಗೆಯಲು ಸೂತ್ರಗಳನ್ನು ಕಲ್ಪಿಸಿದನು. ಹಿಂದು-ಮುಂದಿನ ಕಥಾ ಭಾಗಗಳಿಗೆ ಸರಿಯಾದ ಹೊಂದಿಕೆ ಇಲ್ಲದಿರುವ ಭಾಗಗಳು ಮೂಲಕಥೆಗೆ ಪೋಷಕವಲ್ಲ. ಇರುವ ಭಾಗಗಳು ಕವಿಯು ಕಷ್ಟಪಟ್ಟು ರಚಿಸಿದ ಶ್ಲೋಕಗಳು. ಒಮ್ಮೆ ಹೇಳಿದ್ದನ್ನೇ ವಿಸ್ತರಿಸಿ ಮತ್ತು ವ್ಯತ್ಯಾಸ ಮಾಡಿ ಹೇಳಿದ ಭಾಗಗಳು ಛಂದಸ್ಸು, ಭಾಷೆ, ಶೈಲಗಳು ಒಮ್ಮೆಲೆ ಬದಲಾದ ಭಾಗಗಳು ಇವೆಲ್ಲವನ್ನೂ ಪ್ರಕ್ಷಿಪ್ತಗಳೆಂದು ಪರಿಗಣಿಸಬೇಕೆಂದು ಹೇಳಿರುವನು. ಸಂಸ್ಕೃತ ಸಾಹಿತ್ಯದ ಇತಿಹಾಸವನ್ನು ಬರೆದ ಮತ್ತೊಬ್ಬ ಬಹಳ ಸುಪ್ರಸಿದ್ಧ ವಿದ್ವಾಂಸನಾದಂತಹ **"ಮ್ಯಾಕ್‌ಡೋನಾಲ್ಡ್** 'ಮಹಾಭಾರತ'ದ ಕಥೆಗೆ ಅಕ್ಕ-ಪಕ್ಕದ ರಾಜ್ಯದವರಾದ ಕುರು-ಪಾಂಚಾಲರ ಯುದ್ಧದ ಗಾಥೆಗಳೇ ಉಗಮವಾಗಿದೆ. ಇವರಿಬ್ಬರ ಹೆಸರುಗಳ **ಯಜುರ್ವೇದ**ದಲ್ಲಿ ಬರುತ್ತವೆ. **ಕಾಠಕೋಪನಿಷತ್‌**ನಲ್ಲಿ ಧೃತರಾಷ್ಟ್ರ ಮತ್ತು ವಿಚಿತ್ರವೀರ್ಯರ ಹೆಸರುಗಳು ಬರುತ್ತದೆ. ಈ ಕುರು-ಪಾಂಚಾಲರ ವೀರಗಾಥೆಗಳನ್ನು ಸಂಕಲಿಸಿ ಯಾವನೋ ಒಬ್ಬ ಕವಿಯ ಒಂದು ವೀರಕಾವ್ಯವನ್ನು ರಚಿಸಿದನು."[೨೭] ಇದು ಯಾವನೋ ಕವಿರಚಿಸಿದ ಕಾವ್ಯವಲ್ಲ. ಇವುಗಳ ಆಧಾರದಿಂದ **ವ್ಯಾಸ ಋಷಿ** ರಚಿಸಿದ **'ಭಾರತ'** ಕಾವ್ಯವೇ ಆಗಿದೆ.

***೮. ಡಾ॥ ಸುಕ್ತಂಕರ್, ಡಾ॥ ಶಂ.ಬಾ. ಜೋಶಿ ಮತ್ತು ಡಾ॥ ಇರಾವತಿಬಾಯಿ ಕರ್ವೇ ಅವರ ವಾದಗಳನ್ನು ಪರಸ್ಪರ ಮುಖಾಮುಖಿಗೊಳಿಸಿ ನಡೆಸಿದ ಚಿಂತನೆ ಒಂದು ನೋಟ :***

**"ಮಹಾಭಾರತದ ಕಥಾವಸ್ತು, ಅದರೊಳಗಿನ ಪಾತ್ರಗಳು ಇವುಗಳ ಮೂಲಕ ಆಕೃತಿ (Archetype) ಇವು ಎಲ್ಲಿವೆಯೆಂದು ನಿಶ್ಚಿತವಾದರೇನೇ ಡಾ॥ ಸುಖ್‌ಟಣ್‌ಕರ್ ಅಥವಾ ಡಾ॥ ಇರಾವತಿಬಾಯಿ ಕರ್ವೆಯವರಲ್ಲಿ ಯಾರ ಮತವು ನಿಜವೆಂದು ಸ್ಪಷ್ಟವಾಗುವುದು ಸಾಧ್ಯ."**[೨೮] ಎನ್ನುತ್ತಾರೆ ಡಾ॥ ಶಂ.ಬಾ. ಜೋಶಿಯವರು. ಇವರು **ಮಹಾಭಾರತ ವಸ್ತು ವಿನ್ಯಾಸಗೊಂಡು ತಳೆಯುವ ದೃಷ್ಟಿಕೋನ, ಆಶಯ ದ್ಯೂತ ಪ್ರಕರಣವೇ ಆಗಿದೆ.**

ಇತಿಹಾಸ, ಪುನಾರ್ರಚನೆಗೆ ಮೂಲಭೂತವಾಗಿ ಆಕರಗಳು ದೊರೆಯಬೇಕು. ಗತಕಾಲದ ದೃಶ್ಯ ನಮ್ಮ ಪ್ರಜ್ಞೆಯಲ್ಲಿ ಮೂಡಿಸುವುದೇ ಹೊಸ ಆಕರ. ಹೊಸ ಆಕರ ದೊರೆತಾಗ ಮಾತ್ರ ಹೊಸ ನೋಟ ಅಂದರೆ ಅಂದು ಸಹಜವಾಗಿ ನಡೆದದ್ದೇನು? ಎನ್ನುವುದನ್ನು ಗುರುತಿಸಲು ಸಾಧ್ಯ. ಸಭೆಯಲ್ಲಿ ದ್ರೌಪದಿಯ ವಸ್ತ್ರಾಪಹರಣ ಆಯಿತೇ ಇಲ್ಲವೇ? ಎನ್ನುವ ಸತ್ಯ ಆಕರಗಳ ಲಭ್ಯತೆಯಿಂದ ಮಾತ್ರ ಐತಿಹಾಸಿಕ ಸತ್ಯದ ಸ್ವರೂಪವನ್ನು ನಿರ್ಧರಿಸಬಹುದು. ಕನ್ನಡದಲ್ಲಿ ರಚನೆಯಾಗಿರುವ **"ಪಂಪನ ವಿಕ್ರಮಾರ್ಜುನ ವಿಜಯ, ರನ್ನನ ಸಾಹಸಭೀಮ ವಿಜಯ, ಕುಮಾರವ್ಯಾಸನ ಭಾರತ – ಇವು ಮೂರೂ ಮಹಾಭಾರತದ ಕಥೆಯನ್ನೇ ಕನ್ನಡದಲ್ಲಿ ಹೇಳುತ್ತವೆ."**[೨೯] ಎಂದಿರುವ ಅಭಿಪ್ರಾಯವು ನಿಜವಾದರೂ ಅಲ್ಲಲ್ಲಿ ಮಾಡಿಕೊಂಡಿರುವ ಸಣ್ಣಪುಟ್ಟ ಬದಲಾವಣೆಗಳನ್ನು ಗುರ್ತಿಸುತ್ತೇವೆಯಾದರೂ ಇವೆಲ್ಲವೂ ವಿಮರ್ಶಕರ ಪ್ರಶಂಸೆಗೂ ಪಾತ್ರವಾಗಿವೆ. ಆದರೆ "ಆಧುನಿಕ ಚಿಂತನೆ"ಗಳೆಂಬ ಯಾವುದೇ ಜಿಜ್ಞಾಸೆಗೆ ಒಳಗಾಗಿರುವುದಿಲ್ಲ ಎಂಬುದು ಗಮನಾರ್ಹವಾದ ಅಂಶವಾಗಿದೆ. **"ಸಂಸ್ಕೃತ ಭಾರತದಲ್ಲಿಯ ಐತಿಹಾಸಿಕ ಅಂಶಗಳು, ನಿಷ್ಠುರವಾದ ಧರ್ಮಜಿಜ್ಞಾಸೆ, ಪಾತ್ರರಚನೆಯಲ್ಲಿಯ ಸಂಕಲತೆ, ಈ ತತ್ವಗಳು ಯಾವುದೇ ಕವಿಯ ಪ್ರತಿಭೆಗೆ ಆಹ್ವಾನವನ್ನೀಯಬಲ್ಲವು."**[೩೦] ಆದರೂ ಪಂಪ, ರನ್ನ, ಕುಮಾರವ್ಯಾಸರು ಅದರ ಗೋಜೀಗೂ ಹೋಗಿರುವುದಿಲ್ಲ.

"ಮಾನವ ಜೀವನವು ವಿಫಲವಾಗಿರುವುದು. ಇದನ್ನು ಮನಸ್ಸಿನ ಮೇಲೆ ಬಿಂಬಿಸಲಿಕ್ಕೇ ಮಹಾಭಾರತವನ್ನು ರಚಿಸಿರಲಿಕ್ಕಿಲ್ಲವೇ?"[೩೧] ಎಂದು ಪ್ರಶ್ನಿಸಿರುವ ಸಂದೇಹವನ್ನು, ಸಮಸ್ಯೆಯನ್ನು ಡಾ॥ ಶಂ.ಬಾ. ಜೋಶಿಯವರು "ನೂರಕ್ಕೆ ನೂರರಷ್ಟು ನಿಜ."[೩೨] ಎಂದು ಸಮರ್ಥಿಸಿದ್ದಾರೆ. ಹಾಗೆಯೇ ಡಾ॥ ಜೋಶಿಯವರು ಮುಂದುವರೆಯುತ್ತಾ, "ಈ ಮೌಲಿಕವಾದ ಪ್ರಶ್ನೆ ಜಾಗತಿಕ ಸಂಸ್ಕೃತಿಗೆ ಮಹತ್ವದ್ದು ಮತ್ತು ಇದನ್ನು ಒರೆಗೆ ಹಚ್ಚಿ ನೋಡುವುದು ವಿಚಾರವಂತರ ಕರ್ತವ್ಯ."[೩೩] ಎಂದೂ ಹೇಳಿದ್ದಾರೆ. ಈ ಪ್ರಾಚೀನ ಮಹಾಕಾವ್ಯದಲ್ಲಿ **ಮಿಥಿಕಲ್ ಫಾರ್ಮ್** ಮತ್ತು **ಲೆಜೆಂಡರಿ ಫಾರ್ಮ್** ಇವೆರಡರ ಗೊಂದಲ ಮಾಡಲಾಗಿದೆ. "ಇವೆರಡರ ನಡುವಿನ ಅಂತರವನ್ನು

ಸ್ಪಷ್ಟವಾಗಿ ಕಾಪಾಡಿಕೊಳ್ಳಲಾಗದ್ದರಿಂದ ಮಹಾಭಾರತದೊಳಗಿನ ಹಾಗೆನಿಸಿಕೊಳ್ಳುವ **ಇತಿಹಾಸ – ಪುರಾಣದ** ತಿರುವು ಹಿಡಿದು ಹೋಗಿದೆ. ಎಂದೂ ಅಭಿಪ್ರಾಯ ಪಡುವ ಜೋಶಿಯವರ ವಾದ ಸಮರ್ಥನೀಯ. ಕಾರಣ **ಪುರಾಣ** ಹಾಗೂ **ಇತಿಹಾಸಗಳು** ನಮ್ಮ ಸಂಸ್ಕೃತಿಯ ಪ್ರಮುಖ ವಿಧಾಯಕಗಳಾಗಿವೆ.[೩೩] ಐತಿಹ್ಯಗಳು ಪುರಾಣಗಳಿಗೂ ಹೊಕ್ಕುಳಬಳ್ಳಿ ಸಂಬಂಧ; ಇತಿಹಾಸ ಐತಿಹ್ಯಕ್ಕೆ ಆಧಾರ, ಐತಿಹ್ಯ ಪುರಾಣಕ್ಕೆ ಮೂಲ (**ದೇ.ಜ.ಗೌ. ಜನಪದ ಅಧ್ಯಯನ**).

ಇತಿಹಾಸವು ಸತ್ಯದ ಬೇರೊಂದು ರೂಪವಾಗಿರುತ್ತದೆ. ಅದರಲ್ಲಿ ಅಸತ್ಯಕ್ಕೆ ಸ್ಥಾನವಿಲ್ಲ. ಮತ್ತು ಇರಬಾರದು. ಆದರೆ "ವಿಶ್ವಾಸವು ಎಲ್ಲ ಸಂದರ್ಭಗಳಲ್ಲಿ ಸತ್ಯವಾಗಿರುವುದಿಲ್ಲ. ಅಂದರೆ ಹೆಚ್ಚಿನ ಸಂದರ್ಭಗಳಲ್ಲಿ ವಿಶ್ವಾಸ ಎಂಬುದು ಶುದ್ಧ ಮಿಥ್ಯಾ ಕಲ್ಪನೆಯಾಗಿತ್ತೆಂದು ಅಥವಾ ಬುಡವಿಲ್ಲದೇನೇ ಬೆಳೆದು ಬಂದಿತೆಂದು ಕಂಡು ಬಂದಿದೆ.[೩೪] "ಮಹಾಭಾರತದ ಸಾಮಗ್ರಿಯು ಗ್ರಂಥರಚನೆಗಿಂತ ಪ್ರಾಚೀನವಾದದ್ದೆಂದೂ ಜನಜನಿತವಾಗಿದ್ದ ವೀರಗಾಥೆಗಳೇ ಗ್ರಂಥಕರ್ತರಿಗೆ ಪ್ರಚೋದನೆಯನ್ನೊದಗಿಸದೆಯೆಂದೂ ಮೇಲಣ ಆನುಪೂರ್ವಿಯಿಂದ ಊಹಿಸಬಹುದು.[೩೫] ಮೇಲಿನ ಆನುಪೂರ್ವಿ ಅಂದರೆ ವೈದಿಕ ಹಾಗೂ ವೈದಿಕೋತ್ತರ ಸಾಹಿತ್ಯವೆಂದು ತಿಳಿಯಬೇಕು.

ಇಲ್ಲಿ **ವೈದ್ಯಗುರುಗಳು** ಬಳಸಿರುವ **ವಿಶ್ವಾಸ** ಶಬ್ದವನ್ನು ನಾವು **ಪುರಾಣ** ಎಂಬ ಅರ್ಥದಲ್ಲಿ ಸ್ವೀಕರಸುತ್ತೇವೆ. ಕಾರಣ "ಐತಿಹಾಸಿಕವಾಗಿ **ಇತಿಹಾಸ ಪುರಾಣಗಳ** ಕಾಲ ಒಂದು ಸಂಧಿಕಾಲ.[೩೬] **ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪ್ ಬೃಂಹಯೇತ್**. "ವೇದದಲ್ಲಿರುವ ಹಲವಾರು ಪಾತ್ರಗಳು ಪ್ರಕರಣಗಳು ಸತ್ಯದ ರೂಪ. ಅದು ಮುಂದೆ ಪುರಾಣಿಕರ ಕೈಯಲ್ಲಿ ಸಿಕ್ಕು **ಪಂಚಲಕ್ಷಣಗಳನ್ನು** ಪಡೆಯಿತು. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ. ಇವು ಉಪಾಖ್ಯಾನ ರೂಪ ಪಡೆದು ಮಹಾಭಾರತ ಬೆಳವಣಿಗೆಯಾಯಿತು. ಹದಿನೆಂಟು ಪುರಾಣಗಳಾಯಿತು. ಒಟ್ಟಿನಲ್ಲಿ **ವೇದಬೀಜದ** ಜ್ಞಾನಾಂಕುರಗಳೇ **ಇತಿಹಾಸ ಪುರಾಣಗಳು.**[೩೭] ಎನ್ನುವುದು ಸಿದ್ಧಾಂತವಾಯಿತು. ಇರಾವತಿಬಾಯಿ ಕರ್ವೆ ಅವರಿಗೆ ಮಹಾಭಾರತದಲ್ಲಿ **ಯುಗಾಂತರವು** ದೊರೆಯಿತು.

ಯುಧಿಷ್ಠಿರನು ರಾಜಸೂಯ ಮಹಾಯಾಗವನ್ನು ಮಾಡಿ ಮುಗಿಸಿದನು. ಪಾಂಡವರಿಗೆ ಅಪಾರ ಐಶ್ವರ್ಯವು ಬಂದಿತ್ತು. ಇದನ್ನು ನೋಡಿ ದುರ್ಯೋಧನನು ಸಹಿಸದಾದ. ಪಾಂಡವರ ಐಶ್ವರ್ಯವನ್ನೆಲ್ಲ ತನ್ನದನ್ನಾಗಿ ಮಾಡಿಕೊಳ್ಳಲು ನಿರ್ಧರಿಸದ. ಅವನು ಚಿಂತಿಸುವುದನ್ನು ಕಂಡು, ಶಕುನಿಯು; 'ಚಿಂತಿಸಬೇಡ ದುರ್ಯೋಧನ.. ನೀನು ಪಾಂಡವರ ಐಶ್ವರ್ಯವನ್ನು ಕಂಡು ದುಃಖಿತನಾಗಿದ್ದೀಯೋ ಆ ಅತುಲೈಶ್ವರ್ಯವನ್ನು ಕ್ಷಣಮಾತ್ರದಲ್ಲಿ ನಿನಗೆ ಗೆದ್ದು ಕೊಡುವೆನು. ಪಗಡೆ ಕಾಯಿಗಳೇ ನನ್ನ ಧನಸ್ಸು. ದಾಳಗಳೇ ನನ್ನ ಬಾಣಗಳು. ದಾಳಗಳ ಮೇಲಿರುವ ಚಿಹ್ನೆಗಳೇ ನನ್ನ ಧನುಸ್ಸಿನ ಮೌರ್ವಿ, ಪಗಡೆ ಆಟದ ಹಾಸೇ ನನ್ನ ರಥ. ಇವುಗಳ ಸಹಾಯದಿಂದ ಪ್ರಪಂಚವನ್ನೇ ಗೆಲ್ಲುವ ಸಾಮರ್ಥ್ಯ ನನಗಿರುವುದು.' ಎಂದು ಹೇಳಿ ನಂಬಿಸಿದನು.

ಧೃತರಾಷ್ಟ್ರನ ಆಜ್ಞೆಯಂತೆ 'ದ್ಯೂತ' – ಪಗಡೆ ಆಟ ಆಡಲಿಕ್ಕಾಗಿಯೇ ಒಂದು '**ತೋರಣ ಸ್ಫಾಟಿಕಾ**' ಎಂಬ ನೂತನ ಸುಸಜ್ಜಿತ ಸಭಾಭವನವನ್ನು ನಿರ್ಮಿಸಲಾಯಿತು. ದ್ಯೂತವು ದುಃಖಕ್ಕೆ ಮೂಲ. ಕಲಹದಲ್ಲಿ ಪರ್ಯವಸಾನವಾಗುವುದು ಎಂದು ತಿಳಿದಿದ್ದ ಅಸಹಾಯಕ ವಿದುರ ಯುಧಿಷ್ಠಿರನನ್ನು ಹಸ್ತಿನಾವತಿಗೆ ಕರೆತಂದ. ಪಂಚಕರಾದ ಜೂಜುಕೋರರೊಡನೆ ಪಣವನ್ನಿಟ್ಟು ದ್ಯೂತ ಆಡುವುದು ಮಹಾಪಾಪ ಎಂದು ತಿಳಿದಿದ್ದರೂ ಪ್ರತಿಷ್ಠೆಗಾದರೂ ರಾಜಕ್ರೀಡೆಯನ್ನು ಯುಧಿಷ್ಠಿರ ನಿರಾಕರಿಸದಾದ.

ವೈಫಲ್ಯದಿಂದ ವ್ಯಥೆಗೊಂಡಂತೆ ಕಂಡಿತು. "**ವೈಫಲ್ಯಭಾವ**"ವೇ ಈ ಮಹಾಕಾವ್ಯದ ಸ್ಥಾಯಿಭಾವ. (**ಯುಗಾಂತ, ಪು.೧೬೧**) 'ವೈಫಲ್ಯಭಾವ', 'ಅಭಾವ' ಇವನ್ನು "**ಸ್ಥಾಯಿಭಾವ**"ವಾಗಿ ಇಟ್ಟುಕೊಂಡು ರಚಿಸಿದ "ಮಹಾಭಾರತ"ವು ಭವ್ಯವೂ ಅಥವಾ ಕಾವ್ಯವು ಜಗತ್ತಿನ ಅಪೂರ್ವ ಕಾವ್ಯವಾಗಿದೆಯೆಂಬುದು ನಿಜ. **ನಿರಂಕುಶಾಯ ಕವಯಃ** ಈ ನ್ಯಾಯದಂತೆ ನಿರಂಕುಶ ಕಲ್ಪನಾಶಕ್ತಿಯ ಆವಿಷ್ಕಾರವನ್ನು ಹೊಂದಿರುವ ಈ ಮಹಾಕಾವ್ಯವು ಕಾವ್ಯದೃಷ್ಟಿಯಿಂದ ಪ್ರಾಪ್ತವಾದ ಪ್ರಶಂಸೆಗೆ ನಿಸ್ಸಂಶಯವಾಗಿ ಪಾತ್ರವೇ ಆಗಿದೆ. ಆದರೆ ಹಾಗೆಂದ ಮಾತ್ರಕ್ಕೆ 'ಮಹಾಭಾರತ'ವು "**ಇತಿಹಾಸ**" ಎಂದು ಒಪ್ಪುವುದು ಅಥವಾ ಒಪ್ಪಿಸಲು ಹಚ್ಚುವುದು ಅಷ್ಟು ಪ್ರಶಸ್ತವೇ?![೩೮] "'ಮಹಾಭಾರತ'ದ ರಚನೆಯ ಸ್ವರೂಪವೇ ಹೇಗೆ ಅಡಿ ಇಟ್ಟಿದೆ ಎಂದರೆ ಅವಶ್ಯ **ಇತಿಹಾಸವೆಂದು** ಪ್ರತಿಷ್ಠಿಸಬೇಕೆಂದು ವೇದಗಳಲ್ಲಿಯ

ಮಿಥಿಕಲ್ ಸಂಗತಿಗಳಿಗೆ ಕುಲವಂಶ ಪರಂಪರೆಯ ವೇಷವನ್ನು ತೊಡಿಸಿ ಅವನ್ನು ಮಹಾಭಾರತಕ್ಕೆ ಜೋಡಿಸಲಾಯಿತು."[೬೯] ಈ ಜೋಡಣೆಯಿಂದಲೇ 'ಮಹಾಭಾರತ'ವೂ 'ಪಂಚಮವೇದ'ವೆಂದು ಪ್ರಸಿದ್ಧಿ ಪಡೆಯಿತು. ಆದರೆ ಇದು ವೇದವ್ಯಾಸರು ಮಾಡಿದ್ದಲ್ಲ. ಆನಂತರ ಬಂದವರು 'ಭಾರತ'ವನ್ನು 'ಮಹಾಭಾರತ'ವಾಗಿ ಬೆಳೆಸಲು ವೇದಾಧಾರದ ಕಥೆಯ ಪುರಾಣಗಳನ್ನು ಸೃಷ್ಟಿಸಿದ ಪುರಾಣಿಕರ ಕೈಚಳಕ ದೈವೀ ಪ್ರತಿಷ್ಠೆಯನ್ನಿತ್ತು ಪಂಚಮವೇದವನ್ನಾಗಿಸಿತು.

ಇತಿಹಾಸದ ಮಿಥಿಕಲ್ ತಳಪಾಯದ ಮೇಲೆ ಮಹಾಭಾರತವನ್ನು ಬೃಹದಾಕಾರವಾದ ಕಟ್ಟಡವಾಗಿ ಕಟ್ಟುತ್ತಲೇ ಬಂದರು. ಇದರಿಂದ ವೇದವ್ಯಾಸರ "ದಿವ್ಯತ್ವ"ವೂ ಹೆಚ್ಚುತ್ತಲೇ ಹೋಯಿತು. ಅಂದಮೇಲೆ "ವ್ಯಾಸರ ಮಹಾಕಾವ್ಯದ ವಿಷಯವಾಗಿ ಯಾರು ಹೇಗೆ ಶಂಕೆಯನ್ನೆತ್ತಬೇಕು?"[೭೦] ಆ ಕಾಲದಲ್ಲಿ ವ್ಯಾಸರ ವಿರುದ್ಧ ದನಿ ಎತ್ತುವ ಧೈರ್ಯ ಯಾರಿಗಿತ್ತು? ವ್ಯಾಸರ ಹೆಸರು ವ್ಯಾಸ ಪರಂಪರೆಯನ್ನೇ ಸೃಷ್ಟಿಸಿ ಇತಿಹಾಸವನ್ನಾಗಿಸಿ ದಿವ್ಯದೇವತೆಗಳ ಆಧ್ಯಾತ್ಮಿಕ ಕ್ಷೇತ್ರಕ್ಕೆ ಧಾರಣೆ ಮಾಡಿ ವ್ಯಾಸ ಪ್ರಣೀತ 'ಭಾರತ' ಪಂಚಮವೇದ ಎಂದಿರುವ ಪುರಾಣಿಕರ ಧಾರ್ಮಿಕ ಶ್ರದ್ಧೆ ಅರ್ಥಗ್ರಹಣ ಮಾಡಿರುವುದೇ ಮುಖ್ಯ ಉದ್ದೇಶವಾಗಿದೆ. ವ್ಯಾಸ ಪ್ರಣೀತ 'ಮಹಾಭಾರತ'ದಲ್ಲಿ ಇತಿಹಾಸ ಎಂಬುದು ನಿಜವಾಗಿಯೂ ಎಷ್ಟಿದೆ? ಅರ್ಧ ಸತ್ಯಗಳ ಅವಲಂಬನದ ಮೇಲೆ ನಿಲ್ಲಿಸಿದ 'ಮಹಾಭಾರತ'ದ ಸಂಮೋಹನೆಯಿಂದ ಹೊರಬರುವುದು ಸತ್ಯಶೋಧನೆಯ ದೃಷ್ಟಿಯಿಂದಲೂ ಅಗತ್ಯವಾಗಿದೆ. ಇದಕ್ಕಾಗಿಯೇ ವೇದದೊಳಗಿನ ವೈಶ್ವಿಕ ಸಂಕೇತಗಳ ಹಿನ್ನೆಲೆಯಿಂದಲೇ 'ಮಹಭಾರತ'ದಂತಹ ಈ ರಾಷ್ಟ್ರೀಯ ಆರ್ಷ ಮಹಾಕಾವ್ಯದ ಸಮೀಕ್ಷೆ ಆಗತಕ್ಕದ್ದು ಎಂದು ನಾನು ಪ್ರತಿಪಾದನೆ ಮಾಡುತ್ತೇನೆ ಎನ್ನುತ್ತಾರೆ ಡಾ॥ ಶಂ.ಬಾ. ಜೋಶಿ. "'ಮಹಾಭಾರತ'ದ ಹಲವಾರು ಆಖ್ಯಾನಗಳ ಮೂಲಗಳನ್ನು ವೇದಗಳಲ್ಲಿ ಕಾಣಬಹುದು."[೭೧] ಎಂದಿರುವ ಅಂಶವಂತೂ ಗಮನಾರ್ಹವಾದುದಾಗಿದೆ.

### 'ಮಹಭಾರತ'ದ ಒಟ್ಟಿನ ಆಶಯವೇನು?

ಋಗ್ವೇದವನ್ನು ವಿಂಗಡಿಸಿದ ವ್ಯಾಸರು–ವೇದವ್ಯಾಸರೆಂದು ಪ್ರಸಿದ್ಧರಾದರು. ವೇದದ ನಂತರ ವಾಲ್ಮೀಕಿ ಋಷಿಗಳು ರತಿಕ್ರೀಡೆಯಲ್ಲಿ ತೊಡಗಿದ್ದ ಪಕ್ಷಿಗಳಲ್ಲಿ ಬೇಡನೊಬ್ಬ ಗಂಡು ಪಕ್ಷಿಯನ್ನು ಬಾಣಬಿಟ್ಟು ಕೊಂದು ಹಾಕಿದ. ಸ್ನಾನಕ್ಕೆಂದು ನದಿಗೆ ಹೊರಟಿದ್ದ ವಾಲ್ಮೀಕಿ ಋಷಿಗಳು ಈ ದೃಶ್ಯವನ್ನು ಕಂಡು ನೊಂದು ಹೃದಯ ಶೋಕ ತುಂಬಿ ಬಂದು ಶ್ಲೋಕವಾಗಿ ರಾಮಾಯಣ ಕಾವ್ಯವನ್ನು ರಚಿಸಿದರು.

ಅದೇ ವ್ಯಾಸರು ವೇದವಿಭಾಗ ಮಾಡುವಾಗ ಅವರ ಗಮನ ಸೆಳೆದ ಋಗ್ವೇದದ ೧೦ನೇ ಮಂಡಲದ "ದ್ಯೂತ"ದ ಪ್ರಕರಣ. ಅದು ಸಮಾಜದ ಮೇಲೆ ಬೀರುವ ದುಷ್ಪರಿಣಾಮ, ನಳಮಹಾರಾಜನಿಗುಂಟಾದ ಪರಮ ದಾರುಣ ಸ್ಥಿತಿ ಹಾಗೂ ಈ ಜೂಜು ಜನಸಾಮಾನ್ಯರ ಮೇಲೂ ಬೀರಬಹುದಾದ ಪ್ರಭಾವಗಳಿಂದ ವ್ಯಾಕುಲಗೊಂಡ ವ್ಯಾಸ ಮಹರ್ಷಿಗಳು ದ್ಯೂತದ ಪರಿಣಾಮವನ್ನು ಲೋಕಕ್ಕೆ ಸಾರಲು 'ದ್ಯೂತ ಭಾರತ'ವನ್ನು 'ಜಯ' 'ಜಯೋನಾಮೇತಿಹಾಸೋಯಂ' ನಾಮದ "ಕಾವ್ಯ ಪ್ರತಿಮೆ"ಯ ಮಹಾಕಾವ್ಯವನ್ನು ರಚಿಸಿದರು.

### ದ್ಯೂತದ ಅನರ್ಥ :

೧. ಮಾನವನ ಬದುಕನ್ನು ವಿನಾಶದತ್ತ ಒಯ್ಯುವ "ದ್ಯೂತ" ವ್ಯಾಸರ ಅಂತರಂಗವನ್ನು ಕೆಣಕಿದೆ. ದ್ಯೂತ ವ್ಯಕ್ತಿಯನ್ನು ಸರ್ವಸ್ವವನ್ನೂ ಜೂಜಿನಲ್ಲಿ ಕಳಕೊಂಡು ಬೀದಿಗೆ ತಂದು ಹಾಕುತ್ತದೆ ಎಂಬ ಸೈದ್ಧಾಂತಿಕ ಸತ್ಯವೇ 'ಮಹಾಭಾರತ' ರಚನೆಗೆ ಪ್ರೇರಣೆ ನೀಡಿದೆ.

೨. ದ್ಯೂತಕ್ಕೆ ಬಲಿ ಬಿದ್ದು ಸರ್ವಸ್ವವನ್ನೂ ಕಳಕೊಂಡು ಅಧಃಪತನ ಹೊಂದಿದ ವ್ಯಕ್ತಿಗಳು ಸಹಜವಾಗಿ ಸಮಾಜದ ಪತನಕ್ಕೂ ಕಾರಣರಾಗುತ್ತಾರೆ. "ಪ್ರಜೆಗಳು ಇಂಥಹವರ ಆದರ್ಶಗಳಿಗೆ ಬಲಿಯಾಗಿ ತಾವೂ ಹಾಳಾಗಬೇಕಾದ ಸನ್ನಿವೇಶವನ್ನು ನಿರ್ಮಾಣ ಮಾಡಿಕೊಳ್ಳುವುದನ್ನು ವೇದವ್ಯಾಸರು ಮೂಲ ದ್ರವ್ಯವಾಗಿ "ದ್ಯೂತ"ದ ಅನರ್ಥಕಾರಿ ಪರಿಣಾಮದ ಗುರುತರವಾದ ಪ್ರಮಾಣವನ್ನಾಗಿ ಇಟ್ಟುಕೊಂಡೇ ಮೂಲ ಭಾರತ–

ಜಯ ಗ್ರಂಥವನ್ನು ೨೪,೦೦೦ ಶ್ಲೋಕಗಳಲ್ಲಿ ರಚಿಸಿದರು."[೪೨] "ದ್ಯೂತ"ದ ದುಷ್ಪರಿಣಾಮದ ಸಿದ್ಧಾಂತವನ್ನು ವೈಜ್ಞಾನಿಕವಾಗಿ ತಿಳಿಯಲೆಂದೇ ವ್ಯಾಸರು 'ಜಯ' ಕಥೆಗೆ ಪೋಷಕವಾದ ಪಾತ್ರಗಳಲ್ಲಿ ಕೆಲವನ್ನು ವೈದಿಕ, ವೈದಿಕೋತ್ತರ ಸಾಹಿತ್ಯದಿಂದ ಆರಿಸಿದ್ದಾರೆ. ಹಾಗೂ ಕೆಲವನ್ನು ಸೃಷ್ಟಿಸಿದ್ದಾರೆ. ಋಗ್ವೇದ, ಶತಪಥ ಬ್ರಾಹ್ಮಣ, ಪಾಣಿನಿಯ ಸೂತ್ರಗಳಿಂದ ಆಯ್ಕೆ ಮಾಡಿಕೊಂಡಿದ್ದಾರೆ.

ಇತಿಹಾಸ ಎನಿಸಿದ ಈ ಮಹಾಕಾವ್ಯವಾದ 'ಮಹಾಭಾರತ' ಕುರಿತಾದ ಆಧುನಿಕ ಚಿಂತನೆಗಳು ಅಧ್ಯಯನಕ್ಕೆ ಹಿನ್ನೆಲೆಯಾಗಿ ಪರಾಮರ್ಶನ ಮಾಡಬೇಕಾದ ಪ್ರಮುಖ ಸಾಹಿತ್ಯ "ಶ್ರುತಿ-ಸ್ಮೃತಿ, ಪುರಾಣಗಳು. ಏಕೆಂದರೆ, (ಪಾಣಿನಿಯ ಕಾಲ ಸುಮಾರು ಕ್ರಿ.ಪೂ. ೧೦ನೇ ಶತಮಾನ) "ಕುರು-ಪಾಂಚಾಲ"ರ ಪದಗಳು ವೈದಿಕಗ್ರಂಥಗಳಲ್ಲಿ ಸಿಕ್ಕುವುದು."[೪೩] ಎನ್ನುವುದು ಸ್ವಾಗತಾರ್ಹ ವಿಷಯವಾಗಿದೆ.

**ಮೂರು ಹಂತಗಳ 'ಮಹಾಭಾರತ'ದ ಬೆಳವಣಿಗೆ :**

'ಮಹಾಭಾರತ' ೨೪,೦೦೦ ಶ್ಲೋಕಗಳಿಂದ 'ಜಯ' ನಾಮದಲ್ಲಿ ರಚನೆಯಾಗಿದೆ. ಇದರ ಕರ್ತೃ ವೇದವ್ಯಾಸ ಋಷಿಗಳು. ಮೂಲದಲ್ಲಿ ಇದರ ಹೆಸರು 'ಜಯ' ಎಂದೇ ಇರುವುದಾಗಿ ತಿಳಿದುಬರುತ್ತದೆ. ಈ ಆದಿ ಮಹಾಕಾವ್ಯ ಜಯ-ಭಾರತವನ್ನೇ ನಾನು ನನ್ನ ಅಧ್ಯಯನದ ವ್ಯಾಪ್ತಿಗೊಳಪಡಿಸಿಕೊಂಡಿದ್ದೇನೆ.

ಮೂಲ ರೂಪದಲ್ಲಿದ್ದಂತಹ 'ಜಯ' ನಂತರ ಮೂರು ಹಂತಗಳಲ್ಲಿ ಬೆಳವಣಿಗೆ ಹೊಂದಿರುವುದನ್ನು 'ಮಹಾಭಾರತ'ದಲ್ಲೇ ಹೇಳಿದೆ.

ಒಂದು ಕಾಲದಲ್ಲಿ 'ಕಾವ್ಯ' ರೂಪದಲ್ಲಿದ್ದ ಗ್ರಂಥಗಳನ್ನು ನಾವಿಂದು 'ಸಾಹಿತ್ಯ' ಎಂದು ಕರೆಯುವಂತೆ; ನಾನು ಈ ನನ್ನ ಆಯ್ಕೆಯ 'ಜಯ' ಮೂಲಗ್ರಂಥವನ್ನು 'ಮಹಾಭಾರತ' ಎಂದೇ ಕರೆದಿದ್ದೇನೆ. 'ಮಹಾಭಾರತ' ೨೪,೦೦೦ ಶ್ಲೋಕಗಳಿಂದ 'ಭಾರತ' ಹಾಗೂ 'ಮಹಭಾರತ'ವಾಗಿ ಒಂದು ಲಕ್ಷ ಶ್ಲೋಕದವರೆಗೆ ಬೆಳೆಯಲು ಕಾರಣ ಹಾಗೂ ಅನ್ಯ ರಚನೆಗಳು ಬಂದು ಸೇರಲು ಕಾರಣ "ಶಿಷ್ಯ ಪರಂಪರೆಯ ಕಂಠಪಾಠ."

ಮಹಾಭಾರತದ ಹಲವಾರು ಆಖ್ಯಾನಗಳ ಮೂಲವನ್ನು ವೇದಗಳಲ್ಲಿ ಕಾಣಬಹುದು. ಮಹಾಭಾರತವು ವೈದಿಕ ಸಂಸ್ಕೃತಿಗೂ ಇತಿಹಾಸಗೋಚರ ಸನಾತನ ಸಂಸ್ಕೃತಿಗೂ ನಡುವಣ ಸೇತುವೆಯಂತಿದೆ ಎನ್ನಬಹುದು. "ಚಾರಿತ್ರಿಕರ ಕಣ್ಣಿಗೆ ಅಪರಿಸ್ಫುಟವಾಗಿರುವ ಆ ಯುಗದ ಬಗೆಗೆ ನಮಗಿರುವ ಒಂದೇ ಒಂದು ದಾಖಲೆ ಮಹಾಭಾರತ."[೪೪] ಮಹಾಭಾರತದ ಮೂಲ ಕೃತಿಯನ್ನು ವೇದವ್ಯಾಸರು ೨೪,೦೦೦ ಶ್ಲೋಕಗಳಲ್ಲಿ ರಚಿಸಿದರೂ ಅದು ಕಾಲಕ್ರಮೇಣ ಹಲವಾರು ಪುರಾಣಿಕರ ಕೈವಾಡದಿಂದ ೧,೦೦,೦೦೦ ಶ್ಲೋಕವಾಗಿ ಬೆಳೆದರೂ ರಚನಕಾರರ ಹೆಸರು ವ್ಯಾಸ ಎಂಬ ಪದವಿ ಗೌರವವನ್ನು ಮಾತ್ರ ಬಿಟ್ಟುಕೊಡದೇ ಹಾಗೇ ಉಳಿಸಿಕೊಂಡು ಬಂದಿದ್ದಾರೆ. ಹಾಗಾಗಿ ಇದು 'ಪಂಚಮವೇದ'ವೆಂದೂ ಪ್ರಸಿದ್ಧಿಯಾಯಿತು.

ವ್ಯಾಸರು ರಚಿಸಿದ 'ಜಯ' ಗ್ರಂಥವನ್ನು ಮೊದಲು ತಮ್ಮ ಮಗನಾದ ಶುಕ ಮುನಿಗೂ ಮತ್ತು ಇತರರಿಗೂ ಕಲಿಸಿದರು. ನಂತರ ಶುಕ ಮುನಿಯು ವೈಶಂಪಾಯನನಿಗೆ ಹೇಳಿದನು. ವೈಶಂಪಾಯನ ಜನಮೇಜಯನಿಗೆ ಹೇಳಿದನು. ಇಲ್ಲಿಯವರೆಗೆ ೨೪,೦೦೦ ಶ್ಲೋಕಗಳಲ್ಲಿಯೇ ಇತ್ತು. ಉಗ್ರಶವನು ನೈಮಿಶಾರಣ್ಯದಲ್ಲಿ ಶೌನಕಾದಿ ಋಷಿಗಳಿಗೆ ಹೇಳಿದನು. ಅಲ್ಲಿಂದ ಮುಂದೆ ಉಪನ್ಯಾಸಕರು ಉಪಾಖ್ಯಾನಗಳಿಂದ ಲಂಭಿಸುತ್ತಲೇ ಹೋಗಿದ್ದಾರೆ.

ಪ್ರಾಚೀನ ಕಾಲದಲ್ಲಿ ಗ್ರಂಥಗಳನ್ನು ಬರೆದಿಡುವಂತಹ ಪದ್ಧತಿ ಇರಲಿಲ್ಲ. ಗ್ರಂಥಗಳನ್ನು ಗುರು-ಶಿಷ್ಯ ಪರಂಪರೆಯಲ್ಲಿ ಬಾಯಿಂದ-ಬಾಯಿಗೆ "ಜನಪದ ಸಾಹಿತ್ಯ"ದ ರೀತಿಯಲ್ಲೇ ಪ್ರಚಾರವಾಗುತ್ತಿತ್ತು. ಈ ವಿಧದ ಪದ್ಧತಿಯಿಂದಾಗಿ ಉಪನ್ಯಾಸ ಮಾಡುವ "ಸೌತಿಗಳು-ಪುರಾಣಿಕರು ತಮಗೆ ಬೇಕು ಬೇಕಾದ ರಚನೆಗಳನ್ನು ಸೇರಿಸಿ ಮತ-ಧರ್ಮಗಳಿಗನುಗುಣವಾಗಿ ಉಪನ್ಯಾಸ ಮಾಡಲನುಕೂಲವಿತ್ತು. ಮಾತೃಕೆ ಮೂಲ ಪ್ರತಿಯಿಂದ ಮಾತ್ರ ಗ್ರಂಥದ ಶುದ್ಧಾ ಶುದ್ಧತೆಯನ್ನು ನಿರ್ಧರಿಸಬಹುದು. ಪುರಾಣಗಳು ಬಹುಮಟ್ಟಿಗೆ ಮಹಾಭಾರತಕ್ಕಿಂತಲೂ ಈಚಿನವು."[೪೫] ಈಚೆಗೆ ಪರಿಶುದ್ಧ ಪಾಠವನ್ನು ಸಿದ್ಧಪಡಿಸಿದ ಕೀರ್ತಿ ಡಾ॥ ವಿ.ಎಸ್. ಸುಕ್ತಂಕರ್ ಅವರು ಸೇವೆ ಸಲ್ಲಿಸಿದ ಪುಣೆಯ ಭಂಡಾರ್‌ಕರ್ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಗೆ

ಸಲ್ಲುತ್ತದೆ. ಆದರೆ 'ಮಹಾಭಾರತ'ದ ಬೆಳವಣಿಗೆ ಆದ ಕಾಲದ ಪರಿಸ್ಥಿತಿಯೇ ಬೇರೆಯಾಗಿತ್ತು. "ಮಹಾಭಾರತ ರಚಿತವಾದ ಮೇಲೆ ಅನೇಕ ನೂರು ವರ್ಷಗಳವರೆಗೆ ಅದನ್ನು ವೇದದಂತೆ ಬಾಯಿ ಪಾಠವಾಗಿ ಕಲಿಸುವ, ಪ್ರಚಾರ ಮಾಡುವ ಪರಿಪಾಠ ನಡೆದುಕೊಂಡು ಬಂದಿತು."[೪೬] ಆದರೆ ವೇದಾಭ್ಯಾಸದ ವಿಚಾರದಲ್ಲಿ ಪ್ರಾಚೀನರು ಅನುಸರಿಸುತ್ತಿದ್ದ ಕ್ರಮವನ್ನು ಮಹಾಭಾರತ ಪಾಠಕಾರರು ಅನುಸರಿಸುತ್ತಿರಲಿಲ್ಲ. ಹಿಂದಿನ ಕಾಲದಲ್ಲಿ ಭಾಷೆಗೆ ಲಿಪಿ ಇರಲಿಲ್ಲ. ಗುರುಮುಖೇನ ಸರಿಯಾದ ಉಚ್ಚಾರಣೆಯಿಂದ ಕೇಳಿಸಿಕೊಂಡು ಬಾಯಿಪಾಠ ಮಾಡಬೇಕಾಗಿತ್ತು. "ಶಿಷ್ಯನ ಶಕ್ತಿಗೆ ಅನುಸಾರವಾಗಿ ಗುರುಗಳು ಪಾಠ ಹೇಳಿಕೊಡುತ್ತಿದ್ದರು. ಇದಕ್ಕೆ ಕೆಲವು ಕ್ರಮಗಳನ್ನು ಅನುಸರಿಸುತ್ತಿದ್ದರು.

೧. ಸಂಹಿತಾ ಪಾಠ
೨. ಪದಪಾಠ
೩. ಕ್ರಮಪಾಠ
೪. ಜಟಾಪಾಠ
೫. ಘನಪಾಠ.

ಈ ರೀತಿಯಾಗಿ ವ್ಯಾಸಂಗದಲ್ಲಿ ಒಂದಕ್ಷರ ಬದಲಾಗುವುದಾಗಲೀ ಸ್ವರಭೇದವೂ ಉಂಟಾಗದಂತೆ ಛಂದಸ್ಸಿನ ಬದಲಾವಣೆಯಾಗದೇ, ಮೂಲರೂಪ ಉಳಿದು ಬಂದಿದೆ."[೪೭] ಆದರೆ ವೇದ ವ್ಯಾಸಂಗದ ಪದ್ಧತಿಯನ್ನು ಪುರಾಣಿಕರಾಗಲೀ, ಸೌತಿಗಳಾಗಲೀ ಅನುಸರಿಸಲಿಲ್ಲ.

'ಮಹಾಭಾರತ'ವು ಹಂತ ಹಂತವಾಗಿ ಬೆಳೆದ ಗ್ರಂಥವೆಂಬುದನ್ನು ಅಂಗೀಕರಿಸದೆ ವಿಧಿಯಿಲ್ಲ. ತಕರಾರಿರುವುದು **"ಮೂಲಗ್ರಂಥ ಭಾಗ ಯಾವುದು? ಆಮೇಲೆ ಸೇರಿದ ಪ್ರಕ್ಷಿಪ್ತ ಭಾಗ ಯಾವುದು? ಎಂಬ ವಿಷಯದಲ್ಲಿ."**[೪೮] "ಈ ಮೂಲ ಹುಡುಕಾಟದ ಬಗ್ಗೆ ಬಾಪ್, ಲ್ಯಾಸನ್, ವೇಬರ್, ಲುಡ್ವಿಜ್, ಹೊಲ್ಟ್ಸ್‌ಮನ್, ಷ್ರೋಡರ್–ಗ್ರಿಯರ್‌ಸನ್, ಸೋರೆನ್‌ಸನ್, ಬ್ಯೂಲರ್, ದಾಲ್‌ಮನ್, ಯಾಕೂವಿ, ಓಲ್ಡನ್‌ಬರ್ಗ್, ಪಾಪ್‌ಕಿನ್ಸ್ ಹಾಗೂ ಭಾರತೀಯ ಮತ್ತು ಪಾಶ್ಚಾತ್ಯ ವಿದ್ವಾಂಸರು ಮಹಾಭಾರತದ ಬಗ್ಗೆ ವಿಪುಲ ಜಿಜ್ಞಾಸೆ ನಡೆಸಿದ್ದಾರೆ."[೪೯] ವ್ಯಾಸರೇ ೨೪,೦೦೦ ಶ್ಲೋಕಗಳ ವಿಸ್ತಾರವುಳ್ಳ ಭಾರತವನ್ನು ರಚಿಸಿರುವುದಾಗಿ 'ಆದಿಪರ್ವ'ದಿಂದ ತಿಳಿದುಬರುತ್ತದೆ.

**"॥ ಚತುರ್ವಿಂಶತಿಸಾಹಸ್ರೀಂ । ಚಕ್ರೇಭಾರತ ಸಂಹಿತಾಮ್ ॥**
**ಉಪಾಖ್ಯಾನೈರ್ವಿನಾ ತಾಮ್ । ಭಾರತಂ ಪ್ರೋಚ್ಯತೇ ಬುಧೈಃ ॥"**

ಇದು ಉಪಾಖ್ಯಾನಗಳನ್ನು ಬಿಟ್ಟು ರಚಿಸಿದ ಭಾರತ. ಮಹಾಭಾರತದಲ್ಲಿ ಸೇರಿರುವ ಉಪಾಖ್ಯಾನಗಳನ್ನೆಲ್ಲಾ ಬೇರ್ಪಡಿಸಿದರೆ ನಮಗೆ ಮೂಲಕೃತಿಯ ಸ್ವರೂಪ ಕಂಡುಬರಲಿಕ್ಕಿಲ್ಲವೇ?!

ವಸ್ತುತಃ ಯಾವುದರಲ್ಲಿ ಪೂರ್ವವೃತ್ತ ಅಂದರೆ ಪೂರ್ವದಲ್ಲಿ ನಡೆದಿರುವುದರ ಆವೃತ್ತಿಯಿದೆಯೋ ಅದನ್ನು ಬಿಟ್ಟು ಇನ್ನಾವುದಕ್ಕೂ "ಇತಿಹಾಸ" ಎಂದು ಹೇಳಕೂಡದು. ಕಾರಣ ವ್ಯಾಸರ ಋಗ್ವೇದ ಇತ್ಯಾದಿ ವೈದಿಕೇತರ ಗ್ರಂಥಗಳಲ್ಲಿನ ಪಾತ್ರಗಳ ಆಯ್ಕೆಗೂ ಇದೇ ಕಾರಣವಾಗಿರುವುದು.

**"॥ ಧರ್ಮಾರ್ಥ ಕಾಮಮೋಕ್ಷಾಣಾಮುಪದೇಶ ಸಮನ್ವಿತಂ ।**
**ಪೂರ್ವವೃತ್ತ ಕಥಾಯುಕ್ತಯಿತಿಹಾಸಂ ಪ್ರಚಕ್ಷತೆ ॥"**

"ವ್ಯಾಸರು ಈ ಎಚ್ಚರಿಕೆಯನ್ನು ಕೊಟ್ಟಿದ್ದರೂ ಗುರು–ಶಿಷ್ಯ ಪರಂಪರೆಯಲ್ಲಿ ಬಾಯಿಂದ ಬಾಯಿಗೆ ಪ್ರಚಾರ ಮಾಡುವಾಗ ತಮ್ಮ ರಚನೆಗಳನ್ನೂ ಸೇರಿಸಿಯೇ ಉಪನ್ಯಾಸ ಮಾಡಿರುವುದರಿಂದ ಮೂಲ ಮಾತೃಕೆ ಪ್ರತಿ ವಿಸ್ತಾರಗೊಂಡಿದೆ." ಎನ್ನುವುದೇ ಸಿದ್ಧಾಂತ. ಆದರೆ ಮೂಲ ಗ್ರಂಥವನ್ನು ಪ್ರಕ್ಷಿಪ್ತಗೊಳಿಸಿರುವ ಲೇಖಕರು ಈ ಕಾರ್ಯವನ್ನು ನಿಸ್ವಾರ್ಥವಾಗಿ ಮಾಡಲು ಅವರು ತಮ್ಮ ಹೆಸರನ್ನು ಹೇಳದೇ ಲೋಕಹಿತವನ್ನಷ್ಟೇ ಉದ್ದೇಶವಾಗಿಟ್ಟುಕೊಂಡು ನಿಷ್ಕಾಮ ಲೇಖಕರಾಗಿ 'ಭಾರತ'ವನ್ನು 'ವ್ಯಾಸಭಾರತ' ಎಂದೇ ಏಕಕರ್ತೃತ್ವಕ್ಕೆ ಸೀಮಿತಿಗೊಳಿಸಿ ಕಾವ್ಯವನ್ನು ಪ್ರಸಿದ್ಧಿಸಿದ್ದಾರೆ.

"ಬ್ರಾಹ್ಮಣಾದಿ ದ್ವಿಜರು ಈ ಇತಿಹಾಸವನ್ನು ಸೂಕ್ಷ್ಮರೂಪದಲ್ಲಿಯೂ ಮತ್ತು ವಿಸ್ತಾರವಾಗಿಯೂ ಪರಂಪರಾಗತವಾಗಿ ಪಡೆದುಕೊಂಡು ತಮ್ಮ ಹೃದಯಗಳಲ್ಲಿ ಧಾರಣಮಾಡಿಕೊಂಡಿರುತ್ತಾರೆ."

ಆದಿ ಕಾವ್ಯ 'ಜಯ' ಗ್ರಂಥದಲ್ಲಿ ಪಾಂಡವರ ಕಥೆಯೇ ಇರಲಿಲ್ಲವೆಂಬ ಒಂದು ವಾದವಿದೆ. ಆದರೆ ವ್ಯಾಸರು "ದ್ಯೂತ"ದ ದುಷ್ಪರಿಣಾಮವನ್ನೇ ಕುರಿತು ರಚಿಸಿದ ಗ್ರಂಥದಲ್ಲಿ ಪಾಂಡವರೇ ಇಲ್ಲವೆಂದರೆ ಏನರ್ಥ?! ಇದು ಅನರ್ಥದ ಪರಮಾವಧಿ. 'ಭಗವಾನ್ ವ್ಯಾಸ ಮಹರ್ಷಿಗಳು ಆದಿ ಭಾರತದಿಂದಲೇ ೨೪,೦೦೦ ಶ್ಲೋಕಗಳನ್ನು ಆರಿಸಿ ಒಂದು 'ಭಾರತ ಸಂಹಿತೆ'ಯನ್ನು ಮಾಡಿದ್ದರು. ಇದರಲ್ಲಿ ಕೇವಲ **ಭರತ ವಂಶೀಯರ ಕಥೆಯು ಮಾತ್ರವಿದ್ದಿತು. ಮಿಕ್ಕ ಉಪಾಖ್ಯಾನಗಳಿರಲಿಲ್ಲ." ಎಂದಿರುವುದೂ ಮತ್ತು ಭರತವಂಶದವರ ಇತಿಹಾಸವಾದ ಮಹಾ ಪುಣ್ಯಕರವಾದ ಗ್ರಂಥದ ಗುಪ್ತಭಾವ ಈ ಮಹಾಕಾವ್ಯ.**

~~~\*\*\*~~~

**ಅಡಿಟಿಪ್ಪಣಿಗಳು :**

೧. ಬರಗೂರು ರಾಮಚಂದ್ರಪ್ಪ, ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ (೧೯೯೩), ಪು. ೪೪
೨. ಜಿ.ಟಿ. ನಾರಾಯಣ ರಾವ್, ವಿಜ್ಞಾನ ಮರ್ತಮಾನ (೨೦೦೭), ಪು. ೨
೩. -- ಅದೇ --, ಪು. ೧೪.
೪. -- ಅದೇ --, ಪು. ೧೫.
೫. ಡಾ॥ ವಿ.ಸೀ., "ಕೃಷ್ಣ ಚಾರಿತ್ರ್ಯ", ಇತಿಹಾಸ ಕಾವ್ಯ, ಸಂ-೧, ಪು. ೨೦೨.
೬. ವಿ.ಸೀ., "ಕೃಷ್ಣಚಾರಿತ್ರ್ಯ", ಇತಿಹಾಸ ಕಾವ್ಯ, ಸಂ-೧, ಪು. ೨೦೭
೭. ಎನ್. ರಂಗನಾಥ ಶರ್ಮ, ಮುನ್ನುಡಿ, ಪು. ೧೯
೮. ಎನ್. ರಂಗನಾಥ ಶರ್ಮ, ಪು. ೧೨
೯. ಮಾಸ್ತಿ, "ಭಾರತತೀರ್ಥ, ಪು. ೮೦
೧೦. ಮಾಸ್ತಿ, "ಭಾರತತೀರ್ಥ, ಪು. ೧೩೩
೧೧. -- ಅದೇ --
೧೨. ಮಾಸ್ತಿ, "ಭಾರತತೀರ್ಥ, ಪು. ೧೪೧
೧೩. ಮಾಸ್ತಿ, "ಭಾರತತೀರ್ಥ, ಪು. ೧೭೧
೧೪. -- ಅದೇ --
೧೫. ಮಾಸ್ತಿ, "ಭಾರತತೀರ್ಥ", ಪು. ೧೪೨
೧೬. ಮಾಸ್ತಿ, "ಭಾರತತೀರ್ಥ", ಪು. ೨೧೪
೧೭. ಡಾ॥ ವಿ.ಸೀ. "ಭಾರತಗಳ ಶ್ರೀಕೃಷ್ಣ, ಕವಿಕಾವ್ಯದೃಷ್ಟಿ, ಪು. ೯೭.
೧೮. -- ಅದೇ -- , ಪು. ೨೦
೧೯. -- ಅದೇ --
೨೦. -- ಅದೇ -- , ಪು. ೧೫
೨೧. ಶೇಷನವರತ್ನ, "ಮಹಾಭಾರತದಲ್ಲಿ ಧರ್ಮ", ಪು. ೫೯
೨೨. ವೈದ್ಯಗುರು ಎಂ.ಆರ್. ಭಟ್, "ಭಾರತ ಗಾಂಭೀರ್ಯ, ಪು. ೬೯
೨೩. ಶ್ರೀಪತಿ ತಂತ್ರಿ, "ಸನೂತನ ಧರ್ಮದರ್ಶನ", ಪು. ೧೮೦
೨೪. ಎಸ್.ಆರ್. ರಾಮಸ್ವಾಮಿ, "ಮಹಾಭಾರತದ ಬೆಳವಣಿಗೆ", ಪು. ೬೧, ೬೩
೨೫. -- ಅದೇ -- , ಪು. ೬೩
~~~

೨೬. ಪ್ರೊ॥ ಕೆ.ಟಿ. ಪಾಂಡುರಂಗಿ, "ಸಂಸ್ಕೃತ ಕವಿ ಕಾವ್ಯದರ್ಶನ", ಪು. ೨೭೩.

೨೭. ಇರಾವತಿಬಾಯಿ ಕರ್ವೆ, ಯುಗಾಂತ, ಪು. ೨೬

೨೮. ಡಾ॥ ಶಂ.ಬಾ. ಜೋಶಿ, ಸ್ಥಿತ್ಯಂತರ , ಪು. ೫೯.

೨೯. -- ಅದೇ --

೩೦. ವೈದ್ಯಗುರು ಎಂ.ಆರ್. ಭಟ್, ಭಾರತ ಗಾಂಭೀರ್ಯ, (೧೯೫೪), ಪು. ೫.

೩೧. ಬಸ್ತಿ ಪುಂಡಲೀಕ ವೆಂಕಟೇಶ ಶೆಣೈ, ಬ್ರಾಹ್ಮೀಲಿಪಿ ಮತ್ತು ಸಿಂಧೂ ಸಂಸ್ಕೃತಿ (೧೯೭೭), ಪು. ೪೩೫.

೩೨. ಎಸ್.ಆರ್. ರಾಮಸ್ವಾಮಿ, ಮಹಾಭಾರತ ಬೆಳವಣಿಗೆ (೧೯೭೨) ಪು. ೧೬.

೩೩. ಪ್ರೊ॥ ಕೆ.ಎಸ್. ಕಣ್ಣನ್, ಇತಿಹಾಸ-ಪುರಾಣ (೨೦೦೭) ಪು. ಪ್ರಾಸ್ತಾವಿಕ-೩.

೩೪. --ಅದೇ--, ಪು. ೭.

೩೫. ಶಂ.ಬಾ.ಜೋಶಿ, 'ಸ್ಥಿತ್ಯಂತರ', ಪು. ೫೬.

೩೬. -- ಅದೇ --, ಪು. ೬೦.

೩೭. -- ಅದೇ --, ಪು. ೬೧.

೩೮. ಎಸ್.ಆರ್. ರಾಮಸ್ವಾಮಿ, "ಮಹಾಭಾರತ"ದ ಬೆಳವಣಿಗೆ, ಪು.೬೦

೩೯. ಶೇಷನವರತ್ನ, "ಮಹಾಭಾರತದಲ್ಲಿ ಧರ್ಮ", ಪು. ೧೦.

೪೦. ಎಸ್.ಆರ್. ರಾಮಸ್ವಾಮಿ, "ಮಹಾಭಾರತದ ಬೆಳಣಿಗೆ", ಪು. ೧೫.

೪೧. -- ಅದೇ --, ಪು. ೦೯.

೪೨. -- ಅದೇ --, ಪು. ೧೨

೪೩. -- ಅದೇ --, ಪು. ೨೧.

೪೪. ಋಗ್ವೇದ, ಭಾಗ-೧, ಪು. ೩೦೪.

೪೫. ಎಸ್.ಆರ್. ರಾಮಸ್ವಾಮು, "ಮಹಾಭಾರತದ ಬೆಳವಣಿಗೆ", ಪು. ೨೬.

೪೬. -- ಅದೇ --, ಪು. ೧೯.

೪೭. ಬಂಕಿಮ ಚಂದ್ರ ಚಟೋಪಾಧ್ಯಾಯ, ಅನು: ಡಿ.ವಿ.ಜಿ., "ಶ್ರೀಕೃಷ್ಣ ಚರಿತೆ", ಪು. ೧೧

೪೮. ಶ್ರೀಮನ್ಮಾಹಾಭಾರತ, ಭಾ-೧, ಪು. ೬

೪೯. -- ಅದೇ --, ಭಾ-೨, ಪರಿಶಿಷ್ಟ. ಪು. ೧೪.

~~~***~~~

## ೨. ಆಧುನಿಕ ಚಿಂತನೆಯ ದೃಷ್ಟಿಯಲ್ಲಿ ಮಹಾಭಾರತದಲ್ಲಿ ಕಂಡುಬರುವ ಸಂತಾನಾಭಿವೃದ್ಧಿಯ ವೈವಿಧ್ಯತೆ ಕುರಿತಾಗಿ ವಿಮರ್ಶಾತ್ಮಕ ಅಧ್ಯಯನ :

'ಮಹಾಭಾರತ'ದಲ್ಲಿ ಹಲವಾರು ಮಹಿಳೆಯರಿಂದ ನೂರು ಮಂದಿ ಅಥವಾ ಅದಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಮಕ್ಕಳ ಜನನದ ವಿಚಾರ ಬರುತ್ತದೆ.

**ಸೋಮಕ**ನೆಂಬ ರಾಜನಿಗೆ ನೂರು ಮಂದಿ ಪತ್ನಿಯರಿರುತ್ತಾರೆ. ಯಾರಿಗೂ ಪುತ್ರಸಂತಾನವಿರುವುದಿಲ್ಲ. ಅಪುತ್ರವಂತನಾದ ಸೋಮಕನಿಗೆ ವೃದ್ಧಾಪ್ಯ ಸಮೀಪಿಸುತ್ತದೆ. ವ್ರತನೇಮಾದಿಗಳನ್ನೆಲ್ಲಾ ಮಾಡುತ್ತಾನೆ. ಆದರೂ ಪ್ರಯೋಜನವಾಗುವುದಿಲ್ಲ. ಆದರೆ ಅವನ ಒಬ್ಬ ಪತ್ನಿಗೆ ಮಾತ್ರ ಒಂದು ಗಂಡು ಮಗು ಜನಿಸುತ್ತದೆ. ಅದು ಎಲ್ಲಾ ಮಾತೆಯರ ಪ್ರೀತಿಗೂ ಪಾತ್ರವಾಗಿರುತ್ತದೆ. ಸೋಮಕ ಹೆಚ್ಚು ಮಕ್ಕಳನ್ನು ಪಡೆಯಲೆಂದೇ ನೂರು ಮಂದಿ ಕನ್ಯೆಯರನ್ನು ಸಂಪೂರ್ಣ ಪರೀಕ್ಷಿಸಿಯೇ ವಿವಾಹವಾಗಿರುತ್ತಾನೆ. ಒಬ್ಬಳ ವಿನಃ ಯಾರಿಗೂ ಮಕ್ಕಳಾಗುವುದೇ ಇಲ್ಲಾ. ಬ್ರಾಹ್ಮಣರನ್ನು ಕರೆಸಿ ಕಾರಣ ಕೇಳುತ್ತಾನೆ. ಮಕ್ಕಳನ್ನು ಪಡೆಯುವ ವಿಧಾನವನ್ನು ಕೇಳುತ್ತಾನೆ. ಪುರೋಹಿತ ಒಂದು ವಿಧಾನವಿದೆ ಅದನ್ನು ಮಾಡಲು ನಿನ್ನಿಂದ ಸಾಧ್ಯವೇ? ಎನ್ನುತ್ತಾನೆ. ಸೋಮಕ 'ನೂರು ಮಂದಿ ಮಕ್ಕಳನ್ನು ಪಡೆಯಲು ಎಂತಹ ಕಠಿಣ ವಿಧಾನವನ್ನಾದರೂ ಸರಿ ಮಾಡುತ್ತೇನೆ ಹೇಳಿ' ಎಂದು ಕೇಳುತ್ತಾನೆ. 'ನೀನು
~~~

ಯಜಮಾನನಾಗಿ ಮಾಡುವ ಯಜ್ಞಕ್ಕೆ ನಿನ್ನ ಮಗನ ವಪೆಯ್ನು ತೆಗೆದು ಹೋಮ ಮಾಡು. ಅದರಿಂದ ಉದ್ಭೂತವಾದ ಹೊಗೆಯನ್ನು ನಿನ್ನ ನೂರು ಮಂದಿ ಪತ್ನಿಯರೂ ಆಘ್ರಾಣಿಸುವುದರಿಂದಲೇ ಮಕ್ಕಳನ್ನು ಪಡೆಯುತ್ತಾರೆ.'[೧] ಎಂದು ಪುರೋಹಿತ ಹೇಳಿದಂತೆಯೇ ಮಾಡುತ್ತಾನೆ.

**ಇದು ಅಂದಿನ ಕಾಲದಲ್ಲಿ ನಡೆಯುತ್ತಿದ್ದ ಯಜ್ಞಗಳಲ್ಲಿ ಕೊಡುತ್ತಿದ್ದ 'ನರಬಲಿ'ಗೆ ಸಾಕ್ಷಿಯಾಗಿದೆ.**

ಮತ್ತು ಹೋಮದ ಮಹತ್ವವನ್ನು ಎತ್ತಿ ಹಿಡಿಯುವ ಪ್ರಸಂಗ. 'ಹೋಮದ ಹೊಗೆಯನ್ನು ಮಹಿಷಿಯರು ಆಘ್ರಾಣಿಸುವ ಮೂಲಕ ರಾಜ ಮಹಿಷಿಯರೆಲ್ಲರೂ ಗರ್ಭಿಣಿಯರಾದರು.' ಎಂದಿದೆ.

ಹತ್ತು ತಿಂಗಳ ನಂತರ ರಾಜನ ನೂರೂ ಮಂದಿ ಪತ್ನಿಯರು ಗಂಡು ಮಕ್ಕಳನ್ನು ಪ್ರಸವಿಸುತ್ತಾರೆ. 'ನರಬಲಿ' ಕೊಟ್ಟಂತಹ ಮಗನೂ ಕೂಡಾ ತನ್ನ ತಾಯಿಯ ಗರ್ಭದಲ್ಲೇ ಜೇಷ್ಠಪುತ್ರನಾಗಿ ಮತ್ತೊಮ್ಮೆ ಜನಿಸಿದನು.

ಸೋಮಕನಿಗೆ ಮಕ್ಕಳಾಗುವ ಕಾರಣಕ್ಕಾಗಿ 'ನರಬಲಿ' ಕೊಟ್ಟು ಯಜ್ಞ ಮಾಡಿಸಿದುದರ ಪ್ರಾಪ್ತಿಗಾಗಿ ರಾಜ ಅತಿಘೋರವಾದ ನರಕದಲ್ಲಿ ಬಿದ್ದು ಒದ್ದಾಡುವಂತಾಯಿತು. ಇದು ಮಕ್ಕಳನ್ನು ಪಡೆಯುವ ಒಂದು ವಿಧಾನ ಮಾತ್ರ.

ಋಗ್ವೇದ ಸಂಹಿತೆ ೧೦-೧೮೩-೩ರ ಈ ಸೂಕ್ತಕ್ಕೆ ಪ್ರಜಾಪತಿ ಪುತ್ರನಾದ ಪ್ರಜಾವಾನ್ ಎಂಬುವನು ಋಷಿಯಾಗಿದ್ದಾನೆ. ಈತನು ಮಹಿಳೆಯರಲ್ಲಿ ಪುತ್ರಸಂತಾನಕ್ಕಾಗಿ ಗರ್ಭನಿಲ್ಲಲು ಅನುಸರಿಸಬೇಕಾದ ವಿಧಾನಗಳನ್ನು ಹೇಳಿದ್ದಾನೆ.

**"॥ ಅಪಶ್ಯಂತ್ವಾ ಮನಸಾದೀಧ್ಯಾನಂ ಸ್ವಾಯಾಂ ತನೂ ಋತ್ವೇನಾಧ ಮಾನಾಂ ।**
**ಉಪಮಾಯುಚ್ಚಾ ಯುವತಿರ್ಬಭೂಯಾಃ ಪ್ರಜಾಯಸ್ವ ಪ್ರಜಯಾ ಪುತ್ರಕಾಮೇ ॥"**

**-(ಋ.ಸಂ. ೧೦-೧೮೩-೩)**

-'ಎಲೈ ಪತ್ನಿಯೇ, ಯೌವ್ವನದಿಂದ ಬೆಳಗುತ್ತಿರುವ ಈ ನಿನ್ನ ಶರೀರವು ಋತುಸ್ನಾನಾನಂತರ ಪತಿಯ ಸಂಗವನ್ನು ಬಯಸುವುದು. ಇಂತಹ ನಿನ್ನನ್ನು ನಾನು ನನ್ನ ಒಳಮನಸ್ಸಿನಿಂದ ತಿಳಿದು ನೋಡಿದ್ದೇನೆ. ಪುತ್ರರಾಗಬೇಕೆಂದು ಬಯಸುವ ಎಲೇ ಪತ್ನಿಯೇ, ನನ್ನನ್ನು ಪುತ್ರಾಪೇಕ್ಷೆಯಿಂದ ಸಮೀಪಿಸಿರುವ ನೀನು ಅತ್ಯಂತ ಯುವತಿಯಾಗಿ ತಾರುಣ್ಯದಿಂದ ಬೆಳಗುತ್ತಿರುವೆ. ಆದ್ದರಿಂದ ನೀನು ಪುತ್ರನನ್ನು ಪ್ರಸವಿಸು.' ಎನ್ನುವ ತಾತ್ಪರ್ಯವನ್ನು ಈ ಶ್ಲೋಕವು ಹೊಂದಿದೆ.

### ಸಂತಾನ ವೈಜ್ಞಾನಿಕ ರೀತಿ :

ಋಗ್ವೇದ ೫ನೇ ಮಂಡಲ ೩೮ ನೇ ಸೂಕ್ತಕ್ಕೆ ಸಪ್ತವಧ್ರಿ ರಾತ್ರೇಯಃ ಎಂಬುವರು ಋಷಿಗಳು. ವೈಜ್ಞಾನಿಕ ಸಂತಾನವನ್ನು ಹೇಳುವ ಇವರ ವಿಷಯದಲ್ಲಿಯೇ ಒಂದು ಕಥೆ ಇದೆ. ಸಪ್ತವಧ್ರಿ ಋಷಿಗೆ ಪುತ್ರರಾಗಬಾರದೆಂದು ಇವರ ಸಹೋದರರ ಪುತ್ರರು ರಾತ್ರಿ ಕಾಲದಲ್ಲಿ ಋಷಿಯು ತನ್ನ ಪತ್ನಿಯೊಡನೆ ಸಂಗ ಮಾಡದಂತೆ ನಿರ್ಬಂಧ ಮಾಡಿದ್ದರು. ಅಶ್ವಿನಿ ದೇವತೆಗಳ ಸಹಾಯದಿಂದ ಋಷಿಯು ತನ್ನ ಪತ್ನಿಯೊಡನೆ ರಮಿಸಿದ ನಂತರವೇ ಆತನ ಪತ್ನಿ ಗರ್ಭಧರಿಸಿ ಹತ್ತು ತಿಂಗಳ ನಂತರ ಗರ್ಭಸ್ಥ ಶಿಶು ಪ್ರಸವವಾಗುವುದು. ಸಾಧಾರಣವಾಗಿ ಒಂಭತ್ತು ತಿಂಗಳು ಮಾತ್ರ ಶಿಶುವು ಮಾತೃಗರ್ಭದಲ್ಲಿರುವುದು. ಆ ಕಾಲದಲ್ಲಿ ಹತ್ತು ತಿಂಗಳ ಕಾಲ ಶಿಶುವು ಗರ್ಭಸ್ಥವಾಗಿರುವುದು ಸಾಮಾನ್ಯವಾಗಿತ್ತೆಂದು ಕಂಡುಬರುವುದು.[೨] ಆದರೆ ಈಗಲೂ ಈ ಹತ್ತು ತಿಂಗಳ ಪ್ರಸವಕ್ಕೆ ಕೆಲವು ನಿದರ್ಶನಗಳನ್ನು ಆಗಿದ್ದಾಂಗೆ ಕಾಣುತ್ತಿರುವುದಂಟು.

**"॥ ತಂತೇ ಗರ್ಭಂ ಹವಾಮಹೇ ದಶಮೇ ಮಾಸಿ ಸೂತವೇ ॥"[೩]**

– 'ಅಂತಹ ನಿನ್ನ ಗರ್ಭವನ್ನು ಹತ್ತನೇ ತಿಂಗಳಲ್ಲಿ ಪ್ರಸವಾರ್ಥವಾಗಿ ಅಪೇಕ್ಷಿಸಿ ಆಹ್ವಾನಿಸುತ್ತೇವೆ.' ಎಂದು ಈ ಶ್ಲೋಕದ ಅಥವಾ ವಾಕ್ಯದ ಅರ್ಥ.

೧೦-೧೮೪-೧ ಮತ್ತು ೨, ೩ ಸೂಕ್ತಗಳಿಗೆ ಪ್ರಜಾಪತಿ ಪುತ್ರನಾದ ವಿಷ್ಣುವು ಋಷಿಯಾಗಿದ್ದು;

**"॥ ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು ।**
**ಆಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತುತೇ ॥"** -(ಋ.ಸಂ. ೧೦-೧೮೪-೧)

'ಸರ್ವತ್ರ ವ್ಯಾಪಕನಾದ ವಿಷ್ಣುವೆಂಬ ದೇವನು ಗರ್ಭಾಧಾವಸ್ಥಾನವಾದ ಯೋನಿ ಪ್ರದೇಶವನ್ನು ನಿರ್ಮಿಸಲಿ. ತ್ವಷ್ಟೃವೆಂಬ ದೇವನು ಸ್ತ್ರೀ ಪುಂಸ್ತ್ವ ರೂಪಗಳನ್ನು ವ್ಯಕ್ತಪಡಿಸುವ ಚಿಹ್ನೆಗಳನ್ನು ಆಯಾ ಅವಯವಗಳಿಂದ ವ್ಯಕ್ತಪಡಿಸಲಿ ಎಂತಹ ಸ್ತ್ರೀಯೋನಿಯಲ್ಲಿ ಸೃಷ್ಟಿಕರ್ತನು ರೇತಸ್ಸನ್ನು -ವೀರ್ಯವನ್ನು ಸೇವಿಸಲಿ. ಎಲೈ ಪತ್ನಿಯೇ, ಸರ್ವವನ್ನು ಧರಿಸಿ ಪೋಷಿಸುವ ಧಾತೃವೆಂಬ ದೇವನು ನಿನ್ನ ಗರ್ಭ ರೂಪವಾಗಿ ಪರಿಣಮಿಸಿದ ರೇತಸ್ಸನ್ನು ಅಲ್ಲಿಯೇ ನೆಲೆಸಿರುವಂತೆ ಮಾಡಲಿ. (ಧರಿಸಲಿ.) ಎಲೈ ಸ್ತ್ರೀಯೇ ಅಶ್ವಿನಿ ದೇವತೆಗಳು ಹಿರಣ್ಮಯವಾದ ಅರಣಿಗಳನ್ನು ಯಾವ ಗರ್ಭವನ್ನುದ್ದೇಶಿಸಿ ಕಡೆದರೋ ಅಂತಹ ನಿನ್ನ ಗರ್ಭವನ್ನು ಹತ್ತನೆಯ ತಿಂಗಳಲ್ಲಿ ಪ್ರಸವಾರ್ಥವಾಗಿ ಅಪೇಕ್ಷಿಸಿ ಆಹ್ವಾನಿಸುತ್ತೇವೆ.'[೨] ಎಂಬ ಉಲ್ಲೇಖವಿರುವುದನ್ನೂ ಕಾಣುತ್ತೇವೆ.

ಒಟ್ಟಿನಲ್ಲಿ **ಪ್ರಜಾಸೃಷ್ಟಿಗೆ (ಸಂತಾನೋತ್ಪತ್ತಿಗೆ)** ಪೂರ್ವಭಾವಿಯಾದ ಸ್ತ್ರೀಪುಂಶಕ್ತಿಗಳ ಸಂಯೋಗವನ್ನು ತಿಳಿಸುವ ಸನ್ನಿವೇಶಗಳೆಲ್ಲಾ ಶ್ರುತಿ ಪ್ರಸಿದ್ಧವಾಗಿದೆ.[೩] ಅಲ್ಲಿಯೂ ಸ್ತ್ರೀಪುರುಷರ ಸಮಾಗಮದಿಂದಲೇ ಸಂತಾನ ಪ್ರಾಪ್ತಿ ಸಾಧ್ಯವೆಂದು ಹೇಳಿದೆ.

ಶ್ರೀಮನ್ಮಧ್ವಾಚಾರ್ಯರು ತಮ್ಮ ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ - ೨ ರಲ್ಲಿ ಶ್ಲೋಕ ೬೨ರಲ್ಲಿ;

**"॥ ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥"**

-ಎಂಬುದಾಗಿ ಕೃಷ್ಣನು ಅರ್ಜುನನಿಗೆ ಹೇಳುತ್ತಾನೆ. 'ಅರ್ಜುನ! ಮಹಾಲಕ್ಷ್ಮಿಯು ತನ್ನ ಪತ್ನಿಯು; ಅವಳಲ್ಲಿ ನಾನು ಗರ್ಭವನ್ನು ಇರಿಸುವೆನು! ಆನಂತರ ಸಕಲ ಪ್ರಾಣಿಗಳ ದೇಹಯೋಗ ರೂಪವಾದ ಜನನವು ಆಗುವುದು. ಕೃಷ್ಣ ಕೂಡ ವೈಜ್ಞಾನಿಕ ರೀತಿಯಿಂದಲೇ ಸಂತಾನ ಸಾಧ್ಯವೆಂದು ಒತ್ತಿ ಹೇಳಿರುವುದನ್ನು ಆಚಾರ್ಯರು ಉಲ್ಲೇಖಿಸಿದ್ದಾರೆ. ಮಂತ್ರ - ತಂತ್ರಗಳಿಂದ, ಹೋಮ-ಬಲಿಗಳಿಂದ ಮಕ್ಕಳು ಹುಟ್ಟುವುದೇ ಆದರೆ ಈ ವೈಜ್ಞಾನಿಕ ಉಲ್ಲೇಖಗಳಿಗೆ ಅರ್ಥವಿರುತ್ತಿರಲಿಲ್ಲ!!

'ಮಹಾಭಾರತ'ದಲ್ಲಿ ಸಂತಾನ ವೈಜ್ಞಾನಿಕ ರೀತಿಯಲ್ಲೇ ಆಗುತ್ತಿದ್ದರೂ ಅದನ್ನು ಸೌತಿಗಳೋ, ಪುರಾಣಿಕರೋ ಅಥವಾ ಕಥೇ ಹೇಳುವ ಮತ್ತೆ ಯಾರೋ ಈ ಅನೈತಿಕ ಸಂಬಂಧಗಳನ್ನು ಮುಚ್ಚಿಹಾಕಲು ಬಹುಶಃ ತಂತ್ರ ಬಳಸಿ ಹೇಳಿರುವುದು ಹಲವಾರು ದೃಷ್ಟಾಂತಗಳಿಂದ ನಮಗೆ ತಿಳಿದುಬರುತ್ತದೆ.

**ದೃಷ್ಟಾಂತ - ೧ :**

ಅಪ್ಸರೆಯರೆಲ್ಲೆಲ್ಲಾ ಆರು ಮಂದಿ ಶ್ರೇಷ್ಠರೆಂದು ಪರಿಗಣಿಸಲಾಗಿದೆ. ಅದರಲ್ಲೂ ಬ್ರಹ್ಮನ ಮಾನಸಪುತ್ರಿಯಾದ ಮೇನಕೆಯು ಪರಮಶ್ರೇಷ್ಠ ಅಪ್ಸರೆ. 'ಈಕೆ ಒಮ್ಮೆ ಕಾರಣಾಂತರದಿಂದ ಸ್ವರ್ಗದಿಂದ ಭೂಮಿಗೆ ಬಂದು ವಿಶ್ವಾಮಿತ್ರ ಮಹರ್ಷಿಯನ್ನು ನೃತ್ಯ-ಗೀತೆಗಳಿಂದ ಸಂಸೇವಿಸುತ್ತಾಳೆ. ಇಬ್ಬರ ಸಮಾಗಮವೂ ಆಗುವುದರೊಂದಿಗೆ ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಅದೇ ಶಕುಂತಲೆ. ಮೇನಕೆ ತನ್ನ ಈ ಮಗುವನ್ನು ನಿರ್ದಯಳಾಗಿ ಹಿಮವತ್ಪರ್ವತದ ತಪ್ಪಲಿನಲ್ಲಿ ವೇಶ್ಯೆಯೊಬ್ಬಳು ತನಗೆ ಹುಟ್ಟಿದ ಹಸುಗೂಸನ್ನು ತ್ಯಜಿಸುವಂತೆ ಬಿಟ್ಟು ಹೋಗುತ್ತಾಳೆ.'[೪] ಕಣ್ವ ಮಹರ್ಷಿಗಳು ಊರ್ಧ್ವರೇತಸ್ಕರೆಂದು ಕಠಿಣವ್ರತಿಗಳಾದವರು ಆ ಮಗುವನ್ನು ತಂದು ಆಶ್ರಮದಲ್ಲಿ ಸಾಕಿ ದೊಡ್ಡವಳನ್ನಾಗಿ ಬೆಳೆಸಿದರು.

**'ಸ್ತ್ರೀ ಎಂಬುವಳೇ ಪ್ರಪಂಚದ ಉತ್ಪತ್ತಿಗೆ ಕಾರಣಳು.'** ಎಂಬುದೇ ನಿಸರ್ಗ ನಿಯಮ. ಸ್ತ್ರೀಯು ಮಾನವನ ಜನ್ಮಕ್ಷೇತ್ರ, ಜನ್ಮಭೂಮಿಯು ಪವಿತ್ರವಾದುದೆನ್ನುವುದಾದರೆ **ಜನ್ಮಕ್ಷೇತ್ರವೂ ಪವಿತ್ರವಾದುದು.** ಆದುದರಿಂದಲೇ ಸ್ತ್ರೀಯರು ತಮ್ಮ ಪತಿಗಳಿಗೆ ಸನಾತನವಾದ **ಪುಣ್ಯಕ್ಷೇತ್ರವೂ ಆಗಿದ್ದಾರೆ. ಋಷಿಗಳು ಮಹರ್ಷಿಗಳು**

**ಮಹಾತಪಸ್ವಿಗಳಾಗಿರಬಹುದು ಅಘಟಿತ ಘಟನಾ ಸಾಮರ್ಥ್ಯವುಳ್ಳವರಾಗಿಯೂ ಆಗಿರಬಹುದು. ಅವರಾದರೂ ಸ್ತ್ರೀಯಿಂದ ಹೊರತಾಗಿ ಪ್ರಜೋತ್ಪತ್ತಿ ಮಾಡಲಾರರು. ಎಂತಹ ತಪಸ್ಸಿನಿಂದಲೂ ಅವರಿಗೆ ಆ ಶಕ್ತಿಯು ಪ್ರಾಪ್ತವಾಗುವುದಿಲ್ಲ.** ಮೇಲಾಗಿ "ಎಲ್ಲ ಋಷಿ-ಮಹರ್ಷಿಗಳೂ ಸ್ತ್ರೀಯರಿಂದಲೇ ಜನ್ಮತಾಳಿದವರಾಗಿದ್ದಾರೆ."[೭] ಇದು ಸಿದ್ಧಾಂತ. ಪರಶುರಾಮನು ಭೂಮಿಯ ಮೇಲಿದ್ದ ಕ್ಷತ್ರಿಯರೆಲ್ಲರ ಮೇಲೆ ಇಪ್ಪತ್ತೊಂದು ಬಾರಿ ದಾಳಿ ನಡೆಸಿ ದುಷ್ಟರಾದ ಮದಾಂಧರಾದ ಕ್ಷತ್ರಿಯರೆಲ್ಲರನ್ನೂ ಸಂಹರಿಸಿ, ಭೂಮಿಯನ್ನು ಕ್ಷತ್ರಿಯರಹಿತರನ್ನಾಗಿ ಮಾಡಿಬಿಟ್ಟನು. ಕ್ಷತ್ರಿಯ ವಂಶವೇ ಅಳಿದು ಹೋಗುವುದರಲ್ಲಿದ್ದಾಗ **ಆಪದ್ಧರ್ಮವನ್ನನುಸರಿಸಿದ ಕ್ಷತ್ರಿಯ ಸ್ತ್ರೀಯರು ಬ್ರಾಹ್ಮಣರ ಬಳಿಗೆ ಪುತ್ರಾರ್ಥಿಗಳಾಗಿ ಹೋದರು."**[೮] ಎಂದು ಉಲ್ಲೇಖವಿರುವುದನ್ನು ನಾವು ಕಾಣುತ್ತೇವೆ.

### ದೃಷ್ಟಾಂತ - ೨ :

ಸ್ಥೂಲಕೇಶ ಎಂಬ ತಪೋವಿದ್ಯಾ ಸಮನ್ವಿತನಾದ ವಿಖ್ಯಾತನಾದ ಋಷಿಯೊಬ್ಬನಿದ್ದ. ಆತ ಪ್ರತಿ ದಿನ ಬ್ರಾಹ್ಮೀ ಮುಹೂರ್ತದಲ್ಲೆದ್ದು ತನ್ನ ಪ್ರಾತಃ ಕ್ರಿಯೆಗಳಿಗಾಗಿ ನದೀತೀರಕ್ಕೆ ಹೋಗಿ ಬರುತ್ತಿದ್ದ. ದಾರಿಯುದ್ದಕ್ಕೂ ದೇವರನಾಮಗಳನ್ನು ಹೇಳಿಕೊಳ್ಳುತ್ತಿದ್ದ. ನಿರ್ಜನ ಪ್ರದೇಶವಿತ್ತು. ಒಂದು ದಿನ ಸ್ಥೂಲಕೇಶ ಹೀಗೇ ನಡೆದು ಬರುತ್ತಿರುವಾಗ ಪಕ್ಕದ ಪೊದರಿನಿಂದ ಮಗುವೊಂದು ಅಳುತ್ತಿರುವ ಶಬ್ದ ಕೇಳಿಸುತ್ತಿತ್ತು. ಆತ ಥಟ್ಟನೆ ನಿಂತುಕೊಂಡು ಶಬ್ದ ಬರುವ ಕಡೆಗೇ ನೋಡಿದ. ಪೊದರಿನ ಕಡೆ ಧಾವಿಸಿ ಹೋಗಿ ನೋಡಿದರೆ ಅಲ್ಲೊಂದು ಸಣ್ಣ ಮಗು ಕಾಣಿಸಿತು. ಮಗುವನ್ನೆತ್ತಿಕೊಂಡು ಆಶ್ರಮದ ಕಡೆ ಹೊರಟ. ಆ ಹೆಣ್ಣು ಮಗುವನ್ನು ತಾನೇ ತಂದೆಯಾಗಿ ಬೆಳೆಸಿದ. ಮಹರ್ಷಿ ಆ ಮಗುವಿಗೆ ಪ್ರಮದ್ವರಾ ಎಂದು ನಾಮಕರಣವನ್ನೂ ಮಾಡಿದ.

ಪ್ರಮದ್ವರಾ ತಂದೆ-ತಾಯಿಗಳು ಯಾರು?

ವಿಶ್ವಾವಸುವೆಂಬ ಒಬ್ಬ ಗಂಧರ್ವರಾಜನಿದ್ದ. "ಮೇನಕಾ ಎಂಬ ಅಪ್ಸರೆಗೂ ವಿಶ್ವಾವಸುವಿಗೂ ಸ್ನೇಹವಾಗಿ ಇಬ್ಬರ ಸಮಾಗಮವಾಯಿತು. ಮಗುವನ್ನು ಪ್ರಸವಿಸಿದಳು. ದೇವವೇಶ್ಯೆಯಾದ ಅವಳು ತನ್ನ ಧರ್ಮವೇ ಇದೆಂದು ಭಾವಿಸಿ ಮಗುವನ್ನು ಆ ಪೊದರಿನಲ್ಲೇ ಬಿಸಾಡಿ ಹೊರಟು ಹೋದಳು."[೯] ಆ ಮಗುವೇ ಪ್ರಮದ್ವರಾ!

### ದೃಷ್ಟಾಂತ ೩ : ಅಂಡಾಣು ದಾನ :

ಇಂದು ಆಧುನಿಕ ಯುಗ. ಕಾಲ ಬದಲಾಗಿದೆ. ವೈದ್ಯಕೀಯ ತಂತ್ರಜ್ಞಾನವೂ ಪ್ರಗತಿಯಲ್ಲಿದೆ. ಇದನ್ನು 'ವೈಜ್ಞಾನಿಕ ಯುಗ'ವೆಂದೇ ಕರೆಯುತ್ತಾರೆ. ವಿಜ್ಞಾನವು ಸಾಕಷ್ಟು ಬೆಳವಣಿಗೆ ಹೊಂದಿದ್ದು ನವೀಕರಣ ಹೊಂದುತ್ತಿರುವ ತಂತ್ರಜ್ಞಾನವೂ ಆಧುನಿಕತೆಯ ಪ್ರತೀಕವಾಗಿದೆ.

ಅಪ್ಸರೆಯರಂತಿರುವ ನಮ್ಮ ಇಂದಿನ ಕಾಲದ ಯುವತಿಯರು ಪರಪುರುಷರೊಂದಿಗೆ ದೈಹಿಕ ಸಂಪರ್ಕ ಹೊಂದುವುದಕ್ಕಿಂತಲೋ ಅಥವಾ ಹಣಕ್ಕಾಗಿ ತಮ್ಮ ದೇಹವನ್ನು ಮಾರಿಕೊಳ್ಳುವುದಕ್ಕಿಂತಲೋ 'ಅಂಡಾಣು ದಾನ'ವೇ ವಿಹಿತವಾದುದೆಂದು ನಂಬಿದ್ದಾರೆ. ಹೀಗಾಗಿ ಪ್ರಸ್ತುತ ಸಮಯದಲ್ಲಿ 'ಅಂಡಾಣು ದಾನ'ವೂ ಅಧಿಕವಾಗಿ ನಡೆಯುತ್ತಿದ್ದು; ದಾನಿಗಳ ಸಂಖ್ಯೆಯು ಹೆಚ್ಚುತ್ತಿದೆ. ಹೀಗೆ ಅಂಡಾಣು ಪಡೆಯುವ ಮುನ್ನ ಯುವತಿಯರನ್ನು ಸ್ಕ್ಯಾನಿಂಗ್ ಮೂಲಕ ಆಕೆಯ ಶರೀರದಲ್ಲಿನ ಗರ್ಭದೊಳಗೆ ಬಿಡುಗಡೆಯಾಗುವ ಅಂಡಾಣುವಿನ ಪರೀಕ್ಷೆ ಮಾಡಲಾಗುತ್ತದೆ. ೨೧ ರಿಂದ ೩೬ ವರ್ಷದ ಮಹಿಳೆ ಜೀವಮಾನದಲ್ಲಿ ಮೂರು ಬಾರಿ ಅಂಡಾಣುದಾನವನ್ನು ಮಾಡಬಹುದಾಗಿದೆ. ಆದರೆ ದಾನಿಯು ಯಾವುದೇ ಕಾಯಿಲೆಯಿಂದ ನರಳುತ್ತಿರಬಾರದೆಂಬ ನಿಯಮವಿದೆ. "ಈ ಹಿಂದೆ ಪ್ರಚಲಿತದಲ್ಲಿದ್ದಂತಹ **'ಬಾಡಿಗೆ ತಾಯ್ತನದ ಪದ್ಧತಿ'** ವ್ಯವಸ್ಥೆಗಿಂತಲೂ ಇದು ಉತ್ತಮವಾದುದೆಂಬ ಅಭಿಪ್ರಾಯವು ವ್ಯಕ್ತವಾಗಿದೆ. ಯುವತಿಯರಲ್ಲಿ ಹೆಚ್ಚು ಅಂಡಾಣು ಬೆಳೆಯಲು ಸತತವಾಗಿ ೧೦-೧೨ ಲಸಿಕೆಗಳನ್ನು ನೀಡಲಾಗುತ್ತದೆ. ಈ ಪ್ರಕ್ರಿಯೆಗೆ ಹೆಚ್ಚಾಗಿ ವೈದ್ಯಕೀಯ ವಿದ್ಯಾರ್ಥಿಗಳೇ ಮುಂದೆ ಬರುತ್ತಿದ್ದಾರೆ. ಒಂದು ಸಲಕ್ಕೆ ಅಂಡಾಣು ದಾನ ಅಥವಾ ಮಾರಾಟದಿಂದ ೪೦ ರಿಂದ ೬೦ ಸಾವಿರ ರೂಪಾಯಿಗಳ ಸಂಪಾದನೆಯಾಗುತ್ತದೆ. ಕಳೆದ ೧೦-೧೫ ವರ್ಷಗಳಿಂದಲೂ ಅಂಡಾಣು ಬೇಡಿಕೆಯೂ ಅತ್ಯಧಿಕ ಪ್ರಮಾಣದಲ್ಲಿ ಹೆಚ್ಚುತ್ತಿರುವಂತೆಯೇ ಇದರ ದಾನಿಗಳ ಸಂಖ್ಯೆಯೂ ಕೂಡಾ ಹೆಚ್ಚಾಗುತ್ತಿದೆ. ಈ ಪದ್ಧತಿಯು ಬಾಡಿಗೆ ತಾಯ್ತನಕ್ಕಿಂತಲೂ ಉತ್ತಮ

ಆಯ್ಕೆ."[೧೦] ಒಬ್ಬ ಮಹಿಳೆಯು ಒಂದು ಬಾರಿಗೆ ಗರಿಷ್ಠ ೧೦ರಿಂದ ೧೫ ಅಂಡಾಣು ದಾನ ಮಾಡಬಹುದೆಂದು ಅತ್ಯಾಧುನಿಕ ವೈದ್ಯಕೀಯ ವಿಜ್ಞಾನವು ತಿಳಿಸುತ್ತದೆ.

ಹೀಗೆ ಸಂತಾನ ಭಾಗ್ಯ ಪಡೆಯಬೇಕಾದರೆ ಆಧುನಿಕ ಕಾಲದಲ್ಲಿ ವೈಜ್ಞಾನಿಕ ರೀತಿಯಿಂದ ಹೇಳಿರುವ ವಿಧಾನಗಳಿಂದ ಮಾತ್ರ ಸಾಧ್ಯವಾಗುತ್ತದೆ. ಇದಕ್ಕೆ ಭೌತಿಕವಾಗಿ ಗಂಡು – ಹೆಣ್ಣಿನ ಅಥವಾ ಸತಿ–ಪತಿಯರ ಸಂಪರ್ಕ ಅಥವಾ 'ಸುರತಿಕ್ರಿಯೆ' ಅನಿವಾರ್ಯ. ಇದಕ್ಕೆ ಸಮಾಜದಲ್ಲಿ ನಾಗರಿಕರು ಮಾಡಿಕೊಂಡಿರುವ ಕಟ್ಟುಪಾಡು, ನೀತಿ–ನಿಯಮಗಳನ್ನೊಳಗೊಂಡಂತಹ ವಿವಾಹ.

ಪಾಂಡು ತನ್ನ ಪತ್ನಿಯಲ್ಲಿ ಮಕ್ಕಳಾಗಬೇಕೆಂದು ಬಯಸುತ್ತಾನೆ. ಆ ಕಾಲದಲ್ಲಿ ಮಕ್ಕಳನ್ನು ಪಡೆಯುವ ಹನ್ನೆರಡು ವಿಧಾನಗಳು ಅಸ್ತಿತ್ವದಲ್ಲಿದ್ದವು. ಒಬ್ಬ ವ್ಯಕ್ತಿಯು ತನ್ನ ಪತ್ನಿಯಲ್ಲಿ ಸಂತಾನವನ್ನು ಪಡೆಯಬಹುದಿತ್ತು. ಅಥವಾ ತಾನು ಆ ಸಾಮರ್ಥ್ಯವನ್ನು ಹೊಂದಿರದಿದ್ದರೆ; ತನ್ನ ಪತ್ನಿಯಲ್ಲಿ ಮಹಾಪುರುಷನೊಬ್ಬನ ಅನುಗ್ರಹದಿಂದ, ಒಬ್ಬ ತಪೋನಿಷ್ಠನಿಗೆ ಹಣವನ್ನು ಚೆನ್ನಾಗಿ ಕೊಟ್ಟು ಸಂತಾನಭಾಗ್ಯವನ್ನು ಪಡೆಯಬಹುದಿತ್ತು. ಅಥವಾ ತನ್ನ ಪತ್ನಿಯಲ್ಲಿ ನೀಚನಲ್ಲದವನೊಬ್ಬನ ಸಮಾಗಮದಿಂದ ಪಡೆಯಬಹುದಿತ್ತು. ಒಂದುವೇಳೆ ತನ್ನ ಪತ್ನಿಗೆ ಮಕ್ಕಳನ್ನು ಪಡೆಯುವ ಸಾಮರ್ಥ್ಯವಿಲ್ಲದಿದ್ದರೆ ತಾನು ಕೀಳು ಜಾತಿಯ ಸ್ತ್ರೀಯರಲ್ಲಿ ಮಕ್ಕಳನ್ನು ಪಡೆಯಬಹುದಾಗಿತ್ತು. "ಇದು ಶ್ರುತಿ–ಸ್ಮೃತಿಗಳ ಅಭಿಪ್ರಾಯ – ಆಪದ್ಧರ್ಮಕ್ಕೆ ವಿಹಿತವಾದದ್ದು."[೧೧] ಎಂದು ಶಾಸ್ತ್ರವೇ ಅನುಮಿತಿಸಿದೆ.

ಆಪತ್ಕಾಲದಲ್ಲಿ ಸ್ತ್ರೀ ತನ್ನ ಗಂಡನು ಸಾವನ್ನಪ್ಪಿದ್ದರೆ ಆತನ ತಮ್ಮನಲ್ಲಿ ಮಕ್ಕಳನ್ನು ಪಡೆಯಬಹುದೆಂದು ವೇದವೂ ಹೇಳುತ್ತದೆ.

"ಶರದಂಡಯಾನಿ ಎಂಬ ಋಷಿಪತ್ನಿಯು ತನ್ನ ಪತಿಯ ಆಜ್ಞೆಯಂತೆ ಋತುಕಾಲದಲ್ಲಿ ಸ್ನಾನ ಮಾಡಿ ಶುಚಿರ್ಭೂತಳಾಗಿ ರಾತ್ರಿ ಎರಡನೇ ಯಾಮದಲ್ಲಿ ನಾಲ್ಕು ರಸ್ತೆ ಕೂಡುವಲ್ಲಿಗೆ ಹೋಗಿ ಕಾದಿದ್ದು, ಅಲ್ಲಿಗೆ ಬಂದ ಮಹಾತಪಸ್ವಿಯೋರ್ವನ ಸಂಯೋಗದಿಂದ ಮಕ್ಕಳನ್ನು ಪಡೆಯುತ್ತಾಳೆ."[೧೨] ಹೀಗೇ ಪಾಂಡು ರಾಜನೂ ತನ್ನ ಪತ್ನಿಯರಾದ ಕುಂತಿ, ಮಾದ್ರಿಯರಿಗೆ; ನಾನು ಸ್ತ್ರೀ ಸಂಘ ಮಾಡಲು ಅಸಮರ್ಥನಾಗಿದ್ದೇನೆ. ನನ್ನಿಂದ ನಿಮಗೆ ಮಕ್ಕಳಾಗುವ ಅವಕಾಶವಿಲ್ಲ. ನನಗೆ ಸಮಾನನಾದ ಅಥವಾ ನನಗಿಂತಲೂ ಉತ್ತಮನಾದ ಪುರುಷನನ್ನು ಸೇರಿ ಮಕ್ಕಳನ್ನು ಪಡೆಯಿರಿ ಎಂದು ಸ್ಪಷ್ಟವಾಗಿ ಹೇಳಿದ್ದಾನೆ.

ಈ ಮೇಲಿನ ಉದ್ಧೃತಗಳಿಂದ ಹಾಗೂ ಸ್ವತಃ ಪಾಂಡುರಾಜನೇ ಹೇಳುವ ಮಾತುಗಳಿಂದ ಗಂಡು–ಹೆಣ್ಣುಗಳ ದೈಹಿಕ ಸಂಬಂಧವಿಲ್ಲದೆ ಮಕ್ಕಳಾಗುವುದಿಲ್ಲವೆಂಬ ಸಿದ್ಧಾಂತ ದೃಢವಾಗುತ್ತದೆ.

**ದೃಷ್ಟಾಂತ ೪ : ಗಾಂಧಾರಿ :**

ದೇಶಪರ್ಯಟನೆ ಮಾಡಿ ಹಸ್ತಿನಾವತಿಗೆ ಬಂದ ವ್ಯಾಸರನ್ನು ಗಾಂಧಾರಿ ಯಥೋಚಿತವಾಗಿ ಉಪಚರಿಸಿದಳು. ಅಷ್ಟುಹೊತ್ತಿಗಾಗಲೇ ಕುಂತಿ ಗಂಡುಮಗುವನ್ನು ಪಡೆದ ವಾರ್ತೆ ಗಾಂಧಾರಿಗೂ ತಿಳಿದಿತ್ತು. ತನ್ನ ಪತಿಗೆ ಸಮಾನರಾದ ನೂರೊಂದು ಮಕ್ಕಳನ್ನು ಅನುಗ್ರಹಿಸಬೇಕೆಂದು ಕೇಳಿಕೊಂಡಳು. ವ್ಯಾಸ ಋಷಿಗಳು ಹಾಗೇ ಆಗಲೆಂದು ಆಶೀರ್ವದಿಸಿದರು.

ಗಾಂಧಾರಿ ಪತಿ ಧೃತರಾಷ್ಟ್ರರ ಸಮಾಗಮದಿಂದ ಗರ್ಭವತಿಯಾದಳು. ಆದರೆ ಎರಡು ವರ್ಷಗಳು ಕಳೆದರೂ ಪ್ರಸವವಾಗಲಿಲ್ಲ. "ಕುಂತಿ ಮಕ್ಕಳನ್ನು ಪಡೆದಳೆಂಬ ವಾರ್ತೆಯನ್ನು ಕೇಳಿಯೇ ಮತ್ಸರಗೊಂಡಿದ್ದ ಅವಳೀಗ ಮಾನಸಿಕವಾಗಿ ವೈಪರೀತ್ಯಕ್ಕೊಳಗಾದಳು. ಪತಿಗೂ ತಿಳಿಯದಂತೆ ಗರ್ಭಪಾತ ಮಾಡಿಸಿಕೊಂಡಳು. ಆ ಭ್ರೂಣ ಕೇವಲ ಒಂದು ಮಾಂಸದ ಮುದ್ದೆಯಂತಿತ್ತು ಯಾವ ವಿಧದಿಂದಲೂ ಮಾನವನ ಆಕಾರವೂ ಅದಕ್ಕಿರಲಿಲ್ಲ."[೧೩] ಕುಂತಿ ತೇಜಸ್ಸಿನಿಂದ ಕೂಡಿದ ಶಿಶುವನ್ನು ಹಡೆದರೆ ತಾನು ಒಂದು ಮಾಂಸದ ಮುದ್ದೆಯನ್ನು ಪ್ರಸವಿಸಿದ್ದಕ್ಕಾಗಿ ದುಃಖ ಉಮ್ಮಳಿಸಿ ಬಿಕ್ಕಿ ಬಿಕ್ಕಿ ಅಳುತ್ತಾಳೆ.

ಸ್ತ್ರೀಗೆ ಸಹಜವಾಗಿ ಪ್ರಸವವಾಗಬೇಕಾದರೆ ಒಂಭತ್ತು ಹೆಚ್ಚೆಂದರೆ ಹತ್ತು ತಿಂಗಳಲ್ಲಿ ಆದರೆ ಮಾತ್ರ ಶಿಶುವು ಆರೋಗ್ಯವಾಗಿದ್ದೀತು ಮತ್ತು ಹೊರಜಗತ್ತಿಗೆ ಕಾಲಿಟ್ಟ ನಂತರವೂ ಜೀವಂತವಾಗಿರಲು ಸಾಧ್ಯ.

ಗಾಂಧಾರಿಗೆ ಎರಡು ವರ್ಷಗಳಾದರೂ ಪರಸವವಾಗಲಿಲ್ಲವೆಂದರೆ ಅದು ಅಸಹಜ ಪಿಂಡವೆಂಬುದು ನಿಜ. ಗಾಂಧಾರಿ ಜಿಗುಪ್ಸೆಯಿಂದ ಅಥವಾ ಹೊಟ್ಟೆನೋವಿನಿಂದ ಸಹಿಸಲಸಾಧ್ಯವಾಗಿ ತಾನೇ ತನ್ನ ಉದರವನ್ನು ಘಾತಪಡಿಸಿಕೊಳ್ಳುವ ಮೂಲಕ ಗರ್ಭಪಾತಕ್ಕೊಳಗಾದಳು ಎನ್ನುವಲ್ಲಿ ಆಕೆಗೆ ಮತ್ತೊಂದು ಮತ್ತು ಇನ್ನೆಂದೂ ಮಕ್ಕಳಾಗುವ ಸಂದರ್ಭವಿಲ್ಲವೆಂಬ ಧ್ವನಿಯೂ ಇದೆ. ವೈಜ್ಞಾನಿಕ ಪರಿಭಾಷೆಯಲ್ಲಿ ಹೇಳುವುದಾದರೆ ಆಕೆಯ ಗರ್ಭಕೋಶ ಹಾಳಾಗಿದೆ ಎನ್ನಬಹುದು.

**೩. ಗಾಂಧಾರಿಯ ಮಕ್ಕಳಾದ ಕೌರವರು ನೂರೊಂದು ಮಕ್ಕಳ ರಹಸ್ಯ :**

ಗಾಂಧಾರಿಯ ದುಃಖವನ್ನು ಕಂಡ ವ್ಯಾಸರು ಆಕೆಯನ್ನು ಸಮಾಧಾನ ಪಡಿಸಲು ನೀನು ನೂರೊಂದು ಮಕ್ಕಳ ತಾಯಿಯಾಗುವುದು ನಿಶ್ಚಯವೆಂದು ಹರಸುತ್ತಾರೆ. ತುಪ್ಪದಿಂದ ತುಂಬಿದ ನೂರೊಂದು ಮಡಿಕೆಗಳನ್ನು ತರಿಸಿ, ಅವುಗಳನ್ನು ಶೀತೋದಕದಿಂದ ಗರ್ಭ ಪಿಂಡದ ಮೇಲೆ ಪ್ರೋಕ್ಷಿಸುತ್ತಾರೆ. ಅದು ನೂರು ಚೂರುಗಳಾಗಿ ಒಡೆಯುತ್ತದೆ. ಘೃತ ಕುಂಭಗಳಲ್ಲಿ ಆ ಚೂರುಗಳನ್ನು ಹಾಕಿ ಮುಚ್ಚಿ ಜೋಪಾನವಾಗಿ ಇರಿಸುತ್ತಾರೆ. ಎರಡು ವರ್ಷದ ನಂತರ ಭಾಂಡಗಳ ಮುಚ್ಚಳಗಳನ್ನು ತೆಗೆಯಲು ಹೇಳಿ ವ್ಯಾಸರು ತಪಸ್ಸು ಮಾಡಲು ಹಿಮವತ್ಪರ್ವತಕ್ಕೆ ಹೊರಟು ಹೋಗುತ್ತಾರೆ.

ಎರಡು ವರ್ಷಗಳ ನಂತರ ಮೊದಲ ಭಾಂಡದಿಂದ ದುರ್ಯೋಧನನು ಜನಿಸುತ್ತಾನೆ. ಆಗ ಹಲವಾರು ಅಪಶಕುನಗಳಾಗುತ್ತವೆ.

ಗಾಂಧಾರಿ ಗರ್ಭಿಣಿಯಾಗಿದ್ದ ಕಾಲದಲ್ಲಿ ಅಂತಃಪುರದಲ್ಲಿದ್ದ ನೂರಾರು ದಾಸಿಯರಲ್ಲಿ ವೈಶ್ಯಸ್ತ್ರೀಯೊಬ್ಬಳು ಧೃತರಾಷ್ಟ್ರನ ಸೇವೆಗೆ ನಿಲ್ಲುತ್ತಾಳೆ. ಈಕೆಯಲ್ಲಿ ಹುಟ್ಟುವ ಮಗನೇ ಯುಯುತ್ಸು ಎಂದು ಕರೆಯಲಾಗಿದೆ. ಇದನ್ನು ಹೊರತುಪಡಿಸಿ ವ್ಯಾಸರು ನೂರು ಮಕ್ಕಳ ಜನನಕ್ಕಾಗಿ ಮಾಡಿರುವ **ಘೃತಘಟನಿಕ್ಷೇಪ ಪ್ರಕ್ರಿಯೆಯು ಅವೈಜ್ಞಾನಿಕವಾದುದು ಹಾಗೂ ನಿಸರ್ಗ ವಿರೋಧವಾದುದು** ಆಗಿದೆ. ಆದರೆ ವ್ಯಾಸರ ಈ ಘೃತಕುಂಭ ಪ್ರಕ್ರಿಯೆಯೇ ಮುಂದೆ ಆಧುನಿಕ ಯುಗದಲ್ಲಿ ಆವಿಷ್ಕರಿಸಲಾದ **"ಪ್ರನಾಳ ಶಿಶು ಜನನ"** ವಿಧಾನಕ್ಕೆ ಪ್ರೇರಣೆ, ಸೂಚನೆಗಳಿರಬಹುದೆಂದು ಮಾತ್ರ ಹೇಳಬಹುದಾಗಿದೆ.

~~~***~~~

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಹಾಭಾರತ, ವನಪರ್ವ, ಅ–೧೨೮. ಪು.

೨. ಋಗ್ವೇದ ಸಂಹಿತೆ ಭಾ– ೨೦, ಪು. ೧೪೯.

೩. –– ಅದೇ ––, ೧೦–೧೮೪ – ೩.

೪. ಋ.ಸಂ. ಭಾಗ –೩೦, ಪು. ೧೨೪೬.

೫. ಋ.ಸಂ. ಭಾಗ–೨೭, ಪು. ೫೪೦.

೬. ಶ್ರೀಮನ್ಮಹಾಭಾರತ, ಭಾರತ ದರ್ಶನ ಪ್ರಕಾಶನ, ಭಾ–೧, ಪು. ೪೮೦.

೭. –– ಅದೇ ––, ಪು. ೪೭೬.

೮. ಶ್ರೀಮನ್ಮಹಾಭಾರತ, ಭಾಗ–೧, ಪು. ೩೯೫.

೯. –– ಅದೇ ––, ಪು. ೧೫೧.

೧೦. ಶ್ರೀಮತಿ ಸುಶೀಲಾ ದೋಣೂರ, ಪ್ರಜಾವಣಿ ಲೇಖನ : ದಿನಾಂಕ : ೨೭–೦೧–೨೦೧೮. ಪು. ೬.

೧೧. ಶ್ರೀಮನ್ಮಹಾಭಾರತ, ಭಾಗ–೨, ಪು. ೭೯೦.

೧೨. –– ಅದೇ ––, ಭಾಗ–೨, ಪು. ೭೯೨.

೧೩. –– ಅದೇ ––, ಭಾಗ – ೨, ಪು. ೭೬೩.

~~~***~~~

## ಅಧ್ಯಾಯ-೫

## ಮಹಾಭಾರತದಲ್ಲಿ ಸ್ತ್ರೀಯರ ಸಂಘರ್ಷಗಳು

'ಮಹಾಭಾರತ' ಕಾಲದಲ್ಲಿ ಸ್ತ್ರೀಶೋಷಣೆ ಅತಿರೇಖದ ಪರಮಾವಧಿಗೇರಿತ್ತು. ಶಾಸನಗಳನ್ನು ರಚಿಸುತ್ತಿದ್ದ ಋಷಿಗಳು ಅದನ್ನು ಅವರೇ ಜಾರಿಗೆ ತರುತ್ತಿದ್ದರು. ರಾಜರಿಗೆ, ಋಷಿಗಳಿಗೆ, ಬ್ರಾಹ್ಮಣರಿಗೆ ಮೊದಲಾದವರಿಗೆಲ್ಲಾ ಸ್ತ್ರೀ ಹರಕೆಯ ಕುರಿಯಾಗುತ್ತಿದ್ದಳು. ರಾಣಿಯರಿಗೆ ಇಷ್ಟವಿರಲಿ ಇಲ್ಲದಿರಲಿ ಅವರು ರಾಜರ, ಋಷಿಗಳ ಕೈಗೊಂಬೆಗಳಾಗುತ್ತಿದ್ದರು. ಇದಕ್ಕೆ ಹಲವಾರು ದೃಷ್ಟಾಂತಗಳನ್ನು ನಾವು 'ಮಹಾಭಾರತ'ದಲ್ಲಿ ಕಾಣುತ್ತೇವೆ.

ವಂಶೋದ್ಧಾರಕ್ಕಾಗಿ 'ಪುನ್ನಾಗ' ಎಂಬ ನರಕವನ್ನು ದಾಟಲಿಕ್ಕಾಗಿ, ಮೋಕ್ಷಾಪೇಕ್ಷಿಗಳಾಗಿ ರಾಜರು ಸಂತಾನಕ್ಕಾಗಿ ಪರಪುರುಷರಿಂದ 'ನಿಯೋಗ ಪದ್ಧತಿ'ಯನ್ನು ಅಪೇಕ್ಷಿಸಿ, ತಮ್ಮ ಪತ್ನಿಯರನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಇಂತಹ ಪದ್ಧತಿಗಳಿಗೆ ಯಾವ ಸ್ತ್ರೀಯೂ ಮನಃಪೂರ್ವಕವಾಗಿ ಒಪ್ಪುತ್ತಿರಲಿಲ್ಲ. ಇದನ್ನು **ಮೊದಲ ಪ್ರಕರಣವಾಗಿ ಅಂಬಿಕೆ, ಅಂಬಾಲಿಕೆಯರ** ದೃಷ್ಟಾಂತವೇ ದೃಢಪಡಿಸುತ್ತದೆ.

**೨. ಗಾಂಧಾರಿ** ಹುಟ್ಟು ಕುರುಡನಾದ ಧೃತರಾಷ್ಟ್ರನನ್ನು ವಿವಾಹವಾಗಲು ಒಪ್ಪಿದ ಕಾರಣ ಆಕೆಗೆ ಹತ್ತು ಜನ ಸಹೋದರಿಯರಿದ್ದರು. ತನಗೆ ವಿವಾಹವಾಗದೇ ಹೋದರೆ ಅವರಷ್ಟೂ ಸಹೋದರಿಯರಿಗೂ ವಿವಾಹ ಆಗುವುದಿಲ್ಲ ಎನ್ನುವ ಕಾರಣಕ್ಕಾಗಿ ಈಕೆ ಒಬ್ಬ ಅಂಧನ ಕೈಹಿಡಿಯಲು ಸಿದ್ಧಳಾಗುತ್ತಾಳೆ. ಅದೃಷ್ಟವೋ ಅಥವಾ ದುರಾದೃಷ್ಟವೋ ಧೃತರಾಷ್ಟ್ರ ಗಾಂಧಾರಿಯ ಹತ್ತೂ ಮಂದಿ ಸಹೋದರಿಯರನ್ನೂ ತಾನೇ ವಿವಾಹವಾಗುತ್ತಾನೆ. ಇದಲ್ಲದೇ ಭೀಷ್ಮ, ಧೃತರಾಷ್ಟ್ರನಿಗೆ ನೂರು ಕನ್ಯೆಯರನ್ನು ತಂದು ವಿವಾಹ ಮಾಡುತ್ತಾನೆ. ಈ ಘಟನೆ ನಮಗೆ ಸ್ಪಷ್ಟಪಡಿಸುವುದೇನೆಂದರೆ; **ಅಂದಿನ ಕಾಲದ ಸ್ತ್ರೀಗೆ ಆಯ್ಕೆಯ ಹಕ್ಕು ಮತ್ತು ಸ್ವಾತಂತ್ರ್ಯವಿರಲಿಲ್ಲ ಎಂಬುದನ್ನು ಸಿದ್ಧಾಂತಪಡಿಸುತ್ತದೆ. ರಾಜರು ಮತ್ತು ಋಷಿಗಳು ಭೋಗಪ್ರಿಯರಾಗಿದ್ದರು.**

**೩. ಕುಂತಿಯನ್ನು** ಇಡೀ ಜಗತ್ತು ಅಪರಾಧಿಯ ಸ್ಥಾನದಲ್ಲಿಟ್ಟು ನೋಡುತ್ತದೆ, ದೂಷಿಸುತ್ತದೆ. ಆದರೆ ಕರ್ಣನನ್ನು ತಾನು ಹಡೆದ ವಿಷಯದಲ್ಲಿ ಕುಂತಿ ಮಾಡಿದ ಅಪರಾಧವೇನು? ಇದಕ್ಕೆ ನಿಜವಾದ ಹೊಣೆಗಾರರು ಯಾರು? ಎಂಬ ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಹುಡುಕಬೇಕಾಗಿದೆ. ಇದು ಇಂದಿನವರೆವಿಗೂ ಜ್ವಲಂತ ಪ್ರಶ್ನೆಯಾ–ಗಿಯೇ ಉಳಿದುಕೊಂಡಿದೆ. ಇದಕ್ಕೆ ಉತ್ತರ ಕೊಡುವ ಧೈರ್ಯವನ್ನು ಯಾರೂ ಮಾಡಿಲ್ಲವೇಕೆ? ಇದನ್ನು ಆಲೋಚಿಸಬೇಕಾದ್ದು ಪ್ರಸ್ತುತದ ಕರ್ತವ್ಯವಾಗಿದೆ.

ಕುಂತಿಯ ಇಂತಹ ದುಃಸ್ಥಿತಿ ಸ್ಪಷ್ಟಪಡಿಸುವ ವಿಷಯವೆಂದರೆ; ಆಕೆ ಬದುಕಿದ್ದಂತಹ ಕಾಲ, ಸಮಾಜ ಮತ್ತು ಯುಗಧರ್ಮ. ಪುರುಷಪ್ರಧಾನ ಸಮಾಜದ ವ್ಯವಸ್ಥೆ ನಿರ್ಮಾಣವಾಗಿದ್ದಂತಹ ಕಾಲವದು. ಕುಂತಿ ಇಡೀ ಸ್ತ್ರೀಕುಲದ ನಾಯಕಿಯಾಗಿ ಪ್ರತಿನಿಧಿಸುವುದರೊಂದಿಗೆ ಪ್ರತಿಬಿಂಬಿತಗೊಳ್ಳುತ್ತಾಳೆ.

ಕುಂತಿಯ ಈ ದುರವಸ್ಥೆಗೆ ಮುಖ್ಯ ಕಾರಣ ಮತ್ತು ಮುಖ್ಯ ಅಪರಾಧಿಯೂ ಆಕೆಯ ಸಾಕು ತಂದೆಯಾದ ಕುಂತಿಭೋಜನೇ ಆಗುತ್ತಾನೆ. ತನ್ನ ಶುಶ್ರೂಷೆ ಮಾಡುತ್ತಿರುವಾಗಲೇ ಋತುಮತಿಯಾದ ಕುಂತಿಯನ್ನು ಬೆದರಿಸಿ, ವಂಚಿಸಿ, ಅಭಿಚಾರ ಮಂತ್ರದ ಆಸೆ ತೋರಿಸಿ ಅವಿವಾಹಿತ ಕನ್ಯೆಯ ಮೇಲೆ ಲೈಂಗಿಕ ದೌರ್ಜನ್ಯ ಮಾಡಿ ತನ್ನ ಕಾಮಬಾಧೆಯಿಂದ ಮುಕ್ತನಾದ ದೂರ್ವಾಸನೇ ಎರಡನೇ ಅಪರಾಧಿಯಾಗುತ್ತಾನೆ.

ಸಾಕುತಂದೆ ಕುಂತಿಭೋಜನ ಪ್ರಾಣಭೀತಿ, ದೂರ್ವಾಸನ ವಿಷಯವಾಸನೆಗಳ ಮಧ್ಯೆ 'ತ್ರಿಶಂಕುಸ್ಥಿತಿ' ಪಡೆದು ಅವಿವಾಹಿತ ಕನ್ಯೆ ಕುಂತಿ ಗರ್ಭವತಿಯಾಗಲು ಯಾರು ಹೊಣೆ? ಮುಗ್ಧ ಅಬಲೆ, ಶೋಷಿತೆ ಕುಂತಿ ತನ್ನ ಈ ದುರವಸ್ಥೆಯ ಸ್ಥಿತಿಯನ್ನು ಯಾರ ಬಳಿಯಲ್ಲಿ ಹೇಳಿಕೊಳ್ಳಬೇಕು? ಕೇಳುವವರಾದರೂ ಯಾರಿದ್ದರು?

ಅಪರಾಧಿಗೆ ಶಿಕ್ಷೆ ನೀಡುಬೇಕಾದ ಅರಸನೇ ತಪ್ಪು ಮಾಡಿರುವಾಗ ಅವನನ್ನು ದಂಡಿಸುವವರು ಯಾರು?

ಸರ್ವಸಂಗ ಪರಿತ್ಯಾಗಿ, ಧರ್ಮರಕ್ಷಕನಾದ ಋಷಿಯೇ ಅಪರಾಧಿಯಾದರೆ ಅವನನ್ನು ಪ್ರಶ್ನಿಸುವ, ಶಿಕ್ಷಿಸುವ ಹಕ್ಕು ಯಾರಿಗಿದೆ?

ಹೀಗಾಗಿ ಅವಿವಾಹಿತ ಹೆಣ್ಣು ಹಡೆದ ಶಿಶುವನ್ನು ರಕ್ಷಿಸುವವರು ಯಾರು? ಅದಕ್ಕಾಗಿ ಕುಂತಿ ಅದನ್ನು ನದಿ ನೀರಿನಲ್ಲಿ ತೇಲಿಬಿಡುವ ಮೂಲಕ ವಿಸರ್ಜಿಸುತ್ತಾಳೆ.

ಆದರೂ ಇಂತಹ ಅಪರಾಧಗಳನ್ನು ಮಾಡಲು ಕುಂತಿಭೋಜ ಮತ್ತು ದೂರ್ವಾಸ ಋಷಿಗೆ ಉದ್ದೇಶವಾದರೂ ಏನು? ಎಂದು ಚಿಂತಿಸುವಾಗ; ಋಷಿಗಳು ಪರಮ ಪವಿತ್ರರು ಅವರ ಭಯಂಕರ ಸಿಟ್ಟಿಗೊಳಗಾದವರಿಗೆ ಇವರು ಹಾಕುವ ಶಾಪಗಳನ್ನು ಎದುರಿಸಲು ಹೆದರುವ ರಾಜರ ಅಂದಿನ ಸ್ಥಿತಿ–ಗತಿಗಳು, ರಾಜವಂಶಗಳನ್ನು ಉಳಿಸಿ, ಬೆಳೆಸುವಂತಹ ಅವರ ಮನೋಭಿಲಾಷೆಗಳೇ ಆಗಿವೆ. ಕ್ಷೀಣಿಸಿ ಹೋಗುತ್ತಿದ್ದಂತಹ ಕ್ಷತ್ರಿಯ ವಂಶಾವಳಿಗಳನ್ನು ಪುನರ್ಜೀವನಗೊಳಿಸಬೇಕೆಂಬುದೇ ಅವರ ಮುಖ್ಯ ಉದ್ದೇಶವಾಗಿತ್ತು. ಇದಕ್ಕಾಗಿ ಯಥೇಚ್ಛವಾಗಿ ಕ್ಷತ್ರಿಯ ಸ್ತ್ರೀಯರನ್ನು ದುರುಪಯೋಗ ಪಡಿಸಿಕೊಳ್ಳುವ ಋಷಿಗಳು ತಮ್ಮ ಕಾಮ ವಾಂಛೆಯನ್ನು ಪೂರೈಸಿಕೊಂಡು ಅಲ್ಲಿಂದ ಪರಾರಿಯಾಗುವ ನೂರಾರು ಘಟನೆಗಳನ್ನು 'ಮಹಾಭಾರತ'ದಲ್ಲಿ ನಾವು ಕಾಣುತ್ತೇವೆ.

ತಾತ್ವಿಕ, ನೈತಿಕ ಸಮೀಕ್ಷೆ ಆಧುನಿಕ ಚಿಂತನೆಯಲ್ಲಿ ಪರಾಶರ, ಸತ್ಯವತಿ, ಶಂತನು, ದೇವವ್ರತ, ಧೃತರಾಷ್ಟ್ರ, ಪಾಂಡು, ವಿದುರ, ಕೌರವರು, ಪಾಂಡವರ ಜನನ, ದ್ರೋಣ, ಕರ್ಣ, ದ್ರೌಪದಿ, ಕೃಪ–ಕೃಪಿಯರ ಜನನ ಇತ್ಯಾದಿ.

ಇತಿಹಾಸ ಎಂದು ನಾವು ಕರೆಯುವುದರಲ್ಲಿಯೂ ಇತಿಹಾಸದ ಪರಂಪರಾಗತ ಬರವಣಿಗೆಯಲ್ಲಿಯೂ ಗುಣಾವಲಂಬಿಯಾದ ಬದಲಾವಣೆಗಳುಂಟು. "ಸಾಕ್ಷ್ಯವನ್ನು ಬಳಸುವ ವಿಧಾನದಲ್ಲಿ ಇತಿಹಾಸದ ಈಗಿನ ಬರಣಿಗೆಯೂ ಉಂಟುಮಾಡಿದ **ಬೌದ್ಧಿಕ ಪ್ರಭಾವ** ಒಂದನೆಯದು; ಇದರಿಂದ ಗತಕಾಲವನ್ನು ಕ್ರಮಬದ್ಧವಾಗಿ ಬೆಳಕಿಗೆ ತರುವ ಹಾಗೂ **ಐತಿಹಾಸಿಕ ಸಂಗತಿಗಳ ಸತ್ಯಾಸತ್ಯತೆಯನ್ನು** ಒರೆಗೆ ಹಚ್ಚುವ ನಿಲುವಿಗೆ ಮಹತ್ವ ಬಂದಿದೆ."[೧] **ಅಧ್ಯಯನದ ಸಂದರ್ಭದ ವಿಶಿಷ್ಟ ಅನುಭವವೆಂದರೆ;** ಮಹಾಭಾರತವನ್ನು ಪೂರ್ಣ ಪ್ರಮಾಣದ ಆಧುನಿಕ ಚಿಂತನೆಗೆ ಒಳಪಡಿಸಿದಾಗ ಅಥವಾ ವೈಜ್ಞಾನಿಕ ಮನೋಧರ್ಮದಿಂದ ಅಧ್ಯಯನ ಮಾಡುವಾಗ ಮುಖ್ಯವಾಗಿ;

**"॥ ಸ ಏವ ಧರ್ಮ ಸೋಧರ್ಮೋದೇಶ ಕಾಲೇ ಪ್ರತಿಷ್ಠಿತಃ ॥"**

–ಎಂದು ಮಹಾಭಾರತ ೧೨–೩೬–೨೧ರಲ್ಲಿ ಹೇಳಿರುವಂತೆ; ಯಾವುದು ಒಂದು ಕಾಲದ ಧರ್ಮವೋ ಅದುವೇ ಮತ್ತೊಂದರಲ್ಲಿ ಅಧರ್ಮ. "ಇದು ದೇಶ ಕಾಲಗಳಲ್ಲಿ ನೆಲೆ ಹೊಂದಿರುವಂತಹುದು."[೨] ಇದಕ್ಕೆ ಬದ್ಧರಾದ ಹೊರತು ಮಹಾಭಾರತ ಅರ್ಥವಾಗದು.

ಮಹಾಭಾರತದಲ್ಲಿ ಗಮನ ಸೆಳೆಯುವ ಪಾತ್ರವೆಂದರೆ ದ್ರೌಪದಿ. ಸಂಕೀರ್ಣತೆ ಮತ್ತು ಅನನ್ಯತೆಗಳಿಂದ ಭಾರತೀಯ ಸಾಹಿತ್ಯ, ಸಂಸ್ಕೃತಿಯ ಪರಂಪರೆಯಲ್ಲೇ ಹೆಚ್ಚು ಚರ್ಚೆಗೊಳಗಾದ ಕುತೂಹಲ, ಸಂಚಲನಗಳನ್ನು ಎಬ್ಬಿಸಿದ ಏಕೈಕ ಪಾತ್ರ. "ದ್ರೌಪದಿ ಭಾರತೀಯ ಸಮಾಜಕ್ಕೆ ಸ್ವೀಕಾರಾರ್ಹವಲ್ಲದ ಸಾಂಸಾರಿಕ ಸುಳಿಯೊಳಗೆ ಸಿಲುಕಿದವಳು. 'ಪರಮ ಪತಿವ್ರತೆಗೆ ಗಂಡನೊಬ್ಬನೇ' ಎಂಬ ನಂಬಿಕೆಗೆ ವಿರುದ್ಧವಾಗಿ ಐವರು ಪಾಂಡವರಿಗೆ ಹೆಂಡತಿಯಾಗಿ ಬಾಳಿದವಳು."[೩] ಎಂಬ ಇಂತಹ ಅಪವಾದ ಹೊತ್ತ ದ್ರೌಪದಿಯ ಬಗ್ಗೆ ಈ ಕೆಳಕಂಡ ಸಂದೇಹಗಳನ್ನು ಪರಿಶೀಲಿಸಬಹುದು.

೧. ದ್ರೌಪದಿ ಯಜ್ಞದಿಂದ ಉದ್ಭವಿಸಿದ್ದು ನಿಜವೇ?
೨. ಐವರು ಪತಿಯರನ್ನು ಪಡೆದದ್ದು ಭಾರತೀಯ ಸಮಾಜಕ್ಕೆ ಕಳಂಕಪ್ರಾಯವೇ?
೩. ವಸ್ತ್ರಾಪಹರಣದ ಪ್ರಸಂಗದ ದ್ರೌಪದಿ ಮತ್ತು ಕೃಷ್ಣ ಇವರಿಬ್ಬರ ಸ್ಥಾನ ಏನಿತ್ತು?
೪. ವಸ್ತ್ರಾಪಹರಣದ ಸಂದರ್ಭದಲ್ಲಿ ಅತಿರಥ ಮಹಾರಥ ಭೀಷ್ಮಾದಿಗಳ ಮೌನಕ್ಕೆ ಕಾರಣವೇನು?

–ಹೀಗೆ ಉದ್ಭವಿಸುವಂತಹ ಇನ್ನೂ ಅನೇಕ ಪ್ರಶ್ನೆಗಳು ಕುತೂಹಲವನ್ನುಂಟು ಮಾಡುತ್ತದೆ. ಈ ಅಧ್ಯಾಯದಲ್ಲಿ ಈ ಎಲ್ಲಾ ಪ್ರಶ್ನೆಗಳಿಗೂ ಆಧಾರ ಮತ್ತು ಪ್ರಮಾಣಸಹಿತ ಈ ಅಧ್ಯಯನದ ಮೂಲಕ ಉತ್ತರಗಳನ್ನು ಕಂಡು ಹಿಡಿಯಲು ಪ್ರಯತ್ನಿಸಲಾಗಿದೆ.

ಯಾವುದೇ ರಾಷ್ಟ್ರದ ಸಂಸ್ಕೃತಿ-ಸಭ್ಯತೆಗಳ ನಿರ್ಮಾಣ ಹಾಗೂ ವಿಕಾಸದಲ್ಲಿ ಸ್ತ್ರೀಯರ ಪಾತ್ರ ಅತ್ಯಂತ ಮಹತ್ವಪೂರ್ಣವಾದುದು ಆಗಿರುತ್ತದೆ. ಸ್ತ್ರೀ-ಪುರುಷರ ಪೈಕಿ ಪುರುಷನೇ ಮೇಲೆಂಬ ಭಾವನೆ ಬೆಳೆದು ಬಂದಿರುವುದನ್ನು ಬಹುಶಃ ಎಲ್ಲಾ ದೇಶ ಕಾಲ ಹಾಗೂ ಸಾಹಿತ್ಯಗಳಲ್ಲೂ ನೋಡಬಹುದು. ಆದರೂ ಹೆಣ್ಣಿನ ಸ್ಥಾನ-ಮಾನಗಳು ಆಯಾ ಸಮಾಜದ ಮೇಲ್ಮೆ-ಕೀಳ್ಮೆಗಳ ಅಳತೆಕೋಲೆನ್ನಲು ಅಡ್ಡಿಯಿಲ್ಲ..... ಯುಗದಿಂದ ಯುಗಕ್ಕೆ ಬಂದರೂ - ಪರಿಸ್ಥಿತಿಗಳು ಬದಲಾದರೂ ಸಹ ಹೆಣ್ಣಿನ ನಿಂದೆ- ಪ್ರಶಂಸೆಗಳು ಮುಂದುವರೆದೇ ಇವೆ. "ಸಮಾಜವು ಹೆಣ್ಣಿನ ಸ್ಥಾನಮಾನಗಳನ್ನು ಇಬ್ಬಗೆಯಾಗಿ ಗುರುತಿಸುತ್ತದೆ. ಒಂದು **ಗರತಿಯದು**; **ಇನ್ನೊಂದು ಹಾದರಗಿತ್ತಿಯದು**. ಕುಟುಂಬ ನಿರ್ವಹಣೆಯ ಜವಾಬ್ದಾರಿಯನ್ನು ಹೊತ್ತ ಗರತಿಗೆ ಸಮಾಜದಲ್ಲಿ - ಹಿಂದೆ, ಇಂದು, ಮುಂದೂ ಕೂಡಾ ಪ್ರತಿಷ್ಠಿತ ಸ್ಥಾನ-ಮಾನಗಳು ಮೀಸಲಾಗಿವೆ. **ಹಾದರಗಿತ್ತಿಯಾದರೋ ಕೀಳಾಗಿ ಕಾಣಲ್ಪಡುತ್ತಾಳೆ. ವ್ಯಾಸಭಾರತವೂ ಕೂಡಾ ಹೆಣ್ಣಿನ** ನಿಂದೆ- ಪ್ರಶಂಸೆಗಳಿಂದ **ಹೊರತಾಗಿಲ್ಲ.**"[೪] '**ಬಹುಭಾರ್ಯತ್ವ ಪದ್ಧತಿ**'ಯು ವಿಶೇಷವಾಗಿ ಕ್ಷತ್ರಿಯರಲ್ಲಿ ರೂಢಿಯಲ್ಲಿತ್ತು. '**ವಿಧವಾ ವಿವಾಹ ಪದ್ಧತಿ**'ಯು ಧರ್ಮವಿರುದ್ಧವೆನಿಸಿತ್ತಾದರೂ, ಅಕ್ಷತಯೋನಿಯ ಪುಷ್ಪವತಿಯಾಗದಿರುವ ಪರಿಶುದ್ಧರಾದ ವಿಧವೆಯರು ತಮ್ಮ ಮೈದುನನೊಡನೆ ಪುನರ್ವಿವಾಹವಾಗುವುದನ್ನು ಶಾಸ್ತ್ರವು ಸಮ್ಮತಿಸಿತ್ತು. ಸಂತಾನಹೀನಳಾದ ವಿಧವೆಯು ವಂಶದ ಪುರೋಭಿವೃದ್ಧಿಗಾಗಿ '**ನಿಯೋಗ ಪದ್ಧತಿ**'ಯಿಂದ ಸಂತತಿಯನ್ನು ಪಡೆಯಬಹುದಾಗಿತ್ತು. ಸ್ವೇಚ್ಛೆಯಿಂದ ಸತಿ ಹೋದ ಮಹಾಸತಿಯರ ಉಲ್ಲೇಖವೂ ಮಹಾಭಾರತದಲ್ಲಿದೆ."[೫] ಬಹುಪತ್ನಿಯರನ್ನು ಹೊಂದಿರುವ ಗಂಡನನ್ನು ಮತ್ತು ಎಲ್ಲಾ ಪತ್ನಿಯರನ್ನೂ ಸಮಾನದೃಷ್ಟಿಯಿಂದ ಕಾಣುವವನಿಗೆ ಅಥವಾ ತನ್ನ ಪತ್ನಿಯರೆಲ್ಲರನ್ನೂ ಸಮಾನವಾಗಿ ಪ್ರೀತಿಸುವವನಿಗೆ '**ದಕ್ಷಿಣ**' ಎಂದು ಕರೆಯುತ್ತಿದ್ದರು.

### ರಾಜಕ್ರೀಡೆಯಲ್ಲಿ ಹೆಣ್ಣನ್ನು ಪಣವಾಗಿಡುವ ಪದ್ಧತಿ :

ಗಂಡಿನ 'ಪುರುಷಾರ್ಥ ಸಾಧನೆ'ಯಲ್ಲಿ ನೆರವಾಗುವುದೇ ಹೆಣ್ಣಿನ **ಭಾರ್ಯಾರ್ಥ** ಸಿದ್ಧಿಯಾಗಿತ್ತು. ಅವಳು ಅಸ್ವತಂತ್ರಳು ಮಾತ್ರವಲ್ಲ; ಅವಳು ಕೂಡ ಪಾಣಿಗ್ರಹಣದ ನಂತರ ಆಕೆ ಸಂಪೂರ್ಣವಾಗಿ ತನ್ನ ಗಂಡನ ಸ್ವತ್ತಾಗಿರುತ್ತಿದ್ದಳು. "ಅವಳನ್ನು ಯಥೋಚಿತವಾಗಿ ಮತ್ತು ಯಥೇಚ್ಛವಾಗಿ ವಿನಿಯೋಗಿಸಿಕೊಳ್ಳುವ ಅಧಿಕಾರ ಗಂಡನಿಗೆ ಸೇರಿದ ವಿಷಯವಾಗಿತ್ತು. ಕೆಲವೊಮ್ಮೆ ಅವಳು ಜೂಜಿನಲ್ಲಿ **ಪಣವಾಗಿ** ಕೂಡ ವಿನಿಯುಕ್ತಳಾಗುತ್ತಿದ್ದಳು."[೬] ಈ ಕಾರಣದಿಂದಲೇ ಯುಧಿಷ್ಠಿರ ದ್ಯೂತದಲ್ಲಿ ದ್ರೌಪದಿಯನ್ನು ಪಣವಾಗಿ ಇಡುತ್ತಾನೆ. ಆ ಅಧಿಕಾರ ಯುಧಿಷ್ಠಿರನಿಗಿತ್ತು. ಆದರೆ ಇಲ್ಲೊಂದು ವ್ಯತ್ಯಯವಿರುವುದನ್ನು ನಾವು ಕಾಣುತ್ತೇವೆ. ಯುಧಿಷ್ಠಿರ ದ್ಯೂತಕ್ಕಾಗಿ ಆಕೆಯನ್ನು ಮೊದಲು ಪಣಕ್ಕಿಡಬಾರದಿತ್ತು ಅಥವಾ ಆಕೆಯನ್ನು ಪರಿತ್ಯಜಿಸಿ ಅಥವಾ ವಿಚ್ಛೇದಿಸಿ ಜೂಜಾಡಬೇಕಿತ್ತು.

ಋಗ್ವೇದ ಕಾಲದಲ್ಲಿದ್ದ **ಇಲೂಷ**ನೆಂಬ ಋಷಿಪುತ್ರನಾದ **ಕವಷ**ನೆಂಬ ಋಷಿಯು ಪಗಡೆ ಆಟದಲ್ಲಿ ಸಿದ್ಧಹಸ್ತ. ಅವನಿಗೆ ಪಗಡೆ ಆಟದ ಸೋಲು-ಗೆಲುವಿನ ಅನುಭವವಿತ್ತು. ಜನಸಾಮಾನ್ಯ ಜೂಜುಕೋರರು ಆಟಕ್ಕೆ ಕೂರುವ ಮೊದಲು;

೧) 'ನಾನು ಜೂಜುಗಾರನಾಗಿದ್ದರೂ ನನ್ನ ಪತ್ನಿಯು ನನ್ನ ಮೇಲೆ ಕೋಪಗೊಂಡಿಲ್ಲ. ನನ್ನ ಈ ಚರ್ಯೆಗಾಗಿ ನಾಚಿಕೆಯನ್ನೂ ಪಟ್ಟುಕೊಂಡಿಲ್ಲ. ನನ್ನ ಮಿತ್ರರಿಗೆ ಆದರವನ್ನು ತೋರಿಸಿ ನನಗೆ ಬಹಳ ಹಿತಕಾರಿಯಾಗಿದ್ದಳು. ನನಗೆ ಹೀಗೆ ಉಪಕಾರಿಯಾಗಿದ್ದರೂ ಸಹ ಅಂತಹ ನನ್ನ ಪತ್ನಿಯನ್ನು ಜೂಜುಗಾರರಲ್ಲಿ ಒಂದು ಪಕ್ಷಕ್ಕೆ ಜಯವನ್ನು ಕೊಡತಕ್ಕ ಈ ಪಗಡೆಯ ಕಾರಣಕ್ಕಾಗಿ ನಾನು ತ್ಯಜಿಸಿಬಿಟ್ಟೆನು.'

೨) 'ಯಾವ ಜೂಜುಗಾರನ ಧನವನ್ನು ಶಕ್ತಿಯುತವಾದ ಪಗಡೆ ದಾಳಗಳು ಇಚ್ಛಿಸಿ ಅಪಹರಿಸಿದವೋ, ಅಂತಹ ಜೂಜುಗಾರನ ಪತ್ನಿಯನ್ನು ಇವನ ಪ್ರತಿಕಕ್ಷಿಗಳು ಹಿಡಿದೆಳೆದು ಅವಮಾನ ಮಾಡುತ್ತಾರೆ.'

೩) 'ದ್ಯೂತದಲ್ಲಿ ಸೋತು ಖಿನ್ನನಾಗಿ ಮನಸ್ಸು ಬಂದಂತೆ ಸಂಚರಿಸುವ ದ್ಯೂತಗಾರನ ಪತ್ನಿಯು ಅವನಿಂದ ತ್ಯಜಿಸಲ್ಪಟ್ಟವಳಾದರೂ ಪರಿತಾಪ ಪಡುತ್ತಾಳೆ.' (ಋಗ್ವೇದ, ೧೦-೩೪ - ೨,೪,೧೦.) ಈ ರೀತಿಯಾಗಿ ಆಲೋಚಿಸಿದ ನಂತರವೇ ಜೂಜಾಟಕ್ಕಿಳಿದು ಮನೆ, ಮಡದಿ ಎಲ್ಲವನ್ನೂ ಕಳೆದುಕೊಂಡು ನಂತರ ಬೀದಿಗೆ ಬೀಳುವ ನಿದರ್ಶನವನ್ನು ನಾವು ಋಗ್ವೇದದಲ್ಲಿ ಕಾಣುತ್ತೇವೆ.

**ನಿಯೋಗ ಪದ್ಧತಿ :**

ಸಂತತಿಯಿಲ್ಲದವಳು ವಂಶದ ಕುಡಿಯನ್ನು ಹಬ್ಬಿಸುವದಕ್ಕಾಗಿ 'ನಿಯೋಗ'ದಿಂದ ಗರ್ಭಧರಿಸುವುದು ಪಾಪವೆನಿಸುವುದಿಲ್ಲವೆಂದು ಶಾಸ್ತ್ರವು ಅಭ್ಯನುಜ್ಞೆಯನ್ನು ಅಂದಿನ ಸಮಕಾಲೀನ ಸಮಾಜದಲ್ಲಿ ನೀಡಿತ್ತು. ಕೆಲವೊಮ್ಮೆ ಗಾಂಧರ್ವ, ಪೈಶಾಚಿಕವೆಂಬೀ ಮೊದಲಾದ ಅಸಂಸ್ಕೃತ ರೀತಿಯಲ್ಲಿ ವಿವಾಹಿತರಾದ ಹೆಣ್ಣುಗಳನ್ನು ಸಹ ಸಮಾಜವು ಔದಾರ್ಯದಿಂದಲೇ ಕಾಣುತ್ತಿತ್ತು. "ಗರ್ಭವತೀ ಅಥವಾ ಪುತ್ರವತಿಯಾದ ಕನ್ಯೆಯ (ಅವಿವಾಹಿತಳ) ವಿವಶತೆಯಿಂದ ಅಥವಾ ಮನೋದೌರ್ಬಲ್ಯದಿಂದ ಶೀಲಭಂಗಕ್ಕೊಳಗಾದ ಹೆಣ್ಣಿನ ಬಾಳನ್ನು ಕೂಡ ಮಧ್ಯಯುಗದ ಸಮಾಜದಂತೆ ಮಹಾಭಾರತ ಕಾಲದ ಸಮಾಜವೂ ಕಡೆಗಣಿಸಲಿಲ್ಲ."[೭] ಎಂಬುದನ್ನು ನಾವು ಮನಗಾಣಬೇಕಾಗಿದೆ.

ಮಹಾಭಾರತದಲ್ಲಿ ವ್ಯಾಸರು ಉಲ್ಲೇಖಿಸುವ ಈ 'ನಿಯೋಗ ಪದ್ಧತಿ'ಯ ಮೂಲವನ್ನು ನಾವು ಋಗ್ವೇದದಲ್ಲಿ ಕಾಣುತ್ತೇವೆ.

"ವಿವಸ್ವಂತನು ಮಾನವನಾದರೂ ಆದಿತ್ಯರೂಪರಲ್ಲೊಬ್ಬ. ತ್ವಷ್ಟೃ ಪುತ್ರಿ ಸರಣ್ಯೂ ದಿವ್ಯಸ್ತ್ರೀ ಮತ್ತು ಅಮರ್ತ್ಯಳು. ಇವರಿಬ್ಬರ ವಿವಾಹಕ್ಕೆ ಸಕಲ ಭುವನಗಳ ಪ್ರಜೆಗಳೂ ಸೇರಿರುತ್ತಾರೆ."[೮] **"॥ ಇದಂ ವಿಶ್ವಂ ಬುವನಂ ಸಮೇತಿ ॥"** ತ್ವಷ್ಟೃವು ತನ್ನ ಮಗಳ ಅಭಿಪ್ರಾಯ ಕೇಳದೆಯೇ ಸ್ವಯಂವರ ರೂಪವಾದ ವಿವಾಹವಾದರೂ ಅದಕ್ಕೆ ಆಸ್ಪದವೀಯದೇ ಸ್ವಯಂ ಪ್ರೇರಿತನಾಗಿ ಮಾನವನಾದ ವಿವಸ್ವಂತನಿಗೇ ಕೊಟ್ಟು ವಿವಾಹ ಮಾಡುತ್ತಾನೆ. ಅಸಮಾಧಾನಗೊಂಡ ಸರಣ್ಯೂ ಯೌವ್ವನ ಮತ್ತು ಸೌಂದರ್ಯಗಳಿಂದ ಕೂಡಿದವಳು ತನ್ನ ಪತಿಯ ರೂಪದಿಂದ ತೃಪ್ತಿಯನ್ನು ಹೊಂದಲಿಲ್ಲ. ಸರಣ್ಯೂದೇವಿ ಎಲ್ಲಿಯೋ ಅದೃಶ್ಯಳಾದಳು. ಆದರೆ ತನ್ನ ಸ್ಥಳದಲ್ಲಿ ತನಗೆ ಬದಲಾಗಿ ಓರ್ವ ದೇವತಾ ಸ್ತ್ರೀಯನ್ನು ನಿರ್ಮಿಸಿ ತನ್ನ ಜಾಗದಲ್ಲಿ ಅವಳನ್ನಿಟ್ಟು ತಾನು ಅಶ್ವರೂಪವನ್ನು ಧರಿಸಿ ಹೊರಟುಹೋದಳು. ಆಗ ಸರಣ್ಯೂ ಪತಿಯಾದ ವಿವಸ್ವಂತನು ಆ ವೇಳೆಯಲ್ಲಿ ಅಲ್ಲಿರಲಿಲ್ಲ. ಹಾಗಾಗಿ ಸರಣ್ಯೂ ತನ್ನನ್ನೇ ಹೋಲುವ ಮತ್ತೊಬ್ಬ ಸ್ತ್ರೀಯನ್ನು ತನ್ನ ಅವಳಿ ಮಕ್ಕಳನ್ನು ಅವಳ ವಶಕ್ಕೆ ಒಪ್ಪಿಸಿ ತಾನು ಅದೃಶ್ಯಳಾದಳು. ಇದರ ಅರಿವೇ ಇಲ್ಲದ ವಿವಸ್ವಂತನು ಸರಣ್ಯೂ ಪ್ರತಿನಿಧಿಯಾಗಿದ್ದ ಸ್ತ್ರೀಯನ್ನೇ ತನ್ನ ಪತ್ನಿ ಎಂದು ನಂಬಿ ಅವಳನ್ನು ಸೇರಿದನು. ಇದರ ಫಲವಾಗಿ ಜನಿಸಿದವನೇ **'ಮನು'**.

ವಿವಸ್ವಂತನ ಮಾನವತ್ವದಿಂದ ತೃಪ್ತಿಯನ್ನು ಹೊಂದಿದ ಸರಣ್ಯೂವು ಅದೃಶ್ಯಳಾದ ವಿಷಯವು ವಿವಸ್ವಂತನಿಗೆ ತಿಳಿದೊಡನೆಯೇ ಅವಳನ್ನು ಹಿಂಬಾಲಿಸುತ್ತಾನೆ. ಪತ್ನಿ ಅಶ್ವರೂಪವನ್ನು ಹೊಂದಿರುವುದನ್ನು ತಿಳಿದು ತಾನೂ ಸಹ ಪುರುಷಾಶ್ವ ರೂಪವನ್ನು ಹೊಂದುತ್ತಾನೆ. ಸರಣ್ಯೂವು ತನ್ನನ್ನು ಸಮೀಪಿಸಿದ ಪುರುಷಾಶ್ವವನ್ನು ಮೋಹಿಸಿ ಅದರ ಸಮಾಗಮವನ್ನು ಇಚ್ಛಿಸುತ್ತಾಳೆ. ತತ್ಫಲವಾಗಿ ಹುಟ್ಟಿದವರೇ **'ಅಶ್ವಿನೀ ದೇವತೆಗಳು.'**

**"॥ ಯತ್ ತತ್ ಆಸೀತ್ ಅಶ್ವಿನೌ ಅಭರತ್ ॥"**[೯] –ಎನ್ನುವ ಈ ಶ್ಲೋಕದಲ್ಲಿ ಉಲ್ಲೇಖಿಸಿರುವುದನ್ನು ಕಾಣುತ್ತೇವೆ.

"ಅತಿಥಿ ದೇವೋಭವ" ಎನ್ನುವ ಮಾತನ್ನು ಪುರಸ್ಕರಿಸುತ್ತಿದ್ದಂತ ಮಹಾಭಾರತ ಕಾಲದಲ್ಲಿ ಅತಿಥಿಗಳನ್ನು ದೇವರೆಂದೇ ಸತ್ಕರಿಸಿ, ಗೌರವಿಸಲಾಗುತ್ತಿತ್ತು. ಇಂತಹ ಅತಿಥಿ ದೇವರ ತೃಪ್ತಿಗಾಗಿ ತನ್ನ ದೇಹವನ್ನೊಡ್ಡಿದ ಓಘವತಿ, ಸ್ನಾತಕನೊಬ್ಬನಿಗೆ ಗುರುದಕ್ಷಿಣೆಗಾಗುವಷ್ಟು ಧನವನ್ನು ಒದಗಿಸುವ ಸಲುವಾಗಿ ಸರದಿಯಂತೆ ನಾಲ್ವರನ್ನು ಮದುವೆಯಾದ ಮಾಧವಿ, ಗಂಡನಿಂದ ಸಂತತಿ ಲಭಿಸದಿದ್ದಕ್ಕಾಗಿ ಪರಪುರುಷನಿಂದ ಸಂತಾನವನ್ನು ಪಡೆದ ಅನೇಕ ಜನ ಕ್ಷತ್ರಿಯ ರಾಣಿಯರು ಮೊದಲಾದವರೆಲ್ಲರೂ ಮಹಾಭಾರತದ ಪ್ರಕಾರ ಸಾಧ್ವಿಯರ ಸಾಲಿನಲ್ಲೇ ಸೇರುತ್ತಾರೆ. ಇವರೆಲ್ಲರ ಚರಿತ್ರೆಯನ್ನು ಅವಲೋಕಿಸುವಾಗ, ಮಹಾಭಾರತವು ಅನೈತಿಕತೆಗೆ ಅನುಮತಿ ನೀಡುತ್ತಿತ್ತೇ? ಎಂಬ ಸಂದೇಹವು ನಮ್ಮನ್ನು ಕಾಡದೇ ಇರಲಾರದು. ಇಂತಹ ಸುಳಿಯೊಂದು ವಾಚಕರ ಮನಸ್ಸಿನಲ್ಲಿ ಸುಳಿದು

ಹೋಗುತ್ತದೆ. ಆದರೆ 'ನಿಯೋಗ' ಸಂತತಿಗಾಗಿ ಮಾತ್ರವೇ ಪರಪುರುಷಯಾಚನೆ, ಅತಿಥಿಸಂತೃಪ್ತಿ – ಇವೇ ಮೊದಲಾದ ನಡವಳಿಕೆಗಳು ಪರಿವರ್ತಿತ ಪೀಳಿಗೆಯ ದೃಷ್ಟಿಯಲ್ಲಿ ಅನೈತಿಕವೆನಿಸಿದರೂ ಅದು ಅಂದಿನ ಸಮಕಾಲೀನ ಸಮಾಜದಲ್ಲಿ ಆಯಾ ವ್ಯಕ್ತಿಯ ಅವಶ್ಯಕತಾನುಸಾರವಾಗಿ ಅವು ಧರ್ಮವೇ ಆಗಿದ್ದವೆಂದು ಮಹಾಭಾರತಕಾರರ ಅಭಿಪ್ರಾಯ. ಇದನ್ನೇ ನಮ್ಮ ಪರಿಭಾಷೆಯಲ್ಲಿ **'ಯುಗಧರ್ಮ'** ಎನ್ನುತ್ತೇವೆ. ಆದರೂ **"ವಸ್ತುತಃ ಆಧುನಿಕ ದೃಷ್ಟಿಯ ವಿಮರ್ಶೆಯಲ್ಲಿ ಇದು ಸಲ್ಲದು."**[೧೦] ಕಾರಣ' ಮಹಿಳೆ ಪುತ್ರ ಸಂತಾನ ಪಡೆಯಲು ಈಗಿನಂತೆ ಆಗ ಅನ್ಯ ಮಾರ್ಗಗಳಿರಲಿಲ್ಲ. ಇದ್ದದ್ದು ಒಂದೇ ಅದೇ 'ನಿಯೋಗ'. ಅದೇ ಇಂದು ಆಧುನಿಕ ಕಾಲದಲ್ಲಿನ ವೈಜ್ಞಾನಿಕ ಕ್ಷೇತ್ರದಲ್ಲೂ ತೀವ್ರತರವಾಗಿ ಮುಂದುವರೆದ ತಂತ್ರಜ್ಞಾನಗಳ ಆವಿಷ್ಕಾರದೊಂದಿಗೆ ಬಳಕೆಯಾಗುತ್ತಿರುವ **"ಕೃತಕ ಗರ್ಭಧಾರಣೆ ವಿಧಾನ" ದ ರೂಪವನ್ನು ತಳೆದಿದೆ.** ಹೀಗಾಗಿ 'ಇಂದಿನ ಹಾಗೂ ಮುಂದಿನ ಯುಗಗಳಲ್ಲಿ ಮಹಿಳೆಯ ಕಾರ್ಯಕ್ಷೇತ್ರಗಳು, ಮಹಾಭಾರತ ಕಾಲದ ಮಹಿಳೆಯರ ಕಾರ್ಯಕ್ಷೇತ್ರಗಳಿಗಿಂತ ಭಿನ್ನವಾದವು. ಅವರ ಆಸೆ-ಆಕಾಂಕ್ಷೆಗಳಿಗಿಂತ ಇವರ ಆಶೋತ್ತರಗಳು ಬೇರೆ. ಆದರೂ ಭಾರತೀಯ ಸಂಸ್ಕೃತಿಧಾರೆಯ ಸಂವಾಹಕವಾದ ಅಂತಸಂತ್ವಗಳಲ್ಲಿ ಅಂದಿಗೂ ಇಂದಿಗೂ ಅಂಶತಃ ಆದರೂ ಸಾಮ್ಯವಿದ್ದುದರಿಂದ ಅಂದಿನವರ ಆದರ್ಶಗಳು ಇಂದಿನವರಿಗೆ ಹಾಗೂ ಮುಂದಿನವರಿಗೂ ಕೂಡ ಪ್ರೇರಕಶಕ್ತಿಯನ್ನೊದಗಿಸಬಲ್ಲವು. ಮಹಾಭಾರತವು ಭಾರತೀಯ ಸಂಸ್ಕೃತಿಯ ಆಧಾರಸ್ತಂಭವಾದರೆ ಅದರಲ್ಲಿ ನಾರೀ ರತ್ನಗಳು ಮಹಾಭಾರತಕ್ಕೆ ಆಧಾರಸ್ತಂಭವೆನಿಸಿವೆ."[೧೧] ಹೀಗೆ ಮಹಾಭಾರತದಲ್ಲಿನ ಪ್ರಮುಖ ಘಟನೆಗಳು ಸ್ತ್ರೀಯನ್ನು ಒಳಗೊಂಡಿದ್ದು ಅದು ತಾತ್ವಿಕ, ನೈತಿಕ ಸಮೀಕ್ಷೆ ಆಧುನಿಕ ಚಿಂತನೆಗೆ ಎಡೆಮಾಡಿಕೊಟ್ಟಿವೆ.

~~~***~~~

**ಅಡಿಟಿಪ್ಪಣಿಗಳು**

೧. ರೊಮಿಲಾಥಾಪರ್, ಅನು: ಸೂರ್ಯನಾಥ ಕಾಮತ್, ಗತಕಾಲದ ಬಗ್ಗೆ ಪೂರ್ವಗ್ರಹ, ಪು. ೪
೨. ಪ್ರೊ|| ಕೆ.ಎಸ್. ಕಣ್ಣನ್, ಇತಿಹಾಸ-ಪುರಾಣ, ಪು. ೮೦.
೩. ಡಾ|| ಪ್ರಮೀಳಾ ಮಾಧವ್, ಲೇಖನ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಸಂಪುಟ-೯೩, ಸಂಚಿಕೆ-೦೧ (೨೦೧೫) ಪು. ೧೨೮.
೪. ಲೇ: ಯಲ್ಲಾಪುರ ಕೃಷ್ಣಶರ್ಮ, ಸಂ: ಎನ್.ನಾರಾಯಣ ಬಲ್ಲಾಳ್, ಸಾಹಿತ್ಯ ಕೌಸ್ತುಭ, (೨೦೧೩), ಪು.೧೧
೫. -- ಅದೇ -- , ಪು. ೧೩೨.
೬. -- ಅದೇ --, ಪು. ೧೩೫.
೭. -- ಅದೇ --, ಪು. ೧೩೭.
೮. -- ಅದೇ --, ಪು. ೧೪೧.
೯. ಋಗ್ವೇದ ಸಂಹಿತೆ ಭಾಗ-೨೭, ಪು. ೫೪೬.
೧೦. -- ಅದೇ --, ಪು. ೫೪೯.
೧೧. ಲೇ: ಯಲ್ಲಾಪುರ ಕೃಷ್ಣಶರ್ಮ, ಸಂ: ಎನ್.ನಾರಾಯಣ ಬಲ್ಲಾಳ್, ಸಾಹಿತ್ಯ ಕೌಸ್ತುಭ, (೨೦೧೩), ಪು.೧೪೨.
೧೨. -- ಅದೇ -- ಪು. ೧೪೮.

~~~***~~~

## 'ಮಹಾಭಾರತ'ದಲ್ಲಿ ಮಹಿಳೆಯರ ಸ್ಥಾನ-ಮಾನಗಳು :

**'ಮಹಾಭಾರತ'** ಕಾಲದಲ್ಲಿ ಸ್ತ್ರೀಯರಿಗೆ ಗೌರವಯುತವಾದ ಸ್ಥಾನ-ಮಾನಗಳಾಗಲೀ, ಸುಭದ್ರ ನಲೆಯಾಗಲಿ ಇರಲಿಲ್ಲ. ರಾಜ-ಮಹಾರಾಜರಾಗಲೀ, ಋಷಿಗಳಾಗಲೀ ಗ್ರಾಮೀಣ ಸ್ತ್ರೀಯರನ್ನು ಮನ ಒಲಿಸಿ ಅಥವಾ ಬಲಾತ್ಕಾರವಾಗಿಯಾದರೂ ಪಡೆದು ತಮ್ಮ ಚಟ ತೀರಿಸಿಕೊಂಡು ಕೈಬಿಡುತ್ತಿದ್ದರು. ಇದಕ್ಕೆ ಮಹಾಭಾರತದ ಹಲವಾರು ಪಾತ್ರಗಳೇ ಪ್ರತ್ಯಕ್ಷ ನಿದರ್ಶನಗಳಾಗಿವೆ. ಶಕುಂತಲಳ ಜನನದ ಕಥೆಯನ್ನೇ ಉದಾಹರಣೆಯಾಗಿ

ನೋಡಬಹುದು. ಇದೇ ಸಮಸ್ಯೆಯ ಕೇಂದ್ರಬಿಂದುವೇ ಮಹಾಭಾರತದ ಕಥಾವಸ್ತುವಿಗೂ ಮೂಲ ಪ್ರೇರಣೆ. ಇಲ್ಲಿಂದಲೇ ಕಥೆಯ ಪ್ರಾರಂಭ ರಾಜರು ಅಥವಾ ಋಷಿಗಳು ಸಾಮಾನ್ಯ ಕನ್ನಿಕೆಯರನ್ನು ನೋಡಿದರೆ ಸಾಕು ಅವರ ಶೀಲಭಂಗ ಮಾಡಿ ಅವರನ್ನು ಅವರಿಗೆ ಹುಟ್ಟಿದ ಮಕ್ಕಳನ್ನು ಬೀದಿ ಪಾಲು ಮಾಡಿದರೂ ಕೇಳುವವರಿರುತ್ತಿರಲಿಲ್ಲ. ಕೇಳಲು ಬಂದ ಹೆಣ್ಣುಗಳನ್ನು ತಿರಸ್ಕರಿಸಿ ಬಿಡುತ್ತಿದ್ದರು. ಹೀಗೆ ತಿರಸ್ಕೃತಗೊಂಡ ಹೆಣ್ಣು ಅವಮಾನದಿಂದ ಆತ್ಮಾಹುತಿಗೆ ಶರಣಾಗಬೇಕು. ಇಲ್ಲದಿದ್ದರೆ 'ಕುಂತಿ'ಯರಂತಾಗಬೇಕು. ಹೀಗೆ ಎಷ್ಟು ಅಸಹಾಯಕ ಅಬಲೆಯರ ಜೀವ ರಾಜರ-ಋಷಿಗಳ ಕಾಮತೃಷೆಯ ಪೈಶಾಷಿಕ ಕೃತ್ಯಕ್ಕೆ ಬಲಿಯಾಗಿದೆಯೋ ಅದಕ್ಕೆ ಲೆಕ್ಕವಿಲ್ಲ.

ಎಲ್ಲಾ ವಿಷಯಗಳೂ ಇಲ್ಲಿ ಸ್ಪಷ್ಟವಾಗಿ ತಿಳಿಯದೇ ಇರುವುದರಿಂದ, ಪರೋಕ್ಷ ವಿಧಾನ ಹಾಗೂ ಆಧುನಿಕ ಚಿಂತನಾಶಕ್ತಿಯಿಂದ ಗತಕಾಲದ ವಿಷಯದ ಬಗ್ಗೆ ಬೆಳಕು ಬೀರುವುದಾಗಿದೆ.

"ಸಂಶೋಧನೆ ಎಷ್ಟೇ ಹಿಂದಿನ ಘಟನೆಗಳನ್ನು ವಿವರಿಸಿದರೂ, ವಾಸ್ತವದಲ್ಲಿ ಅವುಗಳನ್ನೆಲ್ಲಾ ಇಂದಿನ ಅವಶ್ಯಕತೆ ಹಾಗೂ ಪರಿಸ್ಥಿತಿಗಳಿಗೆ ಹೊಂದಿಸುವುದಲ್ಲದೆ ಇದಂದಿನ ಸನ್ನಿವೇಶದಲ್ಲೂ ಸ್ಪಂದಿಸುವಂತೆ ಮಾಡಬೇಕು."[೧] ಇದು ಆಧುನಿಕ ಚಿಂತನೆಯಿಂದ ಮಾತ್ರ ಸಾಧ್ಯ.

**೧. ದ್ರೌಪದಿ :**

ಕೌರವ ಸಭೆಯಲ್ಲಿ ದ್ರೌಪದಿಗೆ ಅವಮಾನವಾಗುತ್ತದೆ. ಆ ಸಂಕಟವನ್ನು ಆಕೆ ವೈಯಕ್ತಿಕವಾಗಿಯಲ್ಲ ಸಮಷ್ಟಿ ಸ್ತ್ರೀಕುಲದ ಪರವಾಗಿಯೇ ಅನುಭವಿಸುತ್ತಾಳೆ. ದ್ರೌಪದಿ ಈ ಕುರಿತಾಗಿ ತನ್ನಲ್ಲೇ ಹೀಗೆ ಹೇಳಿಕೊಳ್ಳುತ್ತಾಳೆ.

**"॥ ನೈವಮೇ ಪತಯಃ ಸಂತಿನ ಪುತ್ರಾ ನ ಚ ಬಾಂಧವಾಃ ।**
**ನ ಭ್ರಾತರೋ ನ ಚ ಪಿತಾ ನೈವ ತ್ವಂ ಮಧುಸೂಧನ ॥"**

**_(ಮ.ಭಾ.ವನಪರ್ವ, ೧೨-೧೨೫)**

ನನ್ನ ಭಾಗಕ್ಕೆ ಗಂಡಂದಿರೂ ಇಲ್ಲ, ಮಕ್ಕಳೂ ಇಲ್ಲ, ಬಾಂಧವರಾಗಲೀ, ತಂದೆಯಾಗಲೀ ಕೊನೆಗೆ ನೀನಾಗಲೀ ಇಲ್ಲ! ಎಂದು ಕೃಷ್ಣನನ್ನು ಸ್ಮರಿಸಿ ಶೋಕಿಸುತ್ತಾಳೆ. ಇಲ್ಲಿ ನೀನಾಗಲೀ ಎಂದಿರುವುದು ಕೃಷ್ಣನನ್ನು ಕುರಿತು. ಇದು ದ್ರೌಪದಿಯೊಬ್ಬಳ ಸಮಸ್ಯೆಯಲ್ಲ! ಮಹಾಭಾರತ ಕಾಲದ ಮನುಕುಲದ ಎಲ್ಲಾ ನಿಸ್ಸಾಹಯಕ ಸ್ತ್ರೀ, ದಾಸಿಯರ ಸ್ಥಿತಿಯೂ ಆಗಿ ಒಳಗೊಂಡಿದೆ. ದ್ರೌಪದಿಗೆ ಆ ಕಾಲದಲ್ಲಿ ತನ್ನದೇ ಸ್ಥಿತಿಯಲ್ಲಿರುವ ಸ್ತ್ರೀ ಕುಲದ ಪಾಡೇನು? ಈ ದ್ಯೂತದ ದುಶ್ಚಟಕ್ಕೆ ಸಿಕ್ಕು ಸೋತ ತನ್ನವರಾದ ಅತಿರಥ ಮಹಾರಥರೇ ತನ್ನನ್ನು ಈ ದಾರುಣ ಪರಿಸ್ಥಿತಿಯಿಂದ ರಕ್ಷಿಸಲಾರರಾದರು ಅಂದಮೇಲೆ ಇನ್ನು ಸಾಮಾನ್ಯ ಸ್ತ್ರೀಯರನ್ನು ರಕ್ಷಿಸುವವರು ಯಾರು? ದ್ರೌಪದಿಯ ಈ ಹತಾಶ ಮನೋಭಾವದ ಮಾತುಗಳಲ್ಲಿ ವಿವೇಕ ನಿಸ್ವಾರ್ಥವಿದೆ... ತನಗಾದ ಈ ದುಃಖವನ್ನು ತನ್ನ ಮಟ್ಟಿಗೆ ತಾಳಿಕೊಂಡು, ಉಳಿದವರನ್ನು ಅದೇ ಮೃತ್ಯುವಿನ ಬಾಯಿಗೆ ಒಡ್ಡುವ ಅವಕಾಶ ಇನ್ನೂ ಇದೇಕೆ? ಅಥವಾ ತನ್ನ ನಿಮಿತ್ತ ಉಳಿದವರೂ ಕಾಪಾಡಲ್ಪಡಬೇಕಾದುದು ಅವಶ್ಯವೇ? ಎಂಬುದೊಂದು ಮತ್ತೊಂದು ವಿಚಾರ. ಹೀಗೆ ನೋಡಿದಾಗ ದ್ರೌಪದೀದೇವಿಯನ್ನು ಲೋಕರೀತಿಯ ಮಹಿಳೆ ಎನ್ನುವುದಕ್ಕಿಂತಲೂ "ಲೋಕೋತ್ತರವಾದ ಮಹಿಳೆ, ಲೋಕ ವಿಲಕ್ಷಣವಾದ ಮಹಿಳೆ ಎನ್ನುವುದೇ ವೇದವ್ಯಾಸರ ದೃಷ್ಟಿಗೆ ಒಪ್ಪುವ ಮಾತು."[೨] ಎನ್ನುವ ಅಭಿಪ್ರಾಯವನ್ನೂ ನಾವು ಕಾಣುತ್ತೇವೆ.

ಮಹಾಭಾರತ ಕಾಲಾನಂತರ ತುಂಬ ಹಿಂದೆಯೇ ಕಾಳಿದಾಸ ಮಹಾಕವಿಯನ್ನು ಕೆಣಕಿಯೇ ಶಾಕುಂತಲಾದಂತಹ ಮೇರುಕೃತಿಯ ಸೃಷ್ಟಿಗೆ ಕಾರಣವಾಯಿತು. ದುಷ್ಯಂತ ಉಂಗುರ ಪ್ರಸಂಗದಿಂದ ಮಗನನ್ನು ತನ್ನ 'ಔರಸಪುತ್ರ'ನೆಂದು ಒಪ್ಪಿಕೊಳ್ಳುತ್ತಾನೆ. ಆದರೆ ಇಲ್ಲಿ ಈ ಘಟನೆ **ಕವಿ ಸಮಯ ಪ್ರೇರಿತ**. ಈ ಘಟನೆಯ ಹಿನ್ನೆಲೆ ವಾಸ್ತವಿಕ ಮೆರುಗಿನಂತೆ ಕಂಡರೂ ಜನಪದ ಕಥೆಯ **ಆಶಯವನ್ನು** ಹೊತ್ತಿರುವುದು ಹೆಚ್ಚು ಸಮಂಜಸ.

ಕುಂತಿಯ ಕಥೆಗೂ ಇಂತಹದೇ ಒಂದು ಅನಿರೀಕ್ಷಿತ ತಿರುವನ್ನು ಕೊಡಲಾಗಿದೆ. ಇಲ್ಲಿ ಕರ್ಣನ ಜನ್ಮಕ್ಕೆ ಕಾರಣನಾದ ದೂರ್ವಾಸ ಋಷಿ ತನ್ನ ಈ ಅನೈತಿಕ, ನೀಚ ಕೃತ್ಯದಿಂದ ಪಾರಾಗಲು ಕುಂತಿಗೆ ಮಕ್ಕಳನ್ನು ಪಡೆಯುವ ಮಂತ್ರೋಪದೇಶ ಮಾಡುವ ಸಂದರ್ಭವೂ **ಕವಿ ಸಮಯವೇ** ಆಗಿದ್ದು ಅಪವಾದದಿಂದ ಮುಕ್ತನಾಗುವ

ಹುನ್ನಾರ ಎದ್ದು ಕಾಣುತ್ತದೆ. ಇಂತಹ ಸಮಸ್ಯಾತ್ಮಕ ಸನ್ನಿವೇಶಗಳಿಗೆ ಸಿಕ್ಕಿ ಹಾಕಿಕೊಂಡ ಹೆಣ್ಣುಮಕ್ಕಳ ಪಾಡು ಅತ್ಯಂತ ದಾರುಣಾವಸ್ಥೆಯಲ್ಲಿ ಅಂತ್ಯಗೊಂಡಿವೆ. ಇದು ಮಹಾಭಾರತ ಕಾಲದ ಪ್ರಜೆಗಳ ಪ್ರತ್ಯಕ್ಷ ದೈವ ಎನಿಸಿದ ರಾಜರು–ತಾಪಸಿಗಳ ಆಶೀರ್ವಾದವಾಗಿತ್ತು.

ಹಾಗಾಗಿಯೇ ಶಕುಂತಲಾ ನಮ್ಮ ಮಗನಿಗೇ 'ಯುವರಾಜ' ಪಟ್ಟಾಭಿಷೇಕವಾಗಬೇಕೆಂದು ಕರಾರು ಮಾಡಿಕೊಳ್ಳುತ್ತಾಳೆ. ಇದೇ ಸಂದರ್ಭದಲ್ಲಿ ನಾವು ಸತ್ಯವತಿ ಮತ್ತು ಅವಳ ಸಾಕುತಂದೆ ದಾಶರಾಜನು 'ತನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಗುವಿಗೇ ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡಬೇಕು.' ಎಂಬುದಾಗಿ ಶಂತನು ಮಹಾರಾಜನಿಂದ ಪಡೆದ ವಚನವನ್ನು ಸ್ಮರಿಸಿಕೊಳ್ಳಬಹುದಾಗಿದೆ.

ಹೀಗೆ ಮಹಾಭಾರತ ಕಾಲದಲ್ಲಿ ರಾಜರು ತಮಗೆ ಬೇಕೆನಿಸಿದ ಹೆಣ್ಣುಗಳಿಂದ ಕಾಮತೃಷೆ ತೀರಿಸಿಕೊಳ್ಳಲಿಕ್ಕಾಗಿ ಯಾವ ವಚನವನ್ನು ಬೇಕಾದರೂ ಕೊಡುವ ಧಾರಾಳ ಮನಸ್ಸಿನ ಕೆಟ್ಟ ಪದ್ಧತಿ ಆಚರಣೆಯಲ್ಲಿತ್ತು. ಇದೊಂದು ಆಗಿನ ಕಾಲದ ಆಡಳಿತ ಸೂತ್ರಗಳನ್ನು ಹಿಡಿದಿದ್ದ ಮತ್ತು ಧರ್ಮರಕ್ಷಣೆಯ ಪರಿಪಾಲನೆಗೆ ಕಾರಣರಾಗಿದ್ದ ಋಷಿಗಳಿಂದ ಸ್ತ್ರೀ ಸಮಾಜಕ್ಕೆ ಅಂಟಿಕೊಂಡಿದ್ದ ಭಯಾನಕ ಸಾಮಾಜಿಕ ಪಿಡುಗು. ರಾಜ–ಮಹಾರಾಜರು ತಮಗೆ ಬೇಕಾದಷ್ಟು ಮಂದಿ ಹೆಣ್ಣುಗಳನ್ನು ತಮ್ಮ ವಲ್ಲಭೆಯನ್ನಾಗಿ ಅಂತಃಪುರದಲ್ಲಿ ಇಟ್ಟುಕೊಳ್ಳಬಹುದಾಗಿತ್ತು!

ಸ್ತ್ರೀ ಸಮಾಜದಲ್ಲಿ ವೀರವನಿತೆಯರು, ವೇಶ್ಯೆಯರೂ ಇದ್ದರು. ಗೋವುಗಳನ್ನು ದಾನ ಕೊಟ್ಟಂತೆ ಹೆಣ್ಣುಮಕ್ಕಳನ್ನು ದಾಸಿಯರೆಂದು ಅನುಸಂಧಾನ ಮಾಡಿಕೊಂಡು ನೂರಾರು, ಸಾವಿರಾರು ಸಂಖ್ಯೆಯಲ್ಲಿ ಸ್ತ್ರೀಯರನ್ನು ದಾನ ಕೊಡುತ್ತಿದ್ದರು. ಯಾಗ–ಯಜ್ಞಗಳನ್ನು ಮಾಡುವಾಗ, ವಿವಾಹ ಸಮಾರಂಭಗಳಲ್ಲಿ, ಕಪ್ಪಕಾಣಿಕೆಗಳನ್ನು ಕೊಡುವಾಗ, ಸಾಮಂತರಾಜರುಗಳಾದ ಸಂದರ್ಭದಲ್ಲಿ ಇಲ್ಲವೇ ಯುದ್ಧದಲ್ಲಿ ಸೋತ ಸಂದರ್ಭದಲ್ಲಿ – ಇವೇ ಮೊದಲಾದ ಸಂದರ್ಭದಲ್ಲಿ ಇವರು ದಾನ ಕೊಡುವ ಸ್ತ್ರೀಯರ ಸಂಖ್ಯೆಯ ಆಧಾರದ ಮೇಲೆ ದಾನ ಕೊಡುವವರ ಶ್ರೀಮಂತಿಕೆಯನ್ನು ಲೆಕ್ಕ ಹಾಕಲಾಗುತ್ತಿತ್ತು.

೧. ಆಸ್ಥಾನದ ರಾಣೀ ವಾಸದಲ್ಲಿ – ಪರಿಚಾರಿಕೆಯರಿರುತ್ತಿದ್ದರು.
೨. ಯೋಧರ ಹೆಂಡತಿಯರಿದ್ದರು.
೩. ವಾರಾಂಗನೆಯರಿದ್ದರು.
೪. ಮಾಲೆಗಾರ್ತಿಯರಿದ್ದರು.

ಸ್ತ್ರೀಯರಲ್ಲಿ ಸ್ವೇಚ್ಛಾ ಲೈಂಗಿಕತೆಯಿತ್ತು. ಅದೂ ಪುರುಷನು ತನ್ನ ಸ್ವಾರ್ಥ ಸಾಧನೆಗಾಗಿ ಅವರಿಗೆ ಕೊಟ್ಟ ಸ್ವಾತಂತ್ರ್ಯವಾಗಿತ್ತು. 'ಗಂಧರ್ವ ವಿವಾಹ ಪದ್ಧತಿ'ಯೂ ಜಾರಿಯಲ್ಲಿತ್ತು.

ಸಂತಾನೋತ್ಪತ್ತಿಗಾಗಿ 'ನಿಯೋಗ ಪದ್ಧತಿ'ಯೂ ಇತ್ತು.

'ಬಹುಪತ್ನಿತ್ವ ಪದ್ಧತಿ' ರೂಢಿಯಲ್ಲಿತ್ತು.

'ಬಹುಪತಿತ್ವ'ವೂ ಇತ್ತು.

'ಸ್ವಯಂವರ ಪದ್ಧತಿ'ಯೂ ಜಾರಿಯಲ್ಲಿತ್ತು.

'ಮಹಾಸತಿ' ಸಂಪ್ರದಾಯ, ಸಹಗಮನ ಪದ್ಧತಿಯೂ ರೂಢಿಯಲ್ಲಿತ್ತು.

**ಹೆಣ್ಣು ಮಹಾಭಾರತದಲ್ಲಿ ಜೂಜಾಟದ ವಸ್ತುವಾಗಲು ಕಾರಣ – ರಾಜಕ್ರೀಡೆ– ಪಗಡೆ ಆಟ.**

ಪಗಡೆ ಆಟ ಕೇವಲ ಒಂದು ಆಟವಾಗಿರದೆ ಪಣ ಒಡ್ಡಿ ಆಡುವ ಜೂಜಿನ ಮಾಧ್ಯಮವೂ ಆಗಿತ್ತು.

'ದ್ಯೂತ'ದ ದುಷ್ಪರಿಣಾಮವನ್ನು ಪದರ ಪದರವಾಗಿ ಬಿಚ್ಚಿಕೊಳ್ಳುತ್ತ ಹೋಗುವುದೇ ಮಹಾಭಾರತ ಮಹಾಕಾವ್ಯದ ಕೇಂದ್ರಬಿಂದುವಾದ ಕಥಾವಸ್ತು. ದ್ಯೂತಕ್ಕೇ 'ಮಹಾಭಾರತ' ಒಂದು ಮಹಾಉಪಮೆ–'ಕಾವ್ಯಪ್ರತಿಮೆ'ಯಾಗಿದೆ.

ಮಹಿಳೆಯನ್ನು ಮಹಾಭಾರತ ಕಾಲದಲ್ಲಿ ರಾಜರು – ಋಷಿಗಳು ತಮಗೆ ಬೇಕಾದಂತೆ ಬಳಸಿಕೊಳ್ಳುವ ಹೀನ ಪದ್ಧತಿ ಅಮಲಿನಲ್ಲಿದ್ದದ್ದು ಮಹಾಭಾರತದಿಂದಲೇ ತಿಳಿದುಬರುತ್ತದೆ.

ಮದುವೆ ಮಾಡಿಕೊಟ್ಟಂತಹ ಹೆಣ್ಣುಮಗಳಿಗೂ ಅತ್ತೆ ಅಥವಾ ಆಕೆಯ ಗಂಡನ ಮನೆಯಲ್ಲಿ ಸಾಕಷ್ಟು ಸುರಕ್ಷತೆ ಇರುತ್ತಿರಲಿಲ್ಲ. ಆ ಗಂಡ ಏನಾದರೂ ಜೂಜುಕೋರನಾಗಿದ್ದರೆ, ಜೂಜಿನಲ್ಲಿ ಎಲ್ಲವನ್ನೂ ಕಳೆದುಕೊಂಡ ನಂತರ ಆ ಪಾಪಿ ಕಡೆಗೆ ತನ್ನ ಹೆಂಡತಿಯನ್ನೇ ಪಣಕ್ಕೆ ಒಡ್ಡುತ್ತಿದ್ದ ಅಥವಾ ಸೋತ ಜೂಜುಕೋರನ ಹೆಂಡತಿ ಗೆದ್ದ ಜೂಜುಕೋರನ ವಶವಾಗುತ್ತಿದ್ದಳು. ಗಂಡ ಬೀದಿ ಪಾಲಾಗುತ್ತಿದ್ದ. ಅಥವಾ ಗೆದ್ದವನ ಜೀತದಾಳಾಗಿ ಸಾಯುವವರೆಗೂ ದುಡಿಯುತ್ತಿದ್ದಳು.

ಅರಮನೆ–ಗುರುಮನೆಗಳಲ್ಲಿ ದಾಸಿಯಾಗಿ ಪರಿಚಾರಿಕೆ ಮಾಡಿಕೊಂಡಿರುವ ಹೆಣ್ಣುಮಗಳನ್ನು ಅತ್ಯಂತ ಹೀನವಾಗಿ, ನಿರ್ದಯವಾಗಿ ಲೈಂಗಿಕ ಶೋಷಣೆಗೆ ಒಳಪಡಿಸಲಾಗುತ್ತಿತ್ತು. ಹದಿಹರೆಯದ ಹೆಣ್ಣು ಮಕ್ಕಳನ್ನು ಅಂತಃಪುರಗಳಲ್ಲಿ ಪಡಖಾನೆಗಳಲ್ಲಿ ಅತ್ಯಂತ ಅನಾಗರಿಕವಾಗಿ ಅಮಾನವೀಯವಾಗಿ ನಡೆಸಿಕೊಳ್ಳಲಾಗುತ್ತಿತ್ತು.

ಉದಾಹರಣೆಗೆ : ತುಂಬು ಸಭೆಯಲ್ಲಿ ದುರ್ಯೋಧನನು ದ್ರೌಪದಿಯನ್ನು ನಡೆಸಿಕೊಂಡ ರೀತಿ.

ಇದಕ್ಕೆ ಅಂದಿನ ರಾಜಶಾಸನದ ಬಲವೂ ಇತ್ತು. ಇದನ್ನು ತಿಳಿದೇ ಭೀಷ್ಮ ದ್ರೋಣಾದಿ ಹಿರಿಯರೆಲ್ಲಾ ಆ ಸಮಯದಲ್ಲಿ ಮೌನವಹಿಸಿದ್ದರು. ರಾಜಕ್ರೀಡೆಯ ನಿಯಮವನ್ನು ತಿಳಿದಿದ್ದ ಇವರು ಸೋತ ಧರ್ಮರಾಯನಿಗೆ ದ್ರೌಪದಿಯನ್ನು ಪಣ ಒಡ್ಡುವ ಅಧಿಕಾರವಿರಲಿಲ್ಲ. ಸೋತವನ ಪತ್ನಿ ಗೆದ್ದವರ ಪಾಲಾಗುತ್ತಿದ್ದಳು. ಇದು ಯುಧಿಷ್ಠಿರನಿಗೇನೂ ತಿಳಿಯದ ವಿಚಾರವಾಗಿರಲಿಲ್ಲ. ಕೊನೆಯ ಸುತ್ತಿನಲ್ಲಾದರೂ ಗೆಲ್ಲಬಹುದೆಂಬ ವಿಶ್ವಾಸದಿಂದ ವಿಜಯವನ್ನು ಎದುರು ನೋಡುತ್ತಿದ್ದನಷ್ಟೆ. ಸಾಯುವವನು ಹುಲ್ಲುಕಡ್ಡಿಯನ್ನು ಆಸರೆಯಾಗಿ ಹಿಡಿಯುವಂತೆ ಯುಧಿಷ್ಠಿರನು ದ್ರೌಪದಿಯನ್ನು ಪಣಕ್ಕೆ ಒಡ್ಡಿದ. **ಸತ್ಯವು ಐತಿಹಾಸಿಕ ಒರೆಗಲ್ಲು.** "ತಾರ್ಕಿಕ ಹಾಗೂ ವಿವೇಚನಾ ವಿಧಿಯ ಅನುಸರಣೆ. ಸತ್ಯಾನ್ವೇಷಣೆ, ಮಾನವ ಜೀವನಕ್ಕೆ ಅತ್ಯಾವಶ್ಯಕವಾಗಿ ಬೇಕಾಗುವ ಅತ್ಯಮೂಲ್ಯ ಬೌದ್ಧಿಕ ನಿಧಿಯನ್ನು ಒದಗಿಸಿ ಕೊಡುವುದು ಅತ್ಯಂತ ಸಮರ್ಪಕವಾದ ಮಾರ್ಗದರ್ಶನವನ್ನು ನೀಡುವುದು. ಒಂದು ನಿರ್ದಿಷ್ಟಯುಗದಲ್ಲಿದ್ದ ವ್ಯವಸ್ಥಿತ ಸಮೂಹಗಳು ನಡೆಸಿದ ಕಾರ್ಯಕಲಾಪಗಳನ್ನು ಹಾಗೂ ಒಂದು ನಿಶ್ಚಿತ ಕಾಲಾವಧಿಯಲ್ಲಿ ಆ ಸಮೂಹದಲ್ಲಿ ಏನು ಸಂಭವಿಸಿತು ಅವುಗಳಿಗೆ ಏನಾಯಿತು ಎಂಬುದನ್ನು ವಿವರಿಸಿ, ವಿಶ್ಲೇಷಿಸಿ ಸ್ಪಷ್ಟವಾಗಿ ವಿವರಿಸುವುದು, ಎಷ್ಟರ ಮಟ್ಟಿಗೆ ವ್ಯಕ್ತಿಗಳು ಚಿಂತನೆಗಳು, ಕಾರ್ಯಗಳು ಸಮೂಹಗಳ ಮೇಲೆ ಪ್ರಭಾವವನ್ನು ಬೀರಿದವು ಎಂಬುದನ್ನು ವಿಶದೀಕರಿಸಬೇಕಾಗಿದೆ."[3] ಇದೇ ಬೌದ್ಧಿಕ ಚಿಂತನೆಗಳ ಪ್ರಧಾನ ಗು–ರಿಯಾಗಿದೆ.

### ಹೆಣ್ಣಿನ ಲೈಂಗಿಕ ಶೋಷಣೆ ಅಂದು – ಇಂದು :

ಹೆಣ್ಣಿನ ಲೈಂಗಿಕ ಶೋಷಣೆ ಇಂದಿಗಷ್ಟೇ ಸೀಮಿತವಾಗಿಲ್ಲ. ಇದರ ಪರಂಪರೆಗೂ ಒಂದು ಇತಿಹಾಸವಿದೆ. ಇದು ಮಹಾಭಾರತದ ಕಾಲಕ್ಕೂ ಹಿಂದಿನ ಪೂರ್ವಾಚಾರ. ಅಂದು ಋಷಿಗಳು ಹೆಣ್ಣಿಗೆ ಕೊಟ್ಟ ಸ್ತ್ರೀಸ್ವಾತಂತ್ರ್ಯವೇ ಇಂದಿನ ವೇಶ್ಯಾವೃತ್ತಿಯಲ್ಲಿ ಪರ್ಯವಸನಗೊಂಡು ಹೆಣ್ಣಿನ ಲೈಂಗಿಕ ಶೋಷಣೆ ಆಧುನಿಕ ಸಮಾಜದಲ್ಲೂ ನಾನಾ ರೂಪದಲ್ಲಿ ಜೀವಂತವಾಗಿದೆ. ಅಂದಿನ ಕಾಲದ ಸಮಾಜದ ಶಿಷ್ಟಾಚಾರವೇ ಸ್ತ್ರೀ ಲೈಂಗಿಕ ಶೋಷಣೆಗೂ ಸ್ವಾತಂತ್ರ್ಯ ಕೊಟ್ಟಿತ್ತು. ಅಂದಿನ ಪೂರ್ವಾಚಾರವೆಂದರೆ ಆಧಾರವಿಲ್ಲದೆ ಮಾಡಿದ ಅಂಧಾನುಕರಣೆಯಾಗಿರದೆ, ಧರ್ಮಸೂಕ್ಷ್ಮವನ್ನು ಬಲ್ಲವರು ಕಾನೂನು – ಕಟ್ಟಳೆಗಳನ್ನು ನಿಯಮಿಸುತ್ತಿದ್ದ ಧರ್ಮಸೂಕ್ಷ್ಮಬಲ್ಲಂತಹ ಋಷಿಗಳಿಂದಲೇ ಸೂಚಿತವಾದ ಮಾರ್ಗವಾಗಿತ್ತು. ಇದೇ ಅಂದಿನ ಶಿಷ್ಟಾಚಾರವೂ ಆಗಿತ್ತು. ಈ ಶಿಷ್ಟಾಚಾರದಿಂದಾಗಿ ಹಿಂದಿನ ಕಾಲದ ಸ್ತ್ರೀಯರಿಗೆ ಸಂಸಾರ ಬಂಧನವಿರಲಿಲ್ಲ. ಪತಿಯ ಆಜ್ಞೆಯಂತೆ ನಡಿಯಬೇಕೆಂಬ ನಿಯಮವೂ ಇರಲಿಲ್ಲ. "ಸ್ತ್ರೀ ತನ್ನಿಚ್ಛೆಯಂತೆ ತನಗೆ ಇಷ್ಟ ಬಂದಲ್ಲಿಗೆ, ತನಗೆ ಬೇಕೆನಿಸಿದವರ ಬಳಿ ಹೋಗಿ ಸ್ವೇಚ್ಛೆಯಿಂದಿರಲು ಅವಕಾಶವಿತ್ತು. ಅಂದಿನ ಹೆಣ್ಣಿನ ರೀತಿ ರಿವಾಜುಗಳನ್ನು 'ಪಾಪ'ವೆಂದು ಸಮಾಜ ಪರಿಗಣಿಸುತ್ತಿರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಈ ಸ್ತ್ರೀ ಸ್ವಾತಂತ್ರ್ಯ ಅಂದಿನ **ಧಾರ್ಮಿಕ ನಿಯಮವಾಗಿತ್ತು.** ಶಾಸನಗಳನ್ನು ಮಾರ್ಪಾಡು ಮಾಡುವಂತಿರಲಿಲ್ಲ. ಸ್ತ್ರೀಸ್ವಾತಂತ್ರ್ಯಕ್ಕೆ ಧರ್ಮಜ್ಞರಾದ ಮಹರ್ಷಿಗಳೂ ಪುರಸ್ಕಾರವಿತ್ತಿದ್ದರು."[4] ಈ

ಸ್ತ್ರೀ ಪರಂಪರೆಯೇ ಆಧುನಿಕ ಕಾಲಕ್ಕೂ ನಡಕೊಂಡು ಬಂದಿದ್ದರೂ ಅಷ್ಟರಮಟ್ಟಿಗಿನ ಲೈಂಗಿಕ ಸ್ವಾತಂತ್ರ್ಯ ಇಂದಿನವರೆಗೂ ಇರಲಿಲ್ಲವಾದರೆ ಇತ್ತೀಚಿನ ಉಚ್ಚನ್ಯಾಯಾಲಯದ ತೀರ್ಪಿನಂತೆ (ಸುಪ್ರೀಂ ಕೋರ್ಟ್‌ನ ವಿವರಣೆ, ಸೆಪ್ಟೆಂಬರ್ ೨೦೧೮) ಅದೇ ದಿನಗಳು ಮರುಕಳಿಸುವಂತಿದೆ. ಚರಿತ್ರೆಯ ಪುನರಾವರ್ತನೆ (History Repeats) ಯಂತೆ ಅಂದಿನ ಹಲವು ದುಷ್ಟ, ನೀಚ, ಕ್ರೂರ, ಅನೈತಿಕ ಪದ್ಧತಿಗಳು ಇಂದಿನ ಆಧುನಿಕ ಸ್ತ್ರೀಯರ ಲೈಂಗಿಕ ಶೋಷಣೆಗೆ ಹೊಸ ಮುಖವಾಡ ಧರಿಸಿ ಆಚರಣೆಗೆ ಬರುತ್ತಿರುವುದು ದುರದೃಷ್ಟಕರ ಸಂಗತಿಯಾಗಿದೆ.

ಮಹಾಭಾರತ ಮತ್ತು ಅದಕ್ಕೂ ಹಿಂದಿನ ಕಾಲದಲ್ಲಿ ಸ್ತ್ರೀಸ್ವಾತಂತ್ರ್ಯಕ್ಕೆ ಧರ್ಮಜ್ಞರಾದ ಮಹರ್ಷಿಗಳು ಪುರಸ್ಕರಿಸಿದರು. "ಉತ್ತರ ಕುರುಗಳಲ್ಲಿಯೂ ಈ ಸಂಪ್ರದಾಯ ಪುರಸ್ಕೃತವಾಗಿತ್ತು. ಸ್ತ್ರೀಯರಿಗೆ ಸಾತಂತ್ರ್ಯವನ್ನಿತ್ತು ಅನುಗ್ರಹಿಸಿರುವ ಈ ಆಚರಣೆಯೇ **ಸನಾತನ ಧರ್ಮ**ವೆಂದೂ ಪರಿಗಣಿತವಾಗಿತ್ತು."[೩]

ಇದರ ಪರಿಣಾಮವೇನಾಯಿತು? ಎನ್ನುವ ಪ್ರಶ್ನೆ ನಮ್ಮಲ್ಲಿ ಉದ್ಭವಿಸುವುದು ಸಹಜ. ಇದಕ್ಕೆ ಉತ್ತರವನ್ನು ಹುಡುಕುತ್ತಾ ಅಧ್ಯಯನದಲ್ಲಿ ಮುಂದುವರೆದಾಗ;

ಉದ್ದಾಲಕನೆಂಬ ಮಹರ್ಷಿಯ ಮಗ ಶ್ವೇತಕೇತು ಎಂಬುವವನಿದ್ದ. ಉದ್ದಾಲಕನ ಪತ್ನಿಯನ್ನೇ ಬ್ರಾಹ್ಮಣನೊಬ್ಬನು ಮನೆಯೊಳಗೆ ನುಗ್ಗಿ ಬಂದು ಇದ್ದಕ್ಕಿದ್ದಂತೆ ಎಲ್ಲರೆದುರಿಗೇ ಅವಳ ಕೈಹಿಡಿದೆಳೆದು ಬಲಾತ್ಕಾರದಿಂದ ಹೊರಗೆಳೆದುಕೊಂಡು ಹೋಗಿಬಿಟ್ಟನು. ತನ್ನ ತಾಯಿಗೆ ಒದಗಿದ ಈ ದುಃಸ್ಥಿತಿಯನ್ನು ಕಣ್ಣಾರೆ ಕಂಡ ಶ್ವೇತಕೇತುವು ಬಹಳ ಕುಪಿತನಾದ. ಮಗ ಕೋಪಗೊಂಡಿದ್ದನ್ನು ಕಂಡು ತಂದೆ ಮಗನನ್ನು ಸಮಾಧಾನಪಡಿಸುತ್ತಾ;

**"॥ ಮಾ ತಾ ತ ಕೋಪಂ ಕಾರ್ಷೀ ಸ್ತ್ವಮೇಷ ಧರ್ಮಃ ಸನಾತನಃ ।**
**ಅನಾವೃತಾ ಹಿ ಸರ್ವೇಷಾಂ ವರ್ಣಾನಾಂಙ್ಗನಾ ಭುವಿ ॥**
**ಯಥಾ ಗಾವ ಸ್ಥಿತಾಸ್ತಾತ ಸ್ವೇಸ್ವೇವರ್ಣೇ ತಥಾ ಪ್ರಜಾಃ ॥"**

–ಇದರರ್ಥ – 'ಕೋಪವೇಕೇ? ಶ್ವೇತಕೇತೂ! ಇದು ಸನಾತನ ಧರ್ಮ. ಶಿಷ್ಟಾಚಾರವೇ ಹೀಗಿರುವಾಗ ಕೋಪಿಸುವುದೇಕೇ? ಪ್ರಪಂಚದಲ್ಲಿ ಸ್ತ್ರೀಯರು ಯಾವ ನಿಬಂಧನೆಗೂ ಒಳಪಡುವುದಿಲ್ಲ. ಅವರು ಸರ್ವತಂತ್ರ ಸ್ವತಂತ್ರರು. ಪಶುಗಳು ಹೇಗೆ ವರ್ತಿಸುತ್ತಿವೆಯೆಂಬಂತೆ ಸಕಲ ವರ್ಣದವರೂ ವರ್ತಿಸುತ್ತಾರೆ. ಅದಕ್ಕಾಗಿ ಕೋಪಿಸಬೇಡ ಮಗು.' ಎಂದು ಹೇಳಿದನು. ಅಂದರೆ ಮನುಷ್ಯರಿಗೂ ಪ್ರಾಣಿವರ್ಗಕ್ಕೂ ವ್ಯತ್ಯಾಸವಿಲ್ಲವೆಂದು ಹೇಳಿದಂತಾಯಿತು.

ಶ್ವೇತಕೇತುವಿಗೆ ತಂದೆಯ ಮಾತು ಒಪ್ಪಿಗೆಯಾಗುವುದಿಲ್ಲ. ಆತ ಅತ್ಯಂತ ಪ್ರಾಚೀನವಾದ ಸ್ತ್ರೀಸ್ವಾತಂತ್ರ್ಯದ ಕೆಟ್ಟ ಸಂಪ್ರದಾಯಕ್ಕೆ ತಿದ್ದುಪಡಿ ಮಾಡುವ ಧೈರ್ಯವಹಿಸುತ್ತಾನೆ. ಕಾರಣ ಶ್ವೇತಕೇತುವೂ ಒಬ್ಬ ತಪೋನಿಷ್ಠ ಋಷಿಯಾಗಿರುತ್ತಾನೆ. ಶಾಸನವನ್ನು ಮಾರ್ಪಾಡು ಮಾಡುವ ಹಕ್ಕು ಇರುವುದರಿಂದ ಆತನು ಈ ರೀತಿಯಾಗಿ;

**"॥ ವ್ಯುಚ್ಚರವ್ತ್ಯಾಃ ಪತಿಂ ನಾರ್ಯಾ ಅದ್ಯ ಪ್ರಭೃತಿ ಪಾತಕಮ್ ॥**
**ಭ್ರೂಣ ಹತ್ಯಾಕೃತಂ ಪಾಪಂ ಭವಿಷ್ಯತ್ಯ ಸುಖಾವಹಮ್ ॥"**

–ಅಂದರೆ, ಸ್ತ್ರೀಯರು ಗಂಡನ ಆಜ್ಞೆಗೆ ಒಳಪಟ್ಟರದಿದ್ದರೆ ದುಃಖದಾಯಕವಾದ ಭ್ರೂಣಹತ್ಯಾ ಪಾಪವುಂಟಾಗುವುದು."[೬] ಎಂದು ನಿಯಮವನ್ನು ಮಾರ್ಪಾಡು ಮಾಡಿ ವಿವಾಹವಾದಂದಿನಿಂದ ಪತಿಯೇ ಸರ್ವಸ್ವವೆಂದು ಭಾವಿಸಬೇಕೆಂದು ಕಟ್ಟಳೆ ಮಾಡಿದನು. ಇದು ಸತಿ–ಪತಿಗಳ ಧರ್ಮವಾಗಿ ನಡೆದು ಬರುವಂತಾಯಿತು. ಸ್ತ್ರೀಗೆ ಸ್ವಾತಂತ್ರ್ಯ ಕೊಟ್ಟರೆ ಆಕೆಯ ಸ್ವೇಚ್ಛಾಚಾರ ಹೇಗೆ ಅನೈತಿಕತೆಗೆ ಕಾರಣವಾಗಿ ಹೇಗೆ ಸಮಾಜದ ಅಸ್ತವ್ಯಸ್ತಕ್ಕೆ ಕಾರಣವಾಗುತ್ತದೆಂದು ಸಿದ್ಧಾಂತ ಮಾಡಿ ತೋರಿಸಿದ್ದಾನೆ.

"ಇಂದು ಅಂತಹ ಋಷಿಪ್ರಣೀತವಾದ ಶಾಸನಗಳಿಗೆ ಸುಧಾರಣ ರೂಪವಾದ ಅನೇಕ ಮಾರ್ಪಾಡುಗಳಾಗಿವೆ."[೭]

## ವೇಶ್ಯೆಯರಿಂದ ಅಕ್ರಮ ಸಂತಾನ :

'ಮಹಾಭಾರತ'ದ 'ಆದಿಪರ್ವ'ದ 'ಪೌಲೋಮಪರ್ವ'ದ ೮ನೇ ಅಧ್ಯಾಯದಲ್ಲಿ ಒಂದು ಪ್ರಸಂಗ ಬರುತ್ತದೆ. ಹಿಂದಿನ ಕಾಲದಲ್ಲಿ 'ಸ್ಥೂಲಕೇಶ'ನೆಂಬ ಒಬ್ಬ ಋಷಿ ಇದ್ದನು. ಈತ ಎಲ್ಲ ಪ್ರಾಣಿಗಳಲ್ಲಿಯೂ ದಯಪರನಾಗಿದ್ದನು. ಒಂದು ದಿನ ಋಷಿ ಬ್ರಾಹ್ಮೀ ಮುಹೂರ್ತದಲ್ಲೇದ್ದು ತನ್ನ ಪ್ರಾತಃ ಕ್ರಿಯೆಗಳನ್ನೆಲ್ಲ ಮುಗಿಸಿ ಆಶ್ರಮದ ಪಕ್ಕದಲ್ಲಿಯೇ ಹರಿಯುತ್ತಿದ್ದ ನದಿಯಲ್ಲಿ ತನ್ನ ಪ್ರಾತಃ ಕ್ರಿಯೆಗಳನ್ನು ಮುಗಿಸಿ ಆಶ್ರಮಕ್ಕೆ ಹಿಂತಿರುಗಿ ಬರುವಾಗ ಸಮೀಪದ ಪೊದರಿನಿಂದ ಮಗು ಅಳುವ ಶಬ್ದ ಕೇಳಿಸಿ, ಋಷಿಯು ಅಳುವಿನ ಶಬ್ದ ಬರುತ್ತಿದ್ದ ಪೊದರಿಗೆ ಹೋಗಿ ನೋಡಿದ. ಅಲ್ಲೊಂದು ಮಗು ಅಳುತ್ತಿತ್ತು. ಋಷಿ ಅದನ್ನೆತ್ತಿಕೊಂಡು ಆಶ್ರಮದ ಕಡೆ ಹೊರಟ.

'ವಿಶ್ವಾವಸು' ಎಂಬ ಗಂಧರ್ವ ರಾಜ ಮೇನಕೆಯೆಂಬ ಅಪ್ಸರೆಯಲ್ಲಿ ಅನುರಕ್ತನಾಗಿ ಮೇನಕ ಗರ್ಭವತಿಯಾದಳು. ಒಂಭತ್ತು ತಿಂಗಳೂ ಆಯಿತು. ಪ್ರಸವವೂ ಆಯಿತು. ಮುದ್ದಾದ ಹೆಣ್ಣು ಮಗು. ಸ್ಥೂಲಕೇಶ ಋಷಿಗಳ ಆಶ್ರಮದ ಸಮೀಪದ ಪೊದರಿನಲ್ಲಿ ಮಗುವನ್ನು ಮಲಗಿಸಿ ಹೊರಟು ಹೋದಳು. ನಿರ್ಲಜ್ಜಳಾದ ಅವಳಿಗೆ ಯಾವ ಯೋಚನೆಯೂ ಇರಲಿಲ್ಲ. ಕಾರಣ ಅವಳೊಬ್ಬ ದೇವವೇಶ್ಯೆಯಾಗಿದ್ದಳು. ಅದೇ ಅವಳ ಧರ್ಮವೂ ಆಗಿತ್ತು.

ಸ್ಥೂಲಕೇಶ ಋಷಿಗಳು ಸಾಕಿದ ಆ ಮಗುವೇ ಪ್ರಮದ್ವರಾ!

## ಇಂದಿನ ಆಧುನಿಕ ಸಮಾಜದಲ್ಲಿ :

'ಮಹಾಭಾರತ' ಕಾಲಕ್ಕೂ ಹೀಂದೆ ಅಥವಾ ಮಹಾಭಾರತ ಕಾಲದಲ್ಲಿ ಸ್ತ್ರೀಗೆ ಕೊಟ್ಟ ಲೈಂಗಿಕ ಸ್ವಾತಂತ್ರ್ಯವನ್ನು ಮಾರ್ಪಾಟು ಮಾಡಿ ಮೊಟಕು ಮಾಡಿದ್ದರೂ ಈ ಸ್ವೇಚ್ಛಾಚಾರ ಮನೋವೃತ್ತಿ ಇಂದಿಗೂ ಮತ್ತೊಂದು ರೂಪ ಧರಿಸಿ ಆಚರಣೆಯಲ್ಲಿದೆ. ಕರ್ನಾಟಕ ರಾಜ್ಯದಲ್ಲಿ ಲೈಂಗಿಕ ವೃತ್ತಿಯಲ್ಲಿಯೇ ತೊಡಗಿರುವ ಶೇ ೩೩% ಕ್ಕೂ ಹೆಚ್ಚು ಸ್ತ್ರೀಯರು ಈ ವೃತ್ತಿಯಲ್ಲಿ ತೊಡಗಿರುವುದು ವರದಿಯಾಗಿದೆ. ಇವರು ರೂ.೧೦೦೦/– ದಿಂದ ರೂ. ೫,೦೦೦/– ವರೆಗೆ ಬಿಕರಿಯಾಗುತ್ತಾರೆ. ಲೈಂಗಿಕ ವೃತ್ತಿಯಲ್ಲಿ ತೊಡಗಿ, ಮಾರಾಟವಾಗುವ ಈ ಪ್ರವೃತ್ತಿ ಮನುಷ್ಯನ ಘನತೆಯ ಅಧಃಪತನದ ದ್ಯೋತಕ. ಪ್ರಜ್ಞಾವಂತ ಸಮಾಜ ತಲೆ ತಗ್ಗಿಸುವ ಸಂಗತಿ. ವೈವಾಹಿಕ ಜೀವನದ ಬಿರುಕಿನಿಂದ ವಿಚ್ಛೇದನ ಪಡೆದು ಮಹಿಳೆಯರು **ಸೆಕ್ಸ್‌ರ್ಯಾಕೆಟ್**ಗೆ ಬಲಿಯಾಗುತ್ತಾರೆ. ರಾಷ್ಟ್ರೀಯ ಮಕ್ಕಳ ಹಕ್ಕುಗಳ ರಕ್ಷಣೆ ಆಯೋಗದ ಪ್ರಕಾರ ದೇಶದಲ್ಲಿ ೩೦ ಲಕ್ಷ ಲೈಂಗಿಕ ವೃತ್ತಿಯಲ್ಲಿ ನಿರತರಾಗಿದ್ದಾರೆಂದು ತಿಳಿದು ಬಂದಿದೆ.

ಮಹಾಭಾರತ ಕಾಲದಲ್ಲಿ ದೇವ ವೇಶ್ಯೆಯರೆಂದು **ಅಪ್ಸರೆಯ** ರೂಪದಲ್ಲಿದ್ದವರು ಇಂದು ಮಾನ್ಯರೂಪದ ವೇಶ್ಯೆಯರಾಗಿ ದ್ದಾರೆ. ಈ **ಕೆಂಪುದೀಪ** ದಂಧೆಯಲ್ಲಿ ಸಿಕ್ಕಿಹಾಕಿಕೊಂಡು ನರಳುತ್ತಿರುವ ಹೆಣ್ಣುಮಕ್ಕಳಂತೂ ಅತ್ಯಂತ ದಾರುಣವಾದ ಸ್ಥಿತಿಯಲ್ಲಿ ಜೀವಿಸುತ್ತಿದ್ದಾರೆ. ದೇಶವ್ಯಾಪಿಯಾಗಿರುವ ಈ ಜಾಲ ಜಾಗತಿಕ ಮಟ್ಟದಲ್ಲೂ ಹಬ್ಬಿದೆ. ವಿವಾಹ ಬಂಧನಕ್ಕೆ ಒಳಗಾದ ಹೆಣ್ಣುಮಕ್ಕಳು ಲೈಂಗಿಕ ದಂಧೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತೊಡಗಿದ್ದಾರೆ. ಗಂಡನಿದ್ದರೂ ಈ ವೃತ್ತಿಯಲ್ಲಿ ತೊಡಗಿಕೊಂಡವರೂ ಇದ್ದಾರೆ. ಲೈಂಗಿಕ ತೃಷೆ ತೀರಿಸಿಕೊಳ್ಳಲು ಬಳಕೆಯಾಗುವುದೇ **ಅನೈತಿಕ ಸಂಬಂಧ**. ಕೆಳಜಾತಿಯ ಹೆಣ್ಣುಮಕ್ಕಳನ್ನು ದೇವರಿಗೆ ಅರ್ಪಿಸುವ **'ದೇವದಾಸಿ ಪದ್ಧತಿ'** ಬಹಳ ಹಿಂದಿನಿಂದಲೂ ಸಂಪ್ರದಾಯದ ಹೆಸರಿನ ಪದ್ಧತಿಯಲ್ಲಿ ಜಾರಿಯಲ್ಲಿದೆ."[೮] ಈ ವಸ್ತುಸ್ಥಿತಿ ಭಾರತೀಯ ವಿವಾಹ ವ್ಯವಸ್ಥೆಯ ವಿಪರ್ಯಾಸಕ್ಕೆ ಹಿಡಿದ ಕೈಗನ್ನಡಿ.

~~~***~~~

## ಅಡಿಟಿಪ್ಪಣಿಗಳು

೧. ಡಾ॥ ಎ.ವಿ.ವೆಂಕಟರತ್ನಂ, ಇತಿಹಾಸ ಸಂಶೋಧನಾ ಮಾರ್ಗ, ಪು. ೧೦೧.

೨.ಪ್ರೊ॥ ಕೆ.ಎಸ್. ನಾಚಾರ್ಯ, ಶ್ರೀವ್ಯಾಸ ಸೂಕ್ತಿ ಸುಧಾ (೧೯೮೪), ಪು. ೪೫.

೩. ಡಾ॥ ಎಂ.ವಿ. ವೆಂಕಟರತ್ನಂ, ಇತಿಹಾಸ ಸಂಶೋಧನಾ ಮಾರ್ಗ, ಪು. ೧೧೩.
~~~

೪. ಶ್ರೀಮನ್ಮಹಾಭಾರತ, ಭಾಗ – ೨, ಪು. ೭೯೮.

೫. –– ಅದೇ ––, ಪು. ೭೯೯.

೬. –– ಅದೇ ––, ಅಧ್ಯಾಯ – ೧೨೨, ಶ್ಲೋಕ – ೧೭.

೭. –– ಅದೇ ––, ಪು. ೮೦೦.

೮. ರಾಜೇಶ್ ರೈ ಚಟ್ಲ, ಲೇಖನ, ಪ್ರಜಾವಾಣಿ ದಿನಾಂಕ : ೧೬–೦೭–೨೦೧೮.

~~~***~~~

## ಮಹಾಭಾರತ ಕಾಲದಲ್ಲಿ ಋಷಿಗಳ ಪಾತ್ರ :

### ವೇದವ್ಯಾಸರಿಗೆ ಪುತ್ರಪ್ರಾಪ್ತಿ :

ಪರಾಶರ ಋಷಿಗಳ ಮಗ– ಕೃಷ್ಣದ್ವೈಪಾಯನ. ಈತನೇ ವೇದವ್ಯಾಸ ಋಷಿ. ಈತನಿಗೆ ಪುತ್ರನನ್ನು ಪಡೆಯುವ ಅಪೇಕ್ಷೆ ಉಂಟಾಯಿತು. ತಪೋಧನನಾದ ವೇದವ್ಯಾಸ ಕೂಡಾ ಸ್ತ್ರೀಗರ್ಭದಿಂದಲೇ ಪುತ್ರನನ್ನು ಪಡೆಯುತ್ತಾನೆ. ಮೇರು ಪರ್ವತದಲ್ಲಿ ಈತ ತಪಸ್ಸು ಮಾಡುತ್ತಿದ್ದ. ಒಂದು ದಿನ ಆಶ್ರಮದಲ್ಲಿ ಅಗ್ನಿಯನ್ನು ಪಡೆಯುವ ಸಲುವಾಗಿ ಅಗ್ನಿಮಂಥನ ದಂಡಗಳನ್ನು ಹಿಡಿದು ಕಡೆಯತೊಡಗಿದ. ಅದೇ ಸಮಯಕ್ಕೆ ಅಲ್ಲಿಗೆ **ಘೃತಾಚಿ ಎಂಬ ಅಪ್ಸರೆ** ಬಂದಳು. ವೇದವ್ಯಾಸ ಆಕೆಯನ್ನು ನೋಡಿದ. ಅನುಪಮ ಸೌಂದರ್ಯಕ್ಕೆ ಆಕರ್ಷಿತನಾದನು. ಒಡನೆಯೇ **ಕಾಮಾಭಿಭೂತನಾಗಿ** ಹೋಗುತ್ತಾನೆ.

**"॥ ಗನ್ಧರ್ವಾಪ್ಸರ ಸೋ ವಾ ಏತಮುನ್ಮಾದಯಂತಿ ॥"**

–ಎಂಬ ಶ್ರುತಿ ವಚನದಂತೆ "ಅಪ್ಸರೆಯರ ದರ್ಶನ ಮಾತ್ರದಿಂದಲೇ ಪುರುಷರನ್ನು ಉನ್ಮತ್ತರನ್ನಾಗಿ ಮಾಡುಷ್ಟು ಚೆಲುವೆಯರಾಗಿರುತ್ತಾರೆ."[೩] ವ್ಯಾಸರು ಕಾಮದಿಂದ ವ್ಯಾಕುಲಗೊಂಡಿರುವುದನ್ನು ತಿಳಿದ ಅಪ್ಸರೆ– ಘೃತಾಚಿ ಋಷಿಗಳ ಸಮೀಪಕ್ಕೆ ಬರುತ್ತಾಳೆ. ಆದರೆ ಆಕೆ ಬರುವುದು ಮಾನವ ರೂಪದಲ್ಲಲ್ಲ. 'ಗಿಣಿ' ರೂಪದಲ್ಲಿ ಎಂದು ಹೇಳಲಾಗಿದೆ.

ಇದರ ಉದ್ದೇಶ ಇಷ್ಟೇ. ಇದು ಪುರಾಣಿಕರ ಕೈಚಳಕ. ಕಾರಣ, 'ದ್ವಿಜ ಶ್ರೇಷ್ಠರಾದ ಬ್ರಹ್ಮಋಷಿಗಳಾದ ವ್ಯಾಸರ ಪಾವಿತ್ರ್ಯಕ್ಕೆ ಧಕ್ಕೆ ಬಾರದಿರಲಿ.' ಎಂದು.

ವ್ಯಾಸರು ಕಡೆಯುವ ಅರಣಿಗಳ ಮಧ್ಯದಿಂದ ಅಗ್ನಿಗೆ ಬದಲಾಗಿ 'ಶುಕ'ವೊಂದು ಜನ್ಮತಾಳಿತು ಎಂದು ಹೇಳಿದೆ.

"ಶುಕನ ಹುಟ್ಟನ್ನು ವ್ಯಾಸರು ಹೇಗೆ ಪಡೆದರು?"[೪] ಎಂದು ಯುಧಿಷ್ಠಿರ ಭೀಷ್ಮನನ್ನು ಪ್ರಶ್ನಿಸುತ್ತಾನೆ.

**"॥ ಕ ಸ್ಯಾಂ ಚೋತ್ಪಾದಯಾಮಾಸ ಶುಕಂ ವ್ಯಾಸಸ್ತಪೋ ಧನಃ ।**
**ಸಹಸ್ಯ ಜನನೀಂ ವಿದ್ಮ ಜನ್ಮ ಚಾಗ್ರ್ಯಂ ಮಹಾತ್ಮನಃ ॥"**

**–(ಶಾಂತಿಪರ್ವ, ಅಧ್ಯಾಯ–೩೨೨–೨)**

–ಇದಕ್ಕೆ ಭೀಷ್ಮನ ಉತ್ತರ; ತಪೋಧನರಾದ ವ್ಯಾಸರು ಯಾವ ಸ್ತ್ರೀಯ ಗರ್ಭದಿಂದ ಶುಕನನ್ನು ಪಡೆದುಕೊಂಡರು? ಮಹಾತ್ಮನಾದ ಶುಕ್ರನ ತಾಯಿ ಯಾರೆಂಬುದನ್ನು ಆಗಲೀ, ಆತನ ಶ್ರೇಷ್ಠವಾದ ಜನ್ಮ ವೃತ್ತಾಂತವನ್ನಾಗಲೀ ನಾವು ತಿಳಿಯೆವು ಎಂದು ಹೇಳಿ ಭೀಷ್ಮ ಜಾರಿಕೊಳ್ಳುತ್ತಾನೆ.
~~~

ವ್ಯಾಸರಿಗೆ ಘೃತಾಚಿ ಎಂಬ ಅಪ್ಸರೆಯ ಗರ್ಭದಲ್ಲಿಯೇ ಪುತ್ರಸಂತಾನವಾಗಿದೆ. ಇದು ಲೌಕಿಕವಾದ ವೈಜ್ಞಾನಿಕ ರೀತಿ. ಆದರೆ ಪ್ರಸಂಗವನ್ನು ಪುರಾಣಿಕರು ಅಲೌಕಿಕವಾಗಿ ಪರಿವರ್ತಿಸಲಿಕ್ಕಾಗಿ 'ಗಿಣಿ'ಯ ರೂಪ ಕೊಟ್ಟಿದ್ದಾರೆ. ಕಾಮದಿಂದ ವ್ಯಾಕುಲಗೊಂಡ ಮನಸ್ಸನ್ನು ಹೊಂದಿದ್ದ ವ್ಯಾಸರನ್ನು ನೋಡಿ ಘೃತಾಚಿ ಗಿಣಿಯ ರೂಪ ಧರಿಸಿ ಮಹರ್ಷಿಗಳ ಸಮೀಪ ಬರುತ್ತಾಳಂತೆ. ಅಂದರೆ ಈ ಸಮಾಗಮಕ್ಕೆ ತಾವೂ ಗಿಣಿಯ ರೂಪ ತಾಳಬೇಕಿತ್ತಲ್ಲವೇ? ಇಲ್ಲಿ ಅದನ್ನು ಹೇಳಿಲ್ಲ. ಆಕೆಯ ಸೌಂದರ್ಯಕ್ಕೆ ಆಕರ್ಷಿತರಾದ ವ್ಯಾಸರು ಕಾಮವೇಗವನ್ನು ತಡೆಯದಾದರು. ಅವರ ವೀರ್ಯವು ಅರಣಿಯಲ್ಲೇ ಬಿದ್ದು ಬಿಟ್ಟಿತು. ಅರಣಿಯ ಮಂಥನವನ್ನು ಮುಂದುವರೆಸಿದರು. ಅರಣಿಯಲ್ಲಿ ಅಗ್ನಿಗೆ ಬದಲಾಗಿ ಪುತ್ರ – ಶುಕ ಹುಟ್ಟಿದ, ಎಂದಿರುವುದು ಘೃತಾಚಿಯ ಶರೀರ ಸಂಪರ್ಕವನ್ನು ಪುರಾಣಿಕರು ಸಾಂಕೇತಿಕವಾಗಿ ಹೇಳಲು 'ಅರಣಿಯ ಮಂಥನವನ್ನು ಹೇಳಿದ್ದಾರೆ. **'ಶುಕ'** ಮಹಾಚೇತನವೇ ಇರಬಹುದು. ಆದರೆ ತಾಯಿಯ ಗರ್ಭ ಸಂಪರ್ಕವಿಲ್ಲದೆ **'ಶಿಶು'** ಜನನ ಅವೈಜ್ಞಾನಿಕ ರೀತಿಯಲ್ಲಿ ಹೇಗೆ ಸಾಧ್ಯ? ಕೌರವರು ಮಡಿಕೆಗಳಲ್ಲಿ **'ಕುಂಭ ಗರ್ಭ ಸಂಭವ'ರಾದಂತೆ** ಇಲ್ಲಿ ವ್ಯಾಸಪುತ್ರ 'ಶುಕ'ನನ್ನೂ **'ಅರಣೀ ಗರ್ಭ ಸಂಭವ'**ವನ್ನಾಗಿ ರೂಪಕ ಮಾಡಿರುವುದು ಪುರಾಣಿಕರೇ ಎನ್ನುವುದು ಸಿದ್ಧಾಂತ.

ಇಲ್ಲಿ ಮತ್ತೊಂದು ಪ್ರಶ್ನೆ ಉದ್ಭವಿಸುತ್ತದೆ. ಆ ಕಾಲದ ಋಷಿಗಳು, ಪರಾಶರ, ವೇದವ್ಯಾಸ, ದೂರ್ವಾಸ ಮುಂತಾದವರಿಗೆ **ತಪಸ್ಸೇ** ಎಲ್ಲದ್ದಕ್ಕೂ ಮೂಲಭೂತವಾದುದು. ಅಂದರೆ "ಇಂದ್ರಿಯಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳುವುದೇ 'ತಪಸ್ಸು' ಎಂದಿರುವಾಗ ಇಂದ್ರಿಯಗಳ ಸ್ವೇಚ್ಛಾ ಪ್ರವೃತ್ತಿಯಿಂದಲೇ **ಪಾಪಯುಕ್ತ**ರಾಗುವುದೆಂಬುದರಲ್ಲಿ ಸಂಶಯವಿಲ್ಲ."[೨] ಎಂದು ಮಹಾಭಾರತದಲ್ಲೇ ಹೇಳಿರುವುದರಿಂದ ಈ ಋಷಿಗಳಿಗೆ ಪಾಪಲೇಪದ ಭೀತಿ ಇಲ್ಲವೆಂದು ಹೇಳಬಹುದಾಗಿದೆ.

ಋಷಿಗಳ ವರ್ಗವನ್ನು ಋಗ್ವೇದದಲ್ಲಿ ಹೀಗೆ ಹೇಳಿದೆ;

**ಮಹರ್ಷಿ** : ಇವರು ಮೊದಲನೆಯ ದರ್ಜೆಯ ಋಷಿಗಳು. ಭೃಗು, ಮರೀಚಿ, ಅತ್ರಿ, ಆಂಗಿರಸ, ಪುಲಹ, ಕ್ರತು, ಮನು, ದಕ್ಷ, ವಸಿಷ್ಠ, ಪುಲಸ್ತ್ಯ – ಇವರು ಒಟ್ಟು ಹತ್ತು ಜನರು.

**ತಪಸ್ಸು ಮಾಡಿ ಋಷಿ ಪದವಿ ಪಡೆದವರು** : ಇವರು ಎರಡನೆಯ ದರ್ಜೆ ಋಷಿಗಳು. ಬೃಹಸ್ಪತಿ, ಕಶ್ಯಪ, ಚ್ಯವನ, ಅಗಸ್ತ್ಯ, ವಾಮದೇವ, ಶಕ್ತಿ, ವಾಲಖಿಲ್ಯ.

**ಋಷಿಕರು** : ಇವರು ಮೂರನೇ ದರ್ಜೆ ಋಷಿಗಳು. ಭಾರದ್ವಾಜ, ದೀರ್ಘತಮಾಹ, ಪರಾಶರ, ದಧೀಚಿ, ವೈಶ್ರವಣ. ಇವರು ಋಷಿಗಳ ಔರಸ ಪುತ್ರರು.

ಇವರಷ್ಟೇ ಅಲ್ಲದೆ ಅಂಗಿರಾಕುಲದ ೩೩ ಋಷಿಗಳು ಕಾಶ್ಯಪ ಕುಲದ ೬ ಋಷಿಗಳು, ಆತ್ರೇಯರ ೬ ಋಷಿಗಳು, ವಾಸಿಷ್ಠರ ೮ ಋಷಿಗಳು, ಕೌಶಿಕ (ವಿಶ್ವಾಮಿತ್ರ)ರ ೧೩ ಋಷಿಗಳೂ ಇದ್ದಾರೆ.

### ಪರಾಶರ :

ಋಗ್ವೇದ ಏಳನೆಯ ಮಂಡಲದ ೧೮ ನೇ ಸೂಕ್ತಕ್ಕೆ **ವಸಿಷ್ಠನು ಋಷಿಯು**. ಜೀರ್ಣವಾದುದೂ, ಶಿಥಿಲವಾದುದೂ ಆದ ಶರೀರವುಳ್ಳ ವಸಿಷ್ಠ ಋಷಿಯಿಂದ ಉತ್ಪನ್ನನಾದನು ಪರಾಶರ ಋಷಿ. ವಸಿಷ್ಠನಿಗೆ **ಶಕ್ತಿ** ಎಂಬ ಪುತ್ರನಿದ್ದನು. ಈತನ ಪುತ್ರನೇ **ಪರಾಶರನು**. ಎಂದರೆ ವಸಿಷ್ಠನಿಗೆ ಪರಾಶರ ಮೊಮ್ಮಗನಾಗಬೇಕು. ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯವೆಂದರೆ; **ಪರಾಶರ** ಎಂದು ಇಂದ್ರನಿಗೂ ಹೆಸರಿದೆ. ಇದಕ್ಕೆ ಕಾರಣ **"॥ ಪರಾಶಾತಯಿತಾ ಯಾ ತೂಂ ನಾಂ ॥"** ಅಂದರೆ ರಾಕ್ಷಸರನ್ನು ಸದೆಬಡಿದು ನಾಶಮಾಡುವವನಾದ್ದರಿಂದ ಇಂದ್ರನಿಗೆ **'ಪರಾಶರ'** ನೆಂದೂ ಹೆಸರಿದೆ. **'ಇಂದ್ರೋಯಾ ತೂ ನಾಮ ಭವತ್ವ ಪರಾಶರಃ'** ಎಂಬ ಶ್ರುತಿ ವಾಕ್ಯವು ಈ ಅರ್ಥವನ್ನು ಸಮರ್ಥಿಸುತ್ತದೆ."[೬] ಈ ಪರಾಶರರೇ ಕೃಷ್ಣದ್ವೈಪಾಯನ ಅಥವಾ ವೇದವ್ಯಾಸರ ತಂದೆ ಎನ್ನುವ ಅಭಿಪ್ರಾಯ ದೃಢಪಟ್ಟಿಲ್ಲ. ಕಾರಣ ಕಾಲಮಾನವೇ ಇರಬೇಕು.

### ಋಷಿಗಳು ಮತ್ತು ಆರ್ಯಧರ್ಮ :

ಋಷಿಗಳು ಹಿಂದೂ ಧರ್ಮದ ಮೂಲ ಪುರುಷರು. ಜೀವಪ್ರಾಯರು. ಭಾರತೀಯ ಸಂಸ್ಕೃತಿಯ ನಿರ್ಮಾಪಕರು. ಸ್ವತಃ ಧರ್ಮಮಾರ್ಗವನ್ನು ಅವಲಂಬಿಸಿದವರು. ಯಥಾರ್ಥವಾದಿಗಳು. ಸತ್ಯವ್ರತರು. ಬಹು

ಪುರಾತನ ಕಾಲದಿಂದ ಅವರಿಗೆ **ಪರಮಪೂಜ್ಯನೀಯವಾದ** ಸ್ಥಾನವನ್ನು ಕೊಟ್ಟಿದೆ. ರಾಜಾದಿರಾಜರು **ಅಗ್ರಪೂಜೆ** ಮಾಡಿ ಗೌರವಿಸುತ್ತಿದ್ದರು. ರಾಜರು ತಮ್ಮ ಕನ್ಯೆಯರನ್ನು ಋಷಿಗಳು ಸ್ವೀಕರಿಸಿದರೆ ತಮ್ಮ ವಂಶ ಪಾವನವಾಯಿತೆಂದು ಭಾವಿಸುತ್ತಿದ್ದರು.

ಜಾನಶ್ರುತಿಯು ತನ್ನ ಮಗಳನ್ನು **ರೈಕ್ವ ಋಷಿಗೆ** ಕೊಟ್ಟು ಮದುವೆ ಮಾಡಿದನು. ಇಂತಹ ಉದಾಹರಣೆಗಳು "**ಮಹಾಭಾರತ** ಮುಂತಾದ ಗ್ರಂಥಗಳಲ್ಲಿ ಹಲವಾರು ಬಂದಿವೆ. ಇವರಿಗೆ **ಅಗ್ರಪೂಜೆ** ಎಂಬುದು ಸಹಸ್ರಾರು ಸಂದರ್ಭಗಳಲ್ಲಿ ನಡೆದಿವೆ."[೯] ಇದಕ್ಕೆ ಕಾರಣವೆಂದರೆ **ವಿಷ್ಣುವಿನ ಶ್ವೇತವರಾಹ ಅವತಾರದಲ್ಲಿ ೨೮ ಜನ ವ್ಯಾಸರಿದ್ದರು.** ಬ್ರಹ್ಮನೇ ಮೊದಲನೆಯವನು. ವಸಿಷ್ಠ ಎರಡನೆಯವನು. ಶಕ್ತಿ ೨೫ನೆಯವನು, ಪರಾಶರ ೨೬ನೆಯವನು, ಜಾತುಕರ್ಣ ೨೭ ಹಾಗೂ **ಕೃಷ್ಣದ್ವೈಪಾಯನ ೨೮ನೆಯವನು** ಎಂದು ವೈವಸ್ವತ ಮನು ಹೇಳುತ್ತಾನೆ. '**ಮುನಿನಾಂ ಅಪಿ – ಅಹಂ ವ್ಯಾಸಃ**' – ಸಾರ್ವತ್ರಿಕವಾದಂತಹ, ಮಾನವನ ಮೂಲ ಪ್ರತಿ ಈತ. ದೈವಜ್ಞನಾದ ಸ್ವರೂಪ ಆದ್ದ–ರಿಂದಲೇ '**ಅಮರ**'. ವ್ಯಾಸನೇ ಸ್ಥಾಪಿಸಿದ ಶೈಕ್ಷಣಿಕ ಸಂಸ್ಥೆಗಳ ಮೂಲಕವೇ ಪೌರಾಣಿಕ ಸಾಹಿತ್ಯ ಅಭಿವೃದ್ಧಿಯಾಗಿದೆ."[೧೦] ಇಲ್ಲದಿದ್ದರೆ ವೇದಕಾಲದಿಂದ ಕ್ರಿ.ಶ. ೭೦೦ –೮೦೦ರ ವರೆಗೆ ಹಲವಾರು ಶತಮಾನಗಳಲ್ಲಿ ಬೆಳೆದು ಬಂದಿರುವ ಪುರಾಣಾದಿ ಸಾಹಿತ್ಯಗಳನ್ನೆಲ್ಲಾ ಒಬ್ಬನೇ ವ್ಯಾಸ ರಚಿಸಲು ಸಾಧ್ಯವೇ?

ದೇವತೆಗಳಿಂದ ನಿಯಮಿತವಾದ ಆಯುರ್ಮಾನ **ನೂರುವರ್ಷ**ಗಳನ್ನು ಮೀರಿ ಯಾರೂ ಜೀವಿಸಲಾರರೆಂದು ಹೇಳಿದೆ. ಇದು ವೇದ ಪ್ರಮಾಣ.

**"॥ ನ ದೇವಾನಾಮತಿ ವ್ರತಂಆತ್ಮಾ ಚನ ಜೀವತಿ ।**
**ತಥಾಯು ಜಾವಿ ವಾವೃತೇ ॥" –(ಋಗ್ವೇದ, ೧೦–೩೩–೯)**

ಬ್ರಹ್ಮಾದಿ ದೇವತೆಗಳ ನಿಯಮನ ರೂಪವಾದ ಕರ್ಮವನ್ನು ಉಲ್ಲಂಘಿಸಿ ನೂರು ವರ್ಷಗಳ ಕಾಲ ಯಾರೂ ಬದುಕಲಾರರು. ಹಾಗೆಯೇ ಒಡನಾಡಿಗಳಿಂದಲೂ ಬೇರೆಯಾಗಲೇಬೇಕು. ಇದು ಈಶ್ವರ ಸಂಕಲ್ಪ.

### ದ್ರೋಣ, ಕೃಪ–ಕೃಪಿಯರ ಜನನ :

ಭಾರದ್ವಾಜ ಋಷಿ ಉಗ್ರ ತಪಸ್ವಿ. ಈ ಋಷಿ ಮೂರನೇ ವರ್ಗದಲ್ಲಿ ಋಷಿಗಳ ವಿಭಾಗದಲ್ಲಿ ಬರುತ್ತಾನೆ. "ಒಂದು ದಿನ ಈ ಋಷಿ ಇತರ ಹಲವು ಋಷಿಗಳ ಜತೆ ಗಂಗೆಯಲ್ಲಿ ಸ್ನಾನ ಮಾಡಲು ಬರುತ್ತಾನೆ. ಅಲ್ಲಿ ಸ್ನಾನ ಮಾಡಿ ಬಟ್ಟೆ ಬದಲಾಯಿಸುತ್ತಿದ್ದ **ಘ್ರತಾಚಿ** ಎಂಬ **ಅಪ್ಸರೆ**ಯನ್ನು ನೋಡಿ ಅವಳಲ್ಲಿ ವ್ಯಾಮೋಹಿತನಾಗುತ್ತಾನೆ. ಮಹರ್ಷಿಯ ವೀರ್ಯ ಸ್ಖಲಿಸಿ ಅದನ್ನೊಂದು ದ್ರೋಣದಲ್ಲಿಡುತ್ತಾನೆ. ಅದರಲ್ಲಿ ಹುಟ್ಟಿದ ಮಗನಿಗೆ ಭಾರದ್ವಾಜ ಋಷಿ **ದ್ರೋಣ**ನೆಂಬ ಹೆಸರಿಡುತ್ತಾನೆ."[೭] ಈತನೇ ಕುರು–ಪಾಂಡವರ ಅಸ್ತ್ರವಿದ್ಯಾ ಗುರುವೂ ಆಗುತ್ತಾನೆಂದು ವ್ಯಾಸರೇ ಹೇಳಿದ್ದಾರೆ.

ಇಲ್ಲಿಯೂ ಅಪ್ಸರೆ ಘ್ರತಾಚಿ ಮತ್ತು ಭಾರದ್ವಾಜ ಋಷಿಗಳ ಸಮಾಗಮವನ್ನು ಮರೆಮಾಚಲಾಗಿದೆ. ಸ್ತ್ರೀಯ ಗರ್ಭಾಶ್ರಯವಿಲ್ಲದೆ ದೊನ್ನೆಯಲ್ಲಿ ಶಿಶು ಜನನ ಅವೈಜ್ಞಾನಿಕವಾದುದು. ಇದು ಅಸಾಧ್ಯ.

### ದ್ರೋಣ ಜನನಕ್ಕೆ ಹಿನ್ನೆಲೆ :

'ದೊನ್ನೆ'("ಪಾತ್ರೆ")ಯಲ್ಲಿ ಜನಿಸುವ ದ್ರೋಣ ಶಬ್ದ ಬಳಕೆಗೂ ವ್ಯಾಸರು ಋಗ್ವೇದದಿಂದಲೇ ಪ್ರೇರಣೆ, ಸ್ಫೂರ್ತಿಗಳನ್ನು ಪಡೆದಿದ್ದಾರೆ. (ಋ.ಸಂ. ೧೦–೧೦೧೦೭) ದ್ರೋಣ ಎಂದರೆ ದ್ರುಮಮಯ, ಮರದಿಂದ ನಿರ್ಮಿತವಾದ ಮರದ ತೊಟ್ಟಿ ಅಥವಾ ಬಾನೆ ಎಂಬ ಅರ್ಥಗಳನ್ನು ಕಾಣುತ್ತೇವೆ. ಇದರ ಉಲ್ಲೇಖವನ್ನು ನಾವು ಋಗ್ವೇದದಲ್ಲಿ ಕಾಣಬಹುದಾಗಿದೆ.

ರಾಜಮಾತೆ ಸತ್ಯವತಿಗೆ ವಂಶ ಬೆಳೆಸುವ – ಅರ್ಥ ಕಾಮಗಳ ಧರ್ಮಮಾರ್ಗವಾದ 'ನಿಯೋಗ' ಪದ್ಧತಿಯನ್ನು ಅನುಸರಿಸಿ ಸಂತಾನ ಪ್ರಾಪ್ತಿಗಾಗಿ ಮಗ ವ್ಯಾಸನನ್ನು ಕರೆಸುತ್ತಾಳೆ. ಅವನನ್ನು ಕುರಿತು;

"॥ ಮಾತಾಪಿತ್ರೋಃ ಪ್ರಜಾಯಂತೆ ಪುತ್ರಾಃ ಸಾಧಾರಣಾಃ ಕವೇ ।
ತೇಷಾಂ ಪಿತಾಯಥಾ ಸ್ವಾಮಿ ತಥಾ ಮಾತಾ ನ ಸಂಶಯಃ ॥"

ಮಗು! ತಾಯಿ – ತಂದೆಗಳಿಬ್ಬರ ಅಂಶಗಳಿಂದ ಪುತ್ರರು ಜನಿಸುವರು. ಆದುದರಿಂದ ಮಕ್ಕಳ ಮೇಲೆ ತಂದೆಗಿರುವ ಸ್ವಾಮ್ಯವೇ ತಾಯಿಗೂ ಇರುವುದೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ."೮ ಎಂದು ಹೇಳುತ್ತಾಳೆ.

ಮತ್ತೊಂದು ಪ್ರಕರಣದಲ್ಲಿ **ಗೌತಮ ಋಷಿಗೆ** ಶರದ್ವಂತನೆಂಬ ಮಗನಿದ್ದನು. ಶರದ್ವಂತನೆಂಬುದು ಅನ್ವರ್ಥನಾಮ. ಹುಟ್ಟುವಾಗ ಧನುರ್ಬಾಣ ಸಮೇತನಾಗಿ ಹುಟ್ಟಿದುದರಿಂದ ಶರದ್ವಂತ ಎಂದು ಹೆಸರಿಟ್ಟರು. ಈ ಶರದ್ವಂತನನ್ನೂ 'ಗೌತಮ'ನೆಂದೇ ಕರೆಯುತ್ತಿದ್ದರು."೯

"॥ ಮಹರ್ಷೇರ್ಗೌತಮಸ್ಯಾಸೀ ಚ್ಛರದ್ವಾನ್ನಾಮ ಗೌತಮಃ ।
ಪುತ್ರಃ ಕಿಲ ಮಹಾರಾಜ ಜಾತಃ ಸಹ ಶರೈರ್ವಿಭೋ ॥"

ಈತ ಧನುರ್ವಿದ್ಯೆಯಲ್ಲಿಯೇ ಸದಾ ಆಸಕ್ತಿಯನ್ನು ಹೊಂದಿರುತ್ತಿದ್ದನು. "ಬ್ರಹ್ಮಚರ್ಯೆಯಲ್ಲಿದ್ದ ಗೌತಮ ಒಮ್ಮೆ ಕಠೋರವಾದ ತಪಸ್ಸು ಮಾಡತೊಡಗಿದನು. **ಜಾನಪದಿ ಎಂಬ ಅಪ್ಸರ ದೇವಕನ್ಯೆ** ಮಹರ್ಷಿಯ ತಪಸ್ಸಿಗೆ ವಿಘ್ನವುಂಟು ಮಾಡಲು ಬಂದಳು. ತನ್ನ ಹಾವಾಭಾವಗಳಿಂದ ಗೌತಮ ಋಷಿಯನ್ನು ಮೋಹಗೊಳಿಸಿದಳು. ಅಪ್ಸರೆಯ ಅನಿರ್ವಾಚ್ಯ ಸೌಂದರ್ಯವೇ ತನ್ನೆದುರು ಬಂದು ನಿಂತಾಗಿ ಶರದ್ವಂತ ಶರೀರಾದ್ಯಂತ ರೋಮಾಂಚನವಾಗಿ ಪ್ರೇಮಾಂಕುರ ಉಂಟಾಯಿತು. ನಿಮಿಷಾರ್ಧದಲ್ಲಿ ಮನೋವಿಕಲ್ಪಗೊಂಡ ಶರದ್ವಂತನ ಅಸ್ಖಲಿತ ಬ್ರಹ್ಮಚರ್ಯೆ ಮನೋವಿಕಾರಗೊಂಡು ಆತನ ರೇತಸ್ಸು ಶರಸ್ತಂಬದ ಮೇಲೆ ಬಿದ್ದು ಹೋಯಿತು. ಅದು ಎರಡು ಭಾಗಗಳಾಯಿತು. ಅದೇ ಒಂದು ಹೆಣ್ಣು ಮತ್ತೊಂದು ಗಂಡು ಶಿಶುಗಳ ಜನ್ಮಕ್ಕೆ ಕಾರಣವಾಯಿತು. ಶರದ್ವಂತ ಭಯದಿಂದ ಅಲ್ಲಿಂದ ಓಡಿಹೋದ. ನಂತರ ಅಲ್ಲಿಗೆ ಬೇಟೆಯಾಡಲು ಬಂದ ಶಂತನು ಚಕ್ರವರ್ತಿಗೆ ಆ ಅರಣ್ಯದಲ್ಲಿ ಧನುರ್ಬಾಣ ಕೃಷ್ಣಾಜಿನದ ಮೇಲಿದ್ದ ಮಕ್ಕಳನ್ನು ಕಂಡು ಆ ಮಕ್ಕಳನ್ನು ಅರಮನೆಗೆ ಕೊಂಡೊಯ್ಯುತ್ತಾನೆ. ಅವುಗಳನ್ನು ತನ್ನ ಮಕ್ಕಳಂತೆಯೇ ಬೆಳೆಸುತ್ತಾನೆ. ಕೇವಲ ಕೃಪೆಯಿಂದಾಗಿ ಆ ಎರಡು ಮಕ್ಕಳು ತನ್ನಿಂದ ಸಂವರ್ಧಿತರಾಗಿರುತ್ತಾರೆ. ಎಂದು ಭಾವಿಸಿ ಮಹೀಪತಿಯಾದ ಶಾಂತನವು ಆ ಮಕ್ಕಳಿಗೆ **ಕೃಪ ಮತ್ತು ಕೃಪಿ** ಎಂದೇ ನಾಮಕರಣ ಮಾಡುತ್ತಾನೆ."೧೦

"॥ ಕೃಪಯಾ ಯನ್ಮಯಾ ಬಾಲಾವಿ ಮೌ ಸಂವರ್ಧಿತಾವಿತಿ ।
ಸನ್ಮಾತ್ತ ಯೋರ್ನಾಮ ಚಕ್ರೇ ತದೇವ ಸಮಹೀಪತಿಃ ॥"

–ಇದೂ ಒಂದು ಅಂತಹದೇ ಪ್ರಕರಣ. ಇಲ್ಲಿ ಜಾನಪದೆ ಎಂಬ ಅಪ್ಸರೆಯೊಂದಿಗೆ "ಶರದ್ವಂತನ ಸಮಾಗಮವಾದದ್ದನ್ನು ಮರೆಮಾಚಲಾಗಿದೆ. ಮಕ್ಕಳಿಗೆ ಜನ್ಮ ಕೊಟ್ಟ ಜಾನಪದೆ ಮತ್ತು ಶರದ್ವಂತ ಆಶ್ರಮ ಬಿಟ್ಟು ಓಡಿ ಹೋಗುತ್ತಾರೆ ಎಂದು ಹೇಳಿದೆ.

**ಮಹಾಭಾರತದ ಕಾಲದಲ್ಲಿದ್ದಂತಹ ಋಷಿಗಳು ಅಧಿಕಾರ :**

ಮಹಾಭಾರತ ಕಾಲದಲ್ಲಿ 'ಧರ್ಮ ಶಾಸ್ತ್ರಗಳು ಸಾಮಾಜಿಕ ಕಾನೂನುಗಳು ದಾಖಲೆಯಾಗಿದ್ದು ಸಾಮಾಜಿಕ ಮತ್ತು ನ್ಯಾಯ ವ್ಯವಸ್ಥೆಗೆ ಸಂಬಂಧಿಸಿದ ಸಿದ್ಧಾಂತಗಳ ಪ್ರತಿಪಾದನೆ ಮಾಡುತ್ತವೆ. ಇದು ವೇದಕಾಲದಿಂದಲೇ ನಡೆದು ಬಂದ ವ್ಯವಸ್ಥೆಯಾಗಿತ್ತು. ವೈದಿಕ ಸಾಹಿತ್ಯದಲ್ಲಿ ಬ್ರಾಹ್ಮಣರು ಧಾರ್ಮಿಕ ವಿಧಿಗಳ ಮೇಲೆ ಹತೋಟಿ ಹೊಂದಿರುವುದರ ಜತೆಗೆ ರಾಜಕೀಯ ಅಧಿಕಾರದ ಸಂಬಂಧವನ್ನೂ ಹೊಂದಿರುವುದಾಗಿದೆ."೫ ಇದನ್ನೇ ನಾವು ನೋಡತ್ತೇವೆ.

**ವೇದವ್ಯಾಸ ಋಷಿ :**

ಮಹಾಭಾರತ ಮಹಾಕಾವ್ಯವನ್ನು ರಚಿಸಿದ ಕೃಷ್ಣದ್ವೈಪಾಯನ 'ವೇದವ್ಯಾಸ'ನೆಂದು ಪ್ರಸಿದ್ಧವಾಗಿದೆ. 'ವ್ಯಾಸ' ಪದದ ಅರ್ಥವೆಂದರೆ ಸಂಪಾದಕ, ಸಂಗ್ರಾಹಕ, ಸಮನ್ವಯಕಾರ ಅಥವಾ ವಿಭಾಗಗಳನ್ನು ರಚಿಸುವವ.; ಎಂದು.

'ಮಹಾಭಾರತದಿಂದ ಹಿಡಿದು ಕ್ರಿ.ಶ. ೧೧ನೆಯ ಶತಮಾನದವರೆಗೆ ಹಲವಾರು ಗ್ರಂಥಗಳೊಂದಿಗೆ ರಚಿತವಾದ ಬ್ರಹ್ಮವೈವರ್ತ ಪುರಾಣದವರೆಗೆ ಕೃತಿಗಳ ಕರ್ತೃ ವ್ಯಾಸನೊಬ್ಬನೇ; ಆ ವಂಶದಲ್ಲಿ ಹುಟ್ಟಿದವರೆಲ್ಲ ವ್ಯಾಸರೇ. ಹೀಗಾಗಿ ಯಾವ ವ್ಯಾಸ ಯಾವ ಕೃತಿಯನ್ನು ಯಾವಾಗ ರಚಿಸಿದರು ಎಂಬುದು ದೊಡ್ಡ ಒಗಟಾಗಿ ನಿಲ್ಲುತ್ತದೆ."[೧೧] "ಮಹಾನ್ ಗ್ರಂಥಗಳಾದ ವೇದಗಳಿಗೆ ಈ ಎಲ್ಲ ಸೇವೆಯನ್ನೂ ಮಾಡಿದ ಋಷಿಮುನಿ ಎಂದೂ ಅರ್ಥ."[೧೨] **ಮಹಾಭಾರತದ ಆಧುನಿಕ ಚಿಂತನೆಗಳ ಅಧ್ಯಯನಕ್ಕೆ ವಸ್ತುರೂಪದ ವಿಷಯ ಸಂಬಂಧಿ ಶೋಧನೆಗೆ ಬಹುಶಿಸ್ತೀಯ ಅಧ್ಯಯನ ಉನ್ನತ ವಿಮರ್ಶೆಯೂ** ಅಗತ್ಯವಾಗಿರುವುದರಿಂದ ವ್ಯಕ್ತಿನಿಷ್ಠ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧. ಇಡೀ 'ಮಹಾಭಾರತ' ಕಾವ್ಯವನ್ನು ವ್ಯಾಸರು ಬರೆದದ್ದೇ?

ಮಹಾಭಾರತವನ್ನು ಒಂದು ಲಕ್ಷ ಶ್ಲೋಕಗಳ ಈ ಬೃಹತ್ ಮಹಾಕಾವ್ಯ ವ್ಯಾಸರೇ ರಚಿಸಿದರೇ? ಅಥವಾ ಮೂರು ಭಾಗಗಳಲ್ಲಿ ಬೆಳೆದಿರುವ ಕಥೆಯನ್ನು ವ್ಯಾಸರು ರಚಿಸಿಲ್ಲವೆಂಬುದು ಸ್ಪಷ್ಟ. ವೈಶಂಪಾಯನನು ಆರಂಭ ಮಾಡಿ ಕೊನೆ ಮುಟ್ಟಿಸುವ ಕಥೆಯಲ್ಲಿಯೂ ವ್ಯಾಸರ ಭಾಗವೆಷ್ಟೋ, ವೈಶಂಪಾಯನನ ಭಾಗವೆಷ್ಟೋ ಗೊತ್ತಾಗುವುದಿಲ್ಲ. ಏಕೆಂದರೆ ವೈಶಂಪಾಯನನು ವ್ಯಾಸರಿಂದ ಭಾರತ ಕಥೆಯನ್ನು ಕೇಳಿದ್ದನು. ಅಷ್ಟೇ. ಮೂಲ ಕರ್ತೃವು ವ್ಯಾಸ; ಅವನ ಕೃತಿಯನ್ನು ವೈಶಂಪಾಯನನು ಮೊದಲು – ಪ್ರಾಯಶಃ ವಿಸ್ತರಿಸಿ ಹೇಳಿದನು.

### ೨. ವಿಸ್ತರಣೆ :

ಅದನ್ನು ಸೂತಪುರಾಣಿಕರು ಇನ್ನಷ್ಟು ವಿಸ್ತರಿಸಿ ಹೇಳಿದರು; ನಂತರ ಈಚಿನ ಪುರಾಣಿಕರು ಇದನ್ನು ಮತ್ತಷ್ಟು ಬೆಳೆಸಿದರು. ಈ ವಿಸ್ತರಣೆ ೨೪,೦೦೦, ೭೫,೦೦೦ ಮತ್ತು ೧,೦೦,೦೦೦ ಶ್ಲೋಕ ಸಂಖ್ಯೆಯನ್ನು ಸೂಚಿಸುತ್ತದೆ.

### ೩. ಮಹಾಭಾರತ ರಚನೆಗೆ ಏಕ ಕರ್ತೃವೇ?

ವ್ಯಾಸರು ಶಕ್ತಿಯ ಮಗನಾದ ಪರಾಶರ ಮತ್ತು ಕಾಲಿಯರ ಮಗನಾಗಿ ಯಮುನಾ ದ್ವೀಪದಲ್ಲಿ ಹುಟ್ಟಿದನು. ವೇದವನ್ನು ನಾಲ್ಕಾಗಿ ವಿಂಗಡಿಸಿದ್ದರಿಂದ 'ವೇದವ್ಯಾಸ'ನೆಂದೇ ಪ್ರಸಿದ್ಧರಾದರು. ಆದರೆ "ಈತ ಒಬ್ಬನೇ ವೇದವಿಂಗಡಣೆ, ಮಹಾಭಾರತ, ಹದಿನೆಂಟು ಪುರಾಣ, ಉಪಪುರಾಣಗಳ ರಚನೆಗಳನ್ನು ಮಾಡಬಲ್ಲ ಒಬ್ಬ ಮನುಷ್ಯ ವ್ಯಕ್ತಿ ಇರುವುದು ಅಸಂಭವ."[೧೩] ಎನ್ನುವ ಮಾತು ಪ್ರಾಯೋಗಿಕವಾಗಿ ಆಲೋಚಿಸಿದಾಗ ನೂರಕ್ಕೆ ನೂರು ಅಂಶ ಸತ್ಯವಾದುದು.

### ೪. ಮಹಾಭಾರತ ರಚನೆಗೆ ವೇದ (ಋಗ್ವೇದ)ದ ಪ್ರೇರಣೆ ಮತ್ತು ಪ್ರಭಾವ :

ಮಹಾಭಾರತವು ಹೀಗೆ ನಡೆಯಿತಂತೆ ಎಂದು ಹೇಳುವ **ಇತಿಹಾಸ** ಗ್ರಂಥ. ಪುರಾಣದ ಲಕ್ಷಣಗಳನ್ನು ಒಳಗೊಂಡಿರುವುದರಿಂದ **ಪುರಾಣದ** ಲಕ್ಷಣಗಳನ್ನು ಒಳಗೊಂಡಿರುವುದರಿಂದ **ಪುರಾಣ** ಹಲವಾರು ಶಾಸ್ತ್ರ ಆಖ್ಯಾನಗಳನ್ನೂ ಒಳಗೊಂಡಿದೆ. ಛಾಂದೋಗ್ಯ ಉಪನಿಷತ್ತು ೩–೪–೧, ೭–೧–೪ ರಲ್ಲಿ; **ಇತಿಹಾಸ ಪುರಾಣಂ ಪುಷ್ಪಂ ಇತಿಹಾಸ ಪುರಾಣಃ ಪಂಚಮೋ ವೇದಾನಾಂ** – ಎಂದು ಹೇಳಿದೆ. ಇದಕ್ಕೆ ಕಾರಣವಿಲ್ಲದಿಲ್ಲ. "ಮಹಾಭಾರತದಲ್ಲಿ ಎಷ್ಟೋ ವೇದ, ಋಕ್ಕುಗಳು ಅಲ್ಪಸ್ವಲ್ಪ ವ್ಯತ್ಯಾಸವಾಗಿ ಬರುತ್ತವೆ; ಅವುಗಳ ಅಭಿಪ್ರಾಯ ಭಾವಾನುವಾದಗಳೂ ಇವೆ. ಸಂಹಿತೆಯಲ್ಲಿಯೂ ಬ್ರಾಹ್ಮಣದಲ್ಲಿಯೂ ಉಕ್ತವಾದ ಉಪಾಖ್ಯಾನಗಳೂ ಕಂಡುಬರುತ್ತವೆ.......... ವೇದದಂತೆಯೇ ಭಾರತವೂ ಧರ್ಮದ ಮೂಲ."[೧೪] ಮಹಾಭಾರತ ವೇದಯುಗ ಮುಗಿದು, ಪುರಾಣಗಳ ಸೃಷ್ಟಿಯಾಗುವ ಮೊದಲೇ ರಚನೆಯಾಗಿದೆ. 'ಮಹಾಭಾರತ'ದ ಮೂಲ ಕಾವ್ಯನಾಮ ಜಯ.' ಎಂಬುದು ಇಲ್ಲಿ ನಮಗೆ ನೆನಪಿಗೆ ಬರುತ್ತದೆ. 'ಜಯ' ಗ್ರಂಥದ ನೆನಪು ಬರಲು ಕಾರಣವೂ ಇದೆ. ಮಹಾಭಾರತವಾಗಿ ಮಾರ್ಪಟ್ಟ 'ಜಯ' ಗ್ರಂಥದ ವಸ್ತುವು ಋಗ್ವೇದದ ಮುಂದುವರೆದ ಕಥೆ. "ಇದನ್ನು ಪಂಚಮವೇದ ಎಂದಿರುವಲ್ಲಿ ಒಂದಕ್ಕಿಂತ ಹೆಚ್ಚು ಔಚಿತ್ಯವಿದೆ. ಋಗ್ವೇದದ ಯದುತುರ್ವರು ಮಹಾಭಾರತದ

ವೀರರು. ಜಯ ಕಾವ್ಯದ ರೂಪಃ ಆಕೃತಿ ಮಾರ್ಪಟ್ಟರೂ ಕಥೆಯ ಪ್ರಧಾನ ಪಾತ್ರಗಳು ತೀರ ಬೇರೆಯಾಗಿರಲಾರವು."[೧೫] ಡಾ॥ ಪಾಠಕರು, "ಐತಿಹಾಸಿಕ ಘಟನೆಗಳು ಸಾಂಕೇತಿಕ – ಕಾಲ್ಪನಿಕ ಮಟ್ಟದವೂ ಆಗುವುದು; ಐತಿಹಾಸಿಕ ವ್ಯಕ್ತಿಗಳು ಅಪ್ರಾಕೃತ ದಿವ್ಯ ಪುರುಷರಾಗಿ ಮಾರ್ಪಡುವುದು."[೧೬] ಇದನ್ನು ವ್ಯಾಸರು ಭಾರತ ಕಾವ್ಯದ ಮೂಲ ಭೂಮಿಕೆಯಾಗಿ ಇಟ್ಟುಕೊಂಡು ಪ್ರತಿಮಾ – ಸಾಂಕೇತಿಕ ಭಾಷೆಯಲ್ಲಿ ಭಾರತೀಯ ಸಂಸ್ಕೃತಿಗೆ ಒಂದು ಅಮೂಲ್ಯವಾದ ಕೊಡುಗೆಯನ್ನು ಕೊಟ್ಟಿದ್ದಾರೆ. "ಭಾರತ ಕಾವ್ಯ ರಚಿಸುವಾಗ ಬಿಡಿಬಿಡಿಯಾಗಿ ಪಾತ್ರಗಳ ಕಣ್ಣಿನಿಂದ ಇತಿಹಾಸವನ್ನು ನೋಡುವಾಗ ಈ ಸಂಗತಿಗಳು ಕಾಣಿಸಬಹುದು, ಕಾಣಿಸುತ್ತವೆ. ಹಾಗೆ ಕಾಣಿಸಿ ಸರಿ–ತಪ್ಪುಗಳ ಮಾತು, ನ್ಯಾಯ– ಅನ್ಯಾಯಗಳ ಮಾತು ನೂರು ನಡೆಯಬಹುದು. ಆದರೆ ಅವನ್ನೆಲ್ಲ ದೊಡ್ಡದೊಂಡು ವಿಸ್ತಾರದಲ್ಲಿ ಕಾಣಿಸಿ ಪಾತ್ರಗಳ ವ್ಯಕ್ತಿನಿಷ್ಠ ದೃಷ್ಟಿಯನ್ನು ಮೀರಿ ನೋಡಿದಾಗ – ಹಾಗೆ ಮೀರಿ ನೋಡುವುದಕ್ಕಾಗಿಯೇ ವಿಸ್ತಾರದಲ್ಲಿ ಕಾಣಿಸುವುದು ಮತ್ತು ಅಂಥ ನೋಟವೂ ಒಂದು ಇದೆಯಲ್ಲವೇ– ಕಂಡ ವಿಸಂಗತಿಗಳ ಹಿಂದೆಯೂ ಒಂದು ಸಂಗತಿ ಒಂದು ಕಾರಣ, ಒಂದು ಹಿನ್ನೆಲೆ, ಒಂದು ಮನೋಧರ್ಮ ಕಂಡುಬರಬಹುದು.... ವ್ಯಾಸರು ಮಹಾಭಾರತವೆಂಬ ಈ ಇತಿಹಾಸ ತನ್ನ ಅಂತರನುಭವವೆಂದು ಹೇಳಿದ್ದುಂಟು. ಹಾಗೆ ಹೇಳಿದ್ದು ಪಾತ್ರನಿಷ್ಠ ದೃಷ್ಟಿಯನ್ನು ಮೀರಿನಿಂತೇ ನೋಡಬೇಕು."[೧೭] ಎಂದು ಉಲ್ಲೇಖಿಸಿರುವ ಈ ಅಭಿಪ್ರಾಯವು ವೈಚಾರಿಕತೆಯಿಂದ ಕೂಡಿರುವುದಾಗಿದೆ.

ಭಾರತ ಅನೇಕ ನಂಬಿಕೆಗಳ ತವರು. ಈ ನಂಬಿಕೆ ಅನೇಕರಿಗೆ ಮೌಢ್ಯದಂತೆ ಕಾಣಿಸುವುದು ಸಹಜ. ವೈಜ್ಞಾನಿಕ ನಂಬಿಕೆಗಳಿಗೆ ನಮ್ಮ ಸನಾತನ ಕತೆ, ಪುರಾಣಗಳೂ ಕಾರಣವಿರಬಹುದು. ಸರಿಯೋ, ತಪ್ಪೋ ಒಟ್ಟಿನಲ್ಲಿ ಅದನ್ನು ಅನೇಕರು ಪ್ರಶ್ನೆ ಮಾಡದಂತೆ ಪಾಲಿಸುವುದು ಅವರಿಗೆ ಸಮಾಧಾನ ತಂದಿದೆ. ಅದು ಬಹು ಸಂಖ್ಯಾತರ ಭಾವನಾತ್ಮಕ ನಂಬಿಕೆಯಾದಾಗ ನಾವದನ್ನು ಸಿದ್ಧಾಂತಗಳ ಹೆಸರಿನಲ್ಲಿ ಕೆರಳಿಸುವುದು ಸರಿಯಲ್ಲ. ಹಾಗೆ ಟೀಕಿಸುವ ಭರದಲ್ಲಿ ಹತ್ತಾರು ಮಹಾಕಾವ್ಯದ ಪಾತ್ರಗಳನ್ನು ಮನಸ್ಸೋ ಇಚ್ಛೆ ಈಗ ಝಾಡಿಸಲಾಗದು. ಒಂದು ಕಾಲದಲ್ಲಿ ಈ ತರಹದ ಒಳನೋಟ ಕುತೂಹಲ ಉಂಟುಮಾಡಿ ಓದಿಸಿಕೊಂಡು ಹೋಗುತ್ತಿತ್ತು. ಆದರೆ ಪ್ರಸ್ತುತ ಜನರ ನಂಬಿಕೆಗಳನ್ನು ಅಲುಗಾಡಿಸುವಾಗ ಬಳಸುವ ಪದಗಳ ಮೇಲೆ ಹಿಡಿತವಿರಬೇಕು. ವೈಜ್ಞಾನಿಕ ಸಂಘರ್ಷಕ್ಕೆ ಡೆಮಾಕ್ರಸಿಯಲ್ಲಿ ಜಾಗವಿದೆಯಾದರೂ ವಾತಾವರಣ ಪೂರಕವಾಗಿರದೇ ಇದ್ದಾಗ ಕಹಿಯಾದ ಸತ್ಯಗಳ ನಿರರ್ಗಳವಾಗಿ ಹಂಚಿಕೊಳ್ಳಲಾಗದ ಸಂದರ್ಭವನ್ನು ಗುರುತಿಸಬೇಕು. ಮಹಾಭಾರತದ ವ್ಯಕ್ತಿಗಳನ್ನು ಕೇವಲ ಪಾತ್ರಗಳನ್ನಾಗಿ ನೋಡಿ ವಿಶ್ಲೇಷಿಸಬಹುದು. ಆದರೆ ಬಹುಪಾಲು ಜನರು ದೇವರೆಂದು ಅವರನ್ನು ಆರಾಧಿಸುವ ಕಾರಣದಿಂದಾಗಿ ಈ ಕೆಣಕುವಿಕೆ ಬಹಳ ಅಪಾಯಕಾರಿಯಾದುದು."[೧೮] ಎಂದು ತಿಳಿದಿದ್ದರೂ ಆಧುನಿಕವಾಗಿ ಚಿಂತಿಸಿದಾಗ ಪಾತ್ರಗಳ ನಿಜರೂಪ ಅನಾವರಣಗೊಳ್ಳುತ್ತದಲ್ಲವೇ? ಈಗ ವೈಜ್ಞಾನಿಕ ಸಂಗತಿಗಳನ್ನು ಒಪ್ಪುವ ಜನರ ಸಂಖ್ಯೆ ಹೆಚ್ಚಾಗಿದೆ. ಹಾಗಂತ ಅತಿಯಾದ ಟೀಕೆಯಿಂದ ದಿಢೀರ್ ಸಾಮಾಜಿಕ ಬದಲಾವಣೆ ಅಸಾಧ್ಯ. ಬುದ್ಧ, ಬಸವ, ಗಾಂಧೀ, ಅಂಬೇಡ್ಕರ್, ಹಾಗೂ ಇತರೆ ಸಾಮಾಜಿಕ ಸುಧಾರಕರು ಸತ್ಯ ಹೇಳುವ ಭರದಲ್ಲಿ ಸಾಮಾಜಿಕ ಸ್ವಾಸ್ಥ್ಯ ಕದಡಲಿಲ್ಲ. ಬದಲಾಗಿ ನಿಧಾನವಾಗಿ ಜನ ಜಾಗೃತಿ ಮೂಡಿಸಿದರು."[೧೯] ಇದರಂತೆಯೇ ಮಹಾಭಾರತದ ಕಥೆ, ಸನ್ನಿವೇಶ, ಪಾತ್ರಪೋಷಣೆಗಳನ್ನು ಹಾಗೇ ಇರಿಸಿಕೊಂಡು, ವ್ಯಾಸರ ಉದ್ದೇಶಕ್ಕೆ ಚ್ಯುತಿ ಬಾರದಂತೆ ಮಹಾಕಾವ್ಯವನ್ನು ವೈಜ್ಞಾನಿಕ ಶಸ್ತ್ರಚಿಕಿತ್ಸೆಗೆ ಒಳಪಡಿಸುವುದು ಈ ಅಧ್ಯಯನದ ಮೂಲಕ ನಡೆದಿದೆ.

**ಅಡಿಟಿಪ್ಪಣಿಗಳು :**

೧. ಡಾ॥ ಪ್ರಧಾನ ಗುರುದತ್, ಶ್ರೀಕೃಷ್ಣಕಥೆಯ ಉಗಮ ಮತ್ತು ವಿಕಾಸ, ಪು. ೧೩೫.

೨. ಸಂ. ಗೋ.ಬಿಂದೂರಾಯರು, ಭಾರತ ಸಾರೋದ್ಧಾರ, ಪು. ೯.

೩. ಶ್ರೀಮದ್ವಾಲ್ಮೀಕಿ ರಾಮಾಯಣ ಭಾಗ – ೩, ಪು. ೧೦೪೭.

೪. ಶ್ರೀಮನ್ಮಹಾಭಾರತ, ಶಾಂತಿಪರ್ವ, ಭಾಗ – ೨೬, ಪು. ೩೦೨೩.

೫. — ಅದೇ —, ಭಾಗ ೨೬, ಪು.೩೦೨೪.

೬. ಋಗ್ವೇದ, ಭಾಗ–೨೧, ಪು. ೮೨೩.

೭. ಸಿ. ಗೋಪಾಲಕೃಷ್ಣಶಾಸ್ತ್ರಿ, ಮಹಾಭಾರತ ಕೋಶ, ಪು. ೩೩೩.

೮. ಶ್ರೀಮನ್ಮಹಾಭಾರತ, ಬಾಗ – ೨, ಪು. ೮೫೧.

೯. -- ಅದೇ --, ಪು. ೭೨೪.

೧೦. ಶ್ರೀಮನ್ಮಹಾಭಾರತ, ಭಾಗ–೨, ಪು. ೮೫೩, ೮೫೫.

೧೧. ರೋಮಿಲಾ ಥಾಪರ್, ಅನು: ಸೂರ್ಯನಾಥ ಕಾಮತ್, ಗತಕಾಲದ ಬಗ್ಗೆ ಪೂರ್ವಗ್ರಹ, ಪು. ೩೩.

೧೨. ಡಾ॥ ಪ್ರಧಾನ ಗುರುದತ್, ಶ್ರೀಕೃಷ್ಣಕಥೆಯ ಉಗಮ ಮತ್ತು ವಿಕಾಸ, ಪು. ೧೦೭.

೧೩. ರಂಗಾಚಾರಿ, ವಾಲ್ಮೀಕಿ ಮತ್ತು ವ್ಯಾಸ, ಪು. ೫೩.

೧೪. ಋಗ್ವೇದ, ಭಾಗ– ೧, ಪು. ೧೮೬.

೧೫. ರಂಗಾಚಾರಿ, ವಾಲ್ಮೀಕಿ ಮತ್ತು ವ್ಯಾಸ, ಪು. ೫೩.

೧೬. ಎ.ಆರ್. ಕೃಷ್ಣಶಾಸ್ತ್ರ, ವಚನಭಾರತ, ಪೀಠಿಕೆ, ಪು. ೩೫.

೧೭. ಎ.ಆರ್. ಕೃಷ್ಣಶಾಸ್ತ್ರಿ, ವಚನಭರತ, ಪೀಠಿಕೆ, ಪು. ೩೭.

೧೮. ಡಾ॥ ಶಂ.ಬಾ. ಜೋಶಿ, ಋಗ್ವೇದದ ಸಾರ, ಪು. ೬೫.

೧೯. -- ಅದೇ --, ಪು. ೩೩.

೨೦. ಲಕ್ಷ್ಮೀಶ ತೋಳ್ಪಾಡಿ, ಭಾರತಯಾತ್ರೆ, ಪು. ೧೦೯.

೨೧. ಸಿದ್ದು ಯಾವಲಪರವಿ, ಲೇಖನ : ವಿಶ್ವವಾಣಿ, ದಿನಾಂಕ : ೭–೧–೨೦೧೯, ಪು. ೭.

೨೨. -- ಅದೇ --.

~~~***~~~

## ಋಷಿಗಳಿಗೆ ಸ್ತ್ರೀಸಂಗ ಸರಿಯೇ?

### ಪರಾಶರ, ವ್ಯಾಸ, ದೂರ್ವಾಸ :

ವೇದಕಾಲದಲ್ಲಿ ವಿಜ್ಞಾನ ಇರಲಿಲ್ಲವೆಂದಲ್ಲ. ಇತ್ತು. ವ್ಯಾಸರು 'ಜಯ' ಗ್ರಂಥ ರಚನೆಯಲ್ಲಿ ವೈಜ್ಞಾನಿಕ ವಿಧಾನವನ್ನು ಅನುಸರಿಸಿದ್ದಾರೆ. ಆದರೆ ಅವರ ನಂತರ ಬಂದಂತಹ ಪುರಾಣಿಕರು, ಋಷಿಗಳು ವೇದೋಪನಿಷತ್ತುಗಳ ಕಾಲದ ಪ್ರಾಚೀನ ಭಾರತದಲ್ಲಿ 'ವಿಜ್ಞಾನ' ಚೆನ್ನಾಗಿ ಬೇರು ಬಿಟ್ಟು ನಳನಳಿಸ ತೊಡಗಿದರೂ ತರುವಾಯದ ಶತಮಾನಗಳಲ್ಲಿ ಈ ವ್ಯಕ್ತ ನಿರೀಕ್ಷಿತ ಬೆಳವಣಿಗೆ ಪ್ರದರ್ಶಿಸದಿರಲು ನೀಡಬಹುದಾದ ಮುಖ್ಯ ಕಾರಣಗಳು ಎರಡು; **'ಧರ್ಮ ಮತ್ತು ಪ್ರಭುತ್ವ'** "ಒಟ್ಟಾಗಿ ಅಥವಾ ಪ್ರತ್ಯೇಕವಾಗಿ ಸೃಷ್ಟಿಸಿದ ಶ್ವಾಸ ಬಂಧಕ ಪರಿಸರ ಮತ್ತು ದೇಶದ ಸ್ವಾತಂತ್ರ್ಯಹರಣ ಮಾಡುತ್ತಿದ್ದವರು ಮಹಾಭಾರತ ಕಾಲದ ಸರ್ವಜ್ಞರಾದ ಮಹರ್ಷಿಗಳು!"[೧] ಇವರೇ ಅಂದಿನ ಕಾಲದ ಶಾಸಕರಾಗಿದ್ದರು."[೨] ವಿಶ್ವದಲ್ಲಿ ಎದುರಾಗುವ ಸಮಸ್ಯೆಗಳನ್ನು ವಿಜ್ಞಾನದ ಮೂರು ಆಧಾರ ಭಾವನೆಗಳ ಅನುಸಾರ ಪರಿಹರಿಸಲು ಯತ್ನಿಸುವ ಕ್ರಮಕ್ಕೆ 'ವೈಜ್ಞಾನಿಕ ವಿಧಾನ' ಎಂದು ಹೆಸರು.

೧. ಸಮಸ್ಯಾ ನಿವಾರಣೆ – ವಾದರೂಪಣೆ.
೨. ಮಾಹಿತಿ ಸಂಗ್ರಹಣೆ – ಪ್ರಾಯೋಗಿಕ.
೩. ವಿಶ್ಲೇಷಣೆ – ಸಿದ್ಧಾಂತ ಮಂಡನೆ.
~~~

"ಈ ವಿಶ್ಲೇಷಣೆಯಲ್ಲಿ ಅಂತರ್ಗತವಾಗಿರುವ ಒಂದು ಸೂಕ್ಷ್ಮಧಾರೆ ಕಾರ್ಯ-ಕಾರಣ ಸಂಬಂಧ."[೩] ಮಹಾಭಾರತದಲ್ಲಿ ಪುರಾಣಿಕರು ಮಾಡಿರುವ ಅನೈಸರ್ಗಿಕ -ಅವೈಜ್ಞಾನಿಕ ಪ್ರಸಂಗಗಳು ಇಂದಿನ ಆಧುನಿಕ ಯುಗದಲ್ಲಿರುವ ನಮಗೆ ವಿಲಕ್ಷಣವಾಗಿ ಕಂಡು ಬಂದರೂ ಧರ್ಮಗಳೆಲ್ಲವೂ ಆಯಾಯಾ ಕಾಲದ ಜೀವನ ಪದ್ಧತಿ-ಜ್ಞಾನದ ಮಟ್ಟ, ಸಂಸ್ಕಾರಗಳನ್ನು ಗಮನದಲ್ಲಿಟ್ಟುಕೊಂಡು ಮಹಾನುಭಾವರಾದ, ತಪಸ್ವಿಗಳಾದ ಋಷಿಗಳಿಂದ ರೂಪಿತವಾಗಿದೆ".[೪] ವರ್ತಮಾನ ಸಂಸ್ಕೃತಿಯನ್ನು ಪ್ರಾಚೀನ ಸಂಸ್ಕೃತಿಯೊಂದಿಗೆ ತುಲನಾತ್ಮಕವಾಗಿ ನೋಡಿದಾಗ ವರ್ತಮಾನದ ಬೇರುಗಳು ಪ್ರಾಚೀನ ಸಂಸ್ಕೃತಿಯಲ್ಲಡಗಿರುವುದು ನಮಗೆ ಗೋಚರಿಸುತ್ತದೆ. ಕಾಲಬದಲಾದಂತೆ ಚಿಂತನೆಯ ಮಾರ್ಗವೂ ಬದಲಾಗಲೇಬೇಕಾದದ್ದು ಅನಿವಾರ್ಯ. ಅಂದಿಗೂ ಇಂದಿಗೂ ಆಗಿರುವ ಬದಲಾವಣೆಗಳನ್ನು ಪುರಾಣಾರ್ಥದಿಂದ ಬೇರ್ಪಡಿಸಿ ತಿಳಿಯಬೇಕು. ಮಹಾಭಾರತದ ಹಲವಾರು ಘಟನೆಗಳು ಧರ್ಮಪ್ರೇರಕ ಶಕ್ತಿಗೊಳಪಟ್ಟು ಅಲೌಕಿಕ, ಅನೈಸರ್ಗಿಕವೆನಿಸಿದರೂ ಈ ವಿಸ್ಮಯಕರವಾದ ಅಶ್ಲೀಲವಾದ ದೃಶ್ಯಗಳು ಆಧುನಿಕ ಚಿಂತನೆಯನ್ನು ರೂಪಿಸುವ ಪ್ರೇರಣೆಯ ಮೂಲಾಧಾರವಾಗಿದೆ. "ಆಧುನಿಕತೆ ವರ್ತಮಾನ ಜೀವನದ ಲಕ್ಷಣವಾಗಿರುವುದರಿಂದ ಮಹಾಭಾರತದ **ಭೂತಜೀವನವನ್ನು** ಹೊಸ, ವೈಜ್ಞಾನಿಕ ತಂತ್ರದಿಂದ ವಿಶ್ಲೇಷಿಸುವ ವಿಧಾನದಿಂದ ಪುನರ್ವಿಮಶಿಶಸಿ ಅಂದಿನ ಯುಗಧರ್ಮಕ್ಕನುಗುಣವಾಗಿ ಅಂದಿನ ಜೀವನ ವಿಧಾನವನ್ನು ಅನುಲಕ್ಷಿಸಿ ಮೂಲಭೂತ ಅನುಭವ, ಅವರ ಭಾವನೆಗಳ (ಪೌರಾಣಿಕರ) ಸ್ವರೂಪ ಬದಲಾವಣೆಗಳ ಸ್ವರೂಪವನ್ನು ಯುಗದ ಇತಿಹಾಸವೇ ಮಹಾಕಾವ್ಯವಾಗಿರುವುದನ್ನು ಮರೆಯುವಂತಿಲ್ಲ. ಆಧುನಿಕ ವಿಮರ್ಶಕನಿಗೆ ಉಳಿದಿರುವ ಕೆಲಸವೆಂದರೆ; ಯಾವುದು ಒಂದಾನೊಂದು ರೀತಿಯಲ್ಲಿ ಅಂತರ್ಬೋಧವಗಿದೆಯೋ ಅದನ್ನು ಶಾಸ್ತ್ರಾಧಾರಗಳಿಂದ ಪ್ರಮಾಣಬದ್ಧವಾಗಿ ವಿವರಿಸುವುದು, ಸ್ಫುಟಗೊಳಿಸುವುದೇ ಆಗಿದೆ."[೫]

"ಋಷಿಗಳ ಇತಿಹಾಹಸ ಮೇಲೆ ವೇದಗಳ ಕಾಲವನ್ನು ನಿರ್ಣಯಿಸಬಹುದು. ಭೃಗು, ಆಂಗೀರಸ ಮೊದಲಾದವರು ಮಂತ್ರದ್ರಷ್ಟ್ರುಗಳೆಂದು ತಿಳಿಸಿದೆ. ಇವರುಗಳು ಮಹಾಭಾರತದ ಕಾಲಕ್ಕಿಂತಲೂ ಸಾವಿರಾರು ವರ್ಷಗಳಷ್ಟು ಹಿಂದಿನವರು."[೬] ಹಿಂದೂಧರ್ಮಕ್ಕೆ ಋಷಿಗಳು ಮೂಲಪುರುಷರಾಗಿದ್ದು ಇವರೇ ನಮ್ಮ ಸಂಸ್ಕೃತಿಯ ನಿರ್ಮಾತೃಗಳಾಗಿದ್ದಾರೆ. ಪುರಾತನ ಕಾಲದಿಂದಲೂ ಪರಮಪೂಜ್ಯರಾದ ಋಷಿಗಳಿಗೆ ರಾಜಾಧಿರಾಜರು ಅಗ್ರಪೂಜೆಯ ಗೌರವ ಸಲ್ಲಿಸುತ್ತಿದ್ದರು. **ತಮ್ಮ ಕನ್ಯೆಯರನ್ನು ಋಷಿಗಳು ಸ್ವೀಕರಿಸಿದರೆ ತಮ್ಮ ವಂಶ ಪಾವನವಾಯಿತೆಂದು ಭಾವಿಸುತ್ತಿದ್ದರು.** ಇಂತಹ ಉದಾಹರಣೆಗಳು ಮಹಾಭಾರತದಲ್ಲಿ ಅನೇಕಾನೇಕ ಉಪಲಬ್ಧವಿದೆ. ಇದಕ್ಕೆ ಕಾರಣ; **'ಋಷಿರ್ವೇದಃ.' ಅಂದರೆ;** ಋಷಿ ಎಂದರೆ ವೇದವೆಂದು ತಿಳಿಯುತ್ತಿದ್ದರು.

**ಶಕುಂತಲಾ ಜನನ :**

ವಿಶ್ವಾಮಿತ್ರ-ಮೇನಕೆಯರ ಸಮಾಗಮದಿಂದ ಶಕುಂತಲಾ ಜನಿಸಿದಳು. ಆಕೆಯನ್ನು ಕಣ್ವ ಋಷಿಗಳು ತಮ್ಮ ಆಶ್ರಮದಲ್ಲಿ ಬೆಳೆಸಿದರು.

ಪರಶುರಾಮನು ಭೂಮಿಯ ಮೇಲಿದ್ದ ಕ್ಷತ್ರಿಯರ ಮೇಲೆ ಇಪ್ಪತ್ತೊಂದು ಬಾರಿ ದಾಳಿ ನಡೆಸಿ ದುಷ್ಟರಾದ ಮತ್ತು ಮದಾಂಧರಾದ ಕ್ಷತ್ರಿಯರನ್ನೆಲ್ಲ ಸಂಹರಿಸುತ್ತಾನೆ. ಭೂಮಿ ಕ್ಷತ್ರಿಯ ರಹಿತವಾಗಿ ಹೋಗುತ್ತದೆ. ಅಳಿದು ಹೋಗುತ್ತಿದ್ದ ಕ್ಷತ್ರಿಯರ ವಂಶವನ್ನು ಉಳಿಸಲಿಕ್ಕಾಗಿ ಕ್ಷತ್ರಿಯ ಸ್ತ್ರೀಯರು ಆಪದ್ಧರ್ಮವನ್ನು ಅನುಸರಿಸಿ ಬ್ರಾಹ್ಮಣರ ಬಳಿ ಪುತ್ರಾರ್ಥಿಗಳಾಗಿ ಹೋಗುತ್ತಾರೆ. ಮಕ್ಕಳಿಲ್ಲದವರು ಮಕ್ಕಳನ್ನು ಪಡೆಯಲು ಕ್ಷತ್ರಿಯ ಸ್ತ್ರೀಯರು ಅನುಸರಿಸಬೇಕಾದ ನಿಯಮವೇ ಇದಾಗಿತ್ತು.

ಬ್ರಾಹ್ಮಣರು, ಋಷಿಗಳು ಕ್ಷತ್ರಿಯ ಸ್ತ್ರೀಯರು ಋತುಸ್ನಾತೆಯರಾದ ಕಾಲದಲ್ಲಿ ಸ್ತ್ರೀಸಂಗಡ ಮಾಡಬಹುದಾಗಿತ್ತು. "ತಪಸ್ವಿಗಳಾದ ಬ್ರಾಹ್ಮಣರಿಂದ ಕ್ಷತ್ರಿಯ ಸ್ತ್ರೀಯರಲ್ಲಿ ಕ್ಷತ್ರಿಯ ವಂಶವು ಧರ್ಮದ ಹಿನ್ನೆಲೆಯಲ್ಲಿ ಪುನಃ ಆವಿರ್ಭೂತವಾಗಿ ಅಭಿವೃದ್ಧಿ ಹೊಂದಿತು."[೭]

ಪಾಂಡವರ ಅಜ್ಜಿ ಸತ್ಯವತಿ ಬೆಸ್ತರ ಜಾತಿಯವಳು.

ಭೀಷ್ಮನ ತಾಯಿ -ಗಂಗಾದೇವಿ. ಬೆಸ್ತರವಳು.

ಧೃತರಾಷ್ಟ್ರ, ಪಾಂಡು, ವಿದುರ ವ್ಯಾಸ ಋಷಿಯ ಜಾರಸ ಪುತ್ರರು.

ವ್ಯಾಸ ಋಷಿಯು ಬೆಸ್ತರ ಕನ್ಯೆಯ ಕಾನೀನ ಪುತ್ರ.

ಪಾಂಡವರು ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದರೂ ಬ್ರಾಹ್ಮಣರು.

ಕುಂತಿ, ಮಾದ್ರಿಯರ ಮಕ್ಕಳಾದ ಪಾಂಡವರ ತಂದೆ ದೂರ್ವಾಸ ಋಷಿ.

ಆಗಿನ ಕಾಲದ ಬ್ರಾಹ್ಮಣರ, ಋಷಿ ಪತ್ನಿಯರೆಲ್ಲಾ ಹೆಚ್ಚಾಗಿ ಕ್ಷತ್ರಿಯ ಸ್ತ್ರೀಯರೇ ಆಗಿದ್ದರು. ಅಂದಿನ ಋಷಿಗಳು ಕಾಮ್ಯಾರ್ಥ ಪ್ರದಾನ ಚಾಪಲ್ಯವುಳ್ಳವರಾಗಿದ್ದರು. ಕ್ಷತ್ರಿಯ ಕನ್ಯೆಯರನ್ನು ತಮ್ಮ ಕಾಮೋಪಭೋಗಕ್ಕಾಗಿಯೂ ಉಪಯೋಗಿಸಿಕೊಂಡ ಹಲವಾರು ದೃಷ್ಟಾಂತಗಳನ್ನು ಮಹಾಭಾರತದಲ್ಲಿ ನೋಡಬಹುದು.

ವೇದಗಳನ್ನು ವಿಭಾಗ ಮಾಡಿದ, ಮಹಾಭಾರತ ಇತಿಹಾಸ ಮಹಾಕಾವ್ಯ ಗ್ರಂಥದ ಕರ್ತೃಗಳಾದ ವ್ಯಾಸ ಋಷಿಗಳೇ ಸ್ವತಃ ಜನಿಸಿದ ಹಿನ್ನೆಲೆ ಇದಕ್ಕೊಂದು ಉತ್ತಮ ನಿದರ್ಶನವಾಗಿದೆ. ಮೊದಲನೆಯ ಬಾರಿಗೆ ಋತುಮತಿಯಾದ ಸತ್ಯವತಿ ದೋಣಿ ನಡೆಸುತ್ತಿದ್ದಾಗ ಯಮುನೆಯನ್ನು ದಾಟಲು ಬಂದ ಪರಾಶರ ಮಹರ್ಷಿಗಳು ಸತ್ಯವತಿಯನ್ನು ತನ್ನವಳನ್ನಾಗಿ ಮಾಡಿಕೊಂಡು ತಮ್ಮ ಆಸೆ ಪೂರೈಸಿಕೊಂಡ ಫಲದಿಂದಲೇ ಸತ್ಯವತಿಯ ಪುತ್ರರಾಗಿ ವ್ಯಾಸರು ಜನಿಸಲಿಲ್ಲವೇ?!

### "ದೂರ್ವಾಸ" ಸಾಮಾನ್ಯ ನಿರೂಪಣೆ :

ವಸುದೇವನ ತಂದೆ ಶೂರ ಯದು ಶ್ರೇಷ್ಠನಾಗಿದ್ದನು. ಅವನ ಮಗಳು ಪೃಥೆ ಅಸದೃಶ ರೂಪವಂತೆ. ಮಾತು ಕೊಟ್ಟಿದ್ದರಿಂದ ತನ್ನ ಸೋದರತ್ತೆಯ ಮಗನಾದ ಕುಂತಿಭೋಜನಿಗೆ ಕೊಟ್ಟುಬಿಟ್ಟ. ಪೃಥೆ –ಕುಂತಿಭೋಜನ ಮನೆಯಲ್ಲಿ ದೇವತಾ ಅತಿಥಿ ಭೋಜನದಲ್ಲಿ ನಿಯೋಜಿಸಲ್ಪಟ್ಟಳು. ಅಲ್ಲಿಗೆ ಬಂದ ದೂರ್ವಾಸ ಋಷಿಯನ್ನು ಕುಂತಿ ಸರ್ವ ಪ್ರಯತ್ನಗಳಿಂದಲೂ ಸಂತೋಷಪಡಿಸಿದಳು. ದೂರ್ವಾಸರು ಕುಂತಿಗೆ ಮಂತ್ರವನ್ನು ಉಪದೇಶಿಸಿ ಹೊರಟು ಹೋದರು. ಕುಂತಿ ಯಾವ ದೇವತೆಯನ್ನು ಕರೆದರೂ ಅವರ ಅನುಗ್ರಹವಾಗುವ ಮಂತ್ರವದು. ಕುಂತಿ ಸೂರ್ಯನನ್ನು ಆಹ್ವಾನಿಸುತ್ತಾಳೆ. ಅವನು ಬಂದಾಗ ಸಮಾಗಮವನ್ನು ವಿರೋಧಿಸುತ್ತಾಳೆ. ಸೂರ್ಯಕುಲವನ್ನೇ ಸುಟ್ಟುಬಿಡುವ ಬೆದರಿಕೆ ಹಾಕುತ್ತಾನೆ. ಕುಂತಿ ಹೆದರಿ ಸೂರ್ಯನ ಸಮಾಗಮ ಮಾಡುತ್ತಾಳೆ. ಕೂಡಲೇ ಮಗ ಹುಟ್ಟುತ್ತಾನೆ. ಕುಂತಿ ಅಪವಾದಕ್ಕೆ ಹೆದರಿ ಮಗುವನ್ನು ನದಿಯಲ್ಲಿ ತೇಲಿಬಿಡುತ್ತಾಳೆ.

### ವಿಶ್ಲೇಷಣೆ :

**ಸ ವತ್ಸರ ತ್ರಯೋದಶಂತಯಾಯಥಾವದರ್ಚಿತಃ ।**
**ಉಪಾದಿ ಶತ್ ಪರಂ ಮನುಂ ಸಮಸ್ತ ದೇವವಶ್ಯದಂ ॥**

ಪೃಥೆ ಶೀಘ್ರಕೋಪಿಯಾದ ಮುನಿಗೆ ಶರೀರ, ಮಾತು, ಮನಸ್ಸುಗಳಲ್ಲಿ ಅನುವರ್ತಿಯಾಗಿ ಬೇರೆಯವರಿಂದ ಮಾಡಲು ಶಕ್ಯವಾಗದಂಥ ರೀತಿಯಲ್ಲಿ ಸೇವೆ ಮಾಡುತ್ತಾಳೆ. ದೂರ್ವಾಸರು ಮಂತ್ರ ಉಪದೇಶಿಸಿ ಹೊರಟು ಹೋಗಲಿಲ್ಲ. "ಒಂದು ಚಾತುರ್ಮಾಸ್ಯ ಕಳೆಯಲು ಅಲ್ಲಿಗೆ ಬಂದಿದ್ದವರು ಕುಂತಿಯ ಸೇವೆಗೆ ಮೆಚ್ಚಿ ಹದಿಮೂರು ವರ್ಷಗಳಲ್ಲಿಯೂ ಚಾತುರ್ಮಾಸ್ಯಗಳನ್ನು ಅಲ್ಲಿಯೇ ಕಳೆಯುತ್ತಾರೆ. ಸುಖವಾಗಿ ಕಾಲ ಕಳೆದುದರಿಂದ ಹದಿಮೂರು ವರ್ಷಗಳ ಕಾಲ ಒಂದು ವರ್ಷದಂತೆ ಕಳೆಯಿತು."[೮] ಎಂದಿರುವುದರ ಗೂಢಾರ್ಥವೇನಿರಬಹುದು?! ದೂರ್ವಾಸ ಸದಿಹರೆಯದ ಅದೇ ತಾನೇ ಋತುಮತಿಯಾದ ಕುಂತಿಯ ಸಮಾಗಮ ಬಯಸಿದ್ದು ಸರಿಯೇ? "ನೈತಿಕತೆ ಔಚಿತ್ಯದ ಸರಹದ್ದನ್ನು ಮೀರಿದರೆ ವ್ಯಕ್ತಿ ಹೇಗೆ ಶಾಸ್ತ್ರಾಂಧನಾಗಿ ವರ್ತಮಾನದ ಜೀವನ ವಿಮುಖನಾಗುತ್ತಾನೆ."[೯] ಎನ್ನುವುದಕ್ಕೊಂದು ಇದೊಂದು ಉತ್ತಮ ದೃಷ್ಟಾಂತವೇ ಆಗಿದೆ.

### ಋಷಿಗಳು ಪಾಲಿಸಬೇಕಾದ ವರ್ಣಾಶ್ರಮ ಧರ್ಮಗಳು :

ರಾಜಧರ್ಮಾನುಶಾಸನ ಪರ್ವದಲ್ಲಿ ಭೀಷ್ಮ ಯುಧಿಷ್ಠಿರನಿಗೆ ಮಾಡುವ ಪ್ರವಚನದಲ್ಲಿ;

ಯಾವ ಬ್ರಾಹ್ಮಣನು ದುರಾಚಾರನಾಗಿರುವನೋ, ಧರ್ಮಹೀನನಾಗಿರುವನೋ, ಬ್ರಾಹ್ಮಣ ಧರ್ಮಕ್ಕೆ ಪರಮ ವಿರೋಧವೆನಿಸಿದ ಕುತ್ಸಿತ ಕರ್ಮಗಳನ್ನು ಮಾಡುವನೋ, ಯಾವ ಬ್ರಾಹ್ಮಣನು ಮರ್ಯಾದಾ ಶೂನ್ಯನಾಗಿರುವನೋ, ಅಪವಿತ್ರನಾಗಿರುವನೋ, ತನ್ನ ಧರ್ಮವನ್ನೂ ಮತ್ತು ಸದಾಚಾರವನ್ನೂ ಪರಿತ್ಯಾಗ ಮಾಡಿರುವನೋ, ಬ್ರಾಹ್ಮಣನಿಗೆ ಇಂದ್ರಿಯ ಸಂಯಮ, ಬಹಿರಂಗಶುದ್ಧಿ ಇರಬೇಕು ಎಂದು ಹೇಳುತ್ತಾರೆ.

ಕಾಲವು ಬದಲಾಗುತ್ತಿರುವ ಹಾಗೆ ಮನುಷ್ಯನ ಜ್ಞಾನದ ಮಟ್ಟ, ಸಂಸ್ಕಾರ, ನಡತೆಗಳಲ್ಲೂ ಬದಲಾವಣೆ ಇರುತ್ತದೆ. ಆದ್ದರಿಂದ ಒಂದೊಂದು ಯುಗಕ್ಕೆ ಒಂದೊಂದು ಧರ್ಮ.. ಸುದೀರ್ಘ ಕಾಲದ ಬ್ರಹ್ಮಚರ್ಯವನ್ನು ಪುರಾಣಗಳು ಹಾಗೂ ಸ್ಮೃತಿಗಳು ನಿಷೇಧಿಸುತ್ತವೆ. ಸಂನ್ಯಾಸ ಪದ್ಧತಿ, ವಾನಪ್ರಸ್ಥಗಳೂ ನಿಷೇಧಕ್ಕೆ ಒಳಗಾಗಿವೆ. ಮಠ-ಮಾನ್ಯಗಳು ತಮ್ಮ ಪರಂಪರೆಯ ಉಳಿವಿಗಾಗಿ ಇಂದಿಗೂ ಸಂನ್ಯಾಸ ಪರಂಪರೆಯನ್ನು ಮುಂದುವರೆಸಿದ್ದರೂ ಅದರಲ್ಲಿ ತಪಸ್ವಿಗಳು, ವಿರಕ್ತರ ಸಂಖ್ಯೆ ಬೆರಳೆಣಿಕೆಯಷ್ಟೇ ಇದೆ. ದಾರಿ ತಪ್ಪಿದ ಪಯಣಿಗರೇ ಜಾಸ್ತಿ. ಹೀಗಾಗಿಯೇ ನಿಷೇಧ ಕಂಡುಬರುತ್ತದೆ.

ಇದು ವ್ಯಾಸರೇ ಹೇಳಿರುವ ಉವಾಚ;

**ದೀರ್ಘಕಾಲ ಬ್ರಹ್ಮಚರ್ಯಂ ಧಾರಂಚಕಮಂಡಲೋಃ ।**
**ಸಗೋತ್ರಾತ್ತು ಸಪಿಂಡಾತ್ತು ವಿವಾಹೋ ಗೋವಧಸ್ತಥಾ ।**
**ಪರಾಶ್ವಮೇಧೌಮಧ್ಯಂಚ ಕಲೌವರ್ಜ್ಯದ್ವಿಜಾತಿಭಿಃ ॥**

ಅನ್ಯಯುಗದ ಧರ್ಮಗಳು ಈ ಯುಗದಲ್ಲಿ ಆಚರಣೆಗೆ ಯೋಗ್ಯವಲ್ಲವೆಂದು ಹೇಳುತ್ತಾರೆ.

**ಪರಾಶರ :**

ಪರಾಶರ ಋಷಿಗಳ ಮಗನಾದ ಕೃಷ್ಣದ್ವೈಪಾಯನ ವೇದವ್ಯಾಸರಿಗೆ ಪುತ್ರನನ್ನು ಪಡೆಯುವ ಅಪೇಕ್ಷೆ ಉಂಟಾಗುತ್ತದೆ. ತಪೋದನರಾದ ವ್ಯಾಸರು ಸ್ತ್ರೀಗರ್ಭ ಸಂಬಂಧದಿಂದಲೇ ಪುತ್ರನನ್ನು ಪಡೆಯುತ್ತಾರೆ.

ಮೇರುಪರ್ವತದಲ್ಲಿ ವ್ಯಾಸರು ತಪಸ್ಸು ಮಾಡುತ್ತಿದ್ದರು. ಒಂದು ದಿನ ವ್ಯಾಸರು ಆಶ್ರಮದಲ್ಲಿ ಅಗ್ನಿಯನ್ನು ಪಡೆಯುವ ಸಲುವಾಗಿ ಅಗ್ನಿಮಂಥನ ದಂಡಗಳನ್ನು ಹಿಡಿದು ಕಡೆಯ ತೊಡಗಿದರು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದ **ಘೃತಾಚಿ** ಎಂಬ ಅಪ್ಸರೆಯನ್ನು ನೋಡಿದರು. ಆಕೆಯ ಅನುಪಮ ಸೌಂದರ್ಯಕ್ಕೆ ಮಾರುಹೋಗಿ ಒಡನೆಯೇ ಕಾಮಾಭಿಭೂತನಾಗಿ ಹೋಗುತ್ತಾನೆ. ವ್ಯಾಸರು ಕಾಮಧಿಂದ ವ್ಯಾಕುಲಗೊಂಡಿರುವುದನ್ನು ತಿಳಿದ ಘೃತಾಚಿ ಋಷಿಗಳ ಸಮೀಪಕ್ಕೆ ಹೋಗುತ್ತಾಳೆ. (ಆದರೆ ಮಾನವ ರೂಪದಿಂದಲ್ಲ ಗಿಣಿಯ ರೂಪದಲ್ಲಿ ಎಂದು ಮಹಾಭಾರತದಲ್ಲಿ ಹೇಳಲಾಗಿದೆ.) ಈ ಹೇಳಿಕೆ ದ್ವಿಜ ಶ್ರೇಷ್ಠರಾದ ಬ್ರಹ್ಮರ್ಷಿಗಳ ಪಾವಿತ್ರ್ಯಕ್ಕೆ ಧಕ್ಕೆ ಬಾರದಿರಲೆಂದು ಪುರಾಣಿಕರು ಮಾಡಿರುವ ಬದಲಾವಣೆಯಾಗಿರಬೇಕು. ಯಾಕೆಂದರೆ, ಬೆಂಕಿ ಉತ್ಪತ್ತಿಯಾಗುವ ಅರಣಿಗಳ ಮಧ್ಯದ ಘರ್ಷಣೆಯಲ್ಲಿ ಅಗ್ನಿಗೆ ಬದಲಾಗಿ **ಶುಕ** ಜನ್ಮತಾಳಿದನೆಂದು ಹೇಳಲಾಗಿದೆ. ಶುಕ ಮಾನವನಾಗಿ ಬದಲಾದದ್ದು ಹೇಗೆ? ಇದು ಸಾಧ್ಯವೇ? ಇದು ಜನಪದ ಕಥೆಗಳಲ್ಲಿ ಮಾತ್ರ ಸಾಧ್ಯ.

ಯುಧಿಷ್ಠಿರ ಭೀಷ್ಮ ಪಿತಾಮಹರನ್ನು ಪ್ರಶ್ನಿಸುತ್ತಾನೆ.

ತಪೋಧನರಾದ ವ್ಯಾಸರು ಯಾವ ಸ್ತ್ರೀಗರ್ಭದಿಂದ ಶುಕನನ್ನು ಪಡೆದರು? ಮಹಾತ್ಮನಾದ ಶುಕನ ತಾಯಿ ಯಾರು? ಭೀಷ್ಮ ಹೇಳುತ್ತಾನೆ. ಮೇರುಪರ್ವತದ ಶಿಖರದಲ್ಲಿ ಕೃಷ್ಣದ್ವೈಪಾಯನ ಪುತ್ರನನ್ನು ಪಡೆಯಲು ತಪಸ್ಸು ಮಾಡುತ್ತಿದ್ದ. ಒಮ್ಮೆ ಆಶ್ರಮದಲ್ಲಿ ಅಗ್ನಿಮಂಥನ ಮಾಡುವ ಸಮಯದಲ್ಲಿ ಘೃತಾಚಿ ಎಂಬ ಅಪತ್ಸರೆಯನ್ನು ನೋಡಿದರು. ಅಂಗಾಂಗಗಳಲ್ಲಿ ಕಾಮವೇದನೆ ಉಂಟಾಯಿತು. ಮನಸ್ಸನ್ನು ನಿಯಂತ್ರಿಸಲು ಸಾಧ್ಯವಾಗಲಿಲ್ಲ.

ಘೃತಾಚಿಯ ಅನುಪಮವಾದ ಸೌಂದರ್ಯದಿಂದ ಆಕರ್ಷಿತರಾದ ವ್ಯಾಸರ ವೀರ್ಯವು ಅರಣಿಗಳ ಮಧ್ಯದಲ್ಲಿ ಬಿದ್ದು ಅಗ್ನಿಗೆ ಬದಲಾಗಿ ಶುಕನು ಜನ್ಮತಾಳಿದನೆನ್ನುತ್ತಾರೆ. ಅರಣಿ ಘನವಸ್ತು. ಅದರಿಂದ ಶಿಶು ಜನನ ಹೇಗೆ ಸಾಧ್ಯ? ಇಲ್ಲಿಯೂ ಅಪ್ಸರೆಯಾದ ಘೃತಾಚಿ ಗರ್ಭ ಧರಿಸಿ ಹತ್ತು ತಿಂಗಳ ನಂತರ ಮಗುವನ್ನು ಪ್ರಸವಿಸಿ ವ್ಯಾಸರಿಗೆ ಒಪ್ಪಿಸಿ ಹೊರಟು ಹೋಗಿರುತ್ತಾಳೆ.

## 'ಮಹಾಭಾರತ'ದಲ್ಲಿ ನೈಸರ್ಗಿಕ ಬದಲಾವಣೆಗೆ ಕಾರಣವೇನು?

"ಇದು ಪುರಾಣಿಕರ ಸೃಷ್ಟಿ. ಹಲವಾರು ದೃಷ್ಟಾಂತಗಳಿವೆ. ಕಾರಣ ಗುಡುಗು, ಮಿಂಚು ಇವು ದೇವರ ಸಾಂಕೇತಿಕ ಭಾಷೆ ಎಂಬ ನಂಬುಗೆಯು ಋಗ್ವೇದ ಕಾಲದಲ್ಲಿ ಒಂದು ಹಂತದಲ್ಲಿ ಇತ್ತು."[೧೦]. ಪಾರಾಯಣ ಮಾಡುವ ಭಕ್ತರಿಗಾಗಿ ಭಕ್ತಿಯನ್ನೇ ನಿರೂಪಿಸಿ ಸಚ್ಛಾಸ್ತ್ರದ ಮಹತಿಯ ಪ್ರಜ್ಞೆಯನ್ನು ಅವತರಿಸುವುದು ಪುರಾಣಿಕರ ಉದ್ದೇಶ. 'ಪುರಾಣ' ಶಬ್ದದ ಅರ್ಥವನ್ನೇ ನೋಡಿ **ಪುರಾ-ನವಂ-ಇತಿಪುರಾಣಂ** ಎಷ್ಟು ಹೇಳಿದೆಯೋ ಅಷ್ಟೂ ಹೊಸದು ಎಂದರೆ ನಿತ್ಯ ನೂತನವಾದ ಸಂದೇಶಗಳನ್ನು ಹೊತ್ತು ನಿಂತ, ಕಥಾ ಚೌಕಟ್ಟಿನಲ್ಲಿ ನೀತಿ, ಧರ್ಮ, ಉಪದೇಶ ಕೊಡುವ ಗ್ರಂಥವೇ **ಪುರಾಣ.** "ಇದು ಶಬ್ದ ಉತ್ಪತ್ತಿಯಿಂದ ಹೊರಟ ಲಕ್ಷಣ, ಸೃಷ್ಟಿ, ಸ್ಥಿತಿ, ಲಯ, ರಾಜವಂಶಾವಳಿ ಮೊದಲಾದ ವಿಷಯಗಳ ವರ್ಣನೆಯನ್ನು ಅದು ಒಳಗೊಂಡಿರಬೇಕೆಂಬ ಇನ್ನೊಂದು ಲಕ್ಷಣವು ಪೂರಕ ಮಾತ್ರವೆಂದು ತಿಳಿಯಬೇಕು."[೧೧] ಅದೂಅಲ್ಲದೆ; ಪುರಾಣಗಳಲ್ಲಿ ವೇದಗಳ ಸಾರವೇ ಆವಿರ್ಭವಿಸಿರುವುದನ್ನು ಕಾಣಬಹುದು. ಅಷ್ಟೇಅಲ್ಲ; ನಮ್ಮ ದೇಶದ ದಿವ್ಯ ಭವ್ಯ ಜ್ಞಾನಿರಾಶಿಯೆಲ್ಲದರ ಉಗಮದ ಜ್ಞಾನರಾಶಿಯನ್ನೆಲ್ಲ ಋಷಿವಾಣಿಯಲ್ಲೇ ಕಾಣಬೇಕಾದ ಅವಶ್ಯಕತೆ ಇದೆ. ಉಳಿದವರ ವಾಣಿಗೂ ಋಷಿವಾಣಿಗೂ ಇದೇ ಅಂತರ. ಕಥೆಯನ್ನೇ ಹೇಳಿದರೂ ನೀತಿಯನ್ನೇ ಬೋಧಿಸಿದರೂ ಅದರಲ್ಲೊಂದು ನಿತ್ಯನೂತನತೆ ಇರುವಂತೆ, ಸೂತ್ರರೂಪದಲ್ಲಿ, ಸಮಗ್ರಾನುಭವಕ್ಕೆ ದಾರಿಯಾಗುವಂತೆ, ಜಗತ್ಪರೀಕ್ಷೆ, ಆತ್ಮಪರೀಕ್ಷೆ ಎರಡಕ್ಕೂ ಉಪಕಾರವಾಗುವಂತೆ ಬುದ್ಧಿ-ಭಾವಗಳಲ್ಲಿ ತತ್ವಜ್ಞತೆ, ಯೋಗಾನುಭವಗಳಲ್ಲಿ ಸಮರಸ ಏರ್ಪಡುವಂತೆ ನುಡಿಯ ಜಾಣ್ಮೆ, ಸಿದ್ಧಿ, ಋಷಿಗಳಿಗೆ ಮಾತ್ರ ಸಾಧ್ಯವಾಗುವುದಷ್ಟೇ ಬೇರಾವ ಜನಾಂಗಕ್ಕೂ ಅದು ಅಸಾಧ್ಯ. ಆಧ್ಯಾತ್ಮಕ್ಕೆ ಒಂದು ಆಳ, ಸಾಂದ್ರತೆ, ಭದ್ರತೆಯ ಒತ್ತಡವನ್ನು ಕೊಡುವ ಕಾರ್ಯವನ್ನು ಸಾಧಿಸಿದವರೇ **ಈ ಪುರಾಣ ಕರ್ತೃಗಳಾದ ಪುರಾಣಿಕರು ಋಷಿಗಳು** ಎಂದು ಶ್ರೀಅರವಿಂದರೂ ಹೇಳಿದ್ದಾರೆ. ಇದು ಹೇಗೆ ಸಾಧ್ಯವಾಯಿತೆಂದರೆ, ಒಂದು ವಿಚಿತ್ರ ರೀತಿಯ 'ಸಾಹಿತ್ಯ ಭಂಡಾರ' ನಿರ್ಮಾಣದಿಂದ, ಸುಲುಭಗ್ರಾಹ್ಯವಾದ ವಿಚಾರಗಳು, ಆಕಾರಗಳು, ಪ್ರತಿಮೆಗಳು, ಪ್ರತಿಭೆಹಿತವೂ ಆಕರ್ಷಕವೂ ಆಗತಕ್ಕವು. ಭಾವನೆಗಳಿಗೆ ಸಂವಿದಿತವಾಗತಕ್ಕವು. ನೈತಿಕ, ಸೌಂದರ್ಯಾತ್ಮಕ ಸತ್ಯವನ್ನು ಎತ್ತಿ ಹಿಡಿದು ಸಾಧಾರಣ ಧಾರ್ಮಿಕ ಆಧ್ಯಾತ್ಮಿಕ ಧೋರಣೆಗಳಿಗೆ ಸೋಫಾನವೂ ಆಗತಕ್ಕವು, ಇಂಥವುಗಳಿಂದ ಪರಿಪ್ಲುತವಾದ ಸಾಹಿತ್ಯಭಂಡಾರ ಅದು. ಅದೇ ಪುರಾಣ ಸಾಹಿತ್ಯ. ಇದಕ್ಕೆ ಶ್ರೇಷ್ಠ ಉದಾಹರಣೆಗಳು ಮಹಾಭಾರತ ಪಾತ್ರಗಳು ಹಾಗೂ ಉಪಕಥೆಗಳ ಸೇರ್ಪಡೆಯಾಗಿರುವುದು. "ಐತಿಹಾಸಿಕ ಘಟನೆಗಳು ಸಾಂಕೇತಿಕ, ಕಾಲ್ಪನಿಕ ಮಟ್ಟದವೂ ಆಗುವುದು; ಐತಿಹಾಸಿಕ ವ್ಯಕ್ತಿಗಳು ಅಪ್ರಾಕೃತ ದಿವ್ಯಪುರುಷರಾಗಿ ಮಾರ್ಪಡುವರು."[೧೨]. ಹಲವಾರು ಪ್ರಸಂಗಗಳನ್ನು ನಾವು ಮಹಾಭಾರತ ಕಥಾ ಸಂವಿಧಾನದಲ್ಲಿ ಕಾಣಬಹುದಾಗಿದೆ. ಹೀಗೆ ಮಹಾಭಾರತದಲ್ಲಿ ಕಾಣಿಸಿಕೊಳ್ಳುವಂತಹ ಪಾತ್ರಗಳ ಮೂಲಾನ್ವೇಷಣೆಗೆ ಋಗ್ವೇದ ಮತ್ತು ನಂತರದ ವೈದಿಕ ಸಾಹಿತ್ಯವನ್ನು ಆಶ್ರಯಿಸಿರುವುದು ಕಂಡುಬರುತ್ತದೆ.

"ದೇವರು ಜಗತ್ತಿನ ಉದ್ಧಾರಕ್ಕಾಗಿ ಸದಾ ಜಾಗರೂಕನಾಗಿರುತ್ತಾ ಯಾವ ರೂಪ, ಆಕಾರ, ವ್ಯಕ್ತಿತ್ವಗಳಲ್ಲೂ ಇಳಿದು ಬರಬಲ್ಲನೆಂಬ ಅಮೂರ್ತರೂಪಗಳ ಅವತಾರ ತತ್ತ್ವವು ವೇದೋಕ್ತವಾಗಿದ್ದದ್ದು, ಪುರಾಣಗಳಲ್ಲಿ ವಿಶಿಷ್ಟವಾಗಿ ರೂಪುಗೊಂಡು ಬೆಳೆದು ನಿಂತಿದೆ."[೧೩] ಮಹಾಭಾರತ ಬೆಳವಣಿಗೆಯಲ್ಲಿ ಈ ದೇವರುಗಳನ್ನು ಹಂತ ಹಂತಗಳಲ್ಲೂ ಕಾಣಬಹುದಾಗಿದೆ.

~~~***~~~

**ಅಡಿಟಿಪ್ಪಣಿಗಳು :**

೧. ಜಿಟಿ. ನಾರಾಯಣರಾವ್, ವಿಜ್ಞಾನ ವರ್ತಮಾನ, ಪು.೬
೨. ಶ್ರೀಮನ್ಮಹಾಭಾರತ ಭಾ-೨, ಪು. ೨೮೦೦
೩. ಋ.ಸಂ.ಭಾ-೧, ಪು. ೧೮೪.
೪. ಶ್ರೀಮನ್ಮಹಾಭಾರತ, ಭಾ-೧, ಪು. ೩೯೫.
೫. ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯ, ಮ.ಭಾ.ತಾ.ನಿ. ಪು. ೧೦೫.
೬. ಜಿ.ಟಿ. ನಾರಾಯಣರಾವ್, ವಿಜ್ಞಾನ ವರ್ತಮಾನ, ಪು. ೮೧.
~~~

೭. "ಕಸ್ಯಾಂ ಚೋತ್ಪಾದಯಾಮಾಸ ಶುಕಂ ವ್ಯಾಸಸ್ತಪೋಧನಃ ।
ನ ಹಸ್ಯಸ್ಯ ಜನನೀಂ ವಿದ್ಮ ಜನ್ಮ ಚಾಗ್ರ್ಯಂ ಮಹಾತ್ಮನಃ ॥"

ಶ್ರೀಮನ್ಮಹಾಭಾರತ, ಭಾ-೨೬, ಪು. ೩೦೨೩.

೮. ಶಂ.ಬಾ. ಜೋಶಿ

೯. ಪ್ರೊ॥ ಕೆ.ಎಸ್.ನಾ. ಶ್ರೀವ್ಯಾಸಸೂಕ್ತಿಸುಧಾ, ಪು. ೧೫. (ಮುನ್ನುಡಿ)

೧೦. ಪ್ರೊ॥ ಕೆ.ಎಸ್.ನಾ. ಶ್ರೀವ್ಯಾಸಸೂಕ್ತಿ ಸುಧಾ, ಪು. ೧೬ (ಮುನ್ನುಡಿ)

೧೧. ಶಂ.ಬಾ. ಜೋಶಿ, ನಾ.ಪ್ರ.ವಿ. ಭಾಗ-೧, ಪು. ೩೩.

೧೨. -- ಅದೇ -- ಪು. ೧೯ (ಮುನ್ನುಡಿ)

~~~\*\*\*~~~

## "ಆಧುನಿಕ ಚಿಂತನೆ"ಯಲ್ಲಿ 'ಅಕ್ಷದ್ಯೂತ' ಮತ್ತು 'ದ್ರೌಪದಿ ವಸ್ತ್ರಾಪಹರಣ' ಪ್ರಸಂಗಗಳು :

ಇಲ್ಲಿ ಒಂದು ವಿಚಾರವನ್ನು ಗಮನಿಸಬೇಕು. 'ಆಧುನಿಕ ಚಿಂತನೆ' ಎಂದರೆ, "ಮನಸ್ಸಿಗೆ ಬಂದದ್ದನ್ನು ಹೇಳಿ ತನ್ನ ಅಪ್ರಬುದ್ಧತೆಯ ಮೂರ್ಖತನವನ್ನು ಪ್ರದರ್ಶಿಸುವುದಲ್ಲ. ಮಹರ್ಷಿಗಳು, ಪ್ರಾಜ್ಞರು ಒಂದು ಕಾಲದಲ್ಲಿ ಹೇಳಿದ ನಂಬಿಕೆ, ವರ್ಣನೆಯನ್ನು ಖಂಡಿಸುವುದೂ ಅಲ್ಲ, ಅದನ್ನು ವಿಕೃತಗೊಳಿಸಿ ಸ್ವಬುದ್ಧಿ ವೈಭವವನ್ನು ಪ್ರದರ್ಶಿಸಲು ಯತ್ನಿಸುವುದೂ ಅಲ್ಲ.. ಆಧಾರವಿಲ್ಲದೆ ವಿಕೃತಗೊಳಿಸುವುದು ಸೌಜನ್ಯವಲ್ಲ. ಕವಿ ಲೋಕಕ್ಕೆ ಮಾಡುವ ಅಪಚಾರವದು. ಇನ್ನೊಬ್ಬರ ಶ್ರದ್ಧಾ ವಿಶ್ವಾಸಗಳನ್ನು ಸ್ವೇಚ್ಛೆಯಾಗಿ ಕೆದಕುವುದು ದೌರ್ಜನ್ಯ."[೧] ಎನಿಸುತ್ತದೆ.

'ಪಗಡೆಯಾಟ' ಕಾಲಯಾಪನಕ್ಕಾಗಿ ಆಡುತ್ತಿದ್ದ ಆಟ. ಆದರೆ ಕೆಲವೊಮ್ಮೆ ಇದು ಜೂಜಾಟವಾಗುತ್ತಿತ್ತು. ಪಣ ತೊಟ್ಟು ದ್ಯೂತ ಆಡಿದರೆ ಸೋತನವ ಪರಿಸ್ಥಿತಿ ಏನು ಆಗುತ್ತಿತ್ತೆಂದು ತೋರಿಸಲಿಕ್ಕಾಗಿಯೇ ವ್ಯಾಸರು ಸಿದ್ಧರಾದರು. ಆ ವೇಳೆಗಾಗಲೇ ನಳ-ದಮಯಂತಿಯರ ಕಥೆಯೂ ವ್ಯಾಸರ ಕಣ್ಮುಂದೆ ಇತ್ತು. ದುರ್ಯೋಧನ ಯುಧಿಷ್ಠಿರನನ್ನು ಜೂಜಾಟಕ್ಕೆ ಆಹ್ವಾನಿಸಿದಾಗ ನಿರಾಕರಿಸಲು ಸಾಧ್ಯವಿರಲಿಲ್ಲ. ಏಕೆಂದರೆ ಇದು ರಾಜಕ್ರೀಡೆಯಾಗಿತ್ತು. ಕ್ಷಾತ್ರಿಯರಲ್ಲದ ಹೇಡಿಗಳು ಮಾತ್ರ ದ್ಯೂತ, ಯುದ್ಧಗಳಿಂದ ತಪ್ಪಿಸಿಕೊಳ್ಳುವ ಹೇಡಿಯಾಗಿರುತ್ತಿದ್ದರು. ಈ 'ಅಕ್ಷದ್ಯೂತ'ದ ಆಹ್ವಾನವನ್ನು ನಿರಾಕರಿಸುವುದು ಒಬ್ಬ ಸಾಮ್ರಾಟನ ಪ್ರತಿಷ್ಠೆಗೆ ಕಳಂಕದತ್ತಿತ್ತು ಅಂದಿನ ಸಾಮಾಜಿಕ ಸ್ಥಿತಿಯಲ್ಲಿ. ಈ ಮನೋಭಾವವೇ ಯುಧಿಷ್ಠಿರನನ್ನು ಅನೇಕ ಧರ್ಮಸಂಕಟಗಳ ಕುಣಿಕೆಗೆ ನೇತುಹಾಕಿಕೊಳ್ಳುವಂತೆ ಮಾಡಿತು. ಸಾಮ್ರಾಜ್ಯವನ್ನೇ ವಿನಾಶದತ್ತ ಕೊಂಡೊಯ್ದಿತು. ಲೋಕ ತಿಳಿದಂತೆ ಯುಧಿಷ್ಠಿರನೇನೂ ಜೂಜಾಟದ ವ್ಯಸನಿಯೇನಲ್ಲ. ಆದರೆ ಪಣ ತೊಟ್ಟು ಆಡುವ ಆಟದ ಪರಿಣಾಮವೇನು ಆದೀತೆಂದು ತೋರಿಸಲು ವ್ಯಾಸರು ಪಾಂಡವರನ್ನು ಆಯ್ಕೆ ಮಾಡಿಕೊಂಡರು. ಇದೇ ವ್ಯಾಸರ ಈ ಮಹಾಕಾವ್ಯದ ಉದ್ದೇಶವೂ ಆಗಿತ್ತು. ಅವರು ಈ ಮಹಾಕಾವ್ಯವನ್ನು ಒಂದು ನೈತಿಕಕಾವ್ಯವನ್ನಾಗಿಸಲು ಅದಕ್ಕೆ ಸೂಕ್ತ ಪಾತ್ರಗಳನ್ನು ಸೃಷ್ಟಿಸಿದ್ದಾರೆ. 'ಮಾನವರಲ್ಲಿಯ ಮೂಲಭೂತ ಅಂತಃಸತ್ವದ ಮತ್ತು ಲೋಭ, ಮೋಹಗಳ ಹೋರಾಟದ ಚಿತ್ರಣವೂ ಇಲ್ಲಿ ಪರಿಣಾಮಕಾರಿಯಾಗಿ ರೂಪುಗೊಂಡಿದೆ. **ಮಹಾಭಾರತದ ಹೆಚ್ಚಿನ ಪಾತ್ರಗಳ, ಸನ್ನಿವೇಶಗಳ ಮೂಲಾನ್ವೇಷಣೆ-ಋಗ್ವೇದ** ಎನ್ನುವುದು ಬಹಳ ಔಚಿತ್ಯಪೂರ್ಣ. ಏಕೆಂದರೆ ಋಗ್ವೇದದ ಹಲವಾರು ಆಖ್ಯಾನಗಳಲ್ಲಿ ಮಹಾಭಾರತದಲ್ಲಿ ಮತ್ತೊಂದು ರೂಪ ಪಡೆದು ಕ್ರಿಯಾಶೀಲವಾಗಿರುವುದು ಕಂಡುಬರುತ್ತದೆ. ಮತ್ತೆ ಕೆಲವು ಪ್ರಸಂಗಗಳು ಪರಿವರ್ತನೆಗೊಂಡು ಅಧಃಪತನ ಹೊಂದಿವೆ. "ವೇದಗಳಿಂದ ತೆಗೆದುಕೊಂಡ ಸೂಕ್ಷ್ಮ ವಿಚಾರಗಳನ್ನು ಸಾಮಾನ್ಯ ಶ್ರೋತೃವಿನ ಕಲ್ಪನೆಗೆ ನಿಲುಕದಂತೆ ಉದ್ದೇಶಪೂರ್ವಕವಾಗಿಯೇ ಉತ್ಪ್ರೇಕ್ಷಿಸಿರುವುದೇ ಪುರಾಣಿಕರು ಸ್ವಯಂ ಪ್ರಾಮಾಣ್ಯವೆನಿಸಿವೆ."

(ಡಾ॥ ಕೆ.ಎಲ್. ಗೋಪಾಲಯ್ಯ, "ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ", ಪು.೮)
~~~

**ಧರ್ಮರಾಯನು ತನ್ನ ಸೋದರರನ್ನೂ, ಪತ್ನಿಯನ್ನೂ ಪಣವಿಟ್ಟು ಜೂಜಾಡಿದುದು; ದ್ರೌಪದಿಗೆ ಮಾನಭಂಗ ಮಾಡಲು ದುರ್ಯೋಧನನು ಪ್ರಯತ್ನಸಿದಾಗ ಭೀಷ್ಮದ್ರೋಣಾದಿಗಳು ತೀವ್ರವಾದ ಪ್ರತಿಭಟನೆಯನ್ನು ಮಾಡದೇ ಇದ್ದುದು ಯಾಕೆ?** –ಎನ್ನುವುದೊಂದು ಇದೂವರೆಗೂ ಕಾಡುತ್ತಿರುವಂತಹ ಜ್ವಲಂತ ಪ್ರಶ್ನೆ 'ಮಹಾಭಾರತ' ಕಾವ್ಯವನ್ನು ಓದಿದವರೆಲ್ಲರಿಗೂ ಕಾಡುವ ಪ್ರಶ್ನೆಯಾಗಿಯೇ ಉಳಿದಿದೆ. ಇದಕ್ಕಾಗಿಯೇ ವೇದದೊಳಗಿನ ವೈಶ್ವಿಕ ಸಂಕೇತಗಳ ಹಿನ್ನೆಲೆಯಿಂದಲೇ 'ಮಹಭಾರತ'ದಂತ ಈ ರಾಷ್ಟ್ರೀಯ ಆರ್ಷ ಮಹಾಕಾವ್ಯದ ಸಮೀಕ್ಷೆ ಆಗತಕ್ಕದ್ದು ಎಂದು ಡಾ॥ ಶಂ.ಬಾ. ಜೋಶಿಯವರು ಹೇಳಿರುವಂತೆ; ಪಾಂಡವರು 'ಅಕ್ಷದ್ಯೂತ'ದಲ್ಲಿ ಸೋತರು. ದ್ರೌಪದಿ 'ಅಕ್ಷದಾಸಿ'ಯಾದಳು. ಅವಳನ್ನು ಸಭೆಗೆ ಎಳೆತಂದು ದ್ಯೂತ ಗೆದ್ದ ಕೌರವರು ಆಕೆಯ ಸೀರೆ ಸೆಳೆಯುತ್ತಾರೆ. ಋಗ್ವೇದದ 'ದ್ಯೂತ'ದ ಸಂಪ್ರದಾಯ ಆ ಕಾಲದಲ್ಲಿ ಹಾಗೇ ಇತ್ತು. ದ್ಯೂತದ ಈ ಯುಗಧರ್ಮ–ಪೂರ್ವ ಪರಂಪರೆಯನ್ನು ಬದಲಾಯಿಸುವುದು ವ್ಯಾಸರ ಮಹಾಕಾವ್ಯ ರಚನೆಯ ಉದ್ದೇಶ. ಏಕೆಂದರೆ 'ಅಕ್ಷದ್ಯೂತ'ದಲ್ಲಿ ನಡೆಸುವ ಪಗಡೆ ಕಾಯಿಗಳು ನಿರ್ಜೀವವಾಗಿರಬಹುದು. ಆದರೆ ಭಾರತದಲ್ಲಿ ನಡೆಯುವ ಕುರುಕ್ಷೇತ್ರ ಯುದ್ಧದ ಈ ಚದುರಂಗದ ಕ್ರೀಡೆಯಲ್ಲಿ ಆಟಗಾರನು ಕೃಷ್ಣ. ಪಾಂಡವರೆಲ್ಲರೂ ಚದುರಂಗದಲ್ಲಿ ಬಳಸುವ ರಾಜ, ಮಂತ್ರಿ, ಕುದುರೆ, ಒಂಟೆ, ಸೇನಾನಿಗಳೆಂಬ ಕಾಯಿಗಳು. ತನಗಿಷ್ಟ ಬಂದಂತೆ ಈ ಕ್ರೀಡೆಯನ್ನಾಡಿಸಿ, ಕೌರವರನ್ನು ಸೋಲಿಸಿ, ದುರ್ಮಾರ್ಗಿಗಳನ್ನು ನಾಶ ಮಾಡಿ, ಪಾಂಡವರನ್ನು ಮಾತ್ರ ನಾಮಮಾತ್ರಕ್ಕೆ ಗೆಲ್ಲಿಸಿ ಎಷ್ಟೇ ಕಷ್ಟ–ನಷ್ಟಗಳು ಬಂದರೂ ಧರ್ಮಕ್ಕೆ ಜಯವೆಂದು ಸಾರಿ ತನಗೇನೂ ಸಂಬಂಧವಿಲ್ಲ ಎಂಬಂತೆ ಮಾಡಿದವನೇ ಕೃಷ್ಣ."[೨] ಆದರೂ ದ್ಯೂತದಿಂದ ಉಂಟಾದ ಅನರ್ಥವನ್ನು ಕೃಷ್ಣನಿಂದಲೂ ತಪ್ಪಿಸುವುದಾಗುವುದಿಲ್ಲ ಎನ್ನುವುದೇ ಇಲ್ಲಿನ ಧ್ವನಿ!

ಸೋತ ಗಂಡಂದಿರು ತಾವು 'ದ್ಯೂತ'ದಲ್ಲಿ ಸೋತ ನಂತರ ಕೌರವರ ದಾಸರಾಗುವರು. ಅಂದಮೇಲೆ ನಾನು ಹೇಗೆ ಪಾಂಡವರ ಮಡದಿ? ಪಾಂಡವರು ಕೌರವರ ದಾಸರಾದ ಮೇಲೆ ಇನ್ನೊಬ್ಬ ವ್ಯಕ್ತಿಯನ್ನು (ಅಂದರೆ ತನ್ನನ್ನು) ಪಣಕ್ಕೆ ಒಡ್ಡುವ ಹಕ್ಕು ಪಾಂಡವರಿಗಿದೆಯೇ? ದ್ರೌಪದಿ ಸಭೆಗೇ ಈ ಪ್ರಶ್ನೆಯನ್ನು ಕೇಳುತ್ತಾಳೆ.

ಸಭೆಯಲ್ಲಿ ವಯೋವೃದ್ಧರು, ಪೂರ್ವ ಪರಂಪರೆಗಳನ್ನರಿತವನೂ, ಸನಾತನ ಧರ್ಮನಿಷ್ಣಾತನೂ, ಸತ್ಯ ಪಕ್ಷಪತಿ ಎಂಬ ಗಾಂಗೇಯನು, ಸಭೆಯಲ್ಲಿ ದ್ರೌಪದಿಯ ಬಗೆಗಿನ ಕೃತ್ಯವು ಅತ್ಯಾಚಾರ, ಅಪರಾಧ, ಅನ್ಯಾಯ ಎಂದು ತಿಳಿದಿದ್ದರೂ ನಿಷೇಧಿಸಲಿಲ್ಲವೇಕೇ? 'ಅಕ್ಷದ್ಯೂತ' ಕಾಲದ ಮೌವು ಆತನ ಶೀಲಕ್ಕೇ ಕಳಂಕ ತರುವಂತಹದ್ದಾದರೂ ಭೀಷ್ಮ ದ್ರೌಪದಿಯ ರಕ್ಷಣೆಗೆ ಬರುವಂತಿರಲಿಲ್ಲ. ಆಟದ ನಿಯಮವನ್ನು ಮೀರುವಂತಿರಲಿಲ್ಲ.

ಇದೂವರೆಗೂ 'ಮಹಾಭಾರತ'ದಲ್ಲಿನ ಇಂತಹ ಅನೇಕ ಪ್ರಕರಣಗಳ ಬಗ್ಗೆ ಯಾರೊಬ್ಬರು 'ಆಧುನಿಕ ಚಿಂತನೆ'ಗೆ ತೊಡಗಿಲ್ಲ ಎಂಬ ಪ್ರಶ್ನೆಯೂ ಸಹಜವಾಗಿ ಉದ್ಭವಿಸುತ್ತದೆ. ಕಾರಣ ಇಷ್ಟೇ. "ಪೌರಾಣಿಕ ಪ್ರಸಂಗಗಳ ಬದಲಾವಣೆಗಳಾಗುವುದನ್ನು ಸಹಿಸದ ನಿಷ್ಠರು ಅವುಗಳ ಸುತ್ತ ಮಡಿವಂತಿಕೆಯ ಪಂಜರ ಕಟ್ಟಿ ರಕ್ಷಿಸುತ್ತಿದ್ದಾರೆ. ಒಂದು ಯುಗಕ್ಕೆ ಯಾವುದು ಪವಿತ್ರವೋ, ಪೂಜ್ಯವೋ ಅದು ಮುಂದಿನ ಯುಗಕ್ಕೆ ತ್ಯಾಜ್ಯವಾಗಬಹುದು."[೩] ವೈಜ್ಞಾನಿಕ ಮನೋಭಾವನದ ಮೂಲಲಕ್ಷಣಗಳಲ್ಲೊಂದಾದ ಕುತೂಹಲವನ್ನು ಇಲ್ಲಿಯೂ ಕಾಣುತ್ತೇವೆ. ಆದರೆ ಅದರಿಂದ ಮೂಡಿಬಂದದ್ದು ಮಾತ್ರ ಇಂದಿನ ಅರ್ಥದ, ವಿಚಾರ ಪ್ರಾನವಾದ ವಿಜ್ಞಾನವಲ್ಲ. ಏಕೆಂದರೆ, ಮೂವರ್‌ನೆಂಬ ಪಾಶ್ಚಾತ್ಯ ಪಂಡಿತನೊಬ್ಬನು ಚಿಂತಿಸುವಂತೆ; "ಪ್ರಾಚೀನ ಮಾನವ ಆಧುನಿಕ ಬುದ್ಧಿಜೀವಿಯಂತೆ ಯೋಚಿಸಲಿಲ್ಲ. ಮಾತ್ರವಲ್ಲ, ಅವನು ಹೇಗೆ ಯೋಚಿಸಬಹುದಾಗಿತ್ತೆಂದು ಇಂದು ನಾವೆನ್ನುತ್ತೇವೆಯೋ ಹಾಗೂ ಯೋಚಿಸಲಿಲ್ಲ. ಆದ್ದರಿಂದಲೇ ಅವರು ಸೃಷ್ಟಿಸಿದ್ದು ನಮಗೆ ಜಟಿಲವಾದ ಪುರಾಣ."[೪] ಮಹಾಭಾರತವು ವೇದ, ವೇದಾಂಗಗಳಲ್ಲಿನ ಪ್ರಾಚೀನ ಪ್ರಮಾಣೋಕ್ತಗಳ ಅರ್ಥದಲ್ಲಿ ಸಿದ್ಧಾಂತ ಸಮರ್ಥನೆಗಾಗಿ ವೈದಿಕ ಸಂಕೇತಗಳ ಆಧಾರವಾಗಿ ರಚನೆಗೊಂಡು 'ಪಂಚಮವೇದ' ಎಂದು ಪ್ರಸಿದ್ಧಿಯಾಗಿದೆ. ಹೀಗಿರುವಾಗ, "ವ್ಯಾಸರಿಗೆ ದಿವ್ಯತ್ವವನ್ನು ನೀಡಿ ಭಗವಾನ್ ಎಂದು ಮಾಡಿದ ಮೇಲೆ ಅವರ ಹೆಸರುಳ್ಳ ಕಾವ್ಯದ ವಿಷಯವಾಗಿ ಶಂಕೆಯನ್ನು ಹೇಗೆ ಮತ್ತು ಯಾರು ಎತ್ತಬೇಕು?"[೫] ಇಂತಹ ಸಮಯದಲ್ಲಿ **ಸಿಗ್ಮಂಡ್ ಫ್ರಾಯ್ಡ್** ಜನರ ಪ್ರಜ್ಞೆಯನ್ನೇ ಆಕ್ರಮಿಸಿಬಿಟ್ಟ. ತಲೆತಲಾಂತರದಿಂದ ಬಂದಿದ್ದ ನಂಬಿಕೆ, ಆಚಾರ–ವಿಚಾರಗಳು, ವಿಧಿ ನಿಷೇಧಗಳು ಕಲ್ಪನೆಗಳನ್ನು ಬೇರು ಸಹಿತ ಅಲ್ಲಾಡಿಸಿದ. "ಅವನ ವಿಪುಲವಾದ ಸಂಶೋಧನೆಗಳು, ಸಿದ್ಧಾಂತಗಳು ಒತ್ತಟ್ಟಿಗೆ ಉಳಿದು ಅದರ ಛಾಯೆ ಮಾತ್ರ ವಿನೂತನ ಪುರಾಣಗಳಾಗಿ ಸಂಚರಿಸತೊಡಗಿತು. ಧರ್ಮ, ಸಂಸ್ಕೃತಿ, ಸಭ್ಯತೆಗಳು, ಸ್ವರ್ಗ, ನರಕಗಳೆಲ್ಲ ಕಾಮ, ಭಯಗಳಂಥ ಮೂಲ ಪ್ರವೃತ್ತಿಗಳ ರೂಪಾಂತರವೆಂಬ ಘೋಷಣೆಯಿಂದ ಇಡೀ ವೈಚಾರಿಕ ವಾತಾವರಣವೇ ಮೇಲೆ ಕೆಳಗೆ ನೋಡಿತು."[೬]

~~~***~~~

## 21. ರಾಜಕ್ರೀಡೆ 'ದ್ಯೂತ' ಎಂಬ ಪಗಡೆಯಾಟದ ಹಿನ್ನೆಲೆ ಮತ್ತು ಅದರ ದುಷ್ಪರಿಣಾಮಗಳು :

ಋಗ್ವೇದ ೧೦ನೇ ಮಂಡಲದ ೩೪ನೇ ಸೂಕ್ತದಲ್ಲಿರುವ ಋಕ್ಸಂಖ್ಯೆ-೧೪. ಈ ಸೂಕ್ತಕ್ಕೆ "ಇಲೂಷ"ನ ಪುತ್ರನಾದ **"ಕವಷ"**ನೆಂಬುವವನು ಪ್ರಧಾನ ಋಷಿಯು. ಇಲ್ಲಿರುವ ಋಕ್ಕುಗಳಲ್ಲಿ ಜೂಜುಗಾರರ ಮತ್ತು ಪಗಡೆಯಾಟದ ಪ್ರಸಕ್ತಿಯ ವಿವರಗಳಿವೆ. **'ಅಕ್ಷ'** ಶಬ್ದವು ಹೊಂದು, ಸಂಪಾದಿಸು ಎಂಬರ್ಥವುಳ್ಳ 'ಅಶ್' ಧಾತುವಿನಿಂದ ನಿಷ್ಪನ್ನವಾಗಿ "ಪಗಡೆದಾಳ" ಎನ್ನುವ ಅರ್ಥವನ್ನು ಸೂಚಿಸುವುದಾಗಿದೆ.

ಜೂಜಾಡುವವರ ಬಳಿ ಈ ಪಗಡೆದಾಳಗಳು ಇರುತ್ತವೆ.

**ಕವಷನೆಂಬ ಋಷಿ** ಪಗಡೆ ಆಡುವುದರಲ್ಲಿ ಬಹಳ ಆಸಕ್ತಿಯುಳ್ಳವನಾಗಿದ್ದ ಜೂಜುಗಾರನೆಂದು ಪ್ರಸಿದ್ಧಿಯನ್ನೂ ಹೊಂದಿದ್ದ. ಈತ ಪಗಡೆ ಆಟದಲ್ಲಿ ಜೂಜುಗಾರನಿಗೆ ಗೆದ್ದಾಗ ಉಂಟಾಗುವ ಸಂತೋಷಾತಿಶಯವನ್ನೂ ಸೋತಾಗ ಉಂಟಾಗುವ ಹೃದಯವೇದನೆಯನ್ನೂ ಹೃದಯಂಗಮವಾಗಿ, ಅನುಭವಪೂರ್ವಕವಾಗಿ ವಿವರಿಸಿದ್ದಾನೆ.

ಈ ಜೂಜಾಟದಲ್ಲಿ ಪಣವಾಗಿಡುವ ಹಣವು ನಗದಾಗಿಯೇ ಇರಬೇಕೆಂಬ ನಿಯಮವೂ ಇತ್ತು.

ಸಾಲವಾಗಿ ಪಣವನ್ನು ಒಡ್ಡುವಂತಿರಲಿಲ್ಲ.

ಕವಷ ಋಷಿಯು ತನಗೆ ಸೋಲಾದ್ದರಿಂದ ಮನೆ-ಮಠ ಕಳೆದುಕೊಂಡು ಬೀದಿಗೆ ಬಂದು ಬಿದ್ದು ಬಿಡುತ್ತಾನೆ. ಒಂದು ತುತ್ತಿನ ಖೂಳಿಗೂ ಗತಿಯಿಲ್ಲದಂತಾಗಿ ರಸ್ತೆ ರಸ್ತೆಗಳಲ್ಲಿ ಅಲೆಯುತ್ತಾನೆ. ತಲೆ ಕೆಟ್ಟ ಹುಚ್ಚನಂತೆಯೂ, ಭಿಕ್ಷುಕನಂತಾದಾಗ ಪಗಡೆದಾಳಗಳನ್ನೂ, ಜೂಜನ್ನೂ ನಿಂದಿಸಿ "ಅದರಿಂದ ಜೂಜಾಡುವ ಜನರಿಗೆ ಉಂಟಾಗುವ ಮನೋವ್ಯಥೆಯನ್ನೂ, ಕಷ್ಟಗಳನ್ನೂ ವಿವರಿಸಿ ಜೂಜಾಡುವುದನ್ನು ನಿಂದಿಸಿರುವುದು ವ್ಯಾಸ ಋಷಿಗಳ ಮೇಲೆ ಹೆಚ್ಚಿನ ಪರಿಣಾಮವನ್ನುಂಟು ಮಾಡಿದೆ."[೭] ಎಲ್ಲಕ್ಕಿಂತಲೂ ಮಿಗಿಲಾಗಿ ಜೂಜಿನಲ್ಲಿ ಸೋತ ಜೂಜುಗಾರನ ಪತ್ನಿಯನ್ನು ಅವನ ಕಣ್ಣೆದುರಿನಲ್ಲೇ ಆ **ಪ್ರತಿಕಕ್ಷಿಗಳು ಹಿಡಿದೆಳೆದು ಅವಮಾನಪಡಿಸುತ್ತಾರೆ.** ಇದರಿಂದಲೇ ವ್ಯಾಸರು ಈ ದುಶ್ಚಟದಿಂದ ಇಡೀ ಮಾನವ ಕುಲ ದೂರವಿರಬೇಕೆಂದು ದೃಢನಿರ್ಧಾರ ಮಾಡಿದರು. ಆದರೆ ಈ 'ಅಕ್ಷದ್ಯೂತ'ವು ತೀರ ಪತ್ತೆಯಾಗದಷ್ಟು ಮಡಿಯ ವರ್ಣನೆಯಲ್ಲಿದೆ. (ಅಂದರೆ ವೇದಗಳಲ್ಲಿರುವ ಉಲ್ಲೇಖ ಇದಾದ್ದರಿಂದ) ಆದ್ದರಿಂದ ಅವರೇ ಸ್ವತಃ ಜನಸಾಮಾನ್ಯರೆಲ್ಲರಿಗಾಗಿಯೇ ಮತ್ತು ಈ ದ್ಯೂತದ ದುಷ್ಪರಿಣಾಮಗಳ ಬೋಧನೆಗಾಗಿಯೇ ಸುಂದರ ಕವನ ಈ ಮಹಾಭಾರತ ಎಂದು ಅನೇಕರಿಗೆ ಅನಿಸಿದ್ದೂ ಉಂಟು! ಆದರೆ **ಮಹಭಾರತಸ್ಥ 'ಅಕ್ಷದ್ಯೂತ'ದಲ್ಲಿ ದ್ರೌಪದಿಯೇ ಮುಖ್ಯ ಪಾತ್ರವಹಿಸುವವಳು.** ಏಕೆಂದರೆ;

**"ಋಗ್ವೇದ ಸಂಹಿತೆಯ ೧೦ನೇ ಮಂಡಲದ ೩೪ನೇ ಸೂಕ್ತದ ೪ನೇ ಋಕ್ಕಿನಲ್ಲಿ** ಉಲ್ಲೇಖಿಸಿರುವಂತೆ; ಈ ಜೂಜಾಟದಲ್ಲಿ ಸೋತವನ ಜೂಜುಗಾರನ ಪತ್ನಿಯನ್ನು ಇವನ ಪ್ರತಿಕಕ್ಷಿಗಳು ಅವಮಾನಪಡಿಸುತ್ತಾರೆ."[೮] ಎಂದಿರುವ ಜೂಜುಗಾರನ ಪತ್ನಿಯನ್ನೇ ವ್ಯಾಸರು 'ಜಯ' ಮಹಾಭಾರತದಲ್ಲಿ **ದ್ರೌಪದಿಯ** ಪಾತ್ರದಲ್ಲಿ ಸಮೀಕರಿಸಿದ್ದಾರೆ. ಮಹಾಭಾರತದ ಅಕ್ಷದ್ಯೂತ ಸಮಯದ ಅರ್ಥವಾಗಲು ಋಗ್ವೇದದೊಳಗಿನ ಅಕ್ಷದ್ಯೂತ ಸೂಕ್ತದಿಂದ ಮೌಲಿಕ ಸಹಾಯವೂ ದೊರೆಯುತ್ತದೆ. ದ್ಯೂತದಲ್ಲಿ ಸೋತವನ ಜಾಯೆ, ಹೀನಳಾಗಿ ಅವನಿಂದ ತ್ಯಜಿಸಲ್ಪಟ್ಟವಳಾಗಿ ಪರಿತಾಪ ಪಡುತ್ತಾಳೆ. (ಋ.೧೦-೩೪-೧೦)

ಅದೇರೀತಿ ಮಹಾಭಾರತದಲ್ಲೂ ಪಾಂಡವರು ದ್ಯೂತದಲ್ಲಿ ಸೋತ ತಮ್ಮ ಪತ್ನಿಯನ್ನು ದುಶ್ಯಾಸನಾದಿಗಳು ಸೀರೆ ಸೆಳೆದು ದ್ರೌಪದಿಯ ಸೌಂದರ್ಯದ ದರ್ಶನ ಪಡೆಯಲು ಉತ್ಸುಕರಾಗಿದ್ದರು. ಆಗ ದ್ರೌಪದಿಗೆ ಇನ್ನು ತನ್ನ ಪಾಡು ನಾಯಿಪಾಡು ಆಗುವುದು ನಿಶ್ಚಿತ ಎಂದು ಕಂಡಾಗ ಸಿಡಿಮಿಡಿಗೊಳ್ಳುತ್ತಾಳೆ. ಕಿಡಿಕಾರುತ್ತಾಳೆ. ಗಂಡಂದಿರೆಂಬ ಪಾಂಡವ ವೀರರಿಗೆ ತಮ್ಮ ಮಡದಿಯ ಗತಿ ಏನಾಗಲಿದೆ ಎಂಬುದು ಕಾಣುತ್ತಿತ್ತು. (ಋಗ್ವೇದ-ಅಕ್ಷದ್ಯೂತ
~~~

ವರ್ಣನೆಯಂತೆ) ಈ ಜೂಜಿನ ಫಲಿತವೂ ಎಂತಹುದು ಎಂಬುದನ್ನು ತತ್ಪೂರ್ವದ ಸಂಪ್ರದಾಯವನ್ನು ಅವರು ಅರಿತಿರಲಿಕ್ಕೇಬೇಕು. ತಮ್ಮ ಮಡದಿ **ದ್ಯೂತದಾಸಿಯಾದಲ್ಲಿ**, ಅವಳ ಪರಿಸ್ಥಿತಿ ಏನಾದೀತೆಂದೂ ತಿಳಿದಿತ್ತು. 'ಅಕ್ಷ'ದ್ಯೂತದ ಬಗೆಗೆ ತಿರಸ್ಕಾರ ಹುಟ್ಟುವಂತೆ ಋಗ್ವೇದದ ಸೂಕ್ತವನ್ನು 'ಮಹಾಭಾರತ'ದಲ್ಲಿ ಬರೆಯಲಾಗುತ್ತದೆ.

**ಹೀಗಾಗಿ** ಮಹಾಕಾವ್ಯವಾದ 'ಮಹಾಭಾರತ'ವನ್ನು ರಚಿಸಿದ ಕವಿಯ ಮನಸ್ಸಿನಲ್ಲಿ 'ದ್ಯೂತ'ದ ಪ್ರತಿಮೆಯೇ 'ಭಾರತ'ವಾಗಿದೆ.

ದ್ಯೂತವನ್ನಾಡುವ ಜೂಜುಗಾರನ ಸೋಲು–ಗೆಲುವಿನ ಪರಿಸ್ಥಿತಿ ಏನೇನಿದೆಯೋ ಅದನ್ನೆಲ್ಲ ಕವಿ ಭಾರತದ ಕಥೆಯಲ್ಲಿ ಕಾಣುತ್ತಾನೆ.

ಮಹಾಭಾರತ ಕಾವ್ಯ ಪ್ರತಿಮಾ ವಿಧಾನದಲ್ಲಿಯೇ ಮುಂದುವರೆಯುತ್ತದೆ.

ಪ್ರತಿಮೆಯ ಮೂಲರೂಪ ಉಪಮೆ.

ಉಪಮೆ ಮತ್ತು ಸಂಕೇತಗಳು ಪ್ರತಿಮೆಯ ಎರಡು ತುದಿಗಳು. ಮಹಾಭಾರತ ಮಹಾಕಾವ್ಯದ ತುಂಬಾ ಪ್ರತಿಮೆ, ಉಪಮೆ, ಸಂಕೇತಗಳು ಸಹಸ್ರಾರು ಸಂಖ್ಯೆಯಲ್ಲಿವೆ. ಆದರೆ ಇಡೀ ಕಾವ್ಯಕ್ಕೆ ಕಾವ್ಯಪ್ರತಿಮೆ ಒಂದೇ! "ಇತಿಹಾಸ–ಪುರಾಣ–ದರ್ಶನಗಳಲ್ಲಿ ಇಂಥ ಸಮಗ್ರ ಸೌಂದರ್ಯ ತತ್ವವು ಧ್ವನಿಪೂರ್ಣವಾಗಿ ಎಂದೋ ಹರಳುಗಟ್ಟಿರುವುದನ್ನು ನಾವು ಸ್ಫುಟವಾಗಿ ಕಾಣಬಹುದು."[5] ಉಪಮಾ, ರೂಪಕ, ಉತ್ಪ್ರೇಕ್ಷೆ, ಅತಿಶಯೋಕ್ತಿ, ಶ್ಲೇಷೆ, ಸಮಾಸೋಕ್ತಿ, ವಿರೋಧಾಭಾಸ ಇತ್ಯಾದಿ ಅಲಂಕಾರಗಳು ಕಾವ್ಯದ ತುಂಬಾ ಅಸಂಖ್ಯಾತವಾಗಿವೆ. **ಅನುಭವದ ಅಭಿವ್ಯಕ್ತಿಯಲ್ಲಿ ಮೂಡಿ ಬಂದ ಅಲಂಕಾರಗಳೇ ಪ್ರತಿಮೆ** ಎಂದು ಸಿ.ಡಿ.ಲೂಯಿ ಹೇಳುತ್ತಾನೆ. ಒಂದಲ್ಲಾ ಒಂದು ರೂಪದಲ್ಲಿ ಇವು ಕಾವ್ಯಕ್ಕೆ ಅನಿವಾರ್ಯವಾದವುಗಳು. ಅಷ್ಟೇಅಲ್ಲ; **ಇಡೀ ಕಾವ್ಯವೇ ಒಂದು ಪ್ರತಿಮೆ ಎಂದು ಹೇಳಿರುವುದನ್ನು 'ಮಹಾಭಾರತ'ಕ್ಕೆ ಅನ್ವಯಿಸಲಾಗಿದೆ.**

## ದ್ರೌಪದಿಯ ವಸ್ತ್ರಾಪಹರಣ ಪ್ರಸಂಗ :

ದ್ರೌಪದಿಯ ವಸ್ತ್ರಾಪಹರಣ ಪ್ರಸಂಗ : ಸ್ತ್ರೀ ಜಾತಿಯಲ್ಲೇ ಅತಿ ಶ್ರೇಷ್ಠಳಾದವಳು. ಸಾಮ್ರಾಜ್ಞಿಯಾದಂತಹವಳಿಗೇ ಈ ಕ್ಷತ್ರಿಯರು ಇಂತಹ ದುಃಸ್ಥಿತಿಯನ್ನು ತಂದೊಡ್ಡಬೇಕಾದರೆ ಇನ್ನು ಈ ದೇಶದ ಉಳಿದ ಸಾಮಾನ್ಯ ಸ್ತ್ರೀಯರ ಪಾಡೇನು? ಎಂದು ಸ್ವತಃ ದ್ರೌಪದಿಯೇ ಯೋಚಿಸತೊಡಗಿದಳು. ಹೆಣ್ಣನ್ನು ರಾಜ–ಮಹಾರಾಜರ ಅಂತಃಪುರಗಳಲ್ಲಿ ಯಾವ ರೀತಿ ನಡೆಸಿಕೊಳ್ಳುತ್ತಾರೆಂದು ದ್ರೌಪದಿಯೇ ಚೆನ್ನಾಗಿ ಬಲ್ಲಳು! ದಾಸಿಯರನ್ನು ಯಾವ ಕೀಳು ಮಟ್ಟಕ್ಕೆ ಬೇಕಾದರೂ ಉಪಯೋಗಿಸಿಕೊಳ್ಳುತ್ತಿದ್ದುದನ್ನು ಆಕೆ ಬಲ್ಲವಳಾಗಿದ್ದಳು. ಅಂತಃಪುರಗಳಲ್ಲಿ ದಾಸಿಯರು ನಗ್ನರೂಪದಲ್ಲಿ ರಾಜ–ಮಹಾರಾಜರಿಗೆ ಸುರೆಯನ್ನು ಸರಬರಾಜು ಮಾಡುತ್ತಿದ್ದುದನ್ನೂ ಎಷ್ಟೋ ಸಲ ದ್ರೌಪದಿ ನೋಡಿ ಜಿಗುಪ್ಸೆ ಪಟ್ಟುಕೊಂಡಿದ್ದಳು. ಅರಮನೆ–ಗುರುಮನೆಗಳಲ್ಲಿ ಸ್ತ್ರೀಯರ ಅದರಲ್ಲೂ ದಾಸಿಯರ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು.

ದ್ರೌಪದಿಯ ವಸ್ತ್ರಾಪಹರಣದ ಪ್ರಸಂಗದಲ್ಲಿ ದ್ಯೂತದ ದೆಸೆಯಿಂದಾಗಿ ಸಭೆಯಲ್ಲಿ ಸಿಕ್ಕಿ ಹಾಕಿಕೊಂಡ ದ್ರೌಪದಿಗೆ ಕ್ಷತ್ರಿಯರು ದಾಸಿಯರನ್ನು ನಡೆಸಿಕೊಳ್ಳುವ ರೀತಿ ಅಮಾನುಷ ಕ್ರೌರ್ಯವೆನಿಸಿತು. ದ್ರೌಪದಿ ದಾಸಿ ಜನಾಂಗದ ಪ್ರತಿನಿಧಿಯಾಗಿ ಚಿಂತಿಸತೊಡಗುತ್ತಾಳೆ. ಯಾವಾಗ ಪಾಂಡವರು ದ್ಯೂತದಲ್ಲಿ ಸೋತರೋ ಆ ಕ್ಷಣದಿಂದಲೇ ತಾನು ಕೌರವರ ದಾಸಿಯಾದೆನೆಂದು ಆಕೆಗೂ ತಿಳಿದಿತ್ತು. ಅಂದಿನ ಯುಗಧರ್ಮದಂತೆ ದಾಸಿಯಾದವಳನ್ನು ಕ್ಷತ್ರಿಯರು ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದರು. ರಾಜಶಾಸನವೇ ಹಾಗಿತ್ತು. ಸಭೆಯಲ್ಲಿದ್ದ ಭೀಷ್ಮ, ದ್ರೋಣ, ವಿದುರಾದಿ ಹಿರಿಯರೂ ಯಾಕೆ ಇದನ್ನು ವಿರೋಧಿಸಲಿಲ್ಲವೆಂಬ ಜ್ವಲಂತ ಪ್ರಶ್ನೆಗೆ ಯಾರೂ ಸೂಕ್ತ ಉತ್ತರ ನೀಡಿಲ್ಲವೆಂದರೆ ರಾಜಶಾಸನದ ವಿರುದ್ಧ ಯಾರೂ ಮಾತಾಡುವಂತಿರಲಿಲ್ಲ.

ಯುಧಿಷ್ಠಿರ 'ದ್ಯೂತ'ದಲ್ಲಿ ಸೋತ ದ್ರೌಪದಿ ಈಗ ಕೌರವರ 'ದಾಸಿ'ಯಾಗಿ ಹೋಗಿದ್ದಳು. ಅಂತಃಪುರಗಳಲ್ಲಿ ದಾಸಿಯರನ್ನು ನಡೆಸಿಕೊಳ್ಳುವಂತೆ ದಾಸಿಯಾದ ದ್ರೌಪದಿಯನ್ನು ನಡೆಸಿಕೊಳ್ಳುವ ಅಧಿಕಾರ ತಮಗಿದೆ ಎನ್ನುವುದು ದುರ್ಯೋಧನಾದಿಗಳ ಅಭಿಮತ.

ದ್ರಾಪದಿಗೆ ತಾನು ಈ ಸಭೆಯಲ್ಲಿ ಅನುಭವಿಸಿದ ಅವಮಾನವನ್ನು ಇನ್ನು ಮುಂದೆ ಇಂತಹ ಪರಿಸ್ಥಿತಿ ಯಾವ ಸ್ತ್ರೀಗೂ ಬರಬಾರದೆಂದರೆ ಈ ಕ್ಷತ್ರಿಯ ಕುಲ ನಾಶವಾಗಬೇಕೆಂದು ಆ ಬೆಂಕಿಯ ಮಗಳು, ಅಗ್ನಿಕನ್ಯೆ ಯಾಜ್ಞಸೇನಿ ಮನದಲ್ಲೇ ಶಪಥ ಮಾಡುತ್ತಾಳೆ.

ದ್ರೌಪದಿಯ ಸೇಡಿನ ಕಿಡಿ ಅಗ್ನಿಕನ್ಯೆಯಲ್ಲಿ ಗರಿ ಗೆದರುತ್ತದೆ. ತನ್ನ ಈ ವಸ್ತ್ರಾಪಹರಣ ಪ್ರಸಂಗ ಇಡೀ ಕ್ಷತ್ರಿಯ ಕುಲ ನಾಶಕ್ಕೆ ಮುನ್ನುಡಿಯಾಗಲೆಂದು ಅವಳು ನಿರ್ಧರಿಸುತ್ತಾಳೆ.

ದ್ರೌಪದಿಗೆ ತನ್ನ ಅತ್ತೆ ಕುಂತಿಗೆ ಕುಂತಿಭೋಜ ರಾಜನ ಆಸ್ಥಾನದಲ್ಲಿ ದೂರ್ವಾಸ ಋಷಿಯಿಂದಾದ ಅಪಮಾನ ಇಡೀ ಸ್ತ್ರೀ ಜಾತಿಗೇ ಕಳಂಕ ತರುವ ಪ್ರಸಂಗ. ಕ್ಷತ್ರಿಯರು ಹಾಗೂ ಋಷಿಗಳಿಂದ ಆ ಕಾಲದಲ್ಲಿ ಆಗುತ್ತಿದ್ದ ಸ್ತ್ರೀಶೋಷಣೆಯ ಬಗ್ಗೆ ದ್ರೌಪದಿಗೆ ಭಯಂಕರವಾದ ಕೋಪವಿತ್ತು.

ಇದು 'ದ್ಯೂತ'ವೆಂಬ ಜೂಜಿನಿಂದ ಉಂಟಾದ ದುಷ್ಪರಿಣಾಮ. ಆದರೂ ಈ ಪಗಡೆಯಾಟವೆಂಬ ಜೂಜಿನ ನಿಯಮಗಳು ಎಲ್ಲರಿಗೂ ತಿಳಿದಿದ್ದರಿಂದಲೇ ಯಾರೂ ಈ ಬಗ್ಗೆ ಹೆಚ್ಚು ಮಾತಾಡುವಂತಿರಲಿಲ್ಲ.

೧. ದ್ಯೂತದಲ್ಲಿ ಸೋತ ಧರ್ಮರಾಯನಿಗೆ ದ್ರೌಪದಿಯನ್ನು ಪಣಕ್ಕಿಡುವ ಅಧಿಕಾರವಿರಲಿಲ್ಲ.

೨. ಸೋತ ಜೂಜುಕೋರನ ಪತ್ನಿಯನ್ನು ಗೆದ್ದವರು ತಮಗಿಚ್ಛೆಬಂದಂತೆ ಉಪಯೋಗಿಸಿಕೊಳ್ಳಬಹುದಾಗಿತ್ತು.

ಈ ಕಾರಣಕ್ಕಾಗಿ ಜೂಜುಗಾರ ಆಟ ಆಡುವ ಮುಂಚೆ ತನ್ನ ಪತ್ನಿಯನ್ನು ತ್ಯಜಿಸಿಬಿಡುತ್ತಿದ್ದ. (ಋ.೧೦.೩೪.೨) ಇಲ್ಲದಿದ್ದರೆ ಜೂಜುಗಾರನ ಸೋತವನ ಪತ್ನಿಯನ್ನು ಗೆದ್ದ ಪ್ರತಿಕಕ್ಷಿಗಳು ಹಿಡಿದೆಳೆದು ಅವಮಾನಪಡಿಸುತ್ತಿದ್ದರು. (ಋ.೧೦.೩೪.೪)

ವಾಸ್ತವವಾಗಿ ದ್ರೌಪದಿಗುಂಟಾದ ಅವಮಾನದ "ಈ ಕಟುಸತ್ಯವನ್ನು ಸಹಿಸಲಾರದ ಭಾರತೀಯ ಸಹೃದಯರ ನೈತಿಕ ದೃಷ್ಟಿ ಅಕ್ಷಯವಸ್ತ್ರ ಪ್ರಸಂಗವನ್ನು ಸೃಷ್ಟಿಸಿತು."[೧೦] ಅಷ್ಟೇ ಅಲ್ಲ; ಭಂಡಾರ್ಕರ್ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯು ಪರಿಷ್ಕರಿಸಿದ 'ಮಹಾಭಾರತ' ಗ್ರಂಥದಲ್ಲಿ ಇದನ್ನು ಕೈಬಿಡಲಾಗಿದೆ. ಅಕ್ಷಯಾಂಬರ ಪ್ರಸಂಗವನ್ನು ವ್ಯಾಸರು ಬರದಿರದೆ, ನಂತರದ ಕಾಲದಲ್ಲಿ ಯಾರೋ ಪುರಾಣಿಕರು ಇದನ್ನು ಸೇರಿಸಿರುತ್ತಾರೆ ಎನ್ನುವುದು ಖಚಿತವಾಯಿತು. ಇದು ಪ್ರಕ್ಷಿಪ್ತವೆನ್ನುವುದನ್ನು ತೋರಿಸುವುದಕ್ಕಾಗಿ ಮೂಲ ವ್ಯಾಸಭಾರತದ ಕೆಲವು ಉಲ್ಲೇಖಗಳು;

೧. 'ಸಭಾಪರ್ವ'ದಲ್ಲಿ ದ್ರೌಪದಿಯು ಕೃಷ್ಣನನ್ನು ಕುರಿತು ಪ್ರಾರ್ಥಿಸುತ್ತಿರುವಾಗ ಕೃಷ್ಣ ದ್ವಾರಕೆಯಲ್ಲಿದ್ದ.

೨. "'ವನಪರ್ವ'ದಲ್ಲಿ ಅರಣ್ಯವಾಸದಲ್ಲಿದ್ದ ಪಾಂಡವರನ್ನು ಭೇಟಿ ಮಾಡಲೆಂದು ಬಂದ ಸ್ವತಃ ಕೃಷ್ಣನೇ, "ಈ 'ದ್ಯೂತ ಪ್ರಸಂಗ'ದಲ್ಲಿ 'ದ್ರೌಪದಿ ವಸ್ತ್ರಾಪಹರಣ' ನಡೆಯುವಾಗ 'ನಾನು ಶಾಲ್ವ ರಾಜನನ್ನು ವಧಿಸುವುದಕ್ಕಾಗಿ **ಆನರ್ತ ದೇಶದ ಸೌಭ** ಎನ್ನುವ ಪ್ರದೇಶದ ಮೇಲೆ ಯುದ್ಧಕ್ಕೆ ಸೈನ್ಯ ಸಮೇತನಾಗಿ ಹೋಗಿದ್ದೆ. ಹೀಗಾಗಿ ಈ ಕುರಿತು ನನಗೆ ಯಾವ ಸಂಗತಿಯೂ ತಿಳಿದಿರಲಿಲ್ಲ. ನಾನು ದ್ವಾರಕೆಗೆ ಮರಳಿದ ಮೇಲೆ ನಡೆದ ಎಲ್ಲಾ ಸಮಾಚಾರಗಳನ್ನೂ ಸಾತ್ಯಕಿಯಿಂದ ತಿಳಿಯಿತು.' ಎಂದು ಹೇಳುತ್ತಾನೆ."[೧೧] "ದ್ರೌಪದಿಗಾದ ಈ ಅವಮಾನವಂತೂ ಅದೂ ರಾಜಪುತ್ರಿಯಾಗಿ, ಪಾಂಡವರ ಪಟ್ಟದರಸಿಯಾಗಿ ದುಷ್ಕೃತ್ಯದ ಪರಮಾವಧಿ. 'ರಜಸ್ವಲೆ'ಯಾಗಿ ಏಕವಸ್ತ್ರಳಾಗಿದ್ದ ದ್ರೌಪದಿಯನ್ನು ರಾಜಸಭೆಗೆ ಎಳೆದು ತಂದವಳಾಗಿ ತನ್ನ ವಸ್ತ್ರವನ್ನು ಉಳಿಸಿಕೊಳ್ಳಲಾಗದೇ ಭಂಗ ಪಟ್ಟ ಪ್ರಸಂಗವಂತೂ ಲೋಕದ ಚರಿತ್ರೆಯಲ್ಲಿ ಅತೀ ದಾರುಣವಾದ, ದುರ್ಭರವಾದ ಪ್ರಸಂಗವಾಗಿದೆ."[೧೨] ಈ ಪ್ರಸಂಗವು ಆಗಿನ ಕಾಲದ ಸ್ತ್ರೀಯರು, ದಾಸಿಯರು ಬದುಕುತ್ತಿದ್ದಂತಹ ಹೀನಾಯ ಸ್ಥಿತಿಯನ್ನು ತೋರಿಸುತ್ತದೆ.

**ದ್ರೌಪದಿಯ ವಸ್ತ್ರಾಪಹರಣಕ್ಕೆ ವ್ಯಾಸರಿಗೆ ಪ್ರೇರಣೆ ರಾಮಾಯಣ :**

ವಾಲ್ಮೀಕಿ ರಾಮಾಯಣದ "ಯುದ್ಧಕಾಂಡ"ದಲ್ಲಿ ರಾವಣನ ಆಜ್ಞೆಯಂತೆ ಇಂದ್ರಜಿತುವು ಯುದ್ಧಕ್ಕೆ ಬರುತ್ತಾನೆ. ಅವನ ಸಂಹಾರದ ವಿಷಯವಾಗಿ ರಾಮ-ಲಕ್ಷ್ಮಣರು ಸಮಾಲೋಚನೆ ನಡೆಸುತ್ತಾರೆ. ದೃಶ್ಯನಾಗಿಯೋ, ಅದೃಶ್ಯನಾಗಿಯೋ ನೀನು ಯುದ್ಧ ಮಾಡಿ ರಾಮ-ಲಕ್ಷ್ಮಣರನ್ನು ಸಂಹರಿಸುವಂತೆ ಹೇಳುತ್ತಾನೆ. ಏನು ಮಾಡಿದರೂ

ಯುದ್ಧದಲ್ಲಿ ರಾಮ-ಲಕ್ಷ್ಮಣರನ್ನು ಸೋಲಿಸಲು ಸಾಧ್ಯವಾಗದಿದ್ದಾಗ ರಾವಣನು ಮಾಯಾವಿದ್ಯೆಗಳನ್ನು ಪ್ರಕಟಿಸಲು ಉಪಕ್ರಮಿಸಿದನು. **ಮಾಯಾಸೀತೆಯನ್ನು** ರಥದಲ್ಲಿರಿಸಿ ವಧಿಸಬೇಕೆಂದು ಯೋಚಿಸಿದನು. ರಥದಲ್ಲಿ ಆನಂದರಹಿತಳಾಗಿ, ಏಕವೇಣೀಧರಳಾಗಿ, ಪರಮ ದುಃಖಿತೆಯಾಗಿ ಕುಳಿತಿದ್ದ ಸೀತಾದೇವಿಯನ್ನು ನೋಡಿದನು. ಸೀತಾದೇವಿ ಅತ್ಯಂತ ಕೃಶಳಾಗಿದ್ದಳು. ಅವಳ ಶರೀರದ ಮೇಲೆ ಮಲಿನವಾದ ಒಗೆಯದೇ ಇದ್ದ ಒಂದೇ ವಸ್ತ್ರವಿದ್ದಿತು. ಅವಳ ಅಂಗಾಂಗಗಳಲ್ಲಿ ಧೂಳು ಮತ್ತು ಕೆಸರು ತುಂಬಿದ್ದಿತು. ಆದರೂ ಅವಳು ಅತ್ಯಂತ ಸುಂದ-ರಿಯಂತೆ ಕಾಣುತ್ತಿದ್ದಳು. ಅಂತಹ ರಘುವೀರನಿಗೆ ಅತ್ಯಂತ ಪ್ರಿಯೆಯಾದ ಸೀತೆಯನ್ನು ಹನುಮಂತನು ನೋಡಿದನು. ರಾವಣನು ಕತ್ತಿಯನ್ನು ಒರೆಯಿಂದ ಹೊರತೆಗೆದು ಮಾಯಾ ಸೀತೆಯ ಮುಡಿಯನ್ನು ಹಿಡಿದೆಳೆದಾಗ ಸೀತೆಯು 'ಹಾ! ರಾಮಾ! ಹಾ! ರಾಮಾ!' ಎಂದು ಕೂಗಿಕೊಂಡಳು. ಕಿರುಚುತ್ತಿದ್ದ ಸೀತೆಯನ್ನು ಚೆನ್ನಾಗಿ ಪ್ರಹರಿಸಿದನು. ಹನುಮಂತನು ಪರಮ ದುಃಖಿಯಾದನು.

ಸರ್ವಾಂಗ ಸುಂದರಿಯಾದ ಶ್ರೀರಾಮನ ಪ್ರಿಯಭಾರ್ಯೆಯಾದ ಸೀತಾದೇವಿಯು ಅಂತಹ ಅವಸ್ಥೆಯಲ್ಲಿರುವುದನ್ನು ನೋಡಿ ಸ್ವತಃ ಮಾರುತಿಯೇ ಪರಮ ಕ್ರುದ್ಧನಾದನು.

~~~***~~~

**ಅಡಿಟಿಪ್ಪಣಿಗಳು :**

೧. ಡಾ॥ ವೀ.ಸೀ., "ಇತಿಹಾಸ ಕಾವ್ಯಗಳು", ಪು. ೧೨.

೨. -- ಅದೇ --, ಪು. ೭

೩. ಡಾ॥ ಕೆ.ಎಲ್. ಗೋಪಾಲಕೃಷ್ಣ, "ಕನ್ನಡ ಸಾಹಿತ್ಯದಲ್ಲಿ ಪುರಾಣಪ್ರಜ್ಞೆ", ಪು. ಪು. ೧೬೨.

೪. -- ಅದೇ --, ಪು. ೭

೫. ಡಾ॥ ಶಂ.ಬಾ. ಜೋಶಿ, 'ಸ್ಥಿತ್ಯಂತರ', ಪು. ೬೧.

೬. -- ಅದೇ --, ಪು. ೨೩.

೭. ಋಗ್ವೇದ ಸಂಹಿತೆ, ಭಾ-೩೦, ಪು. ೮೫೮.

೮. ಡಾ॥ ಶಂ.ಬಾ. ಜೋಶಿ, "ನಾಗಪ್ರತಿಮಾ ವಿಚಾರ.", ಭಾ-೧, ಪು. ೧೪೫.

೯. ಡಾ॥ ಆರ್. ಗಣೇಶ್, "ಅಲಂಕಾರಶಾಸ್ತ್ರ" ಪು. ೧೪೭

೧೦. ಡಾ॥ ಕೆ.ಎಲ್. ಗೋಪಾಲಕೃಷ್ಣಯ್ಯ, "ಕ.ಸಾ.ಪು.ಪ್ರಜ್ಞೆ", ಪು. ೧೫೯

೧೧. ಡಾ॥ ಪದ್ಮಾಕರ ವಿ. ವರ್ತಕ, "ಸ್ವಯಂಭೂ", ಪು. ೩೨೩.

೧೨. ಡಾ॥ ವಿ.ಸೀತಾರಾಮಯ್ಯ, "ಇತಿಹಾಸ ಕಾವ್ಯಗಳು" ಸಂ-೧, ಪು. ೨೫೫

~~~***~~~

## ೭೭. ದ್ರೌಪದಿಯ ಬಹುಪತಿತ್ವ:

'ದ್ರೌಪದಿಯ ಪಂಚ ಪತಿತ್ವ'ದ ಬಗ್ಗೆ ದ್ರುಪದಾದಿಗಳ ಅಭಿಪ್ರಾಯ ಮಂಡನೆಯಿದೆ. 'ಪುರಾಣಗಳಲ್ಲಿ ಬಹುಪತಿತ್ವಕ್ಕೆ ನಿದರ್ಶನಗಳಿರುವುದನ್ನು ನಾವು ಕಾಣುತ್ತೇವೆ. ಗೌತಮ ವಂಶ ಸಂಭೂತೆಯಾದ **ಜಟಿಲೆಯು** ಸಪ್ತಋಷಿಗಳನ್ನು ಮದುವೆಯಾಗಿದ್ದಳು. ಕಂಡುಮುನಿಯ ಪುತ್ರಿಯಾದ ವಾರ್ಕ್ಷೀ ಎಂಬುವಳು ತಪೋನಿಷ್ಠರಾದ ಹತ್ತು ಮಂದಿ ಋಷಿಕುಮಾರರನ್ನು ವರಿಸಿದ್ದಳು'. ಎಂದು ಯುಧಿಷ್ಠಿರನೂ ಸಮರ್ಥಿಸುತ್ತಾನೆ. ಪಾಂಚಾಲ ದೇಶದಲ್ಲಿ

ಅಂದಿನ ಕಾಲದಲ್ಲಿ 'ಬಹುಪತಿತ್ವ ಪದ್ಧತಿ' ಜಾರಿಯಲ್ಲಿತ್ತು. ಇತ್ತೀಚೆಗೆ ಅನೇಕ ಪಾಶ್ಚಾತ್ಯ ವಿದ್ವಾಂಸರುಗಳು ಇದನ್ನು ಉಲ್ಲೇಖಿಸಿದ್ದಾರೆ.

"॥ ಸೋಮಃ ಪ್ರಥಮೋ ವಿವಿದೇಗಂಧವೋ ವಿವಿದ ಉತ್ತರಃ ।
ತೃತಿಯೋ ಅಗ್ನಿಷ್ವೇ ಪತಿಸ್ತುರೀಯಸ್ತೇ ಮನುಷ್ಯ ಜಾಃ ॥ (ಋ.ಸಂ.೧೦-೧೫-೪೦)

ಇದರರ್ಥ ಋಗ್ವೇದದಲ್ಲಿ ಕನ್ಯೆಯೇ ನಿನ್ನನ್ನು ಮೊದಲು **ಸೋಮನು ಪಡೆದನು. ಅನಂತರ ಗಂಧರ್ವನು ಹೊಂದಿದನು. ಅಗ್ನಿಯು ನಿನಗೆ ಮೂರನೆಯವನು. ಮಾನವನಾದ ಪತಿಯು ನಾಲ್ಕನೆಯವನು ಎಂದು ಹೇಳಿದೆ.**

**"॥ ಜಾರಃ ಕನೀನಾಂ- ಕನ್ಯಕಾನಾಂ ಜರಯಿತಾ ॥"**

**ಅಂದರೆ,** ಅಗ್ನಿಯಿಂದಲೇ ಕನ್ಯೆಯರ ಕನ್ಯಾಭಾವವು ಹೋಗುವುದು. ಅರ್ಥಾತ್ ಅಗ್ನಿಯು ಕನ್ಯಾಭಾವನಿವರ್ತಕನಾಗಿರುವನು."[೧] ಅಗ್ನಿಯು ಕನ್ಯೆಯರ ಪ್ರಿಯನು ಮತ್ತು ಅವರ ಸ್ಥಿತಿಯನ್ನು ವ್ಯತ್ಯಾಸ ಮಾಡುವವನು ಎಂದರೆ **ಕನ್ಯಾವಸ್ಥೆಯಿಂದ ಪ್ರೌಢಾವಸ್ಥೆಗೆ ಬರುವಂತೆ ಮಾಡುವವನು.**

ಸೋಮನು ತಮ್ಮ ವಶದಲ್ಲಿದ್ದ ಕನ್ಯೆಯನ್ನು ಗಂಧರ್ವನಿಗೆ ಕೊಟ್ಟನು. ಅಗ್ನಿಯು ತಾನು ಸ್ವೀಕರಿಸಿದ ಕನ್ಯೆಯನ್ನು ಪುನಃ ಮಾನವನಾದ ವರನಿಗೆ ಕೊಟ್ಟನು.

೧. 'ಬಹುಪತಿತ್ವ ಕುಟುಂಬಕ್ಕೆ ಸೇರಿದ ಸದಸ್ಯರು ರಾಷ್ಟ್ರೀಯ ಮಹಾಕಾವ್ಯದ ನಾಯಕರು ಹೇಗಾದರು? ಎಂಬುದೇ ಮಹಾಭಾರತಕ್ಕೆ ಸಂಬಂಧಿಸಿದ ಒಗಟಿನ ಪ್ರಶ್ನೆಯಾಗಿದೆ ಎನ್ನುತ್ತಾರೆ' ತಮ್ಮ ಗ್ರಂಥ 'ಎರಡು ಮಹಾಕಾವ್ಯಗಳು', ಪು.೨೫ರಲ್ಲಿ, ಡಾ॥ ಪಿ.ವಿ. ಕಾಣೆ ಅವರು. ವೇದಗಳನ್ನು ವಿಂಗಡಿಸಿದ ವ್ಯಾಸರ ಮೇಲೆ ಋಗ್ವೇದದ ಅಗ್ನಿಯ ಪ್ರಕರಣ ಪ್ರಭಾವ ಬೀರಿದೆ. ವ್ಯಾಸರು ತಮ್ಮ ಮಹಾಕಾವ್ಯವಾದ 'ಮಹಾಭಾರತ'ದಲ್ಲಿ ನಾಲ್ಕು ಜನ ಪತಿಯರ ಬದಲಾಗಿ ಐವರನ್ನು ಮಾಡಿದ್ದಾರೆ ಅಷ್ಟೇ.

ಪೂರ್ವಕಾಲದಲ್ಲಿ ಭಾರತೀಯರು "ಬೆಟ್ಟ-ಗುಟ್ಟ ಪ್ರದೇಶಗಳ ಅಸಭ್ಯಜಾತಿಯವರಾಗಿರಬೇಕು. ಅವರಂತೆಯೇ ಇವರಲ್ಲಿ ಒಬ್ಬೊಬ್ಬ ಹೆಂಗಸಿಗೆ ಅದೆಷ್ಟೋ ಮಂದಿ ಗಂಡಸರನ್ನು ಮದುವೆ ಮಾಡುವ ಪದ್ಧತಿ ಇತ್ತು."[೨]

**"॥ ನವಂ ಪಾಂಡೋಃ ಸುತಾಃ ಪಂಚದೇವದತ್ತಾ ಮಹಾಬಲಾಃ ।**
**ವಿವರ್ಧ ಮಾನಾಸ್ತೇ ತತ್ರ ಪುಣ್ಯೇ ಹೈಮವತೇ ಗಿರೌ** ॥ (ಆ.ಪ., ಅ-೧೨೪, ಪು. ೨೭೬)

ಹೀಗೆ ಪಾಂಡವರು ದೇವದತ್ತರಾದ ಐದೂಮಂದಿ ಮಹಾಬಲಿಷ್ಠಪುತ್ರರು. ಇವರು ಹಿಮಾಲಯ ಪರ್ವತದಲ್ಲಿ ಬೆಳೆದವರು. 'ಧರ್ಮರಾಜ ಮೊದಲಾದ ಪಾಂಡವರು **ಹಿಮಾಲಯದ ಪರ್ವತೀಯ ಪ್ರದೇಶಗಳಲ್ಲಿ ಟಿಬೇಟಿನ ನಿವಾಸಿಕರಾದ ದೇವ ಜನಾಂಗದ ವೀರರ ವೀರ್ಯದಿಂದ ಸಂಭವಿಸಿದ್ದು; ಬಾಲ್ಯವೂ ಕೂಡಾ ಅಲ್ಲಿಯೇ ವ್ಯತೀತವಾಗಿತ್ತು; ತಾರುಣ್ಯ ಕಾಲದಲ್ಲಿ ಅವರು ಆರ್ಯಾವರ್ತಕ್ಕೆ ಇಳಿದು ಬಂದರು."**[೩] ಈ ರೀತಿಯಾಗಿ ಅಧ್ಯಯನ ಮಾಡಿದಂತೆಲ್ಲಾ ವಿವಿಧ ಅಭಿಪ್ರಾಯಗಳು ತಿಳಿದುಬರುತ್ತವೆ.

**"ಬಹುಪತಿತ್ವ" ಪದ್ಧತಿಯ ಸಮರ್ಥನೆ :**

ಬಹು ಮಂದಿಗೆ ಏಕ ಪತ್ನೀತ್ವವೆಂಬ ಪದ್ಧತಿಯು ಪೂರ್ವಜರಾದ '**ಪ್ರಚೇತಃ ಪ್ರಭೃತಿ**'ಗಳಲ್ಲಿರುವುದೇ ಆಗಿದೆ ಎನ್ನುತ್ತಾನೆ ಧರ್ಮಜನಾದ ಯುಧಿಷ್ಠಿರ! ನಂತರ ಕುಂತಿದೇವಿ ಧೃಷ್ಟದ್ಯುಮ್ನ ಮುಂತಾದವರೆಲ್ಲ ಕೂಡಿ ಪ್ರಸಂಗಿಸುತ್ತಿರುವಾಗ ಅಲ್ಲಿಗೆ ವ್ಯಾಸರೂ ಬರುತ್ತಾರೆ. ಅನೇಕ ಪುರುಷರಿಗೆ ಒಬ್ಬ ಸ್ತ್ರೀ ಧರ್ಮಪತ್ನಿ ಆಗುವುದು ದೋಷವಲ್ಲವೇ? ಎಂದು ಪ್ರಶ್ನಿಸುತ್ತಾರೆ.

ಯುಧಿಷ್ಠಿರ : "ಇದು ಎಲ್ಲೂ ಇಲ್ಲದ ಆಚರಣೆಯೇನಲ್ಲ. ಮಹಾ ಧರ್ಮಾತ್ಮಳಾದ **ಜಟಿಲೆ** ಎಂಬ ಸ್ತ್ರೀ **ಋಷಿಸಪ್ತಕಕ್ಕೆ** ಪತ್ನಿಯಾದಳೆಂದೂ, ತಪಸ್ಸಂಪನ್ನರೂ, ಸೋದರರೂ, ಒಂದೇ ಹೆಸರಿನವರೂ ಆದ ಹತ್ತು ಮಂದಿ ಪ್ರಚೇತಸರಿಗೆ ಮುನಿಕನ್ಯೆಯಾದ **ವಾರ್ಷ್ಣಿಯು** ಪತ್ನಿಯಾದಳೆಂದು ಪುರಾಣಗಳು ಸಾರುತ್ತಿವೆ. ಅದು ಧರ್ಮವೇ

ಎಂದು ಭಾರತದಲ್ಲಿ ಹಲವು ರೀತಿಯಲ್ಲಿ ಪ್ರತಿಪಾದಿತವಾಗಿದೆ. ಆದುದರಿಂದ ಅದು ಸೂಕ್ಷ್ಮ ಧರ್ಮವಾಯಿತು. ಇಂತಹ ಸಮಸ್ಯೆಗಳನ್ನೇ ಧರ್ಮಸೂಕ್ಷ್ಮವೆನ್ನುತ್ತಾರೆ. ವೇದವ್ಯಾಸಾದಿಗಳಿಂದ ಧರ್ಮವಾಗಿ ನಿರ್ಣಯಿಸಲ್ಪಟ್ಟ **ದ್ರೌಪದಿಯ "ಪಂಚಪತಿತ್ವ"**ವನ್ನು **'ಸೂಕ್ಷ್ಮಧರ್ಮ'**ವೆಂದು ನಿರ್ಣಯಿಸಲ್ಪಡುವುದಕ್ಕೆ ಪ್ರೋದ್ಬಲವಾಗಿ ಪರಿಣಮಿಸಿತು."[೩] ಎಂದು ಹೇಳುತ್ತಾನೆ.

~~~***~~~

**ಅಡಿಟಿಪ್ಪಣಿಗಳು :**

೧. ಋ.ಸಂ.ಭಾ–೬, ಪು. ೧೯೬.

೨. ಬಂಕಿಮಚಂದ್ರ ಛಠೋಪಾಧ್ಯಾಯ, "ಶ್ರೀಕೃಷ್ಣಚರಿತೆ", ಮುನ್ನುಡಿ : ಡಿ.ವಿ.ಜಿ., ಪು. ೯

೩. ವೈದ್ಯಗುರು ಎಂ.ಆರ್. ಭಟ್, "ಭಾರತ ಗಾಂಭೀರ್ಯ", ಪು. ೭೭.

~~~***~~~

# ಅಧ್ಯಾಯ-6

## ಕನ್ನಡದಲ್ಲಿ 'ಮಹಾಭಾರತ' ಕುರಿತ ಚಿಂತನೆಗಳು

"ಜಯ" ಹೆಸರಿನಿಂದ ಪ್ರಾರಂಭವಾಗಿ ೨೪,೦೦೦ ಶ್ಲೋಕಗಳನ್ನು ಹೊಂದಿದ್ದು, "ಭಾರತ"ವಾಗಿ ೭೫,೦೦೦ ಶ್ಲೋಕಗಳಾಗಿ ಬೆಳೆದು ನಂತರದ ಕಾಲಮಾನದಲ್ಲಿ, ೧,೦೦,೦೦೦ ಶ್ಲೋಕಗಳ "ಮಹಾಭಾರತ"ವೆಂಬ ವಿಸ್ತೃತವಾದ ಬೃಹತ್ ಗ್ರಂಥವಾಗಿ ಬೆಳೆದ ರೀತಿಯಿಂದಲೇ ಮಹಾಭಾರತದ ಮಹತ್ವ ಸ್ವಯಂವೇದ್ಯ. ಅದೂ ಅಲ್ಲದೆ, **"ಮಹಾಭಾರತದ ಉಲ್ಲೇಖಗಳು ಹೇಗೆ ಶ್ರುತ್ಯರ್ಥವನ್ನೂ, ವೇದಾಂತ ಸೂತ್ರಾರ್ಥವನ್ನೂ, ಸ್ಮೃತ್ಯರ್ಥವನ್ನೂ ವಿಶದಪಡಿಸುವುದೆಂಬುದನ್ನು ತೋರಲು ಕೆಲವು ಉದಾಹರಣೆಗಳನ್ನೂ ಕೊಟ್ಟು ಪುರಾಣಿಕರು ಬೆಳೆಸಿದ್ದಾರೆ."**[೧]

ಮೂಲ ಮಹಾಭಾರತ 'ಜಯ'ವನ್ನು ವ್ಯಾಸರು ತಮ್ಮ ಮಗ ಶುಕನಿಗೆ ಹೇಳಿದರು. ಶುಕನು ವೈಶಂಪಾಯನನಿಗೆ ಹೇಳುವಾಗ 'ಭಾರತ'ವಾಗಿದೆ. ವೈಶಂಪಾಯನರಿಂದ 'ಭಾರತ' ಕಥೆಯನ್ನು ಕೇಳಿದ ಲೋಮಹರ್ಷಣರ ಮಗ ಉಗ್ರಶ್ರವ ಸೌತಿ ಪುರಾಣಿಕರು ನೈಮಿಷಾರಣ್ಯದಲ್ಲಿ ಸತ್ರಯಾಗಕ್ಕಾಗಿ ಬಂದಿದ್ದ ಋಷಿಗಳಿಗೆ ಹೇಳುವಾಗ 'ಭಾರತ' ವಿಸ್ತಾರಗೊಂಡು 'ಮಹಾಭಾರತ'ವಾಗಿದೆ. 'ಮಹಾಭಾರತ' ಲಿಪಿಯಿಲ್ಲದೆ ಬಾಯಿಂದ ಬಾಯಿಗೆ ಹರಿದು ಬಂದಿದೆ. ಮುಖೋದ್ಗತವಾಗಿ ಪರಂಪರೆಯಿಂದ ಹರಿದು ಬರುವಾಗ ಸೂತ ಪುರಾಣಿಕರು ತಮ್ಮ ಕಥೆಯಲ್ಲಿ ಆಧ್ಯಾತ್ಮಿಕ, ಧಾರ್ಮಿಕ ಹಾಗೂ ಪಾರಮಾರ್ಥಿಕ ತತ್ವಗಳನ್ನು ಸೇರಿಸುತ್ತ ಬಂದಿದ್ದಾರೆ. ಉಪನ್ಯಾಸಕರ ಉದ್ದೇಶ; ಲೋಕಕಲ್ಯಾಣ ಉಂಟುಮಾಡುವ 'ಮಹಾಭಾರತ'ವನ್ನು ಅದರಲ್ಲಿರುವ ನೀತಿಬೋಧೆ ಹಾಗೂ ತತ್ತ್ವ ವಿಚಾರಗಳನ್ನು ಜನಾದರಣೀಯಗೊಳಿಸುವುದೇ ಆಗಿತ್ತು.

ಪುರಾಣಿಕರು ಪುರಾಣಗಳನ್ನು 'ಮಹಾಭಾರತ'ದಲ್ಲಿ ಸೇರಿಸುವ ಉದ್ದೇಶ ಮತ, ಧರ್ಮ, ಆಧ್ಯಾತ್ಮಿಕ ಮೌಲ್ಯಗಳನ್ನೊಳಗೊಂಡ ವೇದ, ವೇದಾಂಗ, ಭಗವತ್ತ್ವದ ವಿಷಯಗಳ ಪ್ರಚಾರ–ಪ್ರಸಾರಗಳ ಚಿಂತನೆಯೇ ಮೂಲೋದ್ದೇಶವಾಗಿರುವಾಗ ಅವರುಗಳ ಬೇರೆ ಚಿಂತನೆಗೆ ಅವಕಾಶವೇ ಇರಲಿಲ್ಲ.

ವೇದವ್ಯಾಸರ 'ಮಹಾಭಾರತ' ಆಧಾರವಾಗಿಟ್ಟುಕೊಂಡು ಕನ್ನಡದಲ್ಲಿ ರಚಿಸಿರುವ ಪಂಪ, ರನ್ನ ಹಾಗೂ ಕುಮಾರವ್ಯಾಸರ ಮಹಾಕಾವ್ಯಗಳೂ ಪ್ರತಿಬಿಂಬಿಸಿರುವುದನ್ನು ಕಾಣಬಹುದಾಗಿದೆ. ಆದರೆ ವ್ಯಾಸ ಮಹರ್ಷಿಗಳು ರಚಿಸಿರುವ 'ಮಹಾಭಾರತ'ದ ಬಗ್ಗೆ ಕನ್ನಡದಲ್ಲಿ ವಸ್ತುನಿಷ್ಠ ಚಿಂತನೆ ನಡೆಸಿರುವುದು ಅಷ್ಟಾಗಿ ಕಂಡುಬರುವುದಿಲ್ಲ. ಕಾರಣ ಮಹಾಭಾರತವನ್ನು ಪಂಚಮವೇದ, ಕಾರ್ಷ್ಣವೇದ ಎನ್ನುವ ಅನ್ವರ್ಥನಾಮಗಳಿದ್ದು ಅದನ್ನು ಹಾಡಿ,

ಹೊಗಳುವವರೇ ಹೆಚ್ಚು. ಮಹಾಭಾರತ ; ಉಪಾಖ್ಯಾನಗಳ, ಪಾತ್ರಗಳ, ದೈವ, ಮಾನುಷಗಳ, ಸೂಕ್ತಿಗಳ, ಸನ್ನವೇಶಗಳ ಪಾವಿತ್ರ್ಯಗಳ ನೆಲೆಯಾಗಿದೆ. ಕೃತಿಗಳ ಸಾರ್ವಭೌಮ ಎನಿಸಿಕೊಂಡಿದೆ.

ಮಹಾಭಾರತದ ಅಧ್ಯಯನದ ಇತಿಹಾಸದಲ್ಲೇ ಕನ್ನಡದಲ್ಲಿ ಪ್ರಪ್ರಥಮ ಬಾರಿಗೆ ಆಧ್ಯಾತ್ಮಿಕತೆ ಹಾಗೂ ಧಾರ್ಮಿಕತೆಗೆ ಹೊರತಾಗಿ **ಮಹಾಭಾರತವನ್ನು ಒಂದು ವೈಜ್ಞಾನಿಕ ಮನೋಧರ್ಮದ ಆಧುನಿಕ ಚಿಂತನೆಗೆ ಒಳಪಡಿಸಿ ವಿಚಾರಾರ್ಹ ದೃಷ್ಟಿಯಿಂದ ಕಾಣುವ ಪ್ರಯತ್ನಕ್ಕೆ ಕೈ ಹಾಕಿರುವುದು ನನ್ನ ಈ ಅಧ್ಯಯನದಲ್ಲಿ** ನಡೆಸಲಾಗಿದೆ. ಮತ್ತು ಮಹಾಭಾರತದ ಪ್ರಾಚೀನ ಸಂಸ್ಕೃತಿಯ ಮೀಮಾಂಸೆಯನ್ನು ಆಧುನಿಕ ಚಿಂತನೆಗಳಿಂದ ವರ್ತಮಾನ ಸಂಸ್ಕೃತಿಯೊಂದಿಗೆ ಅನುಸಂಧಾನ ಮಾಡಿದಾಗ ಮಹಾಭಾರತದ ಹಲವಾರು ಜಿಜ್ಞಾಸಯುಕ್ತ ಪ್ರಸಂಗಗಳನ್ನು ಆಧುನಿಕ ದೃಷ್ಟಿಯಿಂದ ಪರಿಶೀಲಿಸಿ ಚಿಂತಿಸುವುದು ಮತ್ತು ಇತಿಹಾಸ ಎನಿಸಿರುವ ಈ ಮಹಾಕಾವ್ಯವನ್ನು ಶೋಧಿಸಿ ಅಲ್ಲಿ ಕಂಡುಬರುವ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಮೊದಲಾದ ಎಲ್ಲಾ ಅಂಶಗಳನ್ನೂ ವಿಶ್ಲೇಷಿಸಿ, ವಿಮರ್ಶಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಅಂಶಗಳಲ್ಲೊಂದಾಗಿದೆ.

ಮಹಾಭಾರತ ಕುರಿತಾಗಿ ಅಂದಿನಿಂದ ಇಂದಿನವರೆಗೂ ನಡೆದು ಬಂದಿರುವ ಭಿನ್ನ-ವಿಭಿನ್ನ ಚಿಂತನೆಗಳು ನಡೆದು ಬಂದಿದೆ. ಆದರೆ **"ಆಧುನಿಕ ಚಿಂತನೆಗಳು"** ಅಧ್ಯಯನ ನಡೆಯುತ್ತಿರುವುದು ಇದೇ ಪ್ರಪ್ರಥಮ ಎನ್ನುವ ಅಂಶವು ಈ ಅಧ್ಯಯನದ ವೈಶಿಷ್ಟ್ಯತೆಯನ್ನು ಸಾರಿ ಹೇಳುತ್ತದೆ. ಪ್ರಸ್ತುತ ಅಧ್ಯಯನಕ್ಕಾಗಿ 'ಸಂಸ್ಕೃತಿ' ಪರಿಕಲ್ಪನೆಯ ಹಿನ್ನೆಲೆಯಲ್ಲಿ ಅಂದಿನ ಕಾಲದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯತೆ, ನೈತಿಕತೆ – ಇವೇ ಮೊದಲಾದ ವಿಷಯಗಳ ಕುರಿತಾಗಿ ವಿಭಿನ್ನ ಹೊಸ ದೃಷ್ಟಿಕೋನಗಳಿಂದ ಚಿಂತನೆಗಳನ್ನು ನಡೆಸಲಾಗಿದೆ. ಮತ್ತು ಈವರೆವಿಗೂ ನಡೆಸಿರುವ ಇತರ ವಿದ್ವತ್‌ಚಿಂತಕರ ನಡುವಿರುವ ಭಿನ್ನತೆ ಮತ್ತು ವ್ಯತ್ಯಾಸಗಳನ್ನು ಗುರ್ತಿಸಲಾಗಿದೆ.

**ಕೃಷ್ಣದ್ವೈಪಾಯನರಾದ ವೇದವ್ಯಾಸರಿಗೆ ಮಹಾಭಾರತ ರಚಿಸಲು ಮೂಲ ಪ್ರೇರಣೆ ಏನು ? ಅವರು 'ಮಹಾಭಾರತ' ಕೃತಿಯನ್ನು ರಚಿಸಿದ್ದರ ಹಿನ್ನೆಲೆ:**

ಋಗ್ವೇದ ಮತ್ತು ವಾಲ್ಮೀಕಿ ಋಷಿಗಳು ರಚಿಸಿದ **"ರಾಮಾಯಣ" ಆದಿ ಮಹಾಕಾವ್ಯ** ಎಂಬುದಾಗಿ ತಿಳಿದು ಬರುತ್ತದೆ. **"ಮಹಾಭಾರತದ ಮೂಲ ಬೇರುಗಳು ಋಗ್ವೇದದಲ್ಲಿವೆ. ಈ ದೃಷ್ಟಿಯಿಂದ ವೇದದಲ್ಲಿಯ ಇಂದ್ರ, ವಿಷ್ಣು ಮತ್ತು ಮಹಾಭಾರತದಲ್ಲಿನ ಅರ್ಜುನ, ಕೃಷ್ಣ – ಈ ಜೋಡಿಯೂ ತುಲನೀಯವಾಗಿದೆ."**[1] ಎಂಬ ಈ ಉಲ್ಲೇಖವು ಪುಷ್ಟೀಕರಿಸುತ್ತದೆ.

**"ಮಹಾಭಾರತ"** ಎಂಬ ಈ ಪ್ರಾಚೀನ ಮಹಾಕಾವ್ಯದಲ್ಲಿ ಈಗಾಗಲೇ **"ಮಿಥಿಕಲ್ ಫಾರ್ಮ್ ಮತ್ತು ಲೆಜೆಂಡರೀ ಫಾರ್ಮ್"** –ಇವೆರಡರ ಗೊಂದಲ ಉಂಟಾಗಿರುವುದನ್ನು ಕಾಣುತ್ತೇವೆ. ಇವೆರಡರ ನಡುವಿನ ಅಂತರವನ್ನು ಸ್ಪಷ್ಟವಾಗಿ ಕಾಪಾಡಿಕೊಳ್ಳಲಾಗದ್ದರಿಂದ ಮಹಾಭಾರತದೊಳಗಿನ ಹಾಗೆನಿಸಿಕೊಳ್ಳುವ ಇತಿಹಾಸವು ಪುರಾಣದ ತಿರುವು ಹಿಡಿದು ಹೋಗಿದೆ ಎಂಬುದಾಗಿ ಡಾ॥ ಶಂ.ಬಾ. ಜೋಶಿಯವರು ಅಭಿಪ್ರಾಯಪಡುತ್ತಾರೆ. **"ಮಹಾಭಾರತದ ರಚನೆಯ ಸ್ವರೂಪ ಹೇಗಿದೆಯೆಂದರೆ ಅವಶ್ಯ ಇತಿಹಾಸವೆಂದು ಕುಲವಂಶ ಪರಂಪರೆಯ ವೇಷವನ್ನು ತೊಡಿಸಿ ಅವನ್ನು ಮಹಾಭಾರತಕ್ಕೆ ಜೋಡಿಸಲಾಯಿತು. ಮತ್ತು 'ಭಾರತವೇ ಪಂಚಮವೇದ' ಎಂದು ಅದಕ್ಕೆ ದೈವೀ ಪ್ರತಿಷ್ಠೆಯನ್ನು ಗಳಿಸಿಕೊಡಲಾಯಿತು."**[2] ಆದ್ದರಿಂದ ವ್ಯಾಸ ಪ್ರಣೀತವಾದ ಈ ಮಹಾಭಾರತ ಆರ್ಷ ಮಹಾಕಾವ್ಯದಲ್ಲಿ ಇತಿಹಾಸವೆಂಬುದು ನಿಜವಾಗಿಯೂ ಎಷ್ಟಿದೆ? ಎಂಬ ಸಮೀಕ್ಷೆ ನಡೆಯುವುದರ ಅವಶ್ಯಕತೆಯೂ ಇದೆ. ಈ ಕುರಿತಾಗಿ ಮುಂದಿನ ಅಧ್ಯಾಯಗಳಲ್ಲಿ ಕೂಲಂಕಷವಾಗಿ ಚರ್ಚಿಸಲಾಗಿದೆ.

**ಮಹಾಭಾರತದ ಮೇಲೆ 'ರಾಮಾಯಣ' ಮಹಾಕಾವ್ಯದ ಪ್ರಭಾವ ಹೇಗೆ ಬೀರಿದೆ?**

ವೇದವ್ಯಾಸರು ವೇದಗಳನ್ನು ವಿಂಗಡಿಸುವ ಕಾಲಕ್ಕಾಗಲೇ ವಾಲ್ಮೀಕಿ ಋಷಿಗಳಿಂದ ರಾಮಾಯಣ ಮಹಾಕಾವ್ಯವು ರಚನೆಯಾಗಿತ್ತು. ನಂತರ ವ್ಯಾಸರು ಮಹಾಭಾರತವನ್ನು ರಚಿಸಿದರು. ಭಾರತದ ಕೆಲವೊಂದು ಪಾತ್ರ, ಸನ್ನಿವೇಶಗಳಲ್ಲಿ ರಾಮಾಯಣ ಮಹಾಕಾವ್ಯದ ಪ್ರಭಾವವಿರುವುದಾಗಿ ನಮಗೆ ಕಂಡು ಬರುತ್ತದೆ. ಅವುಗಳನ್ನು ಮುಂದೆ ಬರುವಂತಹ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಋಗ್ವೇದದ ನಂತರ ರಾಮಾಯಣ

ಮಹಾಕಾವ್ಯವೂ, ರಾಮಾಯಣ ಮಹಾಕಾವ್ಯದ ನಂತರ ಮಹಾಭಾರತ ಮಹಾಕಾವ್ಯವು ರಚನೆಯಾಗಿರುವುದೂ ಸ್ಪಷ್ಟವಾಗಿದೆ.

**"ರಾಮಾಯಣ"** ಒಂದು ರಾಜಮನೆತನಕ್ಕೆ ಸಂಬಂಧಿಸಿದ ರಾಜ ಕುಟುಂಬದ ಕಥೆಯಾದರೆ; **"ಮಹಾಭಾರತ"** ಒಂದು ಸಾಮ್ರಾಜ್ಯಕ್ಕೆ ಸಂಬಂಧಿಸಿದ ರಾಜಕಾರಣದ ಕಥೆಯಾಗಿದೆ. **"ಮಹಾಭಾರತದಲ್ಲಿನ ಘಟನೆಗಳ ಪ್ರೇರಕಳಾದ ದ್ರೌಪದಿಯು 'ಆಪಜ್ಯೋತಿ' (ಜ್ಯೋತಿ ಸ್ವರೂಪಳು) ಆಗಿರುವಳು."[೩]** – ಎಂದಿರುವುದನ್ನು **"॥ ಶಂರೂಪೇರತೇ ವ್ಯಾಪಿ – ಸಾ ಏವ ದ್ರೌಪದಿ ನಾಮಕಾಲೀ ಚಂದ್ರಾ ಇತಿ ಉಚ್ಯತೇ ॥"** – ಎಂಬ ಈ ಉಲ್ಲೇಖದಲ್ಲಿ ಕಾಣಬಹುದಾಗಿದೆ. **"ವೇದೋಪನಿಷತ್ತುಗಳಲ್ಲಿಯ 'ಆಪೋಜ್ಯೋತಿ' ಎಲ್ಲವೆ 'ಜ್ಯೋತಿ ಸ್ವರೂಪ'ವಾದ ಆ 'ಆಪ'ವೇ ಮಹಾಭಾರತದ ಕಥಾವಸ್ತುವಾಗಿದೆ."[೪]** – ಎಂಬುದೂ ಅತಿಶಯೋಕ್ತಿಯ ವ್ಯಾಖ್ಯಾನವಲ್ಲ ಎಂಬುದು ನಮಗೆ ಸ್ಪಷ್ಟವಾಗುತ್ತದೆ. ಆದರೆ ರಾಮಾಯಣ ಮಹಾಕಾವ್ಯದಲ್ಲಿನ ನಾಯಕ ಶ್ರೀರಾಮನಾದರೆ; ಮಹಾಭಾರತ ಮಹಾಕಾವ್ಯದ ನಾಯಕ ಭೀಷ್ಮ! ರಾಮಾಯಣ ಒಂದು ಮಹಾಕಾವ್ಯವಾದರೆ ಮಹಾಭಾರತ ಮಹಾಕಾವ್ಯದೊಂದಿಗೆ ಒಂದು ಇತಿಹಾಸವೂ ಹೌದು. ರಾಮಾಯಣದಲ್ಲಿ ಶ್ರೀರಾಮನು ತನ್ನ ತಂದೆ ದಶರಥನ ಪಿತೃವಾಕ್ಯ ಪರಿಪಾಲನೆಗಾಗಿ ವನವಾಸಕ್ಕೆ ಹೋದರೆ ಭಾರತದ ನಾಯಕ ಭೀಷ್ಮನು ತನ್ನ ತಂದೆ ಶಂತನುವಿನ ಸುಖಕ್ಕಾಗಿ **"ಭೀಷ್ಮ ಪ್ರತಿಜ್ಞೆ"** ಮಾಡಿ ಶೂನ್ಯ ಸಿಂಹಾಸನಾಧೀಶನಾಗಿ ತನ್ನೆಲ್ಲಾ ಸುಖ – ಸಂತೋಷಗಳನ್ನೂ ತ್ಯಾಗ ಮಾಡಿ ಹಸ್ತಿನಾಪುರದಂತಹ ಭವ್ಯ ನಗರದಲ್ಲಿದ್ದುಕೊಂಡೇ ವನವಾಸಕ್ಕಿಂತಲೂ ಭೀಷಣವಾದ ಸನ್ನಿವೇಶಗಳ ಮುಖಾಮುಖಿಯಾಗುತ್ತಾನೆ.

ಶ್ರೀರಾಮನು ಹೇಗೆ ತನಗೆ ಬಂದ ಅಧಿಕಾರವನ್ನು ಸಂತೋಷದಿಂದ ತ್ಯಜಿಸಿ, ವನವಾಸ ಪ್ರಾಪ್ತಿಯನ್ನು ಸ್ವಾಗತಿಸಿದನೋ ಹಾಗೆಯೇ ಸಾಮ್ರಾಜ್ಯದ ಉತ್ತರಾಧಿಕಾರಿಯಾಗಿ ರಾಜ್ಯ, ಕೋಶ, ಕಿರೀಟ, ಸಿಂಹಾಸನಗಳು ಪ್ರಾಪ್ತಿಯಾಗಬೇಕಾಗಿದ್ದ ದೇವವ್ರತನು ತನ್ನ ತಂದೆಯ ಸಂತೋಷಕ್ಕಾಗಿ ಸಾಮ್ರಾಟ ಪದವಿಯನ್ನೇ ಪರಿತ್ಯಾಗ ಮಾಡಿ ಭೀಷಣ ಪ್ರತಿಜ್ಞೆ ಮಾಡಿ ಭೀಷ್ಮನಾದ ಕತೆಯಿದೆ.

ಹೀಗೆ ವೇದವ್ಯಾಸರ ಮೇಲೆ ಭಾರತ ಮಹಾಕಾವ್ಯ ರಚನೆಗೆ ಪ್ರಾರಂಭದಿಂದಲೇ ರಾಮಾಯಣ ಮಹಾಕಾವ್ಯವು ಪ್ರಭಾವ ಬೀರಿರುವುದು ಮತ್ತು ಅದು ಎಷ್ಟರ ಮಟ್ಟಿಗೆ ಸಿದ್ಧಿಸಿದೆ ಎನ್ನುವುದಕ್ಕೆ ಭೀಷ್ಮನ ಪಾತ್ರವೇ ಒಂದು ಉತ್ತಮ ಉದಾಹರಣೆಯಾಗಿದೆ.

ಮಹಾಭಾರತದ ಕರ್ತೃವಿನ ಹೆಸರು ಕೃಷ್ಣದ್ವೈಪಾಯನರಾದ ವೇದವ್ಯಾಸರೆಂದು. ಕಾವ್ಯದೊಳಗಿನ ಸುಂದರ ಕಲ್ಪನೆಗಳು, ಸೂಚ್ಯ ಸನ್ನೆವೇಶಗಳು, ಅಥವಾ ನಿಸಂಗವಾದಿಯಾದ ಪ್ರಸಂಗಾಂತರಗಳು – ಇವುಗಳೇ ವೇದವ್ಯಾಸರು 'ಮೂಲಭಾರತ' ಕಾವ್ಯ ರಚಿಸಲು ಕಾರಣವೇನು? ಎಂದು ಪರಿಶೀಲಿಸುವುದೂ ಅಧ್ಯಯನದ ಉದ್ದೇಶಗಳಲ್ಲೊಂದು ಪ್ರಮುಖ ಅಂಶವಾಗಿದೆ. ಇವುಗಳಿಂದ ಆಧುನಿಕ ಚಿಂತನೆಗೆ ನಿದರ್ಶನಗಳ ಶೋಧ ನಡೆಸುವುದು ಒಂದು ಕುತೂಹಲಕಾರಿ ಅಧ್ಯಯನವೇ ಆಗಿದೆ. ಮಹಾಭಾರತದ ಹಲವಾರು ಪ್ರಸಂಗಗಳು ಕುತೂಹಲಕಾರಿಯಾಗಿ ಮಹತ್ವ ಪಡೆಯಲು ಕಾರಣಗಳೇನೆಂದು ಹುಡುಕುವ ಕಾರ್ಯವನ್ನು ನಡೆಸುತ್ತಾ ಮುಂದೆ ಬರುವ ಅಧ್ಯಾಯಗಳಲ್ಲಿ ಕೂಲಂಕಷವಾಗಿ ವಿಶ್ಲೇಷಣೆ ಮತ್ತು ವಿಮರ್ಶೆಯೊಂದಿಗೆ ಚರ್ಚಿಸಲಾಗಿದೆ.

**'ಮಹಾಭಾರತ' ಕೃತಿ ರಚನೆಗೆ ವ್ಯಾಸರಿಗೆ ಋಗ್ವೇದದ ಪ್ರಭಾವ ಬೀರಿರುವ ಹಿನ್ನೆಲೆ :**

**೧. ಋಗ್ವೇದದಲ್ಲಿ ಬರುವ 'ಕೃಷ್ಣ'ನೆಂಬ ಅಸುರ ಮಹಾಭಾರತದ ಪ್ರಭಾವೀ ಪಾತ್ರವಾಗಿದೆ.[೫]**

**೨. ಗಂಗಾದೇವಿ ತನ್ನ ಏಳು ಮಕ್ಕಳನ್ನು ಗಂಗೆಗೆ ಎಸೆದು ನೀರುಪಾಲು ಮಾಡಿದ ಹಿನ್ನೆಲೆ.**

**೩. ಅರ್ಘ್ಯ ಪ್ರಧಾನಕ್ಕೆ ಪ್ರಥಮ ಆದ್ಯತೆ. (ಅಗ್ರಪೂಜೆಗೆ ಸ್ಫೂರ್ತಿ).[೬]**

**೪. ಗೋಗ್ರಹಣಕ್ಕೆ ಸ್ಫೂರ್ತಿ.[೭]**

**೫. ಅಕ್ಷದ್ಯೂತಕ್ಕೆ ಕಾರಣ.**

**೬. ಕೃಷ್ಣ, ಶಂತನು, ಅರ್ಜುನ ಇತ್ಯಾದಿ ಹೆಸರುಗಳನ್ನು ಆ ಪಾತ್ರಗಳಿಗಿಡಲು ಪ್ರೇರಣೆ.**

– ಹೀಗೆ ಬಹಳ ಉದಾಹರಣೆಗಳು ನಮಗೆ ಸಿಗುತ್ತವೆ. **"ಹಲವಾರು ವೈದಿಕ ಸಾಹಿತ್ಯದಲ್ಲಿ ಮೂಲಕ್ಕೆ ಅಲ್ಪಸ್ವಲ್ಪ ಬದಲಾವಣೆಗಳಾಗಿರುವ ಪ್ರಸಂಗಗಳು ಹಲವಾರು ಇವೆಯಾದರೂ, ಆಮೂಲಾಗ್ರವಾಗಿ ತಲೆಕೆಳಕಾಗಿರುವಂಥ ಪ್ರಸಂಗಗಳು ಹೆಚ್ಚಾಗಿಲ್ಲವೆಂದು ತೋರುತ್ತದೆ."**[೮] ಹಾಗೆಯೇ, **"ಕೃಷ್ಣನ ಜೀವನದಲ್ಲಿನೊಂದು ಅರ್ಥಪೂರ್ಣ ಸಂದರ್ಭಕ್ಕೆ ಈ ಎಲ್ಲ ವಿವರಗಳನ್ನೂ ಸೂಕ್ತ ರೀತಿಯಲ್ಲಿ ವರ್ಗಾಯಿಸಿಕೊಳ್ಳುವುದು ಪ್ರತಿಭಾವಂತನಾದ ಋಷಿಕವಿ ವೇದವ್ಯಾಸರಿಗೆ ಮಾತ್ರ ಸಾಧ್ಯ."**[೯] ಇದರಿಂದ 'ಅಸುರ'ನೆಂಬ ಋಗ್ವೇದದ ಕೃಷ್ಣನ ವ್ಯಕ್ತಿತ್ವಕ್ಕೂ ಅಪಾರವಾದ ಭಕ್ತಿ–ಗೌರವಾದರಗಳು ಸಲ್ಲುವಂಥಹ ವೈಧಾನಿಕ ಕಥಾತಂತ್ರವನ್ನು ವೇದವ್ಯಾಸರು ಮೂಲಕಥೆಯೊಂದಿಗೆ ಬೆಸುಗೆ ಹಾಕಿರುವುದನ್ನು ಪರಿಶೀಲಿಸುವುದೂ ಅಧ್ಯಯನದ ಉದ್ದೇಶಗಳಲ್ಲಿ ಒಂದು ಪ್ರಮುಖಾಂಶವಾಗಿದೆ.

ವೇದವ್ಯಾಸರು ಭಾರತ ರಚಿಸಲು ಪ್ರೇರಣೆಯಾದ ಋಗ್ವೇದದ ಪಾತ್ರ–ಪ್ರಸಂಗಗಳನ್ನು ಅರ್ಥಪೂರ್ಣ ರೀತಿಯಲ್ಲಿ ಯಾವ ಸಂದೇಹವೂ ಬಾರದಂತೆ ಪ್ರಾಸಂಗಿಕವಾಗಿ ಮಹಾಭಾರತದ ಕಥೆಗೆ ಅಳವಡಿಸಿಕೊಂಡಿರುವುದು ವ್ಯಾಸರಂತಹ ಪ್ರತಿಭಾಪೂರ್ಣ ಋಷಿಕವಿಗಳಿಗೆ ಮಾತ್ರ ಸಾಧ್ಯ. ಋಗ್ವೇದ ಭಾಗ – ೧, ಪು. ೨೧೬ರಲ್ಲಿ "ಅಸುರ" ಎಂಬ ಶಬ್ದವನ್ನು "ದಾನವ" ವಾಚಿಗಿಂತ "ದೇವತಾ" ವಾಚಿ ಎಂದೇ ಮಹಾಭಾರತದಲ್ಲಿ ಬಳಸಲಾಗಿದೆ. ವೇದದಲ್ಲಿ ಇಂದ್ರನೂ ಅಸುರನಾಗಿದ್ದಾನೆ. ಹೀಗೆ ಋಗ್ವೇದದ ಹಲವು ಚಿತ್ರಗಳು ಮಹಾಭಾರತದ ಪಾತ್ರಗಳ ಕಲ್ಪನೆಗೆ, ಸೃಷ್ಟಿಗೆ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ವ್ಯಾಸರಿಗೆ ಪ್ರೇರಣೆ ನೀಡಿರುವುದನ್ನು ಖಚಿತಪಡಿಸುವುದೂ ಈ ಅಧ್ಯಯನದ ಒಂದು ಮುಖ್ಯ ಉದ್ದೇಶವಾಗಿದೆ.

ಮಹಾಭಾರತದ ಕೃಷ್ಣಾರ್ಜುನರ ಸಖ್ಯಕ್ಕೆ ವಾಸ್ತವವಾಗಿ ಋಗ್ವೇದದಲ್ಲಿನ ಈ ಆದರ್ಶವೇ ಮೈವೆತ್ತಿರುವಂತೆ ತೋರುತ್ತದೆ; ಅಷ್ಟೇ ಅಲ್ಲ, ಋಗ್ವೇದದ ಪಾತ್ರಗಳಿಗೆ ಮಹಾಭಾರತದ ಪಾತ್ರಗಳು ಭಾಷ್ಯ ರೂಪವಾಗಿರುವುದನ್ನು ಪರಿಶೀಲಿಸಿ ತಿಳಿಯಬೇಕಾಗಿದೆ. ಇದು ನಿಜವಾದರೆ ಈ ಪಾತ್ರಗಳಿಗೆ ಪ್ರೇರಣೆ– ಕನಿಷ್ಠಪಕ್ಷ ಸೂಚನೆಯಾದರೂ ದೊರೆಯದೆ ಸಾಧ್ಯವೇ ಇಲ್ಲ.

ಮಹಾಭಾರತದ ಕೃಷ್ಣಾರ್ಜುನರ ಪಾತ್ರಗಳನ್ನು ಸಮರ್ಥಿಸುವ ಋಗ್ವೇದದ ಒಂದು ಋಕ್ಕು; **"ಇಂದ್ರನಿಗೆ ಯಾವ ಪುರುಷನು ಸ್ನೇಹಿತನಾಗಿರುವನೋ ಅವನು ಯಾವಾಗಲೂ ಯಾರಿಂದಲೂ ಹಿಂಸಿಸಲ್ಪಡುವುದಿಲ್ಲ. ಶತ್ರುಗಳಿಂದ ಪರಾಜಿತನಾಗುವುದಿಲ್ಲ. ಇಂತಹ ಮಹಿಮೆಯುಳ್ಳ ಎಲೈ ಇಂದ್ರನೇ ನೀನು ಸರ್ವರಿಗಿಂತಲೂ ಅಧಿಕನಾಗಿದ್ದೀಯೇ ಮತ್ತು ನಿನ್ನ ಮಹಿಮೆಯು ಆಶ್ಚರ್ಯಕರವಾಗಿದೆ."**[೧೦] ಎಂದು ಹೇಳಿರುವುದು ಇಂದ್ರನಲ್ಲಿ ಹೇಳಿರುವ ಈ ಎಲ್ಲ ಗುಣಗಳನ್ನು ನಾವು ಕೃಷ್ಣನಲ್ಲಿ ಕಾಣುತ್ತೇವೆಯೇ? ಎಂದು ತಿಳಿಯುವುದೂ ಕೂಡಾ ನನ್ನ ಈ ಅಧ್ಯಯನದ ಉದ್ದೇಶದ ಒಂದು ಮುಖ್ಯಾಂಶವಾಗಿದೆ.

ಯಾವುದೇ ಒಂದು ಗ್ರಂಥ ಅಥವಾ ಕೃತಿಯು ಸಾವಿರಾರು ವರ್ಷಗಳಿಂದಲೂ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಜೀವಂತವಾಗಿದೆ ಅಂದರೆ ಆ ಗ್ರಂಥವನ್ನು ಅಷ್ಟೊಂದು ಆದರಿಸಲು ಕಾರಣವೇನು? ಆ ಗ್ರಂಥದಲ್ಲಿ ಅಂತಹ ಮಹತ್ವದ್ದಿರುವುದಾದರೂ ಏನು? ಎಂಬ ಪ್ರಶ್ನೆ ಉದ್ಭವಿಸುವುದಂತೂ ಸಹಜ.

**"॥ ಭಾರತ ವ್ಯಪದೇಶೇನ ಆಮ್ನಾಯಾರ್ಥಶ್ಚದರ್ಶಿತಃ ॥"**

**– (ಭಾಗವತ, ಸ್ಕಂದ – ೧, ಅಧ್ಯಾಯ – ೪)**

ಎಂಬ ಭಾಗವತದ ಮಾತಿನಿಂದ **"ವೇದಾರ್ಥ ವಿವರಣೆಯೇ ಮಹಾಭಾರತದ ಕಥಾನಕದ ಉದ್ದೇಶವೆಂದು ಸ್ಪಷ್ಟವಾಗುತ್ತದೆ. ಮತ್ತು;**

**"॥ ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪ ಬೃಂಹಯೇತ್ ॥ – ಎಂಬ ಮಾತಿನಂತೆ ನಿಗೂಢವಾದ ವೇದಾರ್ಥವು ಮಹಾಭಾರತದಲ್ಲಿ ಜನ ಸಾಮಾನ್ಯರಿಗೂ ತಿಳಿಯುವಂತೆ ವರ್ಣಿತವಾಗಿದೆ."**[೧೧] ಎಂದು ಹೇಳಲಾಗಿದೆ.

ನನ್ನ ಈ ಅಧ್ಯಯನದ ದೃಷ್ಟಿಯಲ್ಲಿ ಮಹಾಭಾರತದ ಮುಖ್ಯ ಪಾತ್ರಗಳ ವೈಫಲ್ಯಕ್ಕೆ ಹಾಗೂ ಸರ್ವನಾಶಕ್ಕೂ ಮುಖ್ಯ ಕಾರಣ **'ಅಕ್ಷದ್ಯೂತ.'** ಮಹಾಭಾರತ ಕುರುಕ್ಷೇತ್ರ ಯುದ್ಧಕ್ಕೂ, ಕುರುವಂಶದೊಂದಿಗೆ ಸಾವಿರಾರು ಜನರ, ಪ್ರಾಣಿ-ಪಕ್ಷಿಗಳ ಸಾವಿಗೂ ಈ ಅಕ್ಷದ್ಯೂತ ಪ್ರಕರಣವೇ ಮುಖ್ಯಕಾರಣವಾಗಿದೆ. ಈ ಅಂಶವನ್ನು ನಾನು, "ಮಹತ್ವಪೂರ್ಣವಾದ ಈ ಸಂದೇಶವನ್ನು ಲೋಕಕ್ಕೆ ತಿಳಿಸಲೆಂದೇ ವೇದವ್ಯಾಸರು ಈ ಮಹಾಭಾರತ ಮಹಾಕಾವ್ಯವನ್ನು ರಚಿಸಿದರು." ಎಂದು ಹೇಳುತ್ತೇನೆ. ಇದನ್ನು ಪ್ರತಿಪಾದಿಸುವ ಸಲುವಾಗಿಯೇ, "ಈ ಅಕ್ಷದ್ಯೂತದ ದುಷ್ಪರಿಣಾಮವನ್ನು ಎತ್ತಿ ತೋರಿಸಲು ಈ ಮಹತ್ವಪೂರ್ಣವಾದ ಗ್ರಂಥದ ವಸ್ತುವೇನು? ಅದು ಪ್ರತಿಪಾದಿಸಲು ಹೊರಟಿರುವ ಜೀವನ ಮೌಲ್ಯಗಳೆಂತಹದ್ದು? ಯಾವ ಕಾರಣಕ್ಕಾಗಿ ಈ ಮಹಾಗ್ರಂಥ ಇಷ್ಟೊಂದು ಜನಾದರಣೀಯವಾಗಿದೆ?" -ಎಂದು ತಿಳಿಯುವುದೂ ನನ್ನ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ವೇದವ್ಯಾಸರು ಈ ಕೃತಿಯನ್ನು ರಚಿಸುವಾಗ **ಋಗ್ವೇದ** ಹಾಗೂ **ರಾಮಾಯಣ ಮಹಾಕಾವ್ಯ** ಅವರ ಮೇಲೆ ಗಾಢವಾದ ಪ್ರಭಾವ ಬೀರಿದೆಯೆಂದು ಈಗಾಗಲೇ ಹೇಳಿದ್ದೇನೆ. **"ಹಿಂದೆ ಆದುದರನ್ನು ನೆನೆಯುವುದು ಸ್ಮೃತಿ. ಈಗ ನಡೆಯುವುದನ್ನು ಪರಿಶೀಲಿಸುವುದು 'ಬುದ್ಧಿ'. ಮುಂದೆ ಆಗುವುದನ್ನು ಊಹಿಸುವುದು 'ಮತಿ'; ಈ ಮೂರೂ ಕಾಲದ ವಿಷಯಗಳನ್ನು ಒಳಗೊಂಡಿರುವುದೇ ಪ್ರಜ್ಞೆ"**[೧] ಇದು ಕೇವಲ ಪ್ರಜ್ಞೆಯಲ್ಲ. ನವೀನ ಪ್ರಜ್ಞೆ. **"ಈಗ ಮುಂದೆ ಬರುತ್ತಿರುವ ತಲೆಮಾರಿನ ಯುವ ಜನರು ವಿಶೇಷವಾಗಿ ಈ ನವೀನ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕು."**[೨] ಇದಕ್ಕೆ ಅನುಕೂಲವಾಗುವಂತೆ **ಆಧುನಿಕ ಚಿಂತನೆಯೊಂದಿಗೆ ವೈಜ್ಞಾನಿಕ ಮನೋಧರ್ಮದಿಂದ ಮಹಾಭಾರತವನ್ನು ವಿಶ್ಲೇಷಿಸುವುದೂ** ನನ್ನ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

**ಸಾಮಾಜಿಕ, ಸಾಂಸ್ಕೃತಿಕ ಪರಿಕಲ್ಪನೆಯ ಹಿನ್ನೆಲೆಯಲ್ಲಿ ವಸ್ತುನಿಷ್ಠ ಮಹಾಭಾರತ ಕಥೆಯ ಶೋಧ :**

ಮಹಾಭಾರತದ ಮೂಲ ಕಥೆಯ ಶೋಧವೂ ನನ್ನ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲೊಂದು. ವ್ಯಾಸ ಋಷಿಗಳು ರಚಿಸಿದ ೨೪,೦೦೦ 'ಭಾರತ' ಮೂಲ ಶ್ಲೋಕಗಳ ಈ ಗ್ರಂಥ ಕಾಲಕ್ರಮೇಣ ೧,೦೦,೦೦೦ ಶ್ಲೋಕಗಳವರೆಗೆ ಬೆಳೆಯಲು ಕಾರಣವೇನು? ಈ ಗ್ರಂಥದ ವೈಶಿಷ್ಟ್ಯವೇನು? ಎಂದು ತಿಳಿಯುವುದೇ ಆಗಿದೆ.

ಯಜ್ಞ-ಯಾಗಾದಿಗಳು ನಡೆಯುತ್ತಿದ್ದ ಸ್ಥಳಗಳಲ್ಲಿ ವಿರಾಮ ಕಾಲದಲ್ಲಿ ಪುರಾಣಿಕರು ಋಷಿಗಳಿಗೆ ಬೋಧಿಸುವಾಗ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಮತಾವಲಂಬಿಗಳು ತಮ್ಮ, ತಮ್ಮ ತತ್ತ್ವಗಳನ್ನು ಧರ್ಮಾನುಷ್ಠಾನಕ್ಕೆ ತರಲು ತಮಗೆ ಸರಿಯೆಂದು ಕಂಡ ಅಥವಾ ತಾವೇ ಸೃಷ್ಟಿಸಿದ ಋಗ್ವೇಧಾರಿತ ವಸ್ತು, ಪಾತ್ರಗಳ ಪುರಾಣ ಪ್ರಸಂಗಗಳನ್ನು ಸೇರಿಸುತ್ತಾ ಬಂದಿರುವುದರಿಂದಲೂ ಗ್ರಂಥದ ವಿಸ್ತಾರ ಒಂದು ಲಕ್ಷ ಶ್ಲೋಕಗಳವರೆಗೆ ಬೆಳೆದಿರುವುದನ್ನು ಶೋಧಕ್ಕೊಳಪಡಿಸುವುದು ನನ್ನ ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು ಪ್ರಮುಖಾಂಶವಾಗಿದೆ.

ಮೂಲ ಭಾರತ ಕಥೆಯನ್ನಷ್ಟೇ ವೇದವ್ಯಾಸರು ಹೇಳಿರುವುದಾಗಿ ಮಹಾಭಾರತದಿಂದಲೇ ತಿಳಿದು ಬರುತ್ತದೆ.

**ತಾನೇ ಕಂಡದ್ದು – ಆಖ್ಯಾನ.**

**ಕೇಳಿದ್ದನ್ನು ಹೇಳುವುದು – ಉಪಾಖ್ಯಾನ.**

ಇಲ್ಲಿ ಮಹಾಭಾರತ ಒಂದು ಆಖ್ಯಾನ. **"ಮಹಾಭಾರತ ಆಖ್ಯಾನವನ್ನು ವೇದವ್ಯಾಸರು ರಾಜ್ಯದ ವಿಷಯವಾಗಿ ಕೌರವ – ಪಾಂಡವರಲ್ಲಿ ಭೇದವು ಹೇಗೆ ಉತ್ಪತ್ತಿಯಾಯಿತೆಂಬುದನ್ನು "ಅಕ್ಷದ್ಯೂತ"ದ ಕಾರಣವನ್ನೂ, ಅದರಿಂದಾಗಿ ಪಾಂಡವರು ಅನುಭವಿಸಿದ ವನವಾಸದ ವಿವರಣೆಯನ್ನೂ, ವನವಾಸವು ಕಳೆದ ನಂತರವೂ ಇವರಿಬ್ಬರಲ್ಲೂ ಸಾಮರಸ್ಯವುಂಟಾಗದೆ ಒದಗಿದ ದ್ವೇಷ – ಅಸೂಯೆಗಳಿಂದ ಬಹುಜನಕ್ಷಯವಾದ ಕುರುಕ್ಷೇತ್ರ ಯುದ್ಧದ ವಿವರಣೆಯನ್ನೂ ಯಥಾಶ್ರುತವಾಗಿ ಹೇಳುತ್ತೇನೆ. ಈಗ ನಾನು ಹೇಳುವುದು ಮಹಾಭಾರತ ಕಥೆಯ ಸಂಕ್ಷಿಪ್ತರೂಪ ವೃತ್ತ"**[೩] ಎಂದು ಸ್ವತಃ ಶ್ರೀಕೃಷ್ಣದ್ವೈಪಾಯನರ ಆತ್ಮೀಯ ಶಿಷ್ಯರಾದ ವೈಶಂಪಾಯನರ ಬಾಯಿಂದಲೇ ಬರುತ್ತದೆ.

ಮುಂದೆ ಇದೇ ಮಹಾಭಾರತದಲ್ಲಿ ವೇದ, ವೇದಾಂಗ, ಉಪನಿಷತ್ತುಗಳು, ದರ್ಶನ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಮೋಕ್ಷಶಾಶ್ತ್ರ, ಪಂಚಾರಾತ್ರಾ, ರಾಮಾಯಣ, ಭಾಗವತ, ವಿಷ್ಣುಪುರಾಣ, ಪದ್ಮಪುರಾಣ –

ಮೊದಲಾದ ೧೮ ಪುರಾಣಗಳು, ಬ್ರಹ್ಮಸೂತ್ರ, ಭಗವದ್ಗೀತಾ, ಸ್ಮೃತಿ – ಇತ್ಯಾದಿಗಳ ಆಧಾರವನ್ನು ಪಡೆದುಕೊಂಡಿವೆ.

ಅನುಗೀತೆ, ಸನಸ್ಸು ಜಾತೀಯ, ಕಳಿಂಗ ನೀತಿ, ನಾರಾಯಣೀಯಗಳೂ ಸೇರಿಕೊಂಡಿವೆ.

"ಮಹಾಭಾರತ"ವನ್ನು ಕುರಿತು ಸಂಸ್ಕೃತಿಯ ಹಿನ್ನೆಲೆಯಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ನೆಲೆಗಳಲ್ಲಿ ಈಗಾಗಲೇ ಅನೇಕ ಚಿಂತನೆಗಳು ನಡೆದಿವೆ. ಈ ಗ್ರಂಥವನ್ನು ರಷ್ಯನ್, ಲ್ಯಾಟಿನ್, ಜರ್ಮನ್, ಇಟಲಿಯನ್, ಇಂಗ್ಲಿಷ್ ಮೊದಲಾದ ವಿಶ್ವದ ಎಲ್ಲಾ ಭಾಷೆಗಳಿಗೂ ಅನುವಾದಿಸುವುದರ ಜೊತೆಗೆ ಭಾರತೀಯ ಭಾಷೆಗಳಾದ ತೆಲುಗು, ತಮಿಳು, ಮರಾಠಿ– ಇವೇ ಮೊದಲಾದ ಭಾಷೆಗಳಿಗೂ ಅನುವಾದಿಸಲ್ಪಟ್ಟಿವೆ. ಒಟ್ಟಾರೆಯಾಗಿ ಈ ಕುರಿತ ಅಧ್ಯಯನದಿಂದಾಗಿ ಪಡೆಯುವ ಫಲಿತಗಳಿಂದಾಗಿ ಭಿನ್ನ ಆಲೋಚನೆಗಳಿಗೂ ಅವಕಾಶವಾಗುವುದರ ಜೊತೆಗೆ ಪ್ರತಿಯೊಬ್ಬರ ಚಿಂತನೆಗಳನ್ನು ಮುಖಾಮುಖಿಗೊಳಿಸಲಾಗುತ್ತದೆ. ಇದರಿಂದ ಪರಸ್ಪರ ಭಿನ್ನತೆ ಮತ್ತು ವ್ಯತ್ಯಾಸಗಳು ಗುರ್ತಿಸಲಾಗುತ್ತದೆ.

**ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳಿಂದಾಗಿ ಇಲ್ಲಿನ ಪ್ರಮುಖ ಘಟನೆಗಳು, ಅಂಶಗಳ ಕುರಿತಾದ ತಾತ್ತ್ವಿಕ, ನೈತಿಕ, ಸಾಂಸ್ಕೃತಿಕವಾಗಿ ಆಕರಗಳೊಂದಿಗೆ ಸಮೀಕ್ಷಿಸಿ ವಿಭಿನ್ನ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲಾಗಿದೆ.**

**ಇದು ಪರಿಕಲ್ಪನೆ ಕೇಂದ್ರಿತ ಅಧ್ಯಯನವಾಗಿದ್ದು ಇಲ್ಲಿ ಆಧುನಿಕ ಚಿಂತನೆಗಳೇ ಪ್ರಮುಖ ವಿಷಯಗಳಾಗಿದ್ದು ಮಹಾಭಾರತದಲ್ಲಿನ ಹಲವಾರು ಕಾಲಬದ್ಧ ಸತ್ಯವಾಗಿರುವಂತಹ ಪ್ರಸಂಗಗಳ ಕುರಿತಾದ ವಿಭಿನ್ನ ಗ್ರಹಿಕೆಗಳ ವಿಭಿನ್ನ ಸಿದ್ಧಾಂತಗಳನ್ನು ಸೈದ್ಧಾಂತಿಕವಾಗಿ ಭಿನ್ನ ಭಿನ್ನ ದೃಷ್ಟಿಕೋನಗಳಿಂದ ವೈಜ್ಞಾನಿಕವಾಗಿ, ಆಧುನಿಕ ರೀತಿಯಿಂದ ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕವಾಗಿ ಗ್ರಹಿಸಿ ಪ್ರತಿಕ್ರಿಯಿಸಲಾಗಿದೆ.**

**ಮಹಾಭಾರತದಲ್ಲಿನ ಹಲವಾರು ಪ್ರಸಂಗಗಳು, ಘಟನೆಗಳಿಗೆ ಇಂದಿಗೂ ಸೂಕ್ತ ಪರಿಹಾರ ಕಾಣದೇ ಒಂದು ದೊಡ್ಡ ಪ್ರಶ್ನೆಯಾಗಿ, ಸಮಸ್ಯೆಯಾಗಿಯೇ ಉಳಿದಿರುವುದನ್ನು ಆಧುನಿಕವಾಗಿ ಚಿಂತಿಸಿ. ವಾಸ್ತವ ಸಂಗತಿಗಳನ್ನು ಪ್ರಸ್ತುತದೊಡನೆ ಪುಷ್ಟೀಕರಿಸಿ ಅವುಗಳಿಗೆ ತಕ್ಕದಾದ ಆಕರಗಳ ಆಧಾರಗಳಿಂದ ಪ್ರಮಾಣ, ಸಾಕ್ಷ್ಯ ಸಾಮಗ್ರಿಗಳನ್ನು ಒದಗಿಸಿ ಈ ಅಧ್ಯಯನದಲ್ಲಿ ಬಿಚ್ಚಿಡಲಾಗಿದೆ.**

ಮಹಾಭಾರತ ಕಾಲದ ಸಾಮಾಜಿಕ ಜನಜೀವನ ಪದ್ಧತಿಯು ಪರಿವರ್ತನಶೀಲವಾದುದು ಎಂಬ ಸತ್ಯವನ್ನು ಸಾಬೀತುಪಡಿಸಲಾಗಿದೆ.

**ಉದಾಹರಣೆಗೆ : ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ 'ನಿಯೋಗ ಪದ್ಧತಿ' ಇತ್ತು. 'ಬಹುಪತ್ನಿತ್ವ ಪದ್ಧತಿ' ಇತ್ತು. ಹಲವಾರು ವಿಧಾನಗಳಿಂದ 'ವಿವಾಹ ಪದ್ಧತಿ'ಯೂ ಇತ್ತು. ಹಲವಾರು ವಿಧಾನಗಳಿಂದ 'ಸಂತಾನ ಪಡೆಯುವ ಪದ್ಧತಿ'ಯೂ ಇತ್ತು. ಆದರೆ ಇಂದಿನ ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ಅಂಥಹವುಗಳಿಗೆಲ್ಲಾ ಅವಕಾಶವಿರದೆ ಕಾನೂನುಬದ್ಧ ಸಮಾಜದೊಳಗೆ ಮನುಷ್ಯನು ಜೀವಿಸುತ್ತಿದ್ದಾನೆ. "ಪರಿವರ್ತನಶೀಲ ಸಂಸ್ಕೃತಿ" ಇವು ಉತ್ತಮ ಉದಾಹರಣೆಗಳಾಗಿವೆ. ಈ ಬಗ್ಗೆ ಮುಂದಿನ ಅಧ್ಯಾಯಗಳಲ್ಲಿ ಕೂಲಂಕಷವಾಗಿ ಚರ್ಚಿಸಲಾಗಿದೆ.**

**ಸುಮಾರು ೫,೦೦೦ ವರ್ಷಗಳಷ್ಟು ಹಿಂದಿನ ಕಲ್ಪನೆಗಳು ಇಂದು ಊಹೆಗೂ ನಿಲುಕದಷ್ಟು ಅಪಾರ ಬೆಳವಣಿಗೆಯನ್ನು ಕಂಡಿರುವುದನ್ನು ಇಲ್ಲಿ ಗುರ್ತಿಸಲಾಗಿದೆ.**

ಮೂಲ ರೂಪದ "ಮಹಾಭಾರತ"ದ ಕರ್ತೃ ವ್ಯಾಸಋಷಿಗಳು. ಆದರೆ ಅದೇ "ಮಹಾಭಾರತ"ದ ಬೆಳವಣಿಗೆಗೆ ಕೇವಲ ಮಾನವ ಕಥೆಯಲ್ಲ ಎಂಬುದು ಇಲ್ಲಿನ ಪ್ರಧಾನ ಪಾತ್ರಗಳ ಜನನದ **ಅತಿಮಾನುಷತೆಯಿಂದಲೇ** ಸೂಚಿತವಾಗಿದೆ. ಇಂದ್ರಾದಿ ದುಃಶಕ್ತಿಗಳು (ದೇವತಾ ಶಕ್ತಿ) ಹಾಗೂ ಪೃಥಾ ಶಕ್ತಿಯ (ಕುಂತಿ) ಸಂಗಮದಿಂದ ಹುಟ್ಟಿದ ಪಾಂಡವರು ಇದಕ್ಕೆ ನಿದರ್ಶನ. ವೇದವ್ಯಾಸರು ಮಹಾಭಾರತಕಾರರಷ್ಟೇ ಅಲ್ಲದೇ ಅವರೂ ಕಥೆಯಲ್ಲಿನ ಒಂದು ಪಾತ್ರವೂ ಆಗಿದ್ದಾರೆ. ಇದರಿಂದ ಸ್ವಲ್ಪಮಟ್ಟಿಗೆ ಮಹಾಭಾರತವು ವ್ಯಾಸರ ಜೀವನಚರಿತ್ರೆಯೂ ಆಗಿದೆ. ಇದರ ಜೊತೆಗೆ ಭಾರತ ವರ್ಷದ ಪೂರ್ವ ಕಾಲದ ಭೌಗೋಳಿಕ ಮತ್ತು ರಾಜಕೀಯ ಪರಿಸ್ಥಿತಿಗಳ ಸ್ಪಷ್ಟ ಚಿತ್ರಣವೂ ನಮಗೆ ಮಹಾಭಾರತದಲ್ಲಿ ಸಿಗುತ್ತದೆ. ಇದಲ್ಲದೆ ಜೋತಿಷ, ರಾಜನೀತಿ, ಶಕುನಶಾಸ್ತ್ರ – ಇವೇ ಮೊದಲಾದ

ವಿಷಯಗಳ ಬಗ್ಗೆಯೂ ಬೆಳಕು ಚೆಲ್ಲಿರುವುದನ್ನು ಪರಿಶೀಲಿಸುವುದು ನನ್ನ ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು ಪ್ರಮುಖವಾದ ಅಂಶವಾಗಿದೆ. (ಮ.ಭಾ. ಭಾಗ -೨, ಪರಿಶಿಷ್ಟ ಪು. ೧೧) **"ಸೂರ್ಯಾಂಶದಿಂದ ಕುಂತಿ - ಕನ್ಯೆಯಲ್ಲಿ ಜನಿಸಿದ ಶಿಶು - ಕರ್ಣ; ಯಜ್ಞಾಗ್ನಿಯಲ್ಲಿ ಉದ್ಭವಿಸಿದ ದ್ರೌಪದಿ; ಗಾಂಧಾರಿಯ ಗರ್ಭಪಾತವು ನೂರು ಪಾಲಾಗಿ ನೂರು ಕೊಡದಲ್ಲಿ ಬೆಳೆದು ತುಪ್ಪದ ಕೊಡಗಳು ಒಡೆದು ಹೊರಬಂದ ಕೌರವರು ಇವರೇ ಇಲ್ಲಿಯ ಪ್ರಮುಖ ಪಾತ್ರಗಳು."**[೧೨] **ಸಮಕಾಲೀನ ಸಂಸ್ಕೃತಿಯಲ್ಲಿ ವೈಜ್ಞಾನಿಕ ದರ್ಶನ ಮಹತ್ವದ್ದು ಆಗಿದೆ. ಈ ದೃಷ್ಟಿಯಿಂದ ಮಹಾಭಾರತ ಕಾಲದ ಸಂಸ್ಕೃತಿಯಲ್ಲಿ ಕಂಡು ಬರುವ ಕೆಲವು ಮೇಲೆ ತಿಳಿಸಿದ ಪ್ರಸಂಗಗಳು ಕುತೂಹಲಕಾರಿಯಾಗಿದೆ.** ಈ ಸಂದೇಹಗಳಿಗೆ ಕಾರಣ ನಮ್ಮ ವೈಜ್ಞಾನಿಕ ಮನೋಧರ್ಮದ ಆಧುನಿಕ ಮನೋಭಾವ ಕಾರಣವಾಗಿರುವ ರೀತಿಯನ್ನು ಪರಿಶೀಲಿಸುವುದೂ ಕೂಡಾ ನನ್ನ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

ಮಹಾಭಾರತವು ಉತ್ತರ, ದಕ್ಷಿಣಗಳಲ್ಲದೆ ಇನ್ನೂ ಹಲವು ಕಡೆಗಳಲ್ಲೂ ಲಭಿಸಿದ ಪಾಠಗಳೂ ಇವೆ. ಆದರೆ ಈ ಎರಡರಲ್ಲಿಯೂ ಪ್ರಕ್ಷಿಪ್ತಗಳಿವೆ. **ಡಾ ॥ ವಿ. ಎಸ್. ಸುಕ್ತಂಕರ್** ನೇತೃತ್ವದಲ್ಲಿ **ಪುಣೆಯ ಭಂಡಾರ್‌ಕರ್ ಓರಿಯಂಟಲ್ ಸಂಶೋಧನ ಸಂಸ್ಥೆ** ಮಹಾಭಾರತ ಮೂಲ ಪಾಠವನ್ನು ಹುಡುಕಲು ಸಾಕಷ್ಟು ಪ್ರಯತ್ನ ನಡೆಸಿತು. ಈ ಕಾರ್ಯದಲ್ಲಿ ಈಗಾಗಲೇ ಹಲವಾರು ಪ್ರಾಚ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರೂ ಪ್ರಯತ್ನಪಟ್ಟಿದ್ದಾರೆ. **"ಭಾರತ ಯುದ್ಧ ಪಂಚಕವನ್ನಷ್ಟೇ ತೆಗೆದುಕೊಂಡರೆ, ಅದು ಒಟ್ಟು ೨೪,೦೦೦ ಶ್ಲೋಕಗಳು ಆಗುತ್ತವೆ. ೧೫೦ ಶ್ಲೋಕಗಳಲ್ಲಿ ಇದಕ್ಕೆ ಸಂಗ್ರಹವೂ ಇದೆ. ವ್ಯಾಸರು ಇದನ್ನು ಮೊದಲು ತನ್ನ ಮಗನಾದ ಶುಕನಿಗೆ ತಿಳಿಸಿದರು."**[೧೬] ಎಂದೂ ತಿಳಿದು ಬರುತ್ತದೆ. ಅಂತೆಯೇ, **"ಭಗವಾನ್ ವ್ಯಾಸ ಮಹರ್ಷಿಗಳು ಆದಿಭಾರತದಿಂದಲೇ ೨೪,೦೦೦ ಶ್ಲೋಕಗಳನ್ನು ಆರಿಸಿ ಒಂದು "ಭಾರತ ಸಂಹಿತೆ"ಯನ್ನು ಮಾಡಿದ್ದರು. ಇದರಲ್ಲಿ ಕೇವಲ ಭರತವಂಶೀಯರ ಕಥೆಯೇ ಮಾತ್ರ ಇದ್ದು, ಮಿಕ್ಕ ಉಪಾಖ್ಯಾನಗಳಿರಲಿಲ್ಲ."**[೧೭] ಹಾಗೆಯೇ "ಮಹಾಭಾರತ"ದ ನಿಜವಾದ ಕಥೆ ಎಲ್ಲಿಂದ ಆರಂಭಗೊಳ್ಳುತ್ತದೆ ? ಎನ್ನುವ ಬಗ್ಗೆಯೂ ವಿವಿಧ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿರುವುದು ನಮಗೆ ತಿಳಿದು ಬರುತ್ತದೆ. **"ಮಹಾಭಾರತದಲ್ಲಿ ಮುಖ್ಯ ವಿಷಯ ಯಾವ ಅಧ್ಯಾಯದಿಂದ ಆರಂಭವಾಗುತ್ತದೆ ಅನ್ನುವ ಬಗ್ಗೆಯೂ ಮತಭೇದವಿದೆ. ಸೌತಿಗಳೂ ಮೂರು ಮತಭೇದಗಳನ್ನೂ ಹೇಳಿದ್ದಾರೆ."**[೧೮] ಮತ್ತೆ ಕೆಲವು ವಿದ್ವಾಂಸರು ಅಭಿಪ್ರಾಯಪಡುವಂತೆ, **ಮನುವಿನಿಂದ ಮಹಾಭಾರತ ಕಥೆ ಆರಂಭವಾಗುತ್ತದೆಂದು ಹೇಳುತ್ತಾರೆ.** ಮತ್ತೆ ಕೆಲವರ ಅಭಿಪ್ರಾಯದಲ್ಲಿ "ಮಹಾಭಾರತ"ದ ನಿಜವಾದ ಕಥೆಯು **ಆಸ್ತೀಕನ ಪರ್ವದಿಂದ** ಆರಂಭವಾಗುತ್ತದೆ ಎಂದು ಹೇಳುತ್ತಾರೆ. ಆದರೆ ಮತ್ತೆ ಕೆಲವು ವಿದ್ವಾಂಸರ ಅಭಿಪ್ರಾಯದಲ್ಲಿ 'ಉಪರಿರಾಜ'ನ ಕಥೆಯಿಂದ ಆರಂಭವಾಗುತ್ತದೆಂದು ಹೇಳುತ್ತಾರೆ. **""ಜಯ" ಮತ್ತು "ಮಹಾಭಾರತ"ಗಳು ಒಂದೇ ಗ್ರಂಥದ ಹೆಸರುಗಳೆಂದೂ "ಭಾರತ" ಎಂಬುದು ಗ್ರಂಥದ ಸಂಕ್ಷಿಪ್ತ ರೂಪವೆಂದೂ ಇವೆರಡರ ಹಾಗೂ ಮೂಲ ಗ್ರಂಥದ ಕರ್ತೃಗಳೂ ಮೂವರೂ ಬೇರೆ ಬೇರೆ ವ್ಯಕ್ತಿಗಳಲ್ಲದೇ ಭಗವಾನ್ ವ್ಯಾಸರೇ ಆಗಿದ್ದಾರೆ."**[೧೯] ಎಂಬ ವಿವಿಧ ಅಭಿಪ್ರಾಯಗಳೂ ಕಂಡುಬಂದರೂ, **ಮೂಲ ಗ್ರಂಥದ ಕರ್ತೃ ಒಬ್ಬರೇ.** ಅವರೇ **ಕೃಷ್ಣದ್ವೈಪಾಯನರಾದ ವ್ಯಾಸ ಋಷಿಗಳು** ಎನ್ನುವುದೇ ಸತ್ಯಾಂಶ. ಆನಂತರ ವಿಚಿತ್ರಾರ್ಥಗಳಿಂದ ಕೂಡಿದ "ಮಹಾಭಾರತ"ದಲ್ಲಿರುವ ಕಥೆಗಳನ್ನು ಕೇಳಿ ಬಂದ **ಲೋಮಹರ್ಷಣ ಪುತ್ರರಾದ ಉಗ್ರಶ್ರವ ಸೌತಿಗಳು ನೈಮಿಷಾರಣ್ಯ ವಾಸಿಗಳ ಋಷಿಗಳಿಗೆ** ಲಂಬಿಸಿ **ಹೇಳಿದರು. ಆನಂತರ ಹೀಗೇಯೇ ಅದು ಒಬ್ಬರಿಂದ ಒಬ್ಬರಿಗೆ ಬಾಯಿಯಲ್ಲಿ ಹೇಳುವಾಗ ಬೆಳೆಯುತ್ತಾ ಹೋಯಿತು.**

### ೨೪,೦೦೦ ಶ್ಲೋಕಗಳುಳ್ಳ 'ಜಯ' ಎಂಬ 'ಮಹಾಭಾರತ' ಕಥೆಯಲ್ಲಿ ಏನೇನಿದೆ ?

**- ಅಂದರೆ, ಶಾಂತನು** ಮಹಾರಾಜನ ಜನನ, **ಸತ್ಯವತಿ, ವ್ಯಾಸರ** ಜನನ, **ಪಾಂಡವ ಮತ್ತು ಕೌರವರ** ಜನನ, ರಾಜ್ಯದ ವಿಷಯದಲ್ಲಿ **ಕೌರವರು-ಪಾಂಡವರ** ನಡುವಿನ **ಭೇದ, ಪಾಂಡವರು ರಾಜ್ಯ-ಕೋಶಾದಿಗಳನ್ನು ಕಳೆದುಕೊಳ್ಳಲು** ಕಾರಣವಾದ **ಅಕ್ಷದ್ಯೂತ,** ಅದರಿಂದಾಗಿ **ಪಾಂಡವರು** ವನವಾಸ ಮಾಡಿದ್ದು, ವನವಾಸ ಮುಗಿದ ಮೇಲೆ **ಕೌರವರು** ರಾಜ್ಯ **ಕೊಡಲು** ನಿರಾಕರಿಸಿ ಮಾತಿಗೆ ತಪ್ಪಿದಾಗ **ಕುರುಕ್ಷೇತ್ರ ಯುದ್ಧ ನಡೆದು ಪಾಂಡವರು** ಅದರಲ್ಲಿ ಗೆಲುವು ಸಾಧಿಸಿದ್ದು.... **ಇಷ್ಟೆಲ್ಲಾ ಅನರ್ಥಕ್ಕೆ ಕಾರಣವಾದ ಅಕ್ಷದ್ಯೂತ. ಇವಿಷ್ಟು ಮಾತ್ರ ಇದ್ದು; ಇದನ್ನು ಕೃಷ್ಣದ್ವೈಪಾಯನರು ವೈಶಂಪಾಯನರಿಗೆ ಹೇಳಿದ್ದರು.**

ನಂತರದ ಪ್ರವಚನಕಾರರು ಸತ್ರಯಾಗ ನಡೆಯುವ ಸ್ಥಳಗಳಲ್ಲಿ ವಿಶ್ರಾಂತಿ ಸಮಯದಲ್ಲಿ ಕಥೆಗಳನ್ನು ಕೇಳುವ ಶ್ರವಣಕಾರರ ಮೇಲೆ ಹೆಚ್ಚು ಹೆಚ್ಚು ಪರಿಣಾಮ ಬೀರಬೇಕೆಂದು ಮತ್ತು ತಾವು ಹೇಳುವ ಕಥೆಗಳು ಅಧಿಕೃತವೆಂದು

ನಂಬಿಸಲು **"ಸತ್ಯವತಿಯ ಮಕ್ಕಳಾದ ಮಹಾತೇಜಸ್ವಿಯಾದ ವ್ಯಾಸರೇ ಪುಣ್ಯಕರ್ಮಿಗಳಾದ ಪಾಂಡವರ ಕಥೆಯನ್ನು ಒಂದು ಲಕ್ಷ ಶ್ಲೋಕಗಳಲ್ಲಿ ಹೇಳಿದ್ದಾರೆ."**[೨೦] ಎಂದು ಆರೋಪಿಸಿದ್ದಾರೆ.

Sri J.A.Hassler,

"The Mahabharatha has opened to me, as it were, a new world, and I have been surprised beyond measure at the Wisdom, Truth, Knowledge and Love of the right. Which I have found displayed in its pages. Not only so, but I have found many of the thruths which my own heart has taught me in regard to the Supreme Being and His vreations set forth in beautiful, clear language." ಎಂದಿದ್ದಾರೆ.

ಮಹಾಭಾರತವು, **"ಸ್ಮೃತಿ, ಪುರಾಣ, ಇತಿಹಾಸ, ಕಾವ್ಯ – ಎಲ್ಲವೂ ಆಗಿರುವುದರಿಂದ ಮೇಲೆ ಹೇಳಿದ ಮೂರೂ ದಾರಿಗಳಿಂದಲೂ ಜನರಿಗೆ ಶ್ರೇಯಸ್ಸನ್ನು ಬೋಧಿಸುವ ಅದ್ವಿತೀಯವಾದ ಸ್ಥಾನ ಇದಕ್ಕೆ ಸೇರಿದುದಾಗಿದೆ."**[೨೧] ಇದರ ಶ್ಲೋಕಗಳ ಸಂಖ್ಯೆಯು ೨೪,೦೦೦ ದಿಂದ ೧ ಲಕ್ಷಕ್ಕಿಂತಲೂ ಹೆಚ್ಚಾಗಿದೆ. *ಗ್ರೀಕ್* **ಭಾಷೆಯಲ್ಲಿ** ಮಹತ್ತು–ಬೃಹತ್ತುಗಳೆರಡರಲ್ಲೂ ಹಿರಿಯ ಕಾವ್ಯಗಳಾದ **ಇಲಿಯಡ್** ಮತ್ತು **ಒಡೆಸ್ಸಿ** – ಇವೆರಡನ್ನೂ ಸೇರಿಸಿ ಎಂಟರಿಂದ ಗುಣಿಸಿದರೆ ಲಬ್ಧವಾಗುವ ಪ್ರಮಾಣದಷ್ಟಾಗುತ್ತದೆ **ಮಹಾಭಾರತ ಮಹಾಕಾವ್ಯ.**

Sri E.P.Rice,

"The MAHABHARATHA is much more than an epic story of the heroic age of Ancient India; it is a vast repositor of Hindu traditional lore, philosophy and legend. ... It is accepted as an authoritative Smruthi by a gundred million followers of Brahmanical tradition. ... In it have been incorporated extensive treatises on law, philosophy, religion and custom, together with mumenous episodes, legends and discussion- amounting in all to four-fifths if its bulk. It discloses to us an age-long quest, made by a religiously minded people, for a solution of the perennial problems of the human race with regard to the relation of man to the seen and unseen Universe, death and hereafter, sin and sarrow, the standards of conduxt, and the way to eternal bliss." ಎಂದಿದ್ದಾರೆ.

**ಮಹಾಕಾವ್ಯ ಇತಿಹಾಸ ಎನಿಸಿರುವ ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು ಅಧ್ಯಯನದ ವೈಶಿಷ್ಟ್ಯ :**

**"ಗೃಹಸ್ಥಾಶ್ರಮವನ್ನು ಉಳಿದ ಮೂರೂ ಆಶ್ರಮಗಳು ಮೀರಿಸಲಾರವು. ಹಾಗೆಯೇ ಉಳಿದ ಯಾವ ಕಾವ್ಯಗಳೂ 'ಮಹಾಭಾರತ'ವನ್ನು ಮೀರಿಸಲಾರವು.**

**"॥ಮಹತ್ತ್ವಾತ್ ಭಾರವತ್ತ್ವಾಚ್ಚ । ಮಹಾಭಾರತಮುಚ್ಯತೇ ॥" ಎಂದಿದೆ. ಅಂದರೆ, ನಿರತಿಶಯವಾದ ಮಹತ್ತ್ವವನ್ನೂ ಭಾರವತ್ತ್ವ (ಗೌರವ)ವನ್ನೂ ಹೊಂದಿರುವುದರಿಂದ ಈ ಕೃತಿಯು "ಮಹಾಭಾರತ" ಎಂಬ ಹೆಸರನ್ನು ಪಡೆದಿದೆ.**

**ಪ್ರಸಿದ್ಧ ಪಾಶ್ಚಾತ್ಯ ವಿದ್ವಾಂಸರಾದ ಎಂ. ವಿಂಟರ್‌ನಿಟ್ಸ್ ಅವರು ಈ ಕೃತಿಯ ಕುರಿತಾಗಿ,**

**"ಮಹಾಭಾರತ ಒಂದು ದೈತ್ಯಗ್ರಂಥ.......... ಈ ಕಾವ್ಯಾರಣ್ಯದಲ್ಲಿ ಪಂಡಿತರು ಇನ್ನೂ ಈಗೀಗ ಕೊಂಚ ಕೊಂಚ ದಾರಿಮಾಡಿಕೊಂಡು ಮುನ್ನುಗ್ಗಲು ಯತ್ನಿಸುತ್ತಿದ್ದಾರೆ. ಆದರೆ ಇಲ್ಲಿಯ ಕಾಡು–ಕುರುಚಲು ಬೆಳೆಯ ನಡುನಡುವೆ ಉದಾತ್ತವೂ ಸ್ಫೂರ್ತಿಯುತವೂ ಆದ ಕಾವ್ಯಭಾಗಗಳು ಅಡಗಿಕೊಂಡಿವೆ. ಅವ್ಯವಸ್ಥವೆನಿಸುವ ಈ ಗ್ರಂಥರಾಶಿಯಲ್ಲಿ ಲೋಕಾತೀತವೆನಿಸುವಂಥ ಕಾವ್ಯ ಸೌಂದರ್ಯವೂ ಆಳವಾದ ಜೀವನಾನುಭವವೂ ಎದ್ದು ಕಾಣುತ್ತವೆ. ಯಾರೊಬ್ಬರೂ ಬರೆದ ಒಂದು ಕೃತಿ ಮಾತ್ರವಾಗಿರದೆ ಮಹಾಭಾರತವು ಒಂದು ಇಡೀ ಸಾಹಿತ್ಯವೇ ಆಗಿ**

ಅಸಂಖ್ಯವಿಷಯವನ್ನೊಳಗೊಂಡಿದೆ. ಭಾರತೀಯರ ಜೀವಾಳವನ್ನರಿತುಕೊಳ್ಳಬೇಕೆಂದರೆ, ಅಂತರಂಗಸ್ವರೂಪವನ್ನು ಗ್ರಹಿಸಬೇಕೆಂದರೆ, ಇದರಷ್ಟು ಉಪಯುಕ್ತವಾದ ಗ್ರಂಥ ಇನ್ನೊಂದಿಲ್ಲ." ಎಂದಿದ್ದಾರೆ.

ಮಹಾಭಾರತವು ಪ್ರಪಂಚದಲ್ಲಿರುವ ಅನೇಕ ಭಾಷೆಗಳಿಗೂ ಮತ್ತು ಭಾರತದೇಶದ ಪ್ರಾದೇಶಿಕ ಭಾಷೆಗಳಿಗೂ ಅನುವಾದಿತವಾಗಿದೆ. ಇಂತಹ ಮಹತ್ತ್ವಯುತವಾದ ಕೃತಿಯನ್ನು ಕುರಿತು ಡಾ॥ ಸುಕ್ತಂಕರ್‌ರವರು,

"A mid the deepest strands that are woven in the thread of our civilization there is more than one that is drawn originally from Bharthavarsha and from Sanscrit Literature. And well in the centre of this vast mass of literature, there stands (MAHABHARATHA) this deathless, traditional book of divine inspiration, unapproachable and far removed from possibilities of human copetition...............

We must therefore grasp this great book with both hands and face it squarely. Then we shall recognize that it is our past which has prolonged itself into the present. WE ARE IT : I mean the real WE ! Shall we be guilty of strangling our own soul ? NEVER !" ಎಂದಿದ್ದಾರೆ.

ದಿವ್ಯವೂ, ಮಾನುಷ್ಯವೂ ಆದ ಸಮರ್ಥ ಶಬ್ದಗಳೂ ಮತ್ತು ಶುಭವಾದ ಶಬ್ದಗಳೂ ಅಲಂಕರಿಸಿರುವ ಕಾವ್ಯ ಮಹಾಭಾರತ, "ಪ್ರಾಣಿಗಳೆಲ್ಲವೂ ಮಳೆಗರೆಯುವ ಮೋಡವನ್ನು ಆಶ್ರಯಿಸುವಂತೆ; ಕವಿಪುಂಗವರೆಲ್ಲರೂ ಈ ಮಹಾಭಾರತವನ್ನೇ ಆಶ್ರಯಿಸಿದ್ದಾರೆ. ಅಳಿವಿಲ್ಲದ ಮಹಾವೃಕ್ಷ ಈ ಮಹಾಭಾರತವಾಗಿದೆ."[೨೪] ಹಾಗೆಯೇ, "ಇತಿಹಾಸಗಳಲ್ಲಿ ಉತ್ತಮವಾದ ಇತಿಹಾಸ ಈ ಮಹಾಭಾರತ. ಇದರಿಂದ ಕವಿಬುದ್ಧಿಗಳು ಹುಟ್ಟುತ್ತವೆ." [೨೫] ಎಂದಿರುವುದು ಮಹಾಕಾವ್ಯ ಮಹಾಭಾರತ ಕುರಿತಾದ ಅಧ್ಯಯನದ ಮಹತ್ವವನ್ನು ಮತ್ತು ಅದರ ವೈಶಿಷ್ಟ್ಯವನ್ನು ಸ್ಪಷ್ಟಪಡಿಸುತ್ತದೆ.

ಪ್ರಸ್ತುತ ಇಂದಿನ ಪರಿಸ್ಥಿತಿಯಲ್ಲಿ ಮಹಾಭಾರತದ ಅಧ್ಯಯನದ ಅವಶ್ಯಕತೆ ಹೆಚ್ಚಾಗಿದೆ. "ನಿರಂತರವೂ ಪರಿವರ್ತನೆಯನ್ನು ಕಾಣುತ್ತಿರುವ ಯುಗವಿದು. ಇಂದಿನ ಅನ್ವೇಷಣೆಯಿಂದ ಬೆಳೆದ ಅರಿವು ವಿಚಾರಬದ್ಧವಾದದ್ದು. ವೈಚಾರಿಕವಲ್ಲದ ಯಾವ ನಂಬಿಕೆಗೂ ಇಂದು ಬೆಲೆಯಿಲ್ಲ. ಪ್ರಾಚೀನ ಕಾಲದ ಜೀವನ ಮೌಲ್ಯಗಳಲ್ಲಿ ಇಂದು ನಂಬಿಕೆ ಇಲ್ಲ."[೨೬] ಜನರ ಮನಸ್ಸಿನಲ್ಲಿ ಸಂಕ್ಷೋಭೆ ಹೆಚ್ಚಾಗಿದೆ. ಏಕೆಂದರೆ, "ಪ್ರಾಚೀನ ಕಾಲದಿಂದ ಬೆಳೆದು ಬಂದ ಮತಧರ್ಮಗಳಲ್ಲಿ ಜನರ ಆಸ್ಥೆ ಕುಸಿಯುತ್ತಿದೆ. ಯಾವ ಕಟ್ಟುಪಾಡಿಗೂ ಒಳಪಡಲಿಚ್ಛಿಸದ ಪೀಳಿಗೆಯೊಂದು ಇಂದು ರೂಪಗೊಳ್ಳುತ್ತಿದೆ."[೨೭] ಅಷ್ಟೇಅಲ್ಲ, ಇದರ ಜೊತೆಗೆ; ಅಂತರಾಷ್ಟ್ರೀಯ ಯುದ್ಧಗಳು, ಭಯೋತ್ಪಾದಕರ ಹಾವಳಿ, ಅಶಾಂತಿ ಹೆಚ್ಚಾಗಿದೆ. ಸಮಾಜದ ಅಸ್ತವ್ಯವಸ್ಥೆ-ನಾಳೆಯ ಭವಿಷ್ಯದ ಭಯ ಎಲ್ಲರನ್ನೂ ನಿತ್ಯಚಿಂತೆಯಾಗಿ ಕಾಡಲಾರಂಭಿಸಿದೆ. ದೇಶ-ವಿದೇಶಗಳಲ್ಲೂ ಇವೇ ಮನುಷ್ಯ ಜೀವನದ ಪ್ರಮುಖ ಲಕ್ಷಣಗಳಾಗಿ ಲೋಕವನ್ನೇ ಒಂದು ಹುಚ್ಚರ ಸಂತೆಯನ್ನಾಗಿ ಮಾಡಿದೆ ಎಂದರೆ ಬಹುಶಃ ತಪ್ಪಾಗಲಾರದು. "ಇಂದಿನ ರಾಜಕೀಯ ಸಿದ್ಧಾಂತಗಳೂ ತೀರ ವಿಭಿನ್ನ, ನೂರು ವರ್ಷಗಳ ಹಿಂದೆ ಕಂಡು-ಕೇಳರಿಯದ........ ಬಗೆ ಬಗೆಯ ಪ್ರಭುತ್ವಗಳು ರಾಜಕೀಯ ಕ್ಷೇತ್ರವನ್ನು ತುಂಬಿವೆ."[೨೮] ಕುರುಕ್ಷೇತ್ರದಲ್ಲಿ ಹದಿನೆಂಟು ಅಕ್ಷೌಹಿಣಿ ಸೈನ್ಯದಿಂದ ಹದಿನೆಂಟು ದಿನಗಳಲ್ಲಾದ ಘನಘೋರ ಯುದ್ಧಕ್ಕಿಂತಲೂ ಮಿಗಿಲಾದ ಯುದ್ಧವನ್ನು - ವಿಶ್ವವನ್ನೇ ಕಬಳಿಸಬಲ್ಲ ಘೋರ ಶಸ್ತ್ರಾಸ್ತ್ರಗಳು ಸಮೃದ್ಧ ರಾಷ್ಟ್ರಗಳ ಆಯುಧಾಗಾರಗಳಲ್ಲಿ ನೆಲೆಗೊಂಡಿವೆ. "ಹೊಸ ಅನ್ವೇಷಣೆಯಿಂದ ಮಾನವನ ಅರಿವಿನ ಕ್ಷಿತಿಜವೂ ವಿಸ್ತರಿಸಿದೆ. ಹೊಸ, ಹೊಸ ವಿದ್ಯೆ, ಕಲೆ, ವಿಜ್ಞಾನ ವಿಭಾಗಗಳು ರೂಪ ಪಡೆಯುತ್ತಿವೆ. ಇಂದಿನ ಅರಿವು ನಾಳೆಗೆ ಹಳತು ಎನ್ನುವಂತೆ ಅನ್ವೇಷಣೆಗಳು ಶೀಘ್ರಗತಿಯಲ್ಲಿ ಬೆಳೆದಿವೆ."[೨೯] ಆದ್ದರಿಂದ ಜೀವನ ಸಹ್ಯವಾಗಲು ಮನುಷ್ಯನು ತನ್ನ ಜೀವನದ ಮೌಲ್ಯಗಳನ್ನು ಪುನರ್ವಿವೇಚನೆ ಮಾಡಿಕೊಳ್ಳಬೇಕಾದ ಕಾಲ ಈಗ ಒದಗಿ ಬಂದಿದೆ.

"॥ ಧರ್ಮೋ ರಕ್ಷತಿ ರಕ್ಷಿತಃ ॥" ಎನ್ನುವಂತೆ, ಮಾನವ ಜೀವನ ನಡೆಸಬೇಕಾದುದು ಧರ್ಮದಿಂದ ಮತ್ತು ಧರ್ಮಕ್ಕಾಗಿ. ಆಗ ಧರ್ಮವೇ ಅವನನ್ನು ಕಾಪಾಡುತ್ತದೆ. ಇದೇ ಮಹಾಭಾರತದಲ್ಲಿ ವ್ಯಾಸರು ಹೇಳಿರುವ ಅಮರವಾದ ಸಂದೇಶವನ್ನು ಮನುಕುಲವು ಅರ್ಥಮಾಡಿಕೊಳ್ಳಬೇಕಾದ್ದಾಗಿದೆ.

ವ್ಯಾಸ ಋಷಿಗಳು "ಮಹಾಭಾರತ" ಮಹಾಕಾವ್ಯದ ಮೂಲಕ, **"ಆತ್ಮಶಿಕ್ಷಣದ ಪ್ರಯತ್ನದಿಂದ ಅಂತಶ್ಶತ್ರುಗಳನ್ನು ದಮನ ಮಾಡಲು, ಅಂತರಂಗವನ್ನು ಶೋಧಿಸಬೇಕೇ ಹೊರತು ಬಹಿರಂಗದ ಸಾಧನೆಗಳಾದಂತಹ ಸೂರ್ಯಲೋಕ, ಚಂದ್ರಲೋಕ, ಮಂಗಳ ಗ್ರಹಯಾತ್ರೆಯ ಸಾಹಸ ಕಾರ್ಯ ವಿಧಾನಗಳಿಂದ ಲಭಿಸುವಂತಹದ್ದಲ್ಲ."** ಎಂದು ತಿಳಿಸುತ್ತಾರೆ. ಇದೇ ಮಹಾಭಾರತದ ತಾತ್ಪರ್ಯವಾಗಿದ್ದು, ಇದರ ಅಧ್ಯಯನದಿಂದ ನಮಗೆ 'ಅಂತರಂಗ ಶೋಧನೆಯು ಬಹಿರಂಗ ಸಾಹಸಕ್ಕಿಂತಲೂ ಕಠಿಣವಾದುದು ಮತ್ತು ಪ್ರಮುಖವಾದುದು." ಎಂಬುದನ್ನೇ ಅರಹುತ್ತದೆ. ವಾಸ್ತವವಾಗಿ ಇದಕ್ಕೆ ಮಹಾಭಾರತದ ಅಧ್ಯಯನವು ಪ್ರೇರಕವೂ, ಸಹಾಯಕವೂ ಆಗಿದೆ.

ಇಂದಿನ ಹೊಸಯುಗದ ವೈಜ್ಞಾನಿಕ ಮತ್ತು ತಂತ್ರಜ್ಞಾನದ ಆಧುನಿಕ ಸಮಾಜದಲ್ಲಿ ಸಂಸ್ಕೃತಿ, ಧರ್ಮ, ನೈತಿ-ಕತೆಗಳು ಕ್ಷೀಣಿಸುತ್ತಾ ಬಂದು ಕುಸಿದುಹೋಗುತ್ತಿರುವುದೇ ಎಲ್ಲೆಲ್ಲೂ ಕಾಣಿಸುತ್ತಿದೆ. ನಿರಂತರ ಬೆಲೆ ಏರಿಕೆಯಂತಹ ರಾಜಕೀಯ ವಾತಾವರಣದಿಂದಾಗಿ ವಿಪರೀತ ಬಡತನ ಬುಗಿಲೆದ್ದಿದೆ. ದಿನ ನಿತ್ಯ ಸಾವು-ನೋವುಗಳು, ಜಾತೀಯತೆಯ ದ್ವೇಷ, ಅನಕ್ಷರತೆ, ಭಯೋತ್ಪಾದಕತೆ, ಬಾಂಬ್ ಸ್ಫೋಟ, ಲಂಚಗುಳಿತನದಂತಹ ಭ್ರಷ್ಟಾಚಾರ, ಹೆಣ್ಣುಮಕ್ಕಳ ಅತ್ಯಾಚಾರ, ವರದಕ್ಷಿಣೆ ಪಿಡುಗು – ಇವೇ ಮೊದಲಾದ ದುರ್ಘಟನೆಗಳಿಂದಾಗಿ ಮಾನವೀಯತೆಯು ಕಣ್ಮರೆಯಾಗುತ್ತಿದ್ದು; ದೈತ್ಯಾಕಾರದ ರಾಕ್ಷಸರಂತಹ ಜನರ ಕೈವಾಡದಿಂದಾಗಿ ಸಂಭವಿಸುವ ದುಷ್ಕೃತ್ಯಗಳಿಗೆ ಮುಗ್ಧಜನರು ಬಲಿಯಾಗುತ್ತಿದ್ದಾರೆ. ಕೊಲೆ-ಸುಲಿಗೆ, ಅತ್ಯಾಚಾರಗಳು ದೇಶದಾದ್ಯಂತ ವ್ಯಾಪಿಸಿದೆ. ಇಂತಹವುಗಳನ್ನು ತಡೆಯಬೇಕಾದರೆ ಜನರು ತಮ್ಮನ್ನು ತಾವು ಒಳ್ಳೆಯ ಸಂಸ್ಕೃತಿ, ನೈತಿಕತೆಗಳೆಡೆಗೆ ತೊಡಗಿಸಿಕೊಳ್ಳಬೇಕು. ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿಯುವಂತಹ ಸನಾತನ ಪವಿತ್ರ ಧರ್ಮಗ್ರಂಥಗಳಾದ ಈ ಮಹಾಭಾರತದಂತಹ ಕಾವ್ಯದಲ್ಲಿರುವ ಅಮೂಲ್ಯ ವಿಷಯಗಳ ಚಿಂತನ-ಮಂಥನಗಳನ್ನು ನಡೆಸಿದಾಗ ಅದು ನಮ್ಮನ್ನು ಸುಸಂಸ್ಕೃತಿಯೆಡೆಗೆ ಕರೆದೊಯ್ಯಲು ಯಶಸ್ವಿಯಾಗುತ್ತದೆ. ಇದೇ ಈ ಅಧ್ಯಯನದ ಹಿಂದಿರುವ ಮಹತ್ವಯುತವಾದ ಅಂಶವಾಗಿದೆ.

**"ಮಹಾಭಾರತ"**ವು ಸನಾತನ ಭಾರತೀಯ ಸಂಸ್ಕೃತಿಯ ಜೀವಾಳದ ಸೊತ್ತು. ***"ಸಾವಿರಾರು ವರ್ಷಗಳಿಂದಲೂ ಚತುರ್ವಿಧ ಪುರುಷಾರ್ಥಗಳ ಸಾಧನೆಗಾಗಿ ಭಾರತೀಯರು ಮಹಾಭಾರತದಿಂದಲೇ ಪ್ರೇರಣೆ ಪಡೆಯುತ್ತಿದ್ದರು. ಇನ್ನುಮುಂದೆಯೂ ಇದೇರೀತಿ ತಲೆತಲಾಂತರದಿಂದ ನಡೆಸಿಕೊಂಡು ಬಂದಂತೆ ಮುಂದಿನ ಕಲ್ಪಾಂತರದವರೆಗೂ ಜನತೆಯು ಮಹಾಭಾರತ ಎಂಬ ಕೊನೆಯಿಲ್ಲದ ಖಣಿಯಿಂದ ಹೊಸ ಹೊಸ ಮುತ್ತು, ರತ್ನಗಳೆಂಬ ವಿಷಯಗಳನ್ನು ಆಯ್ದುಕೊಳ್ಳುತ್ತಾ ಸಾಗಬಹುದು."*** ಅದರಂತೆಯೇ ಕ್ರಿ.ಶ. ೧೯ ನೇ ಶತಮಾನದಿಂದೀಚೆಗೆ ಪಾಶ್ಚಾತ್ಯ ಪಂಡಿತರು, ವಿದ್ವಾಂಸರು ಮೊದಲಾದವರು ಪುರಾಣೇತಿಹಾಸಗಳು, ಮಹಾಕಾವ್ಯ ಗ್ರಂಥಗಳನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಒಂದು ಹೊಸ ಶಾಖೆಯನ್ನು ಆರಂಭಿಸಿದರು. ಅದೇ "ಇಂಡಾಲಜಿ" ಅಥವಾ "ಭಾರತ ವಿದ್ಯೆ". ಈ ಶಾಸ್ತ್ರದೊಳಗೆ ಸಾಹಿತ್ಯ, ಇತಿಹಾಸ, ಭಾಷಾಶಾಸ್ತ್ರ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಸಂಸ್ಕೃತಿ ಮತ್ತು ಭಾರತೀಯ ಆಗಮಗಳನ್ನು ಹೊಸ ದೃಷ್ಟಿಯಿಂದ ಅಧ್ಯಯನ ಮಾಡಲು ಹೊಸ ಸ್ವಾಧ್ಯಾಯಕ್ಕೆ ಈ ರೀತಿಯಾಗಿ ಹೊಸ ರೂಪ ಕೊಟ್ಟಿರುತ್ತಾರೆ.

**ಪಾಶ್ಚಾತ್ಯ ವಿದ್ವಾಂಸರಾದ ಪೆರಿಜಿಟರ್, ವೆಬರ್** ಮೊದಲಾದವರು ಹೆಚ್ಚು ಪರಿಶ್ರಮಪಟ್ಟು ಭಾರತೀಯರ ಹೊಸ ದೃಷ್ಟಿಯ ಬೇರು ಮಹಾಭಾರತದೊಳಗೆ ನೆಡುವಂತೆ ಭಾರತೀಯ ಪುರಾಣ, ಇತಿಹಾಸಗಳ ಅನ್ವಯವನ್ನು ಹಚ್ಚಿದ್ದಾರೆ. ಅವರ ಈ ಪದ್ಧತಿಯನ್ನು ಅನುಸರಿಸಿ ಪುಣೆಯ ಪ್ರಸಿದ್ಧ ಇತಿಹಾಸಕಾರರಾದ **ಡಾ|| ವಿ.ಕೆ. ರಾಜವಾಡೆ** ಅವರು ಮಹಾಭಾರತವನ್ನು ಹೊಸ ದೃಷ್ಟಿಯಿಂದ ವೈಜ್ಞಾನಿಕವಾಗಿ ಅಧ್ಯಯನ ನಡೆಸಿದುದರ ಪರಿಣಾಮವಾಗಿ ಅನೇಕ ಭೌಗೋಳಿಕ ಅಂಶಗಳನ್ನು ಶಾಸ್ತ್ರೀಯವಾಗಿ ರೂಪಿಸಿ ಸಿದ್ಧಾಂತಗಳನ್ನು ಮಂಡಿಸಿದ್ದಾರೆ.

ಪ್ರಸಿದ್ಧ ಪಂಡಿತರಲ್ಲಿ ಒಬ್ಬರಾದ ಮಹಾರಾಷ್ಟ್ರದ ಪುಣೆಗೆ ಸೇರಿದ **ಡಾ|| ಇರಾವತಿ ಕರ್ವೆ** ಅವರೂ ಕೂಡಾ **ಮಾನವಶಾಸ್ತ್ರ** ಮತ್ತು **ಸಮಾಜಶಾಸ್ತ್ರ**ಗಳನ್ನು ತಮ್ಮ ಅಧ್ಯಯನ ವಿಷಯಗಳಾಗಿ ಆಯ್ಕೆ ಮಾಡಿಕೊಂಡು ಮಹಾಭಾರತದಲ್ಲಿನ ವೀರ ಪುರುಷರ ಮತ್ತು ಐತಿಹಾಸಿಕ ಪ್ರಸಿದ್ಧ ಸ್ಥಳಗಳ ಆಖ್ಯಾನ, ಉಪಾಖ್ಯಾನಗಳ ಸಂಬಂಧದಿಂದ ಅಧ್ಯಯನ ಮಾಡಿ ತಮ್ಮ ಕೃತಿಯಲ್ಲಿ ಪ್ರಕಟಿಸಿದ್ದಾರೆ.

ಕೇವಲ ಚತುರ್ವಿಧ ಪುರುಷಾರ್ಥ ಸಾಧನೆಗಾಗಿ ಮಹಾಭಾರತ ಅಧ್ಯಯನ ಇಂದು ಸೀಮಿತವಾಗಿಲ್ಲ. ಪ್ರಸ್ತುತ ಈ ಅಧ್ಯಯನದಲ್ಲಿ ಅದನ್ನು ಹೊಸ ದೃಷ್ಟಿಯಿಂದ ಆಧುನಿಕವಾಗಿ ಚಿಂತನೆಗೊಳಪಡಿಸಿದಲ್ಲಿ ಅದರಿಂದ ನಾವು ಹೊಸ ಹೊಸ ವಿಷಯಗಳನ್ನು ಸೂಕ್ಷ್ಮಾತಿಸೂಕ್ಷ್ಮದಿಂದ ಹೊರತೆಗೆಯಲಾಗಿದೆ.

**ಡಾ॥ ಸುಕ್ತಂಕರ್** ಅವರು ಚೀನಾ, ಟಿಬೇಟ್, ನೇಪಾಳ ಮೊದಲಾದ ಕಡೆಗಳಲ್ಲಿ ದೊರೆತ ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳನ್ನು ವೈಜ್ಞಾನಿಕ ರೀತಿಯಲ್ಲಿ ವರ್ಗೀಕರಣಗೊಳಿಸಿ ಪ್ರಾಚೀನವಾದುದನ್ನು ಆವಿಷ್ಕರಿಸಿ ಅಧ್ಯಯನಕ್ಕೆ ಅನುಕೂಲವಾಗುವಂತೆ ಪರಸ್ಪರ ಭೇದವನ್ನು ಪ್ರಸ್ತಾಪಿಸಿದ್ದಾರೆ.

ಕ್ರಿ.ಶ. ೧೬ ನೇ ಶತಮಾನದಲ್ಲಿ ಮಹಾಭಾರತವನ್ನು **ಅಕ್ಬರ್‌ನು ಪರ್ಷಿಯನ್ ಭಾಷೆಗೂ ಅನುವಾದ ಮಾಡಿಸಿದರು.** ಕ್ರಿ.ಶ. ೧೮೮೩ ರಲ್ಲಿ **ಡೆನ್ಮಾರ್ಕಿನ ಸೋರೆನ್‌ಸನ್** ಎಂಬಾತನು **ಮಹಾಭಾರತದ ಮೂಲ ರೂಪದ ಅನ್ವೇಷಣೆಗೆ ನಡೆಸಿದ ಮೊದಲಿಗನಾಗಿದ್ದಾನೆ.** ಆದರೆ ಈತನು ತನ್ನ ಗ್ರಂಥವನ್ನು ಸೀಮಿತಗೊಳಿಸಿ 'ಕುರುಕ್ಷೇತ್ರ ಯುದ್ಧ'ವನ್ನಷ್ಟೇ ತನ್ನ ಗ್ರಂಥ ರಚನೆಯ ವ್ಯಾಪ್ತಿಗೆ ತೆಗೆದುಕೊಂಡು ಪ್ರಕಟಿಸಿದ್ದಾನೆ.

ಆನಂತರ ಮಹಾಭಾರತ ಕುರಿತಾಗಿ ಅಂದಿನ ಕಾಲದ ಸಂಸ್ಕೃತಿಯ ಬಗೆಗೆ ಸವಿಸ್ತಾರವಾದ ಮತ್ತು ಗಹನವಾದ ಪ್ರತಿಪಾದನೆಗಳು ನಡೆದವು. **ಇಷ್ಟೊಂದು ಗಂಭೀರವಾದ ಪ್ರಖರವಾದ ಮತ್ತು ದಟ್ಟವಾದ ಚಿಂತನೆಗಳ ಚಿತ್ರಣಗಳು ಮೂಡಿಬಂದಿರುವ ಹಿನ್ನೆಲೆಯಲ್ಲಿ "ಮಹಾಭಾರತದ ಕುರಿತಾದ ಆಧುನಿಕ ಚಿಂತನೆಗಳು" ಎಂಬ ನನ್ನ ಈ ಅಧ್ಯಯನವು ಒಂದು ಹೊಸ ಮನೋಲೋಕವನ್ನೇ ಪ್ರವೇಶಿಸುವಂತೆ ಮಾಡಿದೆ.**

ಕನ್ನಡ ಸಾಹಿತ್ಯಕ್ಕೂ ಮಹಾಭಾರತದ ಕಾಲದಲ್ಲಿನ ಅಂದಿನ ಸಮಾಜ, ಸಂಸ್ಕೃತಿ, ಅರ್ಥವ್ಯವಸ್ಥೆ, ರಾಜಕೀಯ ಸ್ಥಿತಿ-ಗತಿಗಳು, ಧಾರ್ಮಿಕತೆ ಮೊದಲಾದ ಎಲ್ಲಾ ಅಂಶಗಳಿಗೂ ಅನ್ಯೋನ್ಯವಾದ ಸಂಬಂಧವಿರುವುದನ್ನು ನಾವು ಕಾಣುತ್ತೇವೆ. ಇಂತಹ ವೈವಿಧ್ಯಪೂರ್ಣ ಸಂಪ್ರದಾಯಬದ್ಧ ವಿಷಯಗಳ ಮೇಲೆ "ಆಧುನಿಕ ಚಿಂತನೆ" ಮಾಡಲಾಗಿದೆ. ಇಲ್ಲಿ ಅನೂಚಾನವಾಗಿ ಮೂಡಿಬಂದಿರುವ ಪ್ರತಿಯೊಬ್ಬರ ಚಿಂತನೆಗಳಲ್ಲಿರುವ ವಿಭಿನ್ನತೆಗಳನ್ನು, ವ್ಯತ್ಯಾಸಗಳನ್ನು ಗುರ್ತಿಸಲಾಗಿದೆ.

ಈ ಅಧ್ಯಯನದ ಸಂದರ್ಭದಲ್ಲಿ ಮುಖ್ಯವೆನಿಸುವ ಸ್ತ್ರೀಪಾತ್ರಗಳಾದ **ಗಂಗೆ, ಸತ್ಯವತೀ, ಕುಂತಿ, ಗಾಂಧಾರಿ,** ದ್ರೌಪದಿ ಮೊದಲಾದವರ ಪಾತ್ರವು ತನ್ನದೇ ಆದ ಮಹತ್ವವನ್ನು ಹೊಂದಿದ್ದು; ಅದರ ಪ್ರಾಮುಖ್ಯತೆ, ಸಂವೇದನೆ, ಪಾತ್ರವೈಶಿಷ್ಟ್ಯತೆಗಳ ಕುರಿತಾಗಿ ಕೂಲಂಕಷವಾಗಿ ಚರ್ಚಿಸಲಾಗಿದೆ.

**ಮಹಾಭಾರತದಲ್ಲಿ ನಾವಿಂದು 'ಚರಿತ್ರೆ' ಅಥವಾ 'ಇತಿಹಾಸ'ವೆಂದು ಗುರ್ತಿಸಬಹುದಾದ ಭಾಗ ಇಡೀ ಗ್ರಂಥದ ಒಂದು ಕಾಲು ಭಾಗದಷ್ಟು ಮಾತ್ರ ಅಷ್ಟೇ!! ಅಂದರೆ, ಹೆಚ್ಚೆಂದರೆ ಸುಮಾರು ಇಪ್ಪತ್ತು ಸಾವಿರ ಶ್ಲೋಕಗಳು. ಇದರಲ್ಲಿ ಪಾಂಡವ-ಕೌರವರನ್ನು ಕುರಿತು ಆಖ್ಯಾನಗಳು, ಪ್ರಸಂಗಗಳು, ಹಿನ್ನೆಲೆ, ವೃತ್ತ – ಮೊದಲಾದವುಗಳು, ಭಾರತ ಯುದ್ಧದ ವರ್ಣನೆ, ಪೂರ್ವ ಪೀಠಿಕೆ, ಫಲಗಳೂ ಬರುತ್ತವೆ. ಕುರುಕ್ಷೇತ್ರ ಮಹಾಭಾರತ ಯುದ್ಧದಲ್ಲಿ ಪಾಂಡವರಿಗೆ ಒದಗಿದ "ಜಯ"ವೇ ಮುಖ್ಯವಸ್ತುವಾಗಿದ್ದು; ಇದು "ಜಯ"ವೆನಿಸಿಕೊಂಡಿತು. "ಮೊದಲಿಗೆ "ಜಯ"ವೆಂದಿದ್ದು (ಆದಿಪರ್ವ – ೬೨.೨೦) ಕೇವಲ ಇತಿವೃತ್ತವೆಂಬರ್ಥದಲ್ಲಿ ಇತಿಹಾಸ. ಅದು "ಭಾರತ"ವಾದದ್ದು ಉಪದೇಶಗಳನ್ನೊಳಗೊಂಡಾಗ; "ಮಹಾಭಾರತ"ವಾದದ್ದು ಆಖ್ಯಾನ-ಉಪಾಖ್ಯಾನಗಳನ್ನೂ ಒಳಗೊಂಡ ಪುರಾಣದ ಕಳೆಯನ್ನು ತಳೆದಾಗ."**[೨೦] ಎಂಬುದು ಮಹಾಭಾರತ ಕುರಿತಾದ ಈ ಅಧ್ಯಯನದಿಂದ ತಿಳಿದುಬರುತ್ತದೆ.

ಕವಿ ಕುಮಾರವ್ಯಾಸನೂ ಕೂಡಾ ಈ ಮಹಾಕಾವ್ಯವನ್ನು, 'ನಾಲ್ಕು ಪುರುಷಾರ್ಥಗಳ ಪಾರಿಜಾತವೆಂದು ಪ್ರಸಿದ್ಧವಾಗಿದೆ.' ಎಂದಿದ್ದಾನೆ. **"ಮಹಾಭಾರತವು ವೇದಗಳಿಗಿಂತಲೂ ಮಹತ್ವಪೂರ್ಣವಾದುದೆಂದು ದೇವತೆಗಳೂ ತೀರ್ಮಾನಿಸಿದ್ದಾರೆ. ದೇವತೆಗಳು ನಾಲ್ಕು ವೇದಗಳನ್ನೂ ಮತ್ತು ಭಾರತವನ್ನೂ ತಕ್ಕಡಿಯಲ್ಲಿ ತೂಗಲಾಗಿ ಭಾರತವೇ ಭಾರವಾಗಿ ಕಂಡುದರಿಂದ 'ಮಹಾಭಾರತ'ವೆಂದು ಹೆಸರಾಯಿತು. ಮಹತ್ವದಿಂದಲೂ, ಗಾಂಭೀರ್ಯದಿಂದಲೂ ಮತ್ತು ಭಾರದಿಂದಲೂ ಇದು ವೇದಗಳಿಗಿಂತಲೂ ಅಧಿಕವಾಯಿತು."**[೨] ಎಂದು ಮಹಾಭಾರತದಲ್ಲಿಯೇ ಹೇಳಿರುವುದರಿಂದ ಇದರ ಬಗ್ಗೆ ಬೇರೆ ಯಾವ ಚಿಂತನೆ ಮಾಡಲು ಸಾಧ್ಯವಾಗಿಲ್ಲ.

ಒಂದು ವಿಶಿಷ್ಟ ಕಾಲಕ್ಕೆ ಸೀಮಿತವಾದ ಆಚಾರ ವಿಚಾರಗಳನ್ನು ಪಾಲಿಸುವಲ್ಲಿ ಇದ್ದಂತಹ ಸಾಮಾಜಿಕ ಪರಿಸರ, ಸಂಸ್ಕೃತಿ, ಧಾರ್ಮಿಕತೆಗಳು ಮತ್ತು ನೈತಿಕತೆಯ ಕುರಿತಾಗಲೀ, ವ್ಯಾಸರ ಈ ಪಾತ್ರಸೃಷ್ಟಿಗಳ ಸ್ಫೂರ್ತಿ ಎಲ್ಲಿದೆ ಎಂಬುದನ್ನು ಹುಡುಕಿ ನೋಡುವ ಅಗತ್ಯ ಈವರೆವಿಗೂ ಯಾರಿಗೂ ತೋಚಿರುವುದು ಕಾಣುವುದಿಲ್ಲ. ನನ್ನ ಈ ಸಂಶೋಧನೆ ಅಥವಾ ಅಧ್ಯಯದಿಂದ ಮಹಾಭಾರತ ಕಾಲದ ಸಾಮಾಜಿಕ ಜೀವನದಲ್ಲಿ ಪ್ರಾಚೀನ ಅಥವಾ ವೇದಕಾಲೀನ ಮುಂದುವರೆದ ಕುಟುಂಬ ವ್ಯವಸ್ಥೆ, ರಾಜಕೀಯ, ಧಾರ್ಮಿಕ ಶಾಸನಬದ್ಧ ಕಟ್ಟುಪಾಡುಗಳು ಹೇಗೆ ಪ್ರಚಲಿತವಾಗಿತ್ತೆಂದು ತೌಲನಿಕವಾಗಿ ನೋಡುವುದರಿಂದ ವೇದ್ಯವಾಗುತ್ತದೆ. ಆದ್ದರಿಂದ ಇವೇ ಕುರಿತಾದ ಇನ್ನೂ ಅನೇಕ ವಿಷಯಗಳನ್ನು ಈ ಅಧ್ಯಯನದಲ್ಲಿ ನಡೆಸಲಾಗಿದೆ.

ಈವರೆವಿಗೂ ಮಹಾಭಾರತವನ್ನು ಸಂಶೋಧನ ದೃಷ್ಟಿಯಿಂದ ಅಥವಾ ಪುರಾಣ–ಪ್ರವಚನ ದೃಷ್ಟಿಯಿಂದ ಅಧ್ಯಯನ ಮಾಡಿದ ವಿದ್ವಾಂಸರ ಮನಸ್ಸಿನಲ್ಲಿ ತಲೆದೋರಿದ ಪ್ರಶ್ನೆಗಳು, ಪ್ರಶ್ನೆಗಳಾಗಿಯೇ ಉಳಿದುಬಿಟ್ಟಿವೆ.

ಉದಾಹರಣೆಗೆ: ಕರ್ಣನ ಜನನ, ದ್ರೌಪದಿಯ ವಸ್ತ್ರಾಪಹರಣ ಪ್ರಸಂಗ ಇತ್ಯಾದಿ.

ಈ ಪ್ರಶ್ನೆಗಳಿಗೆ ಸಂಭವನೀಯ ಉತ್ತರಗಳನ್ನು ಆಧಾರಸಹಿತ ಕಂಡುಕೊಳ್ಳುವುದು ಈ ಸಂಶೋಧನೆಯ ಉದ್ದೇಶ.

ಕನ್ನಡ ಸಾಹಿತ್ಯದ ಆರಂಭಿಕ ಕಾಲದಲ್ಲಿ ಅತ್ಯಂತ ಮೊಟ್ಟ ಮೊದಲ ಮತ್ತು ಹೆಚ್ಚು ಜನಪ್ರಿಯಗೊಂಡ 'ಮಹಾಭಾರತ' ಕೃತಿಗಳೆಂದರೆ; ಪಂಪ, ರನ್ನ, ಕುಮಾರವ್ಯಾಸರದ್ದೇ ಆಗಿದೆ. ಈ ಕೃತಿಗಳಲ್ಲಿ ಕಂಡು ಬಂದಿರುವ ಚಿಂತನಾಕ್ರಮಗಳನ್ನು ಈ ಅಧ್ಯಯನದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದೆ.

ಸುಮಾರು ೧೦ನೇ **ಶತಮಾನದಲ್ಲಿ ಆದಿಕವಿ ಪಂಪ "ವಿಕ್ರಮಾರ್ಜುನ ವಿಜಯ"**ವೆಂಬ ಚಂಪೂಕಾವ್ಯ ರಚಿಸಿದ. ನಂತರ **ಕವಿ ಚಕ್ರವರ್ತಿ ಬಿರುದಾಂಕಿತ** ರನ್ನ **"ಸಾಹಸಭೀಮ ವಿಜಯ"** ಅಥವಾ **"ರನ್ನನ ಗದಾಯುದ್ಧ"** ಎಂಬ ಚಂಪೂಕಾವ್ಯ ರಚಿಸಿದ. ನಡುಗನ್ನಡದ ಕವಿ **ವೀರನಾರಾಯಣಪ್ಪನಾದ ಕುಮಾರವ್ಯಾಸ** ಸುಮಾರು ಕ್ರಿ.ಶ. ೧೪೦೦ ಎಂದು ಈತನ ಕಾಲದ ಬಗ್ಗೆ ವಿವಿಧ ಪಂಡಿತರು ತಿಳಿಸಿದ್ದಾರಾದರೂ ಈ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. **"ಕರ್ನಾಟ ಭಾರತ ಕಥಾಮಂಜರಿ"** ಅಥವಾ **"ಕುಮಾರವ್ಯಾಸ ಭಾರತ"**ವನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ. ಒಟ್ಟಾರೆ, ಈ ಮೂರೂ ಕವಿಗಳು ವ್ಯಾಸ ಋಷಿಗಳ ಮಹಾಭಾರತವನ್ನೇ ಮೂಲಾಧಾರವಾಗಿಟ್ಟುಕೊಂಡು ಕನ್ನಡದಲ್ಲಿ ಕಾವ್ಯಗಳನ್ನು ರಚಿಸಿದರೂ ಅಲ್ಲಲ್ಲಿ ತಮಗೆ ಬೇಕಾದಂತೆ ಅಲ್ಪಸ್ವಲ್ಪ ವ್ಯತ್ಯಾಸಗಳನ್ನೂ ಮಾಡಿಕೊಂಡಿದ್ದಾರೆ.

ಮಹಾಭಾರತದ ಮಹಾಪುರುಷನಾದ ಪಿತಾಮಹ ಭೀಷ್ಮ ಶೂನ್ಯ ಸಿಂಹಾಸನಾಧೀಶನೆನಿಸಿದರೂ ಕುರು–ಪಾಂಡವರಿಬ್ಬರ ಅಭ್ಯುದಯಕ್ಕೆ ಕೊನೆಯವರೆವಿಗೂ ಶ್ರಮಿಸುವ ನಾಯಕಾಭ್ಯುದಯಗಳಿಂದ ಕೂಡಿದವನಾಗಿದ್ದಾನೆ.

**ಕವಿ ಪಂಪ ಚಾಲುಕ್ಯ ಸಾಮಂತ ದೊರೆ ಅರಿಕೇಸರಿಯ ಆಸ್ಥಾನದಲ್ಲಿದ್ದವನು ದೊರೆಯ ಕೀರ್ತಿಯ ಚಿರಸ್ಥಾಯಿಯಾಗಿ ಉಳಿಸಲು ಅರ್ಜುನನಿಗೆ ಸಮೀಕರಿಸಿ ಕಾವ್ಯ ರಚಿಸಿದ್ದಾನೆ.** ಈತನ ಈ ಕಾವ್ಯದಲ್ಲಿ ಅರ್ಜುನನನ್ನೇ ನಾಯಕನನ್ನಾಗಿ ಮಾಡಿದ್ದಾನೆ.

**ಕವಿ ರನ್ನ ಚಾಳುಕ್ಯ ಚಕ್ರವರ್ತಿ ಸತ್ಯಾಶ್ರಯನನ್ನು ಭೀಮಸೇನನೊಂದಿಗೆ** ಅನುಸಂಧಾನಿಸಿ, ತನ್ನ ಆಶ್ರಯದಾತನ ಕೀರ್ತಿಯನ್ನು ಆಚಂದ್ರಾರ್ಕಸ್ಥಾಯಿಯಾಗಿ ಉಳಿಸಲು **'ಸಾಹಸ ಭೀಮವಿಜಯಂ' ಕಾವ್ಯ ರಚಿಸಿದ.**

**ಗದುಗಿನ ನಾರಣಪ್ಪ ಶ್ರೀಕೃಷ್ಣನನ್ನೇ ತನ್ನ ಕಾವ್ಯದ ಕಥಾನಾಯಕನನ್ನಾಗಿ ಮಾಡಿಕೊಂಡು ಜನಮನದಲ್ಲಿ ಭಕ್ತಿರಸ ಭಾವವನ್ನು ಮಾಡಿಸಲು ಭಾರತ ರಚಿಸಿದ.** ವ್ಯಾಸರ ಮೇಲಿನ ಅತಿಶಯ ಪ್ರೀತಿಯಿಂದ 'ಕುಮಾರವ್ಯಾಸ'ನೆಂದೇ ತನ್ನ ಹೆಸರಿಟ್ಟುಕೊಂಡಿದ್ದಾನೆ.

ಭಕ್ತಕವಿಯಾದ ಕುಮಾರವ್ಯಾಸ ಭಗವಂತ ಮಹಿಮೆಯ ವರ್ಣನೆ ಅತಿರೇಕದಲ್ಲಿ ಮಾನವತೆಯನ್ನು ಮರೆಯುತ್ತಾನೆ. ಆದರೆ **"ಅವನು ಬರಿಯ ದೈವಚಾಲಿತ ಪಾತ್ರರನ್ನು ಚಿತ್ರಿಸಿದನೆ ವಿನಾ** ಮಹಾಭಾರತದ ವೀರರನ್ನಲ್ಲ."[3]

ನ್ನುವುದಾದರೆ "ಕುಮಾರವ್ಯಾಸನ ಭಕ್ತಿಯ ಪರಾಕಾಷ್ಠೆ ತಿಳಿದೀತಲ್ಲವೇ? ಮಹಾಕವಿ ಕುಮಾರವ್ಯಾಸನ ಪಾತ್ರಗಳು ಮಾನುಷ ದೈವಶಕ್ತಿಗಳ ರಂಗಸ್ಥಲವಾಗಿದೆ."೩ ಹಾಗೆಯೇ ಸಂಗಮಸ್ಥಲವೂ ಆಗಿದೆ. ಕುಮಾರವ್ಯಾಸ ಭಾರತದಲ್ಲಿ ಶ್ರೀಕೃಷ್ಣ ಪಾತ್ರಧಾರಿಯಷ್ಟೇ ಅಲ್ಲ; ಸೂತ್ರಧಾರಿಯೂ ಆಗಿದ್ದಾನೆ. ನರನಾಟಕವ ತಾನೇ ನಟಿಸಿ ತೋರಿಸುತ್ತಾನೆ.

## ಪಂಪನ ಕಾವ್ಯಗಳ ಮೇಲೆ ಸಂಸ್ಕೃತ ಕೃತಿಗಳ ಪ್ರಭಾವ :

'ಪಂಪಭಾರತ'ಕ್ಕೆ ಮೂಲ ಆಕರ ಸಂಸ್ಕೃತದ 'ವ್ಯಾಸಭಾರತ'. ಪಂಪ ತನ್ನ ಪ್ರತಿಭೆಯ ಜೊತೆಗೆ ಸಂಸ್ಕೃತದ ಅನೇಕ ಕಾವ್ಯ ನಾಟಕಗಳನ್ನೂ ಅಭ್ಯಾಸ ಮಾಡಿ ವ್ಯುತ್ಪತ್ತಿಯನ್ನು ಅಂದರೆ ಪಾಂಡಿತ್ಯವನ್ನು ಪಡೆದುಕೊಂಡುದುದನ್ನು ವಿದ್ವಾಂಸರು ಗುರ್ತಿಸಿದ್ದಾರೆ. ಸಾಹಿತ್ಯದ ಜೊತೆಗೆ ಸಂಗೀತ, ನೃತ್ಯ, ರಾಜನೀತಿ, ಅರ್ಥಶಾಸ್ತ್ರ – ಹೀಗೆ ಹಲವು ವಸ್ತು ಸಂಗತಿಗಳು ಅವನಿಗೆ ಆಸಕ್ತಿಯನ್ನು ಉಂಟುಮಾಡಿದ್ದವು. ಕನ್ನಡ ಕವಿಗಳಲ್ಲೆಲ್ಲಾ ಪಂಪನೇ ಬಹುಶ್ರುತನೆಂಬುದು ಆತನ ಹೆಗ್ಗಳಿಕೆ.

ಪಂಪನ ಕಾವ್ಯಗಳ ಮೇಲೆ ಪ್ರಭಾವ ಬೀರಿದಂತಹ ಸಂಸ್ಕೃತ ಕೃತಿಗಳೆಂದರೆ;

೧. ಕಾಳಿದಾಸನ 'ರಘುವಂಶ' ಮತ್ತು 'ಕುಮಾರ ಸಂಭವ.'

೨. ಭಾರವಿಯ 'ಕಿರಾತಾರ್ಜುನೀಯ'

೩. ಬಾಣನ 'ಹರ್ಷ ಚರಿತ'

೪. ಭಟ್ಟ ನಾರಾಯಣನ 'ವೇಣೀ ಸಂಹಾರ'

೫. ಮಾಘನ 'ಶಿಶುಪಾಲ ವಧ'

–ಹಾಗೂ ಮುಂತಾದವುಗಳು.

'ಪಂಪ ಭಾರತ'ದ "ಕಥಾ ಸಂವಿಧಾನ"ದಲ್ಲಿ ಭಾರವಿ ಪ್ರಭಾವ ಬೀರಿದ್ದಾನೆ. 'ಕಿರಾತಾರ್ಜುನ' ಪ್ರಕರಣ ಬಹುಮಟ್ಟಿಗೆ ಭಾರವಿಯ 'ಕಿರಾತಾರ್ಜುನೀಯ ವಿಜಯ' ಕಾವ್ಯದ ಅನುಸರಣೆಯಾಗಿದೆ. ಭಾರವಿಯ ಕೃತಿಯನ್ನು ಪಂಪ ಯಥಾವತ್ತಾಗಿ ಅನುಸರಿಸಿಲ್ಲವಾದರೂ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡು ಅವನ ಪದ್ಯಗಳನ್ನು ಅವನೂ ಅನುಸರಿಸಿರುವುದಾಗಿ ಕಂಡು ಬರುತ್ತದೆ.

ಕಥೆಯ ದೃಷ್ಟಿಯಿಂದ 'ಪಂಪ ಭಾರತ'ವನ್ನು ಪ್ರಭಾವಗೊಳಿಸಿರುವ ಮತ್ತೊಂದು ಕೃತಿ ಭಟ್ಟನಾರಾಯಣನ 'ವೇಣೀ ಸಂಹಾರ'. ನಾಟಕ ಕೃತಿ.

'ವ್ಯಾಸ ಭಾರತ'ದಲ್ಲಿ ಭೀಮ ದುರ್ಯೋಧನನ ತೊಡೆ ಮುರಿಯುವ ಪ್ರತಿಜ್ಞೆ ಮಾಡುತ್ತಾನೆ. ಆದರೆ 'ಪಂಪ ಭಾರತ'ದಲ್ಲಿ ಅದಲ್ಲದೆ ದ್ರೌಪದಿಯ ಮುಡಿ ಕಟ್ಟುವ ಪ್ರತಿಜ್ಞೆಯೂ ಬಂದಿದೆ. ಮುಡಿ ಕಟ್ಟುವ ಪ್ರತಿಜ್ಞೆ ವಾಸ್ತವವಾಗಿ ಭಟ್ಟನಾರಾಯಣನ ಸೇರ್ಪಡೆಯಾಗಿದೆ. ಅದನ್ನು ಪಂಪನೂ ಸ್ವೀಕರಿಸಿದ್ದಾನೆ.

"ದೈವಾಯತ್ತಂ ಕುಲೇ ಜನ್ಮ ಮದಾಯತ್ತಂ ತು ಪೌರುಷಂ..."

–'ಸತ್ಕುಲದಲ್ಲಿ ಹುಟ್ಟುವುದು ದೈವವನ್ನು ಅವಲಂಬಿಸಿದೆ. ಆದರೆ ಪೌರುಷ ನನ್ನನ್ನು ಅವಲಂಬಿಸಿದೆ.' ಎಂಬ ಮಾತನ್ನು ಪಂಪ "ಕುಲಂ ಕುಲಮಲ್ತು ಚಲಂ ಕುಲಂ ಗುಣಂ ಕುಲಂ ಅಭಿಮಾನವೊಂದೆ ಕುಲಂ ಅನ್ನೂಕುಲಂ.."

–ಎಂದು ತಿರುಗಿಸಿದಂತೆ ತೋರುತ್ತದೆ.

ಕಾಳಿದಾಸನಿಂದ ಪಂಪ ಸುಮಾರು ೩೦ ಪದ್ಯಗಳನ್ನು ಸ್ವೀಕರಿಸಿದ್ದಾನೆ. "ವಿಕ್ರಮೋರ್ವಶೀಯ"ದಲ್ಲಿ ಬರುವ ಊರ್ವಶಿಯ ವರ್ಣನೆ ಪಂಪನಲ್ಲಿ ಸುಭದ್ರೆಯ ವರ್ಣನೆಯಾಗಿದೆ. "ರಘುವಂಶ"ದಲ್ಲಿ ಬರುವ ದಿಲೀಪ ವರ್ಣನೆ

ಭೀಷ್ಮನಿಗೆ ವರ್ಗಾಯಿಸಿದ್ದಾನೆ. ಇಂದುಮತೀ ಸ್ವಯಮವರ ಪ್ರಸಂಗದಲ್ಲಿ ಕಾಣುವ ರಾಜರ ವರ್ಣನೆ ದ್ರೌಪದೀ ಸ್ವಯಂವರ ಪ್ರಸಂಗದಲ್ಲಿ ಬಂದಿವೆ.

ಶಿಶುಪಾಲನ ನಿಂದೆಯ ಸಂದರ್ಭದ ಒಂದು ಪದ್ಯವನ್ನು ಮಾಘನ "ಶಿಶುಪಾಲ ವಧ"ದಿಂದ ತೆಗೆದುಕೊಂಡಿದ್ದಾನೆ. ಬಾಣನ "ಕಾದಂಬರಿ"ಯಲ್ಲಿ ವಿಲಾಸವತಿಯಾಡುವ ಮಾತು ಪಂಪನ ಕುಂತಿಯ ಬಾಯಲ್ಲಿ ಬಂದಿದೆ. ಅರ್ಜುನನ ವಿದ್ಯಾಭ್ಯಾಸದ ವರ್ಣನೆ ಬಾಣನ "ಕಾದಂಬರಿ"ಯಲ್ಲಿ ಚಂದ್ರಾಪೀಡನ ವಿದ್ಯಾಭ್ಯಾಸ ವರ್ಣನೆಯಂತೆ ಕಂಡುಬರುತ್ತದೆ.

'ಪಂಪ ಭಾರತ'ಕ್ಕೆ ಕೆಲವು ಸಂಸ್ಕೃತ ಕೃತಿಗಳು ಆಕರವಾಗಿದ್ದರೂ ಕೆಲವು ಕಡೆ ಮೂಲಕ್ಕೆ ತನ್ನದೇ ಆದ ಮೆರಗು ಕೊಟ್ಟಿದ್ದಾನೆ. ಪಂಪನ ಕೃತಿಗಳು ಹಿಂದಿನವರಿಗೆ ಋಣಿಯಾದಂತೆ ಮುಂದಿನವರಿಗೆ ಗಣಿಯೂ ಆಗಿವೆ.

'ಪಂಪ ಭಾರತ'ದ ವಸ್ತುವಿಷಯ ಸಂವಿಧಾನ, ಅದನ್ನು ನಿರೂಪಿಸುವ ವಿಧಾನ ಎಲ್ಲವೂ ಸಂಸ್ಕೃತದಿಂದ ಬಂದದ್ದೇ ಆಗಿದೆ. ಆದರೂ 'ಪಂಪ ಭಾರತ'ವೊಂದು ಕನ್ನಡ ಸಾಹಿತ್ಯದ ನಿಧಿಯೇ ಆಗಿದೆ.

ವ್ಯಾಸರ ಮಹಾಭಾರತವನ್ನು ಪಂಪ ಕವಿಯು ಮಾರ್ಪಾಡು ಮಾಡಿಕೊಂಡಿರುವ ಬಗೆ :

'ವ್ಯಾಸರಿಂದ ರಚಿತವಾದ 'ಮಹಾ ಭಾರತ'ವು ಕಾವ್ಯ, ಪುರಾಣ, ಧರ್ಮ ಗ್ರಂಥ, ಇತಿಹಾಸ ಎಲ್ಲವನ್ನೂ ಒಳಗೊಂಡ ಒಂದು ಗೊಂಡಾರಣ್ಯ. ಅದನ್ನು ಉದ್ಯಾನವನ್ನಾಗಿ ಪಂಪ ಪರಿವರ್ತಿಸಿದ್ದಾನೆ.' – ಎಂದು ಡಿ.ಎಲ್. ನರಸಿಂಹಾಚಾರ್ಯರು ಹೇಳುತ್ತಾರೆ. (Pampaa converts the jungle of the Mahabharatha into a Park) ಪಂಪನು ಮೂಲ ಭಾರತವನ್ನು ಕಿರಿದುಗೊಳಿಸಿದ್ದಾನೆ. ಅದನ್ನು 'ವಿಕ್ರಮಾರ್ಜುನ ವಿಜಯ'ವನ್ನಾಗಿ ಮಾರ್ಪಡಿಸಿದ್ದಾನೆ.

ಹೀಗೆ ಕಿರಿದು ಮಾಡುವಾಗ ಯಾವೊಂದು ಮುಖ್ಯ ಘಟನೆಯನ್ನೂ ಬಿಟ್ಟಿರುವುದಿಲ್ಲ. ಮುಖ್ಯ ಕಥೆಗೆ ಪೋಷಕವಾದುದನ್ನು ಅನಗತ್ಯವಾಗಿ ಬೆಳೆಸದೇ ನಾಲ್ಕಾರು ಮಾತುಗಳಲ್ಲಿ ಮುಗಿಸಿದ್ದಾನೆ. "ಪೆರವುಮುಪಾಖ್ಯಾನ ಕಥೇಗಳೊಳವೊಂದುಂ ಕುಂದಲೀಯದೆ ಪೇಳ್ವೆಂ.." – ಎಂದು ತಿಳಿಸುತ್ತಾನೆ.

ಕಥೆಯನ್ನು ಕಿರಿದು ಮಾಡುವ ಪ್ರವೃತ್ತಿ ಕಂಡುಬಂದರೂ, ಕೆಲವು ಕಡೆ ವಿಸ್ತರಿಸುವ ಪ್ರವೃತ್ತಿಯನ್ನು ತೋರುತ್ತಾನೆ. ಒಟ್ಟಿನಲ್ಲಿ 'ಪಂಪ ಭಾರತ'ದಲ್ಲಿ ಲೋಪ, ಆಗಮ, ಆದೇಶ ಪ್ರಕ್ರಿಯೆಗಳು ಅಸಂಖ್ಯವಾಗಿ ನಡೆದಿವೆ. ಪುರಾಣ ಮೂಲದ ಕಥೆಯನ್ನು ಇತಿಹಾಸ ಮೂಲಕ ಲೌಕಿಕ ಕಥೆಯನ್ನಾಗಿಸಿ "ಬೆಳಗುವೆನಲ್ಲಿ ಲೌಕಿಕಮನ್" ಎನ್ನುತ್ತಾನೆ.

ಮೂಲದಲ್ಲಿರುವ ಧರ್ಮದರ್ಶನ ನೀತಿ, ಆಖ್ಯಾನಗಳನ್ನು ಪಂಪನು ಕೈಬಿಟ್ಟಿದ್ದಾನೆ. ಆದಿಪರ್ವದ ಪೀಠಿಕಾಭಾಗ, ಯಯಾತಿ, ಶಕುಂತಲ, ಸಾವಿತ್ರಿ, ನಳ, ಹನುಮಂತ, ರಾಮ, ವಿರಾಟದರ್ಶನ, ಏಕಲವ್ಯ – ಮುಂತಾದ ಉಪಾಖ್ಯಾನಗಳು ಮುಖ್ಯ ಕಥೆಗೆ ಬಂಧಕ ಎಂದು ಅವನ್ನೆಲ್ಲಾ ಕೈಬಿಟ್ಟಿದ್ದಾನೆ.

ದ್ರೌಪದಿಯ ವಸ್ತ್ರಾಪಹರಣವನ್ನು ಮಾರ್ಪಾಡು ಮಾಡಿದ್ದಾನೆ. ದುಶ್ಯಾಸನನು ದ್ರೌಪದಿಯ ಸೀರೆಗೆ ಕೈಹಾಕುತ್ತಾನಷ್ಟೇ. ಆದರೆ ಸೆಳೆಯುವುದಿಲ್ಲ.

ಭೀಷ್ಮನ ಜನನ ವೃತ್ತಾಂತ, ಅಂಬೆಯ ವೃತ್ತಾಂತ, ಪಾಂಡವರ ವಂಶಾನುಕ್ರಮ ನಿರೂಪಣೆ, ಗೀತೋಪದೇಶ – ಮುಂತಾದವುಗಳು ಪಂಪನಲ್ಲಿ ಸಂಕ್ಷೇಪಗೊಂಡಿವೆ.

'ಕಿರಾತಾರ್ಜುನೀಯ ವಿಜಯ' ಪ್ರಕರಣದಲ್ಲಿ ಶಿವನಿಂದ ಅರ್ಜುನ ಪರಾಭವಗೊಂಡರೆ, ಪಂಪ ಭಾರತದಲ್ಲಿ ಸ್ವಾಮಿ ಭಕ್ತಿಯ ಭರದಲ್ಲಿ ನರನಿಂದ ಹರ ಪರಾಜಿತನಾದನೆಂದು ಪಂಪನು ಚಿತ್ರಿಸಿದ್ದಾನೆ. ಮೂಲದಲ್ಲಿಲ್ಲದ ಕವಿ ಸಹಜವಾದ ವರ್ಣನೆಗಳು ಪಂಪ ಭಾರತದುದ್ದಕ್ಕೂ ಕಂಡುಬರುತ್ತದೆ. ಪಾತ್ರಗಳ ಹೆಸರಿನಲ್ಲಿ ಕೆಲವು ಕಡೆ ಸ್ವಲ್ಪ ವ್ಯತ್ಯಾಸ ಮಾಡಿದ್ದಾನೆ.

**'ವ್ಯಾಸಭಾರತ'ಕ್ಕೂ 'ಪಂಪಭಾರತ'ಕ್ಕೂ ಇರುವ ಕೆಲವು ವ್ಯತ್ಯಾಸಗಳನ್ನು ಈ ರೀತಿಯಾಗಿ ಗುರ್ತಿಸಲಾಗಿದೆ.**

೧. ವ್ಯಾಸ ಭಾರತದಲ್ಲಿ ಅಂಬೆ ಮೊದಲು ಭೀಷ್ಮನನ್ನೇ ಒಲಿಯುತ್ತಾಳೆ. ಪಂಪನಲ್ಲಿ ಅವಳಿಗೆ ಮೊದಲು ಸಾಲ್ವನಲ್ಲಿ ಒಲವಿರುತ್ತದೆ.

೨. ವ್ಯಾಸಭಾರತದಲ್ಲಿ ಅಂಬಿಕೆ ಅಂಬಾಲಿಕೆಯರಿಗೆ ವ್ಯಾಸರೊಡನೆ ದೈಹಿಕ ಮಿಲನದಿಂದ ಪುತ್ರರು ಹುಟ್ಟುತ್ತಾರೆ. ಪಂಪನು ವ್ಯಾಸರ ದಿವ್ಯದೃಷ್ಟಿಯಿಂದ ಅವರು ಗರ್ಭ ಧರಿಸುತ್ತಾರೆಂದು ಹೇಳುತ್ತಾನೆ.

೩. ವ್ಯಾಸರಲ್ಲಿ, ಪಾಂಡು ಮಾದ್ರಿಯನ್ನು ಕಂಡು ವಿಕಾರವಶನಾಗಿ ಬಲಾತ್ಕಾರದಿಂದ ಕೂಡುತ್ತಾನೆ. ಪಂಪನಲ್ಲಿ ಮಾದ್ರಿಯೇ ಪಾಂಡುವನ್ನು ಪ್ರಚೋದಿಸುತ್ತಾಳೆ.

೪. ವ್ಯಾಸ ಭಾರತದಲ್ಲಿ ಪಾಂಡವರೆಲ್ಲರೂ ದ್ರೌಪದಿಯನ್ನು ವಿವಾಹವಾಗುತ್ತಾರೆ. ಪಂಪಭಾರತದಲ್ಲಿ ಅರ್ಜುನನೊಬ್ಬನೇ ಅವಳ ಕೈ ಹಿಡಿಯುತ್ತಾನೆ.

೫. ವ್ಯಾಸರಲ್ಲಿ ಯುಧಿಷ್ಠಿರ ಮತ್ತು ದ್ರೌಪದಿ ಏಕಾಂತದಲ್ಲಿರುವುದನ್ನು ಕಂಡ ಅರ್ಜುನ ಪ್ರಾಯಶ್ಚಿತ್ತಕ್ಕಾಗಿ ತೀರ್ಥಯಾತ್ರೆ ಕೈಗೊಳ್ಳುತ್ತಾನೆ. ಆದರೆ ಪಂಪನಲ್ಲಿ ಅರ್ಜುನ ದಿಗ್ವಿಜಯಕ್ಕಾಗಿ ಯಾತ್ರೆ ಮಾಡುತ್ತಾನೆ.

೬. ವ್ಯಾಸರು, ಯುಧಿಷ್ಠಿರ ತನ್ನ ತಮ್ಮಂದಿರನ್ನೊಡ್ಡಿ ಸೋತ ಬಳಿಕ ದ್ರೌಪದಿಯನ್ನು ಒಡ್ಡಿದನೆಂದು ತಿಳಿಸುತ್ತಾರೆ. ಆದರೆ ಪಂಪನು ತಮ್ಮಂದಿರನ್ನೊಪ್ಪಿಸಿದ ವಿಷಯ ಪ್ರಸ್ತಾಪಿಸಿಲ್ಲ. ದ್ರೌಪದಿಯನ್ನು ಮಾತ್ರ ಒಡ್ಡಿ ಸೋತನೆಂದಿದೆ.

೭. ವ್ಯಾಸಭಾರತದಲ್ಲಿ ಅರ್ಜುನನು ಸನ್ಯಾಸಿ ವೇಷದಲ್ಲಿದ್ದು ಸುಭದ್ರೆಯನ್ನು ಹಾರಿಸಿಕೊಂಡು ಹೋಗುತ್ತಾನೆ. ಪಂಪನಲ್ಲಿ ಅರ್ಜುನ– ಸುಭದ್ರೆಯರು ಪರಸ್ಪರ ಅನುರಕ್ತರಾಗುತ್ತಾರೆ.

೮. ದುರ್ಯೋಧನ ದ್ರೌಪದಿಗೆ ತೊಡೆ ತೋರಿಸಿದ್ದನ್ನು ವ್ಯಾಸರು ತಿಳಿಸುತ್ತಾರೆ. ಪಂಪ ಅದನ್ನು ಕೈಬಿಟ್ಟಿದ್ದಾನೆ.

೯. ಭೀಮ ಮಾಡುವ ವೇಣೀ ಸಂಹಾರ ಪ್ರತಿಜ್ಞೆ ವ್ಯಾಸರಲ್ಲಿಲ್ಲ. ಪಂಪ ಭಾರತದಲ್ಲಿ ಮಾತ್ರ ಕಂಡುಬರುತ್ತದೆ.

೧೦. ವ್ಯಾಸಭಾರತದಲ್ಲಿ ತನಗೆ ಒಲಿಯದ ಅರ್ಜುನನಿಗೆ ಊರ್ವಶಿ ಶಾಪ ಕೊಡುತ್ತಾಳೆ. ಪಂಪಭಾರತದಲ್ಲಿ ರಂಭೆ ಶಾಪ ಕೊಡುತ್ತಾಳೆ.

೧೧. ವ್ಯಾಸನಲ್ಲಿ ಗಂಧರ್ವನು ದುರ್ಯೋಧನನನ್ನು ಸೆರೆ ಹಿಡಿದಾಗ ಭೀಮ, ಅರ್ಜುನ, ನಕುಲ, ಸಹದೇವ ಎಲ್ಲರೂ ಹೋರಾಡಿ ಅವನನ್ನು ಬಿಡಿಸುತ್ತಾರೆ. ಪಂಪನಲ್ಲಿ ಅರ್ಜುನನೊಬ್ಬನೇ ದುರ್ಯೋಧನನನ್ನು ಬಿಡಿಸುತ್ತಾನೆ.

೧೨. ಮೂಲಭಾರತದಲ್ಲಿ ವಿರಾಟನು ಉತ್ತರೆಯನ್ನು ಮದುವೆಯಾಗದಂತೆ ಅರ್ಜುನನನ್ನು ಕೇಳುತ್ತಾನೆ. ಉತ್ತರನ ಪ್ರಸಂಗ ಬರುತ್ತದೆ. ಪಂಪನಲ್ಲಿ ಅಭಿಮನ್ಯು ಉತ್ತರೆಯನ್ನು ಮದುವೆಯಾಗುತ್ತಾನೆ. ಆದರೆ ಉತ್ತರನ ಪ್ರಸಂಗ ಬರುವುದಿಲ್ಲ.

೧೩. ವ್ಯಾಸಭಾರತದಲ್ಲಿ ಕೃಷ್ಣನನ್ನು ಕಟ್ಟಿ ಹಾಕುವ ಯತ್ನ ನಡೆದಾಗ ಅವನ ವಿಶ್ವರೂಪ ದರ್ಶನವಾಗುತ್ತದೆ. ಆದರೆ ಪಂಪನಲ್ಲಿ ದುರ್ಯೋಧನ ಕತ್ತಿ ಹಿಡಿದು ಮೇಲೆ ಬೀಳಬೇಕೆಂದಿದ್ದಾಗ ವಿಶ್ವರೂಪ ದರ್ಶನವಾಗುತ್ತದೆ.

೧೪. ವ್ಯಾಸರು ಭೀಷ್ಮನಿಗೆ ಪಟ್ಟಾಭಿಷೇಕ ಸಂದರ್ಭದಲ್ಲಿ ಭೀಷ್ಮನಿಂದ ಕರ್ಣನ ನಿಂದೆ ಮಾಡಿಸಿದ್ದಾರೆ. ಪಂಪನಲ್ಲಿ ಕರ್ಣನೇ ಭೀಷ್ಮರನ್ನು ತೆಗಳುತ್ತಾನೆ.

೧೫. ಮೂಲದಲ್ಲಿ ಕೃಷ್ಣ ಸೂರ್ಯನ ಬೆಳಕು ಹೋಗಿ ಮಬ್ಬು ಕವಿಯುವಂತೆ ಮಾಡುತ್ತಾನೆ. ಪಂಪನಲ್ಲಿ ಅರ್ಜುನನ ಬಾಣದ ಮಳೆಗೆ ಕತ್ತಲಾಗಿ ಸೂರ್ಯ ಮುಳುಗಿದಂತೆ ತೋರುತ್ತದೆ.

೧೬. ವ್ಯಾಸಭಾರತದಲ್ಲಿ 'ಅಶ್ವತ್ಥಾಮಾ ಹತಃ ಕುಂಜರಃ' ಎಂದು ಕೃಷ್ಣನು ಯುಧಿಷ್ಠಿರನಿಂದ ಹೇಳಿಸುತ್ತಾನೆ. 'ಕುಂಜರಃ' ಎಂಬುದನ್ನು ಮೆಲ್ಲಗೆ ಹೇಳಿಸುತ್ತಾನೆ. ಪಂಪನಲ್ಲಿ 'ಹತೋ ಅಶ್ವತ್ಥಾಮಾ' ಎಂದಷ್ಟೇ ಹೇಳುತ್ತಾನೆ ಯುಧಿಷ್ಠಿರ.

೧೭. ವ್ಯಾಸರಲ್ಲಿ ಭೀಮ ದುಶ್ಶಾಸನನ ರಕ್ತಪಾನ ಮಾಡುತ್ತಾನೆ. ಪಂಪನಲ್ಲಿ ಇದರ ಜೊತೆಗೆ ದ್ರೌಪದಿಯ ಕೇಶವನ್ನು ಬಾಚಿ ಮುಡಿಗಟ್ಟಿದ್ದು ಮತ್ತು ಕರುಳಮಾಲೆಯನ್ನು ಮುಡಿಸಿದ್ದು ಹೆಚ್ಚುವರಿಯಾಗಿ ಬರುತ್ತದೆ.

೧೮. ಮೂಲದಲ್ಲಿ ಯುಧಿಷ್ಠಿರನ ರಕ್ತ್ಯಾಯುಧದಿಂದ ಶಲ್ಯನ ಸಾವು ಸಂಭವಿಸುತ್ತದೆ. ಪಂಪನಲ್ಲಿ ಯುಧಿಷ್ಠಿರ ಹಣೆಗಣ್ಣಿನಿಂದ ನೋಡಿದಾಗ ಶಲ್ಯ ಸುಟ್ಟು ಬೂದಿಯಾಗುತ್ತಾನೆ.

೧೯. ವ್ಯಾಸರಲ್ಲಿ ಭೀಮನನ್ನು ಧೃತರಾಷ್ಟ್ರ ತಬ್ಬಿಕೊಂಡ ಚಿತ್ರಣವಿದೆ. ಪಂಪನಲ್ಲಿ ಇದು ಬಿಟ್ಟು ಹೋಗಿದೆ.

೨೦. ವ್ಯಾಸರಲ್ಲಿ ಕರ್ಣನನ್ನು ಕೊಲ್ಲುವುದು ಅವನು ಹೂತಿದ್ದ ರಥದ ಗಾಲಿಯನ್ನು ಎತ್ತುವಾಗ. ಆದರೆ ಪಂಪನಲ್ಲಿ ರಥದ ಮೇಲೇರಿ ಬಂದ ನಂತರ.

೨೧. ವ್ಯಾಸಭಾರತದಲ್ಲಿ ಯುಧಿಷ್ಠಿರನಿಗೆ ಪಟ್ಟಾಭಿಷೇಕವಾದರೆ; ಪಂಪನಲ್ಲಿ ಅರ್ಜುನ ಸುಭದ್ರೆಯರಿಗೆ ಆ ಯೋಗವು ಕಂಡು ಬರುತ್ತದೆ.

೨೨. 'ವ್ಯಾಸ ಭಾರತ'ವು ಒಟ್ಟು ೧೮ ಪರ್ವಗಳಿಂದ ಕೂಡಿದ್ದು; ಒಂದು ಲಕ್ಷ ಪದ್ಯಗಳನ್ನು ಹೊಂದಿದೆ.

'ಪಂಪ ಭಾರತ' ಅಥವಾ 'ವಿಕ್ರಮಾರ್ಜುನ ವಿಜಯ'ವನ್ನು ಮಹಾಕವಿ ಪಂಪನು ೧೪ ಆಶ್ವಾಸಗಳನ್ನು ೧,೬೩೦ ಪದ್ಯಗಳೊಂದಿಗೆ ರಚಿಸಿದ್ದಾನೆ. ಈತನ ಈ ಕೃತಿಯು 'ಆದಿಪರ್ವ'ದೊಂದಿಗೆ ಆರಂಭವಾಗಿ 'ಶಾಂತಿಪರ್ವ'ದೊಡನೆ ಮುಕ್ತಾಯಗೊಳಿಸಿದ್ದಾನೆ.

ಈತನ ಈ ಕೃತಿಯಲ್ಲಿ ಅತ್ಯಂತ ಹೆಚ್ಚು ಪ್ರಮುಖವಾಗಿ ವೈಶಿಷ್ಟ್ಯಪೂರ್ಣವಾದುದೆಂದರೆ; 'ಕರ್ಣನ ಪಾತ್ರ' ಎನ್ನುವುದು ಅತೀ ಮಹತ್ವಪೂರ್ಣವಾದ ಅಂಶವೂ ಆಗಿದೆ.

ಕಂದ ಪದ್ಯಗಳು, ಪಿರಿಯಕ್ಕರಗಳು ಹಾಗೂ ದೇಸೀ ಛಂದಸ್ಸಿನೊಡನೆ ಪಂಪ ತನ್ನ ಈ ಕೃತಿಯನ್ನು ರಚಿಸಿದ್ದಾನೆ.

'ಕವಿತಾ ಗುಣಾರ್ಣವ'ನಾದ ಪಂಪನ ಕೃತಿ ರಚನಾ ಸಾಮರ್ಥ್ಯಕ್ಕೆ ಇದೊಂದು ಅದ್ಭುತವಾದ ಜೀವಂತ ಸಾಕ್ಷಿಯಾಗಿ ಇಂದಿಗೂ ನಮ್ಮ ಮುಂದೆ ತಲೆ ಎತ್ತಿ ನಿಂತಿದೆ.

'ವ್ಯಾಸ ಭಾರತ'ದಲ್ಲಿರುವ ಕೆಲವು ಅಂಶಗಳನ್ನು ಪಂಪನು ತನ್ನ ಅನುಕೂಲಕ್ಕೆ ಮತ್ತು ತನ್ನ ದೃಷ್ಟಿಗೆ ನೇರವಾಗಿರುವಂತೆ ಕೆಲವು ಸಣ್ಣ ಬದಲಾವಣೆಗಳನ್ನು ಮಾಡಿಕೊಳ್ಳುವುದರೊಂದಿಗೆ ರಚಿಸಿದ್ದಾನೆ.

**ಅತ್ಯಂತ ಪ್ರಮುಖವಾದ ಮಾರ್ಪಾಡುಗಳೆಂದರೆ;**

ದ್ರೌಪದೀ ಸ್ವಯಂವರದ ನಂತರ ಪಾಂಡವರು ಆಕೆಯನ್ನು ಗೆದ್ದ ಮೇಲೆ ವ್ಯಾಸಭಾರತದಲ್ಲಿ ಕುಂತಿ ಹೇಳಿದಂತೆ ಪಾಂಡವರೂ ಆಕೆಯ ಮಾತನ್ನು ಪಾಲಿಸುತ್ತಾರೆ... ಆದರೆ ಇಲ್ಲಿ ಪಂಪನು ತನ್ನ ಕೃತಿಯಲ್ಲಿ ಅರ್ಜುನನೊಂದಿಗೆ ಮಾತ್ರ ಈಕೆಯೊಡನೆ ವಿವಾಹ ಮಾಡಿಸುತ್ತಾನೆ.

ಕರ್ಣನ ಜನ್ಮ ವೃತ್ತಾಂತ 'ಪಂಪ ಭಾರತ'ದಲ್ಲಿ ದುರ್ಯೋಧನನಿಗೂ ತಿಳಿದಿರುತ್ತದೆ. ಆದರೆ 'ವ್ಯಾಸ ಭಾರತ'ದಲ್ಲಿ ಇದು ಕೇವಲ ಕೃಷ್ಣನಿಗೆ ಮಾತ್ರ ತಿಳಿದಿರುತ್ತದೆ.

ಇಷ್ಟೇ ಅಲ್ಲ; ಕೃತಿಯ ಕೊನೆಯವರೆಗೂ ಸಣ್ಣ, ಪುಟ್ಟ ಬದಲಾವಣೆಗಳಾಗಿರುವುದನ್ನು ಕಾಣುತ್ತಲೇ ಹೋಗುತ್ತೇವೆ.

ರಾಜಸೂಯಾಯಾಗ, ಶಿಶುಪಾಲವಧೆ, ದ್ರೌಪದೀ ವಸ್ತ್ರಾಪಹರಣ, ಕರ್ಣ, ಭಾನುಮತಿ, ದುರ್ಯೋಧನದ ವ್ಯಕ್ತಿತ್ವಗಳಲ್ಲಿ, ಯಕ್ಷಪ್ರಶ್ನೆಯ ಸಂದರ್ಭದಲ್ಲಿ, ವಿರಾಪ ಪರ್ವ, ಉತ್ತರ ಗೋಗ್ರಹಣ, ಉದ್ಯೋಗ ಪರ್ವ – ಹೀಗೆ ಎಲ್ಲಾ ಸಂದರ್ಭಗಳಲ್ಲಿಯೂ ಕೆಲವು ಮಾರ್ಪಾಡುಗಳು ನಡೆದಿರುವುದನ್ನು ಕಾಣುತ್ತೇವೆ.

ಪಂಪನ 'ಪಂಪಭಾರತ'ದ ಕಥಾನಾಯಕ ಅರ್ಜುನನೇ ಆದರೂ; ಆತನಿಗೆ ಅತ್ಯಂತ ಹೆಚ್ಚು ಪ್ರಿಯವಾದ ಪಾತ್ರ 'ಕರ್ಣ'ನದ್ದೇ ಆಗಿದೆ. ಆದ್ದರಿಂದ ಇಲ್ಲಿ 'ಕರ್ಣ ಪರ್ವ'ಕ್ಕೆ ಹೆಚ್ಚು ವಿಶೇಷತೆಯಿರುವುದನ್ನು ನಾವು ಗಮನಿಸುತ್ತೇವೆ..

**'ಪಂಪ ಭಾರತ'ದಲ್ಲಿ 'ಕರ್ಣ ಪಾತ್ರ'ದ ವೈಶಿಷ್ಟ್ಯತೆ ಮತ್ತು ಮಹತ್ವ :**

ಮಹಾಕವಿ ಪಂಪನು ತನ್ನ ಕೃತಿಯಾದ 'ಪಂಪ ಭಾರತ'ದ ಕಥಾನಾಯಕನಾಗಿ ಅರ್ಜುನನನ್ನೇ ಆರಿಸಿ, ಆ ಪಾತ್ರಕ್ಕೆ ಎರಡನೇ ಅರಿಕೇಸರಿಯೊಂದಿಗೆ ಸಮೀಕರಿಸಿ ಕೃತಿಗೆ 'ವಿಕ್ರಮಾರ್ಜುನ ವಿಜಯ' ಎಂಬ ಹೊಸ ಅನ್ವರ್ಥ ಶೀರ್ಷಿಕೆಯನ್ನು ಕೊಟ್ಟು; ಸ್ವತಃ ತಾನು ಯುದ್ಧದಲ್ಲಿ ನಿಜವಾಗಿಯೂ ಹೋರಾಡಿರುವುದನ್ನು ಉಲ್ಲೇಖಿಸುತ್ತಾ;

"ಸತ್ಯವಿಯೋ ಕಲಿಯೋ ಕವಿತಾ ಗುಣಾರ್ಣವಂ" ಎಂದಿದ್ದಾನೆ.

ಶತ್ರುಗಳನ್ನು ವೀರಾವೇಶದಿಂದ ಹೋರಾಡಿ ಸೋಲಿಸಿದುದರ ಬಗ್ಗೆಯೂ ಹೇಳಿಕೊಂಡಿದ್ದಾನೆ.

ಅರಕೇಸರಿಯ ಆಪ್ತ ಮಿತ್ರನಾದ ಪಂಪನು ತನ್ನನ್ನು ಪ್ರತಿನಾಯಕ ದುರ್ಯೋಧನನ ಒಳಿತನ್ನೇ ಸದಾಕಾಲವೂ ಬಯಸುವ ಕರ್ಣನ ಪಾತ್ರದಂತೆ ಚಿತ್ರಿಸಿರುವುದೊಂದು ವಿಶೇಷ.

ಪಂಪನಿಗೆ ಕರ್ಣನ ಪಾತ್ರ ಬಹಳ ಅಚ್ಚುಮೆಚ್ಚು.

ಅದೊಂದು **ಕೆಳವರ್ಗಕ್ಕೆ ಸೇರಿದ ತಳಸಮುದಾಯದ ವ್ಯಕ್ತಿಯೊಬ್ಬನ ಪಾತ್ರ**

ತನ್ನದೊಂದೂ ತಪ್ಪಿಲ್ಲದೇ ಇದ್ದರೂ ಕರ್ಣನು ಅನೇಕ ಕಷ್ಟನಷ್ಟ, ತೊಂದರೆಗಳಿಗೆ ಸಿಲುಕಿಕೊಳ್ಳುವುದನ್ನು ಕಂಡು ಪಂಪನು,

"ಬಿದಿವಸದಿಂದೆ ಪುಟ್ಟುವುದು, ಬಿದಿವಸದಿಂದೆ ಸಾಯಪ್ಪುದು, ಪುಟ್ಟಿಸುವುದೇ ಬಿದಿ, ಪುಟ್ಟಿದಂದು ಇವಂಗೆ ಇದು ಬಿಯದು ವಿನೋದಂ ಇವಂಗೆ ಇದು, ಸಾವಪಾಂಗು ಇವಂಗೆ ಇದು, ಬಿದಿಸಮಕಟ್ಟೊಡೆ ಉಂಟು.."

–ಎಂಬುದಾಗಿ ಕರ್ಣನ ಪಾತ್ರದ ಮೂಲಕವೇ ಹೇಳಿಸಿದ್ದಾನೆ.

ಇಡೀ ಮಹಾಭಾರತದ ಘಟನೆಗಳು ಈತನ ದುರಂತಕ್ಕಾಗಿಯೇ ಹೆಣೆದುಕೊಂಡಂತೆ ಪಂಪನಿಗೆ ಭಾಸವಾಗುತ್ತದೆ. ಆದ್ದರಿಂದಲೇ ಆತನು,

"ಕರ್ಣಂಗೆ ಒಡ್ಡಿತ್ತು ದಲ್ ಭಾರತಂ" ಎಂದಿದ್ದಾನೆ.

**ಮೂಲ ವ್ಯಾಸ ಬಾರತದಲ್ಲಿರುವಂತೆಯೇ ಪಂಪನೂ ಕರ್ಣನ ಶೋಷಣೆಯ ಚಿತ್ರಗಳನ್ನು ನೀಡಿದ್ದಾನೆ :**

೧. ದೈವದ ನೆಲೆಯಲ್ಲಿ ಶೋಷಣೆ.

೨. ಮಾನುಷ ನೆಲೆಯಲ್ಲಿ ಶೋಷಣೆ.

–ಎರಡೂ ಕಡೆಯಿಂದ ಅವನಿಗೆ ಸಂಭವಿಸುತ್ತದೆ.

*** ಪಾಂಡವರು, ಕೌರವರೂ ವಿದ್ಯೆ ಕಲಿತ ಮೇಲೆ ಅದರ ಪ್ರದರ್ಶನಕ್ಕೆ ನೆರೆದಿದ್ದಾಗ ಕರ್ಣನ ಪ್ರವೇಶವಾಗಿ ಆತ ತನ್ನ ಚಾಪಕಲಾ ಕೌಶಲ ತೋರಿಸಿ ಅರ್ಜುನನಿಗೆ ಸವಾಲು ಹಾಕಿದಾಗ; ದ್ರೋಣ, ಕೃಪರು ಆತನನ್ನು ತಂದೆ, ತಾಯಿ ಯಾರೆಂದು, ಕುಲ ಯಾವುದೆಂದು ಪ್ರಶ್ನಿಸಲು; ಕರ್ಣನ ಸಹಾಯಕ್ಕೆ ಬರುವವನು ದುರ್ಯೋಧನ.**

"ಕುಲಜನಾಗುವುದು ವೀರ ಗುಣದಿಂದ..."

–ಎಂದು ಹೇಳುವ ಮೂಲಕ ಮೌಲ್ಯ ಪ್ರಜ್ಞೆಯನ್ನು ಪಂಪ ಎತ್ತಿಹಿಡಿದಿದ್ದಾನೆ.

*** ಕುಂತಿ ಕರ್ಣರ ಭೇಟಿಯ ಸಂದರ್ಭದಲ್ಲಿ ಪುನಃ ಕರ್ಣನ ಕುಲದ ಪ್ರಶ್ನೆ ಉದ್ಭವಿಸುತ್ತದೆ.**

ತನ್ನ ಮೂಲ ಕುಲ, ಬೆಳೆದ ಕುಲಗಳ ವಾಸ್ತವ ದ್ವಂದ್ವಕ್ಕೆ ಸಿಲುಕುತ್ತಾನೆ. ಆದರೂ ತನ್ನ ತಾಯಿಗೆ,

"ತೊಟ್ಟ ಬಾಣವ ತೊಡುವುದಿಲ್ಲ..."

–ಎಂದು ತಾಯಿಯ ಬಳಿ ಪ್ರತಿಜ್ಞೆ ಮಾಡುತ್ತಾನೆ.

ಇಂತಹ ಸಂದರ್ಭಗಳಲ್ಲಿ ಕವಿಯ ಮನಸ್ಸನ್ನು ಕುಲದ ಸಮಸ್ಯೆಯು ಬಹಳ ಆಳವಾಗಿ ಕಲಕಿರುವಂತೆ ಗೋಚರಿಸುತ್ತದೆ.

*** ಭೀಷ್ಮ ಪಟ್ಟಾಭಿಷೇಕದ ಪ್ರಸಂಗದಲ್ಲಿ ನಡೆಯುವ 'ಜಾತಿ ವ್ಯವಸ್ಥೆ'ಯ ಮೇಲೆ ನೇರ ದಾಳಿಯು ಪಂಪನಲ್ಲಿರುವ "ಸಾಮಾಜಿಕ ಪ್ರಜ್ಞೆ"ಗೊಂದು ಉಜ್ವಲ ನಿದರ್ಶನವಾಗಿದೆ.**

ದುರ್ಯೋಧನ ಭೀಷ್ಮರಿಗೆ ಪಟ್ಟಗಟ್ಟುವುದನ್ನು ಬಹಳ ತೀವ್ರವಾಗಿ ವಿರೋಧಿಸಿದ ಕರ್ಣನು ಭೀಷ್ಮರನ್ನು ಹೀಯಾಳಿಸುತ್ತಾ,

"ಪಗೆವರ ನಿಟ್ಟೆಲ್ವಂ ಮುರೆವೊಡೆನಗೆ ಪಟ್ಟಂಗಟ್ಟಾ..."

–ಎನ್ನುವ ಈ ಮಾತು ಕರ್ಣನಲ್ಲಿ ಅತೀ ಸ್ವಾಮಿನಿಷ್ಠೆ ಮೆರೆದಿರುವುದನ್ನು ಕಾಣುತ್ತೇವೆ.

ದ್ರೋಣನು ಕರ್ಣನನ್ನು ಈ ಸಂದರ್ಭಧಲ್ಲಿ 'ಸೂತಪುತ್ರ', ಮೀಂಗುಲಿಗ'ನೆಂದು ಕುಲದ ನೆಲೆಯಲ್ಲಿ ಅವಮಾನಿಸುವಂತೆ ದುರ್ಯೋಧನನು ಕರ್ಣನ ಪಟ್ಟದ ಪ್ರಸಂಗದಲ್ಲಿ ಅಶ್ವತ್ಥಾಮನು ಅದನ್ನು ಜಾತಿ – ಕುಲದ ವಿಷಯಕ್ಕಾಗಿ ವಿರೋಧಿಸಿ ಕರ್ಣನನ್ನು ಹೀಯಾಳಿಸುತ್ತಾನೆ.

*** ಶಲ್ಯನ ಸಾರಥ್ಯದ ಸಂದರ್ಭದಲ್ಲಿ 'ಕರ್ಣ' ಪಾತ್ರದ ಸ್ಥಿತಿ–ಗತಿ :**

ಕರ್ಣನ ಪಾತ್ರದ ಮೂಲಕ ಕವಿಯು ಒಂದು ಸಾಮಾಜಿಕ ಚಿಂತನೆಯನ್ನೇ ಹರಿಯಬಿಟ್ಟಿದ್ದಾನೆ... ಇದು ಪಂಪನ ಕಾಲದ ಸಮಕಾಲೀನವಾದ ಒಂದು ಸಮಸ್ಯೆಯೂ ಆಗಿರಬಹುದು. ಈ ದೃಶ್ಯ ಕ್ರಿ.ಶ. ೧೦ ನೇ ಶತಮಾದ ಸಾಮಾಜಿಕ – ರಾಜಕೀಯ ಪರಿಸ್ಥಿತಿಯ ಮೇಲೂ ಬೆಳಕು ಚೆಲ್ಲಿದ್ದಾನೆ.

ಕರ್ಣನಿಗೆ ಸಾರಥಿಯಾಗುವಾಗ ಶಲ್ಯನು ಪ್ರತಿಭಟಿಸುತ್ತಾನೆ. ಜಾತೀಯ ಆಧಾರವಾದ ಈ ವಿರೋಧ ದುರ್ಯೋಧನನ ರಾಜತ್ವವನ್ನೇ ಪ್ರಶ್ನಿಸುವಂತಹದ್ದಾಗಿದೆ. 'ಅಸ್ಪೃಶ್ಯತೆಯ ಧ್ವನಿ' ಕೇಳಿಬರುವುದು ಇಲ್ಲಿ ಬಹಳ ಸ್ಪಷ್ಟವಾಗಿದೆ.

*** ಕರ್ಣಾರ್ಜುನರ ಯುದ್ಧ ಪ್ರಸಂಗದಲ್ಲಿ:**

ಸೂರ್ಯನು ತನ್ನ ಮಗನಾದ ಕರ್ಣನನ್ನು ಕುರಿತು,

"ಇಂದ್ರನ ಮಗನಾದ ಅರ್ಜುನನು, ಈ ದಿನ ರಣರಂಗದಲ್ಲಿ ಕೊಲ್ಲುವನು... ಇದನ್ನು ತಪ್ಪಿಸು ಎಂಬ ಸಂಕೇತದಲ್ಲಿ ಸೂರ್ಯನ ಕಿರಣಗಳು ಬಾಗಿದವು..."

–ಎಂದು ಕವಿ ಈ ಸಂದರ್ಭವನ್ನು ವರ್ಣಿಸಿರುವಲ್ಲಿ ಕರುಳು ಮಿಡಿಯುವಂತಿದೆ.

ಇಂದ್ರನು ಬ್ರಾಹ್ಮಣ ವೇಷದಲ್ಲಿ ಬಂದು ಕರ್ಣನ ಬಳಿಯಲ್ಲಿದ್ದ ಕವಚ, ಕರ್ಣ ಕುಂಡಲಗಳನ್ನೆಲ್ಲಾ ದಾನ ಬೇಡಿ ಪಡೆದು ಬಿಡುತ್ತಾನೆ. ತನ್ನ ಹುಟ್ಟಿನೊಂದಿಗೆ ಬಂದಿದ್ದ ಕವಚವನ್ನು ಕರ್ಣನು ತನ್ನ ಚರ್ಮವನ್ನೇ ಸುಲಿದು ಕೊಡುವಂತೆ ಕೊಡುತ್ತಾನೆ..

ಕವಚರಹಿತನಾಗಿ ಧರ್ಮರಾಯನೊಂದಿಗೆ ಹೋರಾಡಿ ಜರ್ಜರಿತನಾಗುತ್ತಾನೆ.. ಆದರೂ ತನ್ನ ತಾಯಿಗೆ ಕೊಟ್ಟ ಮಾತಿನ ಪ್ರಕಾರದಂತೆ,

"ನಾಲ್ವರೊಳ್ ಅರಮಂ ಕೊಲ್ಲೆನ್" ಎಂದಿದ್ದಕ್ಕಾಗಿ ಅವನನ್ನು ಕೊಲ್ಲದೆ ಬಿಡುತ್ತಾನೆ.

ಆಗ ಧರ್ಮರಾಯನು ಕೃಷ್ಣಾರ್ಜುನರಿಗೆ,

"ನಿಮ್ಮಂತಹವರು ಕರ್ಣನನ್ನು ಗೆಲ್ಲಲು ಸಾಧ್ಯವೇ?!" ಎಂದು ಕರ್ಣನ ಶೌರ್ಯ –ಸಾಹಸಗಳನ್ನು ಮೆಚ್ಚಿಕೊಂಡು ಹೇಳುತ್ತಾನೆ.

ಸರ್ಪಾಸ್ತ್ರವನ್ನು ಮತ್ತೊಮ್ಮೆ ತೊಡಲು ಶಲ್ಯನ ಮಾತು ನಿರಾಕರಿಸಿದ್ದಕ್ಕಾಗಿ ಅವನು ಕೋಪಗೊಂಡು, 'ಇಂತಹವನಿಗೆ ಸಾರಥಿಯಾಗಲಾರೆ' ಎಂದು ಹೇಳಿ ಕರ್ಣನನ್ನು ಯುದ್ಧಭೂಮಿಯಲ್ಲಿ ಏಕಾಂಗಿಯಾಗಿ ಬಿಟ್ಟು ಹೊರಟು ಹೋಗುತ್ತಾನೆ.

ಕರ್ಣನ ರಥದ ಚಕ್ರಗಳು ಮಣ್ಣಿನಲ್ಲಿ ಹೂತು ಹೋದಾಗ ಅಸಹಾಯಕ ಪರಿಸ್ಥಿತಿಯಲ್ಲಿದ್ದಾಗಲೇ ಕೃಷ್ಣನು ಅರ್ಜುನನಿಂದ '**ಅಂಜಲಿಕಾಸ್ತ್ರ**'ವನ್ನು ಪ್ರಯೋಗಿಸಿ ಕರ್ಣನ ತಲೆಯನ್ನೇ ಕತ್ತರಿಸಿ ಕೊಲ್ಲಿಸುತ್ತಾನೆ.

ಕರ್ಣ ಸತ್ತರೂ ಆತನ ಸತ್ಯ, ತ್ಯಾಗ, ಶೌರ್ಯಗುಣಗಳು ಶಾಶ್ವತವಾಗಿ ನಿಂತಿದೆ.

**"ಕರ್ಣನ ಶರೀರದಿಂದ ಹೊರಟಂತಹ ತೇಜಸ್ಸು ಸೂರ್ಯನಲ್ಲಿ ಐಕ್ಯವಾಯಿತು.." ಎಂದು ಕವಿ ಪಂಪನು ಕರ್ಣನ ಅಸ್ತಂಗತವನ್ನು ವರ್ಣಿಸುತ್ತಾ;**

'ತನ್ನ ಮಗನ ಅಸ್ತಂಗತವನ್ನು ಸಹಿಸಲಾರದೆ ಸ್ವತಃ ಸೂರ್ಯನೇ ದುಃಖದಿಂದ ನಾಚಿ ಕರಗಿ ಹೋದ..." ಎಂಬುದಾಗಿ ಸೂರ್ಯಾಸ್ತಮಾನದ ಸಮಯವನ್ನೂ ಚಿತ್ರಿಸಿದ್ದಾನೆ.

ಕರ್ಣನ ಪಾತ್ರದ ಬಗ್ಗೆ ಕವಿ ವಿಶೇಷ ಗಮನ ಹರಿಸಿದ್ದಾನೆ. ಕರ್ಣನ ಪಾತ್ರಕ್ಕೆ ಪ್ರಾಮುಖ್ಯತೆ, ಪ್ರಾಶಸ್ತ್ಯ ಕೊಟ್ಟಿದ್ದಾನೆ. ಆತನೇ ತನ್ನ 'ಪಂಪ ಭಾರತ'ದ ಪ್ರಮುಖ ಕೇಂದ್ರಬಿಂದು ಎನ್ನುವಷ್ಟು ಒಲವು ತೋರಿದ್ದಾನೆ.

**"ನೆನೆಯದಿರಣ್ಣ ಭಾರತದೊಳ್ ಪೆರರಾನುವೊಂದೆ ಚಿತ್ತಂ।**
**ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್।**
**ಕರ್ಣನ ಕಡುನನ್ನಿ ಕರ್ಣನ ಚಾಗಮೆಂದು।**
**ಕರ್ಣನ ಪಡೆಮಾತಿನೊಳ್ ಪುದಿದು ಕರ್ಣ ರಸಾಯನಮಲ್ತೆ ಭಾರತಂ."**

–ಎಂಬುದಾಗಿ ಕರ್ಣನ ವಿಶೇಷ ವ್ಯಕ್ತಿತ್ವದ ಪಾತ್ರವನ್ನು ಸಾಮಾಜಿಕ, ರಾಜಕೀಯ ಪರವಾಗಿ ದೃಷ್ಟಿ ಹರಿಸಿ ಚಿತ್ರಿಸಿರುವುದು **'ಕವಿ ಶೋಷಿತರ ಪರ'** ಎಂಬುದನ್ನು ನಿಸ್ಸಂದೇಹವಾಗಿ ತೋರಿಸುತ್ತದೆ.

~~~\*\*\*~~~

## ಕವಿ ಚಕ್ರವರ್ತಿ ರನ್ನನ ಗದಾಯುದ್ಧಂ :

ಕನ್ನಡದ ರತ್ನತ್ರಯರಲ್ಲಿ ಒಬ್ಬನಾದ ಕವಿ ರನ್ನ ರಚಿಸಿದ 'ಸಾಹಸಭೀಮ ವಿಜಯಂ' ಅಥವಾ 'ಗದಾಯುದ್ಧಂ' ಒಂದು ಚಿಕ್ಕ ಚಂಪೂ ಕಾವ್ಯ. ಪುಷ್ಕರಣಿಯಲ್ಲಿ ಆಕಾಶ ಕಂಡಂತೆ ಗ್ರಂಥ ಚಿಕ್ಕದಾದರೂ ವಸ್ತುಬಾಹ್ಯವುಳ್ಳ ಈ ಪುಟ್ಟ ಕಾವ್ಯದಲ್ಲಿ ಕವಿಯು ಸಮಗ್ರ ಮಹಾಭಾರತದ ಕಥೆಯನ್ನು ಅಲೆಅಲೆಯಾಗಿ ಅಡಗಿಸಿದ್ದಾನೆ. ಇದಕ್ಕೆ ಉದಾಹರಣೆ ರನ್ನ ಕವಿಯು ತನ್ನ ಈ ಕೃತಿಯನ್ನು ಆರಂಭಿಸುವಲ್ಲಿ;

**॥ ಒಳ ಪೊಕ್ಕು ನೋಡೆ ಭಾರತ । ದೊಳಗಣ ಕಥೆಯಲ್ಲಮೀ ಗದಾಯುದ್ಧದೊಳಂ ॥**
**ತೊಳಕೊಂಡತೆನೆ ಸಿಂಹಾ । ವಿಲೋಕನ ಕ್ರಮದಿ ನರಿಪಿದಂ ರನ್ನಂ ॥**

–(೧–೧೫)
~~~

–ಇದನ್ನು ನೋಡಿದಾಗ ಕವಿ ರನ್ನ ಈ ಗದಾಯುದ್ಧ ಕಾವ್ಯದಲ್ಲಿ ಇಡೀ ಮಹಾಭಾರತ ಕಥೆಯನ್ನು ಸಿಂಹಾವಲೋಕನ ಮಾಡಿರುವುದು ನಮಗೆ ತಿಳಿಯುತ್ತದೆ.

"॥ ಮೊದಲೊಳ್ ಬದ್ಧವಿರೋಧದಿಂ ನೆಗಳ್ದ ಕುಂತೀಪುತ್ರರೊಳ್ ಭೀಮನಂ ।
ಕದ ಗಾಂಧಾರಿಯ ಪುತ್ರರೊಳ್ ಮೊದಲಿಗಂ ದುರ್ಯೋಧನಂ ಧರ್ಮಯು ॥
ದ್ಧದೊಳಂತಾತನಿಕ್ಕಿದೊಂದನದರಂ ಭೀಮಂ ಜಯೋದ್ಧಾಮನೆಂ ।
ಬುದನೆಂಬಂತಿದು ವಸ್ತುಯುದ್ಧಮೆನಿಸಲ್ ಪೇಳ್ದಂ ಗದಾಯುದ್ಧಮಂ ॥"

**ಮೊದಲಿನಿಂದಲೂ ಹಗೆತನದಲ್ಲಿಯೇ ಬೆಳೆದ, ಕುಂತೀಪುತ್ರರಲ್ಲಿ ಮಿಗಿಲಾದ ಭೀಮನೂ, ಗಾಂಧಾರಿಯ ಮಕ್ಕಳಲ್ಲಿ ಹಿರಿಯನಾದ ದುರ್ಯೋಧನನೂ ಎದುರೆದುರಾಗಿ ನಡೆಸಿದ ಧರ್ಮಯುದ್ಧದಲ್ಲಿ ದುರ್ಯೋಧನನನ್ನು ಹೊಡೆದು ಕೊಂದು ಭೀಮಸೇನನು ವಿಜಯಿಯಾದನು. ಪ್ರಸಿದ್ಧವಾದ ಆ ಯುದ್ಧವನ್ನೇ ಮುಖ್ಯ ವಸ್ತುವಾಗಿಟ್ಟುಕೊಂಡು ಕವಿ ರನ್ನನು ಈ 'ಗದಾಯುದ್ಧ' ಕಾವ್ಯವನ್ನು ರಚಿಸಿದನು. 'ಮಹಾಭಾರತ'ದ ಕಥೆಯೆಲ್ಲವನ್ನೂ ಈ 'ಗದಾಯುದ್ಧ' ಒಳಗೊಂಡಿದೆ ಎಂಬಂತೆ ಕವಿ ರನ್ನನು 'ಸಿಂಹಾವಲೋಕನ ಕ್ರಮ'ದಿಂದ ಹೇಳಿರುವನು.**

'ಸಾಹಸಭೀಮ ವಿಜಯ' ಕಾವ್ಯದ ಕಥಾನಾಯಕ ಭೀಮಸೇನ. ಪ್ರತಿನಾಯಕ–ದುರ್ಯೋಧನ. ಆದರೂ ಇವನನ್ನು ಹೊಗಳಿರುವುದನ್ನು ನೋಡಿದರೆ ಕವಿಯ ಮನದಲ್ಲಿ 'ತಳಸಮುದಾಯಕ್ಕೆ ಸೇರಿದ ವ್ಯಕ್ತಿಯೊಬ್ಬನ ಬಗೆಗಿರುವ ಒಂದು ರೀತಿಯ ಅಗಾಧ ಒಲವಿರುವಂತೆ ತೋರುತ್ತದೆ. ಕಾವ್ಯದಲ್ಲಿ ದುರ್ಯೋಧನನನ್ನು ಮೊದಲಿನಿಂದ ಕೊನೆಯವರೆಗೆ ರನ್ನ ಕವಿ ಹೊಗಳಿರುವುದನ್ನು ನೋಡಿದರೆ ಪಾಶ್ಚಾತ್ಯ ಕಾವ್ಯ ಚಿಂತನೆಯಲ್ಲಿ ಮುಖ್ಯವಾಗಿ ಗ್ರೀಕ್ ನಾಟಕಗಳ ದುರಂತ ನಾಯಕನ ಪರಿಕಲ್ಪನೆ ನೆನಪಾಗುತ್ತದೆ. **"ಭಾರತದ ಕಥೆ ಹಾಗೂ ಸಾಹಸಭೀಮ ವಿಜಯ ಕಾವ್ಯ ಎರಡನ್ನೂ ಚಲನಶೀಲವಾಗಿರುವುದರ ಜತೆಗೆ ಸಂಜಯನ ಪಾತ್ರ, ಸಾಕ್ಷೀ ಪ್ರಜ್ಞೆಯ ಹಾಗೂ ವಿಮರ್ಶಪ್ರಜ್ಞೆಯ ಕೆಲಸವನ್ನು ಕೂಡ ಯಶಸ್ವಿಯಾಗಿ ನಿರ್ವಹಿಸುವಂತೆ ಸಂಯೋಜಿಸುವುದು ರನ್ನನ ಕೈವಾಡವಾಗಿದೆ."**[೨] ಎಂದಿರುವುದು ಸಮುಚಿತವಾಗಿದೆ.

**"ಧರ್ಮಸೂಕ್ಷ್ಮದ ಸಂಗತಿಗಳು–ಜಿಜ್ಞಾಸೆಗಳು, ಮಾನವಿಕ ಮತ್ತು ವೈಜ್ಞಾನಿಕ ಶೋಧಗಳು, ಆಧುನಿಕ ವಿಜ್ಞಾನದ ಶೋಧಗಳ ಹಳೆಯ ನೆಲೆಗಳು ಮತ್ತು ಶಾಸ್ತ್ರ ವಿಚಾರಗಳು – ಇವುಗಳ ಅಗಾಧ ಭಂಡಾರಗಳನ್ನು ಹೊರತೆಗೆಯ ಬೇಕಾದರೆ ಮಹಾಭಾರತದಂತಹ ಮಹಾಕಾವ್ಯಗಳ ಅಧ್ಯಯನ ಅವಶ್ಯಕವಾಗಿದೆ."**[೯] ಅಂತೆಯೇ, ವಾಸ್ತವಿಕ ವಾತಾವರಣದ ಜೊತೆಗೆ ಆಧುನಿಕ ಪ್ರಜ್ಞಾವಂತಿಕೆಯ ಅವಶ್ಯಕತೆಯೂ ಇದೆ ಎಂದು ಟಿ.ವಿ. ವೆಂಕಟಾಚಲ ಶಾಸ್ತ್ರಿಯವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**'ಮಹಾಭಾರತ'** ಮಹಾಕಾವ್ಯ ರನ್ನನ ಕಾಯಕಲ್ಪದಿಂದ **'ಸಾಹಸಭೀಮ ವಿಜಯಂ'** ಆಗಿ ಮರುಹುಟ್ಟು ಪಡೆದಿದೆ. ರನ್ನ ಕವಿ ಮಹಾಭಾರತದ ಪ್ರಧಾನ ಪಾತ್ರಗಳ ಮೂರ್ತಿಗಳನ್ನು ಬಿಡಿಸುತ್ತಾನೆ. ದುರ್ಯೋಧನನ ದುರವಸ್ಥೆಯನ್ನು ಕವಿ ಹಿಡಿದಿಟ್ಟು ಒಂದು ಸೊಗಸಾದ ಶಬ್ದ ಚಿತ್ರವನ್ನು ರೇಖಿಸುತ್ತಾನೆ. ಕುರುರಾಯನ ಸದ್ಯದ ಸುತ್ತಣದ ಬದುಕು ದುರ್ಭರವಾಗಿದೆ. ಅನಿಶ್ಚಿಯತೆ, ನಿಷ್ಕ್ರಿಯತೆ, ಪೇಲವತೆಗಳಿಂದ ಗೊಂದಲಮಯವಾಗಿದೆ. **ಈ ಪಾತ್ರದ ಒಳಹೊರಗುಗಳನ್ನು ಪಂಪನಿಗಿಂತಲೂ ರನ್ನ ಸಶಕ್ತವಾಗಿ ಬಿಂಬಿಸಿದ್ದಾನೆ. "ರನ್ನನು 'ಗದಾಯುದ್ಧ'ದ ಕಟ್ಟಡವನ್ನು 'ಪಂಪಭಾರತ'ದ ಹದಿಮೂರನೆಯ ಆಶ್ವಾಸದ ತಳಹದಿಯ ಮೇಲೆಯೇ ಕಟ್ಟಿದ್ದಾನೆಂದು ಹೇಳುವುದಕ್ಕೆ ಪ್ರಬಲವಾದ ಕಾರಣಗಳುಂಟು. 'ಮಹಾಭಾರತ'ದ ಕಥೆಗೂ 'ಪಂಪಭಾರತ'ದ ಕಥೆಗೂ ಅನೇಕ ವ್ಯತ್ಯಾಸಗಳಿವೆ. ಹಾಗೆ ವ್ಯತ್ಯಾಸವಿರುವ ಕಡೆಯಲ್ಲೆಲ್ಲಾ ರನ್ನನು ಸಾಧಾರಣವಾಗಿ ಪಂಪನ ದಾರಿಯಲ್ಲೇ ಹೋಗಿದ್ದಾನೆ. 'ಗದಾಯುದ್ಧ'ದ ಕಥಾಭಾಗವು ಸ್ವಲ್ಪ; ಅದರಲ್ಲಿ ಮುಕ್ಕಾಲುಪಾಲೆಲ್ಲಾ 'ಮಹಾಭಾರತ'ದಲ್ಲಿ ಇಲ್ಲವೆಂದೇ ಹೇಳಬೇಕು. 'ಗದಾಯುದ್ಧ'ದಲ್ಲಿ ಬರುವ ಹೃದಯವಿದ್ರಾವಿಕವಾದ ಪ್ರಲಾಪಗಳಿಗೂ ಸ್ವಾರಸ್ಯವುಳ್ಳ ಸನ್ನಿವೇಶಗಳಿಗೂ ಸೂಚನೆಯನ್ನು ನಾವು 'ಪಂಪಭಾರತ'ದ ಹದಿಮೂರನೆಯ ಆಶ್ವಾಸದಲ್ಲಿಯೇ ಕಾಣುವುದು."**[೧೦] ಪಂಪಭಾರತ'ದ ಸನ್ನಿವೇಶಗಳನ್ನು ಮಾತ್ರವಲ್ಲ; ಅದರ ಭಾವಗಳನ್ನೂ ಅದರ ಮಾತುಗಳನ್ನೂ ಕೂಡಾ ರನ್ನ ಸಮಯಬಿದ್ದಾಗ ಉಪಯೋಗಿಸಿಕೊಂಡಿರುವುದಕ್ಕೆ ಅನೇಕ ಉದಾಹರಣೆಗಳಿವೆ. ಪಂಪನ ಪದ್ಯಗಳಿಗೆ ಪ್ರತಿಬಿಂಬಗಳಂತಿರುವ ಕೆಲವು ಪದ್ಯಗಳೂ 'ಗದಾಯುದ್ಧ'ದಲ್ಲಿ ಆಯಾ ಸಂದರ್ಭಗಳಲ್ಲಿಯೇ ಸಿಗುತ್ತವೆ. ತನ್ನ ಹಿಂದಿನ ಸಂಸ್ಕೃತ ಕವಿಗಳಿಂದ ಅನೇಕ ಭಾವಗಳನ್ನು ಪಂಪ ತೆಗೆದುಕೊಂಡು ಬರೆದರೆ; ರನ್ನನಿಗೆ ಪಂಪ ಸ್ಫೂರ್ತಿಯಾಗುತ್ತಾನೆ.

ಬಹುಶಃ 'ಪಂಪಭಾರತ'ದ ಹದಿಮೂರನೇ ಆಶ್ವಾಸವನ್ನು ನೋಡಿ ರನ್ನನ ಮನಸ್ಸಿಗೆ, 'ಇಲ್ಲಿಯ ವಸ್ತು ಚೆನ್ನಾಗಿದೆ, ಸಂಕ್ಷಿಪ್ತವಾಗಿರುವ ಭಾಗ ಬಹು ಸ್ವಾರಸ್ಯವಾಗಿ ವ್ಯಕ್ತವಾಗಿದೆಯಲ್ಲ!' ಎಂದೆನಿಸಿ, ಇದರ ಆಧಾರದಿಂದಲೇ ಇನ್ನಷ್ಟು ವಿಸ್ತರಿಸಿ ಒಂದು ಕಾವ್ಯವನ್ನು ರಚಿಸಬೇಕೆಂದು ನಿರ್ಧರಿಸಿ ರನ್ನನು 'ಗದಾಯುದ್ಧ'ವನ್ನು ರಚಿಸಿರುವಂತೆ ಕಾಣುತ್ತದೆ.

ರನ್ನನ 'ಗದಾಯುದ್ಧ'ದ ಕಥೆಯು ಬಹಳ ಅತ್ಯಲ್ಪವಾದುದು. ಇದರ ಆರಂಭಕ್ಕೆ ಮೊದಲೇ ಕರ್ಣ ಶಲ್ಯಾದಿಗಳ ವಧೆಯೂ ಆಗಿ ಹೋಗಿರುತ್ತದೆ. ಮುಂದೆ ಬರುವ ಮುಖ್ಯ ಸಂಗತಿಯೆಲ್ಲಾ ದುರ್ಯೋಧನನು ತಂದೆತಾಯಿಗಳನ್ನು ನೋಡುವುದು, ಅವನ ವಿಲಾಪ, ಭೀಷ್ಮದರ್ಶನ, ವೈಶಂಪಾಯನ ಕೊಳದಲ್ಲಿ ಅಡಗಿ ಕುಳಿತುಕೊಳ್ಳುವುದು, ಭೀಮಾದಿಗಳು ಇವನನ್ನು ಹುಡುಕುವುದು ನಂತರ ಗದಾಯುದ್ಧ, ಪಾಂಡವರೈವರ ಮಕ್ಕಳ ಕೊಲೆ ಇಷ್ಟೇ.

ಈ ಕಾವ್ಯದ ಪ್ರಥಮ ದೃಶ್ಯದಲ್ಲಿ ಭೀಮಸೇನನ ಪ್ರಥಮ ಪ್ರವೇಶವಾಗುತ್ತದೆ. ಭಾರತ ಯುದ್ಧವು ಮುಗಿಯುತ್ತಾ ಬಂದು ದುರ್ಯೋಧನಾವಶೇಷನಾಗಿರುವಾಗ ಭೀಮಸೇನನು ಕುರುಕ್ಷೇತ್ರದಲ್ಲಿ ಸುಯೋಧನನ ಊರುಭಂಗ ಪ್ರತಿಜ್ಞಾಪೂರ್ತಿಗಾಗಿ ಪ್ರಳಯ ಉಗ್ರನಂತೆ ಭಯಂಕರನಾಗಿ ಸಂಚರಿಸುತ್ತಿರುವಾಗ ಪಾಂಚಾಲಿಯು ತನ್ನ ನೆಚ್ಚಿನ ಪತಿಯಾದ ಈತನನ್ನು ಕಾಣುವುದಕ್ಕಾಗಿ ಬರುವಳು. ಧರ್ಮರಾಜನು ಸಂಧಾನವನ್ನು ಮಾಡುವನೋ ಎಂಬ ಸಂಶಯ ಹೊಂದಿದಾಗ, ಮೊದಲೇ ಆವೇಶಗೊಂಡಿದ್ದ ಭೀಮನು ಈ ಸಂಧಾನ ವಿಚಾರದಿಂದ ಮತ್ತಷ್ಟು ಉಗ್ರರೂಪಿಯಾಗುವನು. ತನ್ನ ಅಗ್ರಜನಾದ ಧರ್ಮಜನ ಮೇಲೆ ದೋಷಾರೋಪ ಮಾಡುತ್ತಾ ತನ್ನ ಪರಾಕ್ರಮವನ್ನು ತಾನೇ ಯಥೇಚ್ಛವಾಗಿ ಹೊಗಳಿಕೊಳ್ಳುತ್ತಾನೆ.

ಇನ್ನು ಭೀಮಸೇನನ ದ್ವಿತೀಯ ಪ್ರವೇಶವಾಗುವುದು; ಸಮರಾಂಗಣದಲ್ಲಿ ದುರ್ಯೋಧನನು ಕಾಣಿಸದಂತಾಗಲು ಅವನನ್ನು ಯಾವಾಗ ಸಂಹರಿಸುವೆನೋ ಎಂಬ ತವಕದಿಂದಿರುವ ಸನ್ನಿವೇಶದಲ್ಲಿ. ದುರ್ಯೋಧನನ ಶಿಬಿರದವರೆಗೂ ಹೋಗಿ ಹುಡುಕುತ್ತಾನೆ. ಹೊರಬಾಗಿಲಿನಲ್ಲಿ ಕುಳಿತುಕೊಂಡಿದ್ದ ಗಾಂಧಾರಿ ಭೀಮಸೇನನನ್ನು ಕೈಮುಗಿದು ಅಂಗಲಾಚಿ ಬೇಡುತ್ತಾಳೆ. **"ಅನಿಬರ್ತನಯರ ದುಃಖಮ। ನನುಭವಿಸಿಯುಮಣಮೆ ಪೋಗವೆಮ್ಮಸುಗಳ್ ನೀ ॥ ನಿನಿತನೆಮಗೊಳ್ಳಿಕೆಯ್ ಭೀ। ಮ ನುಂಗು ಮುನ್ನೆಮ್ಮನೆಮ್ಮ ಸುತನಂ ಬರೆಯಂ॥" –** ಎಂದು ಬೇಡಿಕೊಳ್ಳುವುದು ಎಂತಹ ರಾಕ್ಷಸನ ಕಲ್ಲೆದೆಯನ್ನೂ ಕರಗಿಸುವಂತಹದ್ದು! ಭೀಮನದು ವಜ್ರಹೃದಯವೋ ಎನ್ನುವಂತೆ ಅವನ ಮನಸ್ಸಿನಲ್ಲಿ ಆರ್ದ್ರತೆ ಕಿಂಚಿತ್ತೂ ಕಾಣಿಸುವುದಿಲ್ಲ. ಇದು ಭೀಮನಿಗೆ ಉಚಿತವೋ ಎನಿಸುತ್ತದೆ.

**'ಗದಾಯುದ್ಧ'ದ ಮೊದಲ ಮೂರು ಆಶ್ವಾಸಗಳಲ್ಲಿ ಬರುವ ವಿಷಯವು 'ಪಂಪಭಾರತ'ದಲ್ಲಿಲ್ಲ. ದ್ರೌಪದೀ ಸಂದರ್ಶನ, ಭೀಮ ಪ್ರತಿಜ್ಞೆ ಮೊದಲಾದವುಗಳನ್ನು ರನ್ನ ಕಲ್ಪಿಸಿದ್ದಾನೆ. ಅದ್ಭುತವಾದ ಸಾಮರ್ಥ್ಯವನ್ನು ರನ್ನ ಇಲ್ಲಿ ಪ್ರದರ್ಶಿಸಿದ್ದಾನೆ.**

ದುರ್ಯೋಧನನು ತನ್ನ ತಂದೆತಾಯಿಗಳನ್ನು ನೋಡಿದ ಮೇಲೆ ಮಂತ್ರಾಲೋಚನೆ ಮಾಡುವನೆಂದೂ, ಆ ಬಳಿಕ ಶಲ್ಯನು ಯುದ್ಧಮಾಡಿ ಸಾಯುವನೆಂದೂ 'ಪಂಪಭಾರತ'ದಲ್ಲಿದೆ. ಆದರೆ ಈ ಭಾಗವು ತನ್ನ ಕಥೆಯ ಏಕಮುಖತ್ವಕ್ಕೆ ಭಂಗವನ್ನುಂಟುಮಾಡುವುದೆಂಬ ಉದ್ದೇಶದಿಂದ ರನ್ನನು ಇದನ್ನೆಲ್ಲಾ ಕಿತ್ತುಹಾಕಿ ತನ್ನ ಕಾವ್ಯವು ಪ್ರಾರಂಭವಾಗುವ ಹೊತ್ತಿಗೆ ಶಲ್ಯ ವಧೆಯೂ ನಡೆದು ಹೋಗಿರುವಂತೆ ರಚಿಸಿದ್ದಾನೆ.

ಕವಿ ರನ್ನ ಪಂಪ ಕವಿಯ ಶಿಷ್ಯ. ಆದಿಕವಿ ಪಂಪ 'ವಿಕ್ರಮಾಜುನ ವಿಜಯ' ಮಹಾಕಾವ್ಯವನ್ನು ರಚಿಸಿದ. ವಿಕ್ರಮಾರ್ಜುನ ವಿಜಯ ಕಾವ್ಯದಲ್ಲಿ ಪಂಪ ಅರ್ಜುನನನ್ನು ಕಥಾನಾಯಕನನ್ನಾಗಿ ಮಾಡಿದ. ಪಂಪನ ಈ ಕಾವ್ಯದ ಪ್ರಭಾವದಿಂದ ಕವಿ ರನ್ನ ಅದರ ಒಂದು ಭಾಗವನ್ನೆತ್ತಿಕೊಂಡು ಭೀಮನನ್ನು ಕಥಾನಾಯಕನನ್ನಾಗಿ ಮಾಡಿ ತನ್ನದೇ ಆದ ಒಂದು ಸ್ವತಂತ್ರ ಕಾವ್ಯ 'ಸಾಹಸಭೀಮ ವಿಜಯಂ'ವನ್ನು ರಚಿಸಿದ. ಭೀಮನಲ್ಲಿ ಬಲ, ಸಾಹಸ ಮೊದಲಾದ ಅದ್ಭುತ ಗುಣಗಳಿರುವುದೇನೋ ನಿಜಾ. ಆದರೆ ಧನಂಜಯನ ಮುಂದೆ ಮಹಾಭಾರತದಲ್ಲಿ ಭೀಮಸೇನನ ಮಹತ್ವವು ಸ್ವಲ್ಪ ಮುಸುಕಾಗಿರುವುದೂ ನಿಜ. ಆದರೂ ಭೀಮಸೇನನೇ 'ಗದಾಯುದ್ಧ'ದ ನಾಯಕ ಏಕೆ? ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ!

'ಕುರುಕ್ಷೇತ್ರದ ಮಹಾಭಾರತ'ದ ಯುದ್ಧ ಸಮಾಪ್ತಿಯಾಗುವುದು, ದುರ್ಯೋಧನನಂತಹ ಮಹಾವೀರರೊಡನೆ 'ಗದಾಯುದ್ಧ'ವನ್ನು ಮಾಡಿ ಗಟ್ಟಿಯಾಗಿ ನಿಲ್ಲಬಲ್ಲಂತಹವನು ಭೀಮನೇ. ಭೀಮನಿಲ್ಲದೇ ಹೋಗಿದ್ದರೆ ಬಹುಶಃ ಭಾರತ ಯುದ್ಧವೂ, ಧರ್ಮ ಸಾಮ್ರಾಜ್ಯವೂ ಉಂಟಾಗುತ್ತಿರಲಿಲ್ಲ!! ಏಕಾಂಗಿಯಾಗಿ ಹೋರಾಡಿದ ಭೀಮಸೇನನನ್ನು ತನ್ನ ಕಾವ್ಯದ ನಾಯಕನನ್ನಾಗಿಸಿದ ರನ್ನ ಸಾಹಸ ಭೀಮನನ್ನು ಹೋಲಿಸುವುದಕ್ಕೆ ಭೀಮಸೇನನೇ ನಾಯಕನಾಗಬೇಕಾಯಿತು!! ಅತ್ಯಂತ ಬಲಶಾಲಿಯಾದ ಭೀಮಸೇನನು ಕವಿಪ್ರತಿಭೆಯನ್ನು ವಿಕಾಸಗೊಳಿಸಬಲ್ಲಂತಹ ನಾಯಕನು!

**"ಒಟ್ಟು ಕಾವ್ಯದ ಸ್ಥೂಲ ರೂಪ-ರೇಖೆಗಳು ಪಂಪನಿಂದ ಪಡೆದ ಕವಿ ರನ್ನನ ಶಕ್ತಿ, ಸಾಮರ್ಥ್ಯಗಳನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲೇ ಚಿರಸ್ಥಾಯಿಗೊಳಿಸಿದೆ. ಪಂಪನ ವಿಕ್ರಮಾರ್ಜುನ ವಿಜಯದಂತೆ ರನ್ನನ ಸಾಹಸಭೀಮ ವಿಜಯಂ ಒಂದು ಸಮಸ್ತ ಭಾರತವೇ ಆಗಿದೆ."**[೫] ಆದರೆ ಇಲ್ಲಿ ರನ್ನನ ಸಮಕಾಲೀನ ಇತಿಹಾಸವೂ ಸೇರಿ ಕಾವ್ಯ ಅರ್ಥಪೂರ್ಣವಾಗಿದೆ.

ಕಾವ್ಯ ಮತ್ತು ಚರಿತ್ರೆ ಜತೆಜತೆಯಾಗಿರುವುದನ್ನು ಆರಂಭದಿಂದಲೇ ಇಲ್ಲಿ ನಾವು ನೋಡಬಹುದಾಗಿದೆ.

**॥ ಜ್ಞಾಯ ನೇತ್ರಾದಿ ಪುರುಷಂ ಪುರುಷೋತ್ತಮನೀಚಳುಕ್ಯನಾ ।**
**ರಾಯಣಾ ದೇವನೀಗೆಮಗೆ ಮಂಗಳಾಕರಣ । ಯುತ್ಸವಂಗಳಂ ॥**

-(೧-೧)

ಈ ಪದ್ಯದಲ್ಲಿ ಶ್ಲೇಷೆಯಿಂದ **ವಿಷ್ಣುವನ್ನೂ ಚಾಳುಕ್ಯ ಚಕ್ರವರ್ತಿ** ಇರಿವಬೆಡಂಗನನ್ನೂ ಸ್ತುತಿಸಿದ್ದಾನೆ. ಕವಿ **ಸತ್ಯಾಶ್ರಯ**ನನ್ನು ಭೀಮಸೇನನೊಂದಿಗೆ ಸಮೀಕರಿಸಿ ರನ್ನ ಕವಿ ಚರಿತ್ರೆಯನ್ನು ಪುರಾಣದೊಂದಿಗೆ ಹೊಂದಿಸಿ ಕಾವ್ಯ ರಚಿಸಿದ್ದಾನೆ. ಸಾಹಸದಲ್ಲಿ ಶೂರನಾದ ಭೀಮಸೇನನ್ನು ಸರಿಗಟ್ಟುವವರಿಲ್ಲವೆಂದು ತಿಳಿದ ಕವಿ ಪ್ರಸಿದ್ಧನಾದ ರನ್ನ ಚಕ್ರವರ್ತಿ ಸತ್ಯಾಶ್ರಯನನ್ನೇ ಭೀಮಸೇನನಿಗೆ ಹೋಲಿಸಿ ಕಥಾನಾಯಕನನ್ನಾಗಿ ಮಾಡಿ ರನ್ನನ ಗದಾಯುದ್ಧ ಕಾವ್ಯವನ್ನು ರಚಿಸಿದ್ದಾನೆ. ಮಾರ್ಗ ಶೈಲಿಯಲ್ಲಿ ರಚಿಸಿದರೂ ಹದವಾದ ದೇಸಿಯನ್ನು ಬಳಸಿ ಕಾವ್ಯದ ಹಿರಿಮೆಯನ್ನು ಹೆಚ್ಚಿಸಿದ್ದಾನೆ. ರನ್ನನ **ಕಾವ್ಯದ ಹಿರಿಮೆಯೇನು?** ಎಂದರೆ-

**॥ ಆರಾತೀಯ ಕವೀಶ್ವರ । ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯಂ ಭಂ ।**
**ಡಾರದ ಮುದ್ರೆಯ ನೊಡೆದಂ । ಸಾರಸ್ವತ ಮೆನಿಪ ಕವಿತೆಯೋಳ್ ಕವಿರತ್ನಂ ॥**

-(೧-೩೪)

ಈ ಹಿಂದೆ ಅಂದರೆ ಪೂರ್ವದಲ್ಲಿ ಶ್ರೇಷ್ಠ ಕವಿಗಳಾರೂ ಒಡೆಯಲಾಗದಿದ್ದ ಸರಸ್ವತೀ ಭಂಡಾರದ ಮುದ್ರೆಯನ್ನು ಅಂದರೆ ಅಂತಹ ಮಹೋನ್ನತ ವಾಕ್ ಪ್ರೌಢಿಮೆಯುಳ್ಳ ಅತಿಶಯ ಕಾವ್ಯವನ್ನು ರಚಿಸಿ - ಮುದ್ರೆಯನ್ನು ಒಡೆದು ತೋರಿಸಿದ ರನ್ನ ಕವಿ.

ರತ್ನಪರೀಕ್ಷಕರ ದೃಷ್ಟಿಯಲ್ಲಿ ಪರೀಕ್ಷಿಸಲ್ಪಟ್ಟ ಚಕ್ರೇಶ್ವರ ರಾಜಧಾನಿಯ ಭಂಡಾರದಲ್ಲಿ "ಅಮೂಲ್ಯ ರತ್ನವೆಂಬ ಅನರ್ಘ್ಯರತ್ನವೆಂಬ ಪ್ರಸಿದ್ಧಿಗೆ ಕಾರಣನಾದ. **ಸತ್ಯಾಶ್ರಯ ಚಕ್ರವರ್ತಿಯ ಈ ಹಲವಾರು ಯುದ್ಧಗಳ ಯಶಸ್ಸಿನ ಸಾಹಸಗಳು ಭೀಮನ ಸಾಹಸಗಳಂತೆಯೇ ಇದ್ದುದರಿಂದ ಕವಿಯ ಮೆಚ್ಚುಗೆಗೆ ಪಾತ್ರವಾಯಿತು.**

### ರನ್ನ ಕವಿಯ ಸ್ವಾರಸ್ಯ ವಿಚಾರಗಳು :

ಮಹಾಭಾರತ ಸಭಾಪರ್ವದಲ್ಲಿ ಪಾಂಡವರು ದ್ಯೂತದಲ್ಲಿ ಸಂಪೂರ್ಣವಾಗಿ ಸೋತಾಗ, ದುರ್ಯೋಧನನು **ದ್ರೌಪದಿಯ ವಸ್ತ್ರಾಪಹರಣ** ಮಾಡ ಹೊರಟಾಗ, ದ್ರೌಪದಿಯ ಎದುರು ನಿಂತು ತೊಡೆಯನ್ನು ತಟ್ಟುತ್ತಾ ಮದೋನ್ಮತ್ತನಾಗಿ ವಿಕಟಾಟ್ಟಹಾಸ ಮಾಡುತ್ತಾನೆ. ಇದರಿಂದ ರೋಷಾವಿಷ್ಟನಾದ ಭೀಮಸೇನ ಸಭೆಯಲ್ಲಿದ್ದವರಿಗೆಲ್ಲ ಕೇಳಿಸುವಂತೆ ಮುಂಬರುವ ಮಹಾಯುದ್ಧದಲ್ಲಿ ಈ ನಿನ್ನ ತೊಡೆಯನ್ನೇ ನನ್ನ ಗದೆಯಿಂದ ಭೇದಿಸದಿದ್ದರೆ ನಾನು ವೃಕೋಧರನೇ ಅಲ್ಲ ಎಂದು ಉದ್ಘೋಷಿಸುತ್ತಾನೆ. ಇದು ವ್ಯಾಸರ ವಿವರಣೆ.

ಕವಿ ರನ್ನ ತನ್ನ 'ಗದಾಯುದ್ಧ' ಕಾವ್ಯದಲ್ಲಿ ಇದೇ ಸಂದರ್ಭವನ್ನು ಹೇಳುವ ರೀತಿಯೇ ಬೇರೆ. ಭೀಮಸೇನ ಸುಯೋಧನನ ಊರುಭಂಗ-ತೊಡೆಯನ್ನು ಮುರಿಯುವೆನೆಂದು ಭಾಷೆ ತೊಡುತ್ತಾನೆ. ಅದರಂತೆಯೇ ಯುದ್ಧದಲ್ಲಿ ದುರ್ಯೋಧನನ ತೊಡೆಯನ್ನು ತನ್ನ ಗದೆಯಿಂದ ಮುರಿದಿದ್ದು **'ಯುದ್ಧನೀತಿ'ಗೆ ವಿರೋಧವೆಂದು ಕೆಲವರ ಆಕ್ಷೇಪ.** ಈ ಆಕ್ಷೇಪವನ್ನು ಮಾಡದಿರಲೆಂದೋ ಏನೋ; ದ್ರೋಣಾಚಾರ್ಯರು ದುರ್ಯೋಧನನಿಗೆ ಕವಚ; ಕರ್ಣ ಭುಜರಕ್ಷಕ; ಭೀಷ್ಮ ಶಿರಸ್ತ್ರಾಣವಾಗಿರುವುದರಿಂದ ಅರಕ್ಷಿತನಾಗಿ ಉಳಿದ ಅಂಗ- ತೊಡೆ. ಅದನ್ನೇ ಮುರಿಯುವೆನೆಂದು ಪಣ ತೊಡುತ್ತಾನೆ ಭೀಮಸೇನ. **ಕವಿ ರನ್ನನಿಗೆ ದುರ್ಯೋಧನ 'ವ್ಯಾಸಭಾರತ'ದಲ್ಲಿ ದ್ರೌಪದಿಯೆದುರು ದುರ್ಯೋಧನ ತೊಡೆ ತಟ್ಟಿದ ವಿಚಾರ ರನ್ನನಿಗೆ ತಿಳಿದಿರಲಿಲ್ಲವೆಂದಲ್ಲ. ತಿಳಿದಿತ್ತು. ಆದರೆ ಅದರಲ್ಲೂ ಒಂದು ನಾವೀನ್ಯತೆಯನ್ನು ಮೂಡಿಸುವುದು ಕವಿಯ ನಿರೂಪಣಾ ಶೈಲಿಯ ಚಮತ್ಕಾರ.**

### ರನ್ನನ ಕೃತಿಯಲ್ಲಿ ಕರ್ಣ, ದುರ್ಯೋಧನರ ಪಾತ್ರಗಳ ಮಹತ್ವ ಮತ್ತು ವೈಶಿಷ್ಟ್ಯತೆ :

'ಪಂಪಭಾರತ'ದ ದುರ್ಯೋಧನನಿಗೂ 'ಗದಾಯುದ್ಧ'ದ ದುರ್ಯ್ಯೋಧನನಿಗೂ ಬಹಳ ವ್ಯತ್ಯಾಸ ಕಂಡುಬರುತ್ತದೆ. 'ಪಂಪಭಾರತ'ದಲ್ಲಿ ದುರ್ಯ್ಯೋಧನನು ಏಕೋ ಏನೋ ಸ್ವಲ್ಪ ಸಪ್ಪೆಯಾಗಿ ತೋರುತ್ತಾನೆಂದು ಆಲೋಚಿಸಿದ ರನ್ನನು ತನ್ನ 'ಗದಾಯುದ್ಧ'ದಲ್ಲಿ ಭೀಮನಿಗಿಂತಲೂ ದುರ್ಯ್ಯೋಧನನಲ್ಲಿಯೇ ಅಭಿಮಾನವು ಹೆಚ್ಚಾಗಿ ಹುಟ್ಟುವಂತೆಯೂ, ತನ್ನ ಈ ಕಾವ್ಯದ ನಾಯಕನು ನಿಜವಾಗಿಯೂ ದುರ್ಯ್ಯೋಧನನೇ ಹೊರತು ಭೀಮನಲ್ಲ ಎನಿಸುವಷ್ಟರ ಮಟ್ಟಿಗೆ ಅವನ ಪಾತ್ರಕ್ಕೆ ಮಹತ್ವವನ್ನು ನೀಡುತ್ತಾನೆ. **"ಗದಾಯುದ್ಧ ಕಾವ್ಯದಲ್ಲಿ ರನ್ನನು ದುರ್ಯೋಧನನ ಚರಿತ್ರವು ಎಷ್ಟು ಮಟ್ಟಿಗೆ ಒಡಮೂಡಿದೆಯೋ ಅಷ್ಟು ಮಟ್ಟಿಗೆ ಭೀಮಸೇನನ ಚರಿತ್ರವು ಒಡಮೂಡಿಲ್ಲ. ಭೀಮನು ಯುಕ್ತಾಯುಕ್ತ ವಿಚಾರವನ್ನು ಬದಿಗಿರಿಸಿ ಸಾಹಸವನ್ನು ಮಾಡುವ ಆವೇಶದ ಮೂರ್ತಿಯೆಂದು ಮಾತ್ರ ತೋರುವಂತಾಗಿದೆ. ಭೀಮಸೇನನ ಉದಾತ್ತ ಗುಣಗಳನ್ನು ಚಿತ್ರಿಸುವುದಕ್ಕೆ ಕವಿಗೆ ತಕ್ಕ ಸಂದರ್ಭಗಳೇ ದೊರೆತಿಲ್ಲ. ದುರ್ಯೋಧನನ ಚರಿತ್ರವನ್ನು ರನ್ನ ಬಲು ಸೊಗಸಾಗಿ ಚಿತ್ರಿಸಿರುವನು."**[೨೪] ಆದರೂ ರನ್ನ ಈ ಕಾವ್ಯದಲ್ಲಿ ಲೋಕದಲ್ಲಿ ಸಾಧುಜನ ದ್ವೇಷವನ್ನು ಮಾಡುವ ಆಗ್ರಹಿಯು ಇದೇ ಮೇರೆಗೆ ದುರವಸ್ಥೆಯ ಮರಣವನ್ನು ಹೊಂದುವನೆಂಬುದನ್ನು ಒಪ್ಪಿಕೊಂಡಂತೆ ಕಾಣುವನು.

ದುರ್ಯ್ಯೋಧನನು ಪಾಂಡವರೈವರನ್ನು ಹೊರತು ಪಡಿಸಿದರೆ ಉಳಿದ ಯಾವ ವೈರಿಯ ಪರಾಕ್ರಮವನ್ನಾದರೂ ತಲೆದೂಗಿ ಹೊಗಳುತ್ತಾನೆ. ಚಕ್ರವ್ಯೂಹವನ್ನು ಭೇದಿಸಿ ಯುದ್ಧಭೂಮಿಯಲ್ಲಿ ಮರಣವನ್ನು ಹೊಂದಿದ ಅಭಿಮನ್ಯುವನ್ನು ಕಂಡು ಕೈಯೆತ್ತಿ ಮುಗಿದು ನಿನ್ನ ಹೆತ್ತವಳು ಪುಣ್ಯವಂತೆ ಎಂದು ಶ್ಲಾಘಿಸುತ್ತಾನೆ. ನಿನ್ನಂತಹ ಮರಣ ನಮಗೂ ಬರಲಿ ಎನ್ನುತ್ತಾನೆ.

ದ್ರೋಣನಿಗಾದ ಸೋಲಿಗಾಗಿ ಕಳವಳಪಡುತ್ತಾನೆ. ರಣರಂಗದಲ್ಲಿ ಬಿದ್ದ ಸಾವಿರಾರು ಜನರನ್ನು, ರಾಜಕುಮಾರರನ್ನು ಕಂಡು ಮರುಗುತ್ತಾನೆ. ಶರಶಯ್ಯೆ ಮೇಲೆ ಮಲಗಿದ್ದ ಭೀಷ್ಮರನ್ನು ಕಂಡು ತನ್ನ ತಪ್ಪುಗಳಿಗಾಗಿ ಪಶ್ಚಾತ್ತಾಪ ಪಡುತ್ತಾನೆ. ದುಶ್ಶಾಸನನ ಮೇಲಿದ್ದ ಅವನ ಪ್ರೇಮವೂ ಅತ್ಯಂತ ನಿರ್ವಾಜ್ಯವಾದುದು. ಅದೇರೀತಿ ದುರ್ಯೋಧನನ ಮಿತ್ರಪ್ರೇಮವೂ ಅಗಾಧವಾದುದು, ಗಾಢವಾದುದು. ಕರ್ಣನ ಸಾವಿಗಾಗಿ ದುರ್ಯೋಧನನು ಹೃದಯವಿದ್ರಾವಿಕವಾಗಿ ಅಳುತ್ತಾನೆ. ದಾನದಲ್ಲಿ ಕರ್ಣನಿದ್ದಂತೆ; ರನ್ನನ ಕಾವ್ಯದೊಳಗೆ ಅಭಿಮಾನವದಲ್ಲಿ ದುರ್ಯೋಧನನು ಸೀಮಾಪುರುಷನು. ಹಾಗೆಯೇ ಪಾಂಡವರ ಮೇಲಿನ ಅವನ ದ್ವೇಷವು ಅಳತೆಮೀರಿದ್ದಾಗಿರುತ್ತದೆ.

ದುರ್ಯೋಧನನು ಪಾಂಡವರಿಗೆ ಮಾಡಿದ ಅನ್ಯಾಯಗಳು ನೂರಾರು. ಅವುಗಳಲ್ಲಿ ದ್ರೌಪದಿಯನ್ನು ಅಪಮಾನಗೊಳಿಸಿದ್ದೂ ಒಂದು ಘಟನೆ. ರಾಜಪುತ್ರಿಯೂ, ರಾಜಪತ್ನಿಯೂ, ಪಟ್ಟಾಭಿಷಿಕ್ತಳೂ, ತಮ್ಮ ಕುಲಕ್ಕೆ ಸೇರಿದವಳೆಂದೂ ನೋಡದೇ, ಆಕೆಯು ರಜಸ್ವಲೆಯಾಗಿದ್ದವಳೆನ್ನದೇ, ಏಕವಸ್ತ್ರಧರಳಾಗಿರುವಳೆನ್ನದೇ ತುಂಬಿದ ರಾಜಸಭೆಯಲ್ಲಿ ಆಕೆಯ ಮುಡಿಯನ್ನು ಹಿಡಿದರಳತರಿಸಿ ಸೀರೆಯ ಸೆಳೆಯುವಂಥ ಭಯಂಕರವಾದ ಅಪಮಾನವನ್ನು ಮಾಡಿದುದು ಅನ್ಯಾಯದ ಪರಾಕಾಷ್ಠೆಯೇ ಎನಿಸುತ್ತದೆ.

ಎಂದೂ ಅರಿಯದ ಈ ಅವಮಾನವನ್ನು ಭೀಮಸೇನನು ನೊಂದುಕೊಂಡು ಮುಕ್ತಕೇಶಿಯಾಗಿದ್ದ ತನ್ನ ಮಡದಿಯ ಆಶ್ವಾಸನಕ್ಕಾಗಿ ಈತನು ತನ್ನ ವೈರಿಗಳನ್ನು ನಿರ್ಮೂಲನ ಮಾಡುವುದಾಗಿ ಪ್ರತಿಜ್ಞೆ ಮಾಡುತ್ತಾನೆ.

ಅದಕ್ಕಾಗಿ ಅಷ್ಟೊಂದು ಪರಾಕ್ರಮವನ್ನು ಹೊಂದುತ್ತಾನೆ. ಈ ಕಾರಣಕ್ಕಾಗಿಯೇ ಸಂಧಾನಕ್ಕೆ ತಾನೂ ಬದ್ಧವಿರೋಧಿಯಾಗುತ್ತಾನೆ. ಮತ್ತು ಸಂಧಾನಾಕಾಂಕ್ಷಿಯಾದ ಧರ್ಮಜನನ್ನೂ ಅನುಚಿತವಾಗಿ ಹೀಯಾಳಿಸುತ್ತಾನೆ. ಇದಕ್ಕಾಗಿಯೇ ವಯೋವೃದ್ಧರಾದ ಧೃತರಾಷ್ಟ್ರ, ಗಾಂಧಾರಿಯ ದೈನ್ಯತಾ ಬೇಡಿಕೆಗೂ ಮೋಹಗೊಳ್ಳದೆಯೇ ಕ್ರೋಧಾವಿಷ್ಟನಾಗಿಯೇ ಉಳಿಯುತ್ತಾನೆ.

ಭೀಮಸೇನನು ಗದಾಯುದ್ಧದ ನಿಯಮವನ್ನು ಉಲ್ಲಂಘಿಸಿ ಶತ್ರುವಿನ ಹೊಟ್ಟೆಯ ಕೆಳಭಾಗವಾದ ದುರ್ಯೋಧನನ ತೊಡೆಯನ್ನು ಗದೆಯಿಂದ ಹೊಡೆದು ಭಂಗಗೊಳಿಸುವ ಮೂಲಕ ಜಯಗಳಿಸುತ್ತಾನೆ. ಮೃತನಾಗಿ ಬಿದ್ದಿದ್ದ ಅವನ ರಾಜಮಕುಟಕ್ಕೂ ಶಿರಸ್ಸಿಗೂ ಒದೆಯುತ್ತಾನೆ. ಭೀಮನಿಗೆ ದುರ್ಯೋಧನನು ಅಣ್ಣನ ವರಸೆಗೆ ಬರುತ್ತಾನೆ. ಸಾಯುವ ಅವಸ್ಥೆಯಲ್ಲಿರುವ ಅಣ್ಣನಂತಹವರಿಗೆ ತೋರಿಸುವ ಧರ್ಮ ಸರಿಯೇ ಎನಿಸುತ್ತದೆ. ಬಲರಾಮಾದಿಗಳು ಇದು ಅನ್ಯಾಯವೆಂದು ಅಭಿಪ್ರಾಯಪಟ್ಟಾಗ ಕೃಷ್ಣನು ಕೊಡುವ ಉತ್ತರವು ಯುಗಧರ್ಮವನ್ನು ಅನುಸರಿಸಿರುತ್ತದೆ. ಕಲಿಯುಗದ ನೀತಿಬೋಧೆಯನ್ನೊಳಗೊಂಡಿರುತ್ತದೆ.

ರಣರಂಗದಲ್ಲಿ ದುರ್ಯೋಧನನನ್ನು ತನ್ನವರು ಸತ್ತು ಬಿದ್ದಿರುವುದನ್ನು ಕಂಡು ಅವನು ಶತ್ರುಪಕ್ಷದವನಾದರೂ ಮತ್ಸರವಿಲ್ಲದೆ ಅವನ ಶೌರ್ಯವನ್ನು ಕಂಡು ಹೊಗಳಿ ಕೈಮುಗಿಯುತ್ತಾನೆ. ಹೀಗಿದ್ದಲ್ಲಿ ಯಾರಿಗೆ ತಾನೇ ದುರ್ಯೋಧನನನ್ನು ಕಂಡರೆ ಗೌರವಭಾವನೆ ಮೂಡುವುದಿಲ್ಲ?!

**ಆದರೆ, 'ಪಂಪಭಾರತ'ದಲ್ಲಿ ಈ ಸಂದರ್ಭದಲ್ಲಿ ಅಭಿಮನ್ಯುವಿನ ಪ್ರಸಕ್ತಿಯೇ ಬರುವುದಿಲ್ಲ. ಇದೊಂದು ಸಣ್ಣ ಅಂಶವನ್ನು ಸೇರಿಸುವ ಮೂಲಕ ರನ್ನ ಕವಿಯು ದುರ್ಯೋಧನನನ್ನು ಮಹಾನುಭಾವನ ಪಟ್ಟಕ್ಕೇರಿಸುತ್ತಾನೆ.**

**'ಪಂಪಭಾರತ'ದಲ್ಲಿ ರಸಾವೇಶವಿಲ್ಲ, ವರ್ಣನೆಯ ರಭಸವಿಲ್ಲ. ಓದುವವರ ಮೈ ಜುಮ್ಮೆನಿಸುವಂತೆ ಭೀಮ–ದುರ್ಯೋಧನರ ವಾಕ್ಪ್ರಹಾರಗಳೂ ಇಲ್ಲ. ರನ್ನ ತನ್ನ ಕಾವ್ಯದಲ್ಲಿ ಅವೆಲ್ಲವನ್ನೂ ಸೇರಿಸಿದ್ದಾನೆ. ಉದಾಹರಣೆಗೆ : ಕರ್ಣನನ್ನು ನೆನೆನೆನೆದು ದುರ್ಯೋಧನನು ಪ್ರಲಾಪಿಸುವ ಭಾಗ ಇದಕ್ಕೊಂದು ಉತ್ತಮ ಉದಾಹರಣೆ.**

ಮಹಾಕವಿ ಪಂಪನಂತೆಯೇ ರನ್ನನೂ ಕೂಡಾ ಜೈನ ಕವಿ. ಮೂಲ 'ಮಹಾಭಾರತ'ದ ಸ್ವಾರಸ್ಯವನ್ನು 'ಸಾಹಸ ಭೀಮ ವಿಜಯ'ಎಂಬ ಹೆಸರಿನಿಂದ ರಚಿಸಿದನು. ಪಂಪನ ಪದ್ಧತಿಯನ್ನು ಸ್ವಲ್ಪವೂ ಬಿಡದಂತೆ ಅನುಸರಿಸಿರುವನು. ತನ್ನ ಪೋಷಕನ ಹೆಸರು, ಕೀರ್ತಿಗಳನ್ನು ಚಿರಸ್ಥಾಯಿಗೊಳಿಸುವುದೇ ಈತನ ಮುಖ್ಯ ಉದ್ದೇಶ. ಇದರ ಸಾಧನೆಗಾಗಿಯೇ ಅಲ್ಲಲ್ಲಿ ಬೇಕಾದಂತಹ ತಕ್ಕ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ.

ಪಂಪನಿಂದ ಸ್ಫೂರ್ತಿ ಪಡೆದು, ಆತನ 'ವಿಕ್ರಮಾರ್ಜುನ ವಿಜಯ'ದಂತೆಯೇ; ರನ್ನ 'ಸಾಹಸಭೀಮ ವಿಜಯ'ವನ್ನು ರಚಿಸಿದನು. 'ಗದಾಯುದ್ಧ'ದಲ್ಲಿ ಅವನ ಸ್ಮರಣೆಯನ್ನು ಕೂಡ ಮಾಡದೆ ಇರುವುದನ್ನು ನೋಡಿ ಆಶ್ಚರ್ಯವೆನಿಸುತ್ತದೆ. **"ವ್ಯಾಸ, ವಲ್ಮೀಕಿ, ಕಾಳಿದಾಸ, ಬಾಣ –ಇಷ್ಟು ಜನಕ್ಕೆ ರನ್ನನು 'ಗದಾಯುದ್ಧ'ದಲ್ಲಿ ಅಭಿವಂದಿಸಿದ್ದಾನೆ. ಕನ್ನಡ ಕವಿಗಳ ಪ್ರಸ್ತಾಪವೇ ಇಲ್ಲ. ಯಾರ ಹೆಸರನ್ನು ಎತ್ತದೇ ಇದ್ದರೂ ಪಂಪನನ್ನು ಕುರಿತು ಒಂದು ಮಾತನ್ನಾದರೂ ಆಡಬೇಕಾಗಿದ್ದಿತಲ್ಲವೇ? "ಆರಾತೀಯ ಕವೀಶ್ವರ"ರನ್ನು ಮೀರಿಸಿದೆನೆಂದು ಹೆಮ್ಮೆಪಡುವ ಬದಲು ಪಂಪನಿಗೆ ತನ್ನ ಕೃತಜ್ಞತೆಯನ್ನೂ ವಿನಯದಿಂದ ಸೂಚಿಸಿದ್ದರೆ, ರನ್ನನ ಗೌರವವು ಮತ್ತಷ್ಟು ಹೆಚ್ಚುತ್ತಿದ್ದೀತೇ ಹೊರತು ಕಡಿಮೆಯಾಗುತ್ತಿರಲಿಲ್ಲ."** ಶಿ.ಆ ಕವಿಗೆ ಸರ್ವಸ್ವಾತಂತ್ರ್ಯವಿರುತ್ತದೆ. ತನಗೆ ಬೇಕಾದ ವಸ್ತುವನ್ನು ಬರೆಯಬಹುದು ಇಲ್ಲದ್ದನ್ನು ಬಿಡಬಹುದು. ಇದಕ್ಕೆ ಬೇರೆಯವರ ಅನುಮತಿ ಪಡೆಯಬೇಕಿಲ್ಲ. ಕವಿ ಚಕ್ರವರ್ತಿ ರನ್ನನನ್ನು ದೂಷಿಸುವಂತಿಲ್ಲ. ಏಕೆಂದರೆ ಈತನ ಧಾರ್ಮಿಕ ಕಾವ್ಯ 'ಅಜಿತ ಪುರಾಣ'ದಲ್ಲಿ ಪಂಪನನ್ನು ಅತಿಯಾಗಿ ಹೊಗಳಿದ್ದಾನೆ. ಇದನ್ನು ಕಂಡಾಗ ರನ್ನನಿಗೆ ಪಂಪನಲ್ಲಿ ಅತಿಯಾದ ಗೌರವವಿತ್ತೆಂದೇ ತೋರುತ್ತದೆ. ತಾನು ಪಂಪನಿಗೆ ಸಮಾನನು ಎಂಬ ಅಭಿಪ್ರಯವನ್ನು ವಾಚಕರಲ್ಲಿ ಹುಟ್ಟಿಸಲು ಸಾಹಸಪಟ್ಟಿರುವುದಾಗಿ ಕಾಣಿಸುತ್ತದೆ.

### ಅಲಂಕಾರ, ಶೈಲಿ ಮತ್ತು ನಿರೂಪಣೆ :

ರನ್ನನೂ ಕೂಡಾ ಸಕಲ ವಿಷಯಗಳಲ್ಲಿಯೂ ಪಂಪನ ರೀತಿಯನ್ನೇ ಮಾದರಿಯಾಗಿಟ್ಟುಕೊಂಡು ಗ್ರಂಥರಚನೆಗೆ ತೊಡಗಿದವನು ಕಾವ್ಯದಲ್ಲಿನ ಪ್ರತಿಯೊಂದೂ ಪಂಕ್ತಿಯಲ್ಲೂ ಅಲಂಕಾರವಿರಲೇಬೇಕೆಂಬ ಗೊಡವೆಗೇ

ಹೋಗದಿರುವುದು ಬಹಳ ಶ್ಲಾಘನೀಯವಾದುದು. ಪಂಪನ ಕಾವ್ಯ ಹೇಗೆ ಅಲಂಕಾರಗಳ ಬಳಕೆಯಿಲ್ಲದೇ ಸಾಮಾನ್ಯವಾಗಿ ಮಾತಾಡಿದಂತೆ ಎಲ್ಲಾ ಪದ್ಯಗಳೂ ಸ್ವಾಭಾವಿಕವಾಗಿ ರಚಿಸಿದ್ದಾನೋ ರನ್ನನೂ ಕೂಡಾ ಅದೇರೀತಿ ಅಲಂಕಾರಗಳಾವುವೂ ಇರದಂತೆ ವಿಶೇಷ ವರ್ಣನೆಯ ಸ್ವಾಭಾವಿಕವಾಗಿ ರಚಿಸಿದರೂ ಕಾವ್ಯವು ರಸಪುಷ್ಟಿಯಾಗುವಂತೆ ಸೊಗಸಾಗಿರುವಂತೆ ಜಾಗ್ರತೆವಹಿಸಿದ್ದಾನೆ.

ಅಲ್ಲಲ್ಲಿ ತಡೆದು ತಡೆದು ಪ್ರಯಾಸಪೂರ್ವಕವಾಗಿ ಬರೆಯುತ್ತಾ ಬೇಕೆಂದೇ ಅದರೊಳಗೆ ವಿಶೇಷಣಗಳ ಹೊರೆಯನ್ನು ಬಲವಂತದಿಂದ ಅತಿಶಯೋಕ್ತಿಗಳನ್ನು ಹೇರಿದಾಗ ಅಲಂಕಾರಗಳ ಹೊರೆಯೊಂದಿಗೆ ಕೂಡಿದ ಕಾವ್ಯವು ಉತ್ತಮ ಕಾವ್ಯ ಎನಿಸಿಕೊಳ್ಳುವುದಿಲ್ಲ. ಆದರೆ ಪದ್ಯಗಳು ಸ್ವಾಭಾವಿಕವಾಗಿದ್ದರೆ ಬಾಯಿಂದ ಮಾತುಗಳು ನಿರರ್ಗಳವಾಗಿ ಹೊರ ಚಿಮ್ಮಿದಂತೆ ಇರುತ್ತದೆ.

**ಉದಾಹರಣೆ ೧** : ಭೀಮನ 'ಗದಾಯುದ್ಧ' ವರ್ಣನೆಯಲ್ಲಿ ರನ್ನನು,

**"॥ ಬಿಡಿಗೊಂಡು ಗೋಣಿಪಣ್ಣಂ । ಬಡಿವಂತಿರೆ ಪವನಸೂನು ಪೆಂಕುಳಿನಾಯಂ ॥ ಬಡಿವಂತಿರೆ ಪಾರುಡುವಂ । ಬಡಿವಂತಿರೆ ಬಡಿದನನಿಬರಂ ಕೌರವಂ ॥"**

ಎನ್ನುವಲ್ಲಿ ರನ್ನನು ಪದ್ಯದಲ್ಲಿ ಅಲಂಕಾರವನ್ನು ಜೋಡಿಸಿದ್ದರೂ ಓದುಗರಿಗೆ ಅದು ಅಲಂಕಾರವೆಂದು ಕಾಣಿಸದಂತೆ ಮರೆಸುವುದು ಈತನ ಅತ್ಯಂತ ಅಪೂರ್ವ ವೈಶಿಷ್ಟ್ಯಪೂರ್ಣ ಶೈಲಿಗಳಲ್ಲೊಂದಾಗಿದೆ.

**ಉದಾಹರಣೆ ೨** : ಭೀಮನ 'ಬಾಹುಬಲ'ವನ್ನು ವರ್ಣಿಸಬೇಕಾದ ಪ್ರಸಂಗದಲ್ಲಿ ಚಮತ್ಕಾರಪೂರ್ವಕವಾಗಿ ನಿರ್ವಹಿಸುವುದು ಈತನ ಕಲಾ ನೈಪುಣ್ಯತೆಯನ್ನೇ ಮೆರೆಸುತ್ತದೆ.

**"॥ದೆಸೆದೆಸೆಗೀಡಾದ ಕರಿ । ದೆಸೆಯಾನೆಗಳಬ್ಧಿಯೊಳಗೆ ನೀರಾನೆಗಳಾ ॥ ಗಸದೊಳಮವಭ್ರಗಜಮೆನೆ । ಪೊಸತಾಗಿರೆ ಭಿನ್ನ ಸೃಷ್ಟಿವಡೆದನೋ ಭೀಮಂ ॥"**

ನೆಲದ ಮೇಲೆ ಆನೆ, ನೀರಿನೊಳಗೆ ನೀರಾನೆ, ಆಕಾಶದಲ್ಲಿ ಅಭ್ರಗಜವಿರುವುದು ಸಹಜವಾಗಿ ಜನಜನಿತವಾದ ವಿಚಾರವೇ ಸರಿ. ಆದರೆ ರನ್ನ ಅದನ್ನೇ ಆಧಾರವಾಗಿಟ್ಟುಕೊಂಡು ಸಕಲ ದಿಕ್ಕುಗಳಲ್ಲಿ ದಿಗ್ಗಜಗಳಾಗಿಯೂ ಸಮುದ್ರದಲ್ಲಿ ನೀರಾನೆಗಳಾಗಿಯೂ, ಆಕಾಶದಲ್ಲಿ ಅಭ್ರಜಗವೆಂಬ ಐರಾವತವಾಗಿಯೂ ಹೊಸ ಸೃಷ್ಟಿಯನ್ನೇ ಮಾಡುತ್ತಾನೆ. ಈ ಮೂಲಕ ಭೀಮನ ಬಾಹುಬಲವನ್ನು ಧ್ವನಿಪೂರ್ವಕಗೊಳಿಸಿರುವುದು ಈತನ ಉಕ್ತಿ ವೈಚಿತ್ರ್ಯಕ್ಕೆ ಬಹಳ ಪ್ರಾಶಸ್ತ್ಯಗಳಿಸುವಂತೆ ಮಾಡುತ್ತದೆ.

**ಉದಾಹರಣೆ ೩ : "॥ ಆ ರವಮಂ ನಿರ್ಜಿತಕಂ । ಶೀರವರವಮಂ ನಿರಸ್ತಘನರವಮಂ ಕೋ ॥ಪಾರುಣ ನೇತ್ರಂ ಕೇಳ್ದಾ ನೀರೊಳಗಿರ್ದುಂ ಬೆಮರ್ದನಾ ಉರಗಪತಾಕಂ ॥"**

ದುರ್ಯೋಧನನು 'ವೈಶಂಪಾಯನ ಸರೋವರ'ದಲ್ಲಿ ಅಡಗಿಕೊಂಡಿದ್ದ ಸನ್ನಿವೇಶವನ್ನು ರನ್ನ ಈ ರೀತಿ ವರ್ಣಿಸುತ್ತಾನೆ.

ಸರಸ್ವತೀ ಭಂಡಾರದ ಮುದ್ರೆಯೊಡೆದ ಕವಿ ಪಂಪನಿಗಿಂತಲೂ ಎರಡು ಹೆಜ್ಜೆ ಮುಂದೆಯೇ ಇರುವನೆಂದರೆ ಬಹುಶಃ ತಪ್ಪಾಗಲಾರದು. ಆ ರೀತಿಯ ಪದಪ್ರಯೋಗ ರನ್ನನಲ್ಲಿ ಉತ್ತಮ ರೀತಿಯಲ್ಲಿರುವುದು ಕಂಡುಬರುತ್ತದೆ.

ರನ್ನ ಪದಗಳನ್ನು ವ್ಯಕ್ತಗೊಳಿಸುವ ಪ್ರಯೋಗ ರೀತಿಯಲ್ಲಿ ಓದುಗರಿಗೆ ಅತೀ ಹೆಚ್ಚು ಉತ್ಸಾಹವನ್ನುಂಟು ಮಾಡುವುದಷ್ಟೇ ಅಲ್ಲದೆ; ಆತನಿಗೇ ತನಗೆ ಸರಸ್ವತಿಯ ವರಲಬ್ಧವಾಗಿ ಬಂದಿರುವ, ಬಹು ಸ್ವಾರಸ್ಯವಾಗಿ ಮೂಡಿರುವ ಪದಪ್ರಯೋಗದ ಬಗೆಗೆ ಆತನಿಗೇ ಹೆಮ್ಮೆಯಿದೆ. ಆತ್ಮವಿಶ್ವಾಸವಿದೆ. ಗೌರವವೂ ಇದೆ. ಪಂಪನ ಬಗ್ಗೆ ಈತನಿಗೆ ಗೌರವವಿದ್ದರೂ ಆತನ ಪದ ಪ್ರಯೋಗಕ್ಕಿಂತಲೂ ತನ್ನದು ಉತ್ತಮ ರೀತಿಯದು ಎನ್ನುವ ಭಾವ ಅಂಕುರಿಸಿರುವುದನ್ನು ಕಾಣುತ್ತೇವೆ.

~~~***~~~
~~~

**ಕುಮಾರವ್ಯಾಸನ "ಕರ್ನಾಟ ಭಾರತ ಕಥಾಮಂಜರಿ" ಅಥವಾ "ಗದುಗಿನ ಭಾರತ" :**

ನಾರಣಪ್ಪ-ವೇದವ್ಯಾಸರ ಪ್ರೇಮಕುವರ. ಗದುಗಿನ ವೀರನಾರಾಯಣನ ಭಕ್ತಿ ಕಿಂಕರ-ಭಕ್ತಿರಸಾವೇಶದ ಕವಿ.

೧೪ರಿಂದ ೧೫ನೇ ಶತಮಾನದಲ್ಲಿದ್ದ ಕವಿ ಕುಮಾರವ್ಯಾಸ. "ವೀರನಾರಾಯಣನೇ ಕವಿ; ಲಿಪಿಕಾರ ಕುಮಾರವ್ಯಾಸ" ಎನ್ನುವಷ್ಟು ಈತನದು ಕೃಷ್ಣಭಕ್ತಿಯ ಆವೇಶ. ಈತ ಗದುಗಿನ ಬಳಿಯ ಕೋಳಿವಾಡದ ಕರಣಿಕನೆಂದು ಹೇಳಲಾಗಿದೆ. 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿ'ಗಳ ನಾಡಿನವನಾದ ನಾರಾಣಪ್ಪ ಹೆಚ್ಚು ಓದಿದವನಲ್ಲ. ಹಲಗೆ ಬಳಪ ಹಿಡಿಯದೊಂದಗ್ಗಳಿಕೆಯ ಕವಿ ವೀರನಾರಾಯಣನೆದುರೇ ತೊಯ್ದು ಬಟ್ಟೆಯಲ್ಲಿ ಕುಳಿತು ಅದು ಒಣಗುವವರೆಗೆ 'ಕರ್ನಾಟ ಭಾರತ ಕಥಾಮಂಜರಿ' ಮಹಾಕಾವ್ಯವನ್ನು ರಚಿಸುತ್ತಿದ್ದನಂತೆ. ಈತ ಹತ್ತು ಪರ್ವಗಳನ್ನು ಮಾತ್ರ ರಚಿಸಿದ್ದಾನೆ. ಭಕ್ತಿಯುಗಕ್ಕೆ ಸೇರಿದ ನಾರಾಣಪ್ಪ ಕಾವ್ಯವನ್ನು ರಚಿಸಿದ್ದಾನೆ. ಭಕ್ತಿಯುಗಕ್ಕೆ ಸೇರಿದ ನಾರಣಪ್ಪ ಕಾವ್ಯವನ್ನು ಕನ್ನಡದಲ್ಲಿ ಪ್ರಥಮವಾಗಿ ರಚಿಸಿದನು. ನಡುಗನ್ನಡ ಕಾಲದಲ್ಲಿ ರಚಿಸಿದ ಭಾಮಿನಿ ಷಟ್ಪದಿಯ ಕಾವ್ಯ 'ಕನ್ನಡ ಭಾರತ'ವೆಂದೇ ಲೋಕಪ್ರಸಿದ್ಧಿಯಾಯಿತು. ಕೃಷ್ಣಕಥೆಯೊಂದೇ ಪ್ರಸಿದ್ಧವಾದ ಪದುಮನಾಭನ ಮಹಿಮೆಯನ್ನು ಹೇಳುವ ನಾರಾಣಪ್ಪನ ಮಹಾಭಾರತವನ್ನು 'ಕಲಿಯುಗ ದ್ವಾಪರ'ವಾಗುವಂತೆ;

**"೧। ಅರಸುಗಳಿಗಿದು ವೀರ, ದ್ವಿಜರಿಗೆ । ಪರಮವೇದದ ಸಾರ ಯೋಗೀಶ್ವರರ ತತ್ತ್ವ ವಿಚಾರ ಮಂತ್ರಿಜನಕ್ಕೆ ಬುದ್ಧಿ ಗುಣ ।**

**ವಿರಹಿಗಳಿಗೆ ಶೃಂಗಾರ ವಿದ್ಯಾ ಪರಿಣತರಲಂಕಾರ ಕಾವ್ಯಕೆ ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ॥"** (೧-೧೯)

**-ಹೀಗೆ ರಚಿಸಿದ ಕವಿ 'ರೂಪಕ ಸಾಮ್ರಾಜ್ಯ ಚಕ್ರವರ್ತಿ' ಎಂದು ಪ್ರಸಿದ್ಧನೂ ಆದ. "ಎಲ್ಲ ಬಗೆಯ ಜನರೂ ಈ ಗ್ರಂಥವನ್ನು ಓದಿ ಮನೋರಂಜನೆಯನ್ನು ಹೊಂದಿ ತತ್ವಬೋಧೆಯನ್ನೂ ಸ್ವಕರ್ತವ್ಯವನ್ನೂ ತಿಳಿದುಕೊಂಡು ಆತ್ಮೋದ್ಧಾರ ಮಾಡಿಕೊಳ್ಳಲು ಒಳ್ಳೆ ಸಹಾಯವಾಗುತ್ತದೆ."**[೨] ಎಂದು ಪಂಡಿತರೆಲ್ಲರೂ ಈತನ ಕೃತಿಯ ಬಗೆಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.ವ್ಯಾಸರು ರಚಿಸಿದ **ಜಯವೆಂಬ ಭಾರತವು ಅವರ ಶಿಷ್ಯ ವೈಶಂಪಾಯನ ಮತ್ತು ಸೂತಪುರಾಣಿಕರುಗಳಿಂದ ಮಹಾಭಾರತವಾಗಿ ಬೆಳೆಯಿತು.** ಕಾಲಾನುಕ್ರಮದಲ್ಲಿ **"ಭಾರತದೇಶದ ಜ್ಞಾನಸಾರ ಸರ್ವಸ್ವವನ್ನೂ ಒಳಗೊಂಡ ಐದನೆಯ ವೇದವೆಂದು ಪ್ರಸಿದ್ಧವಾಗಿ ಪೂಜ್ಯಗ್ರಂಥವಾಯಿತು."**[೩] ನಂತರ ಈ ಮಹಾಭಾರತವು **"ಆರ್ಯ ಸಂಸ್ಕೃತಿಯ ವಿಶ್ವಕೋಶವಾಯಿತೆಂದು ಧಾರಾಳವಾಗಿ ಹೇಳಬಹುದು. ಆರ್ಯ ಜನಾಂಗದ ಏಳು-ಬೀಳಿನ ಚರಿತ್ರ, ಸಮಾಜ ನಿಯಮಗಳು, ಸಂಪ್ರದಾಯಗಳು, ರಾಜ್ಯಾಂಗ ವ್ಯವಸ್ಥೆ, ಆಧ್ಯಾತ್ಮಿಕ ವ್ಯವಸ್ಥೆ, ಆಧ್ಯಾತ್ಮಿಕ ಜ್ಞಾನ, ವ್ಯವಹಾರ ನೀತಿ ಮುಂತಾದ ಯಾವ ವಿಷಯವನ್ನು ಬೇಕಾದರೂ ಈ ಮಹಾಗ್ರಂಥದಲ್ಲಿ ತಿಳಿದುಕೊಳ್ಳಬಹುದು."**[೪] ಕುಮಾರವ್ಯಾಸನ 'ಗದುಗಿನ ಭಾರತ' ಈ ಕೃತಿಗೆ ವೇದವ್ಯಾಸರು ರಚಿಸಿರುವ 'ಮಹಾಭಾರತ'ವೇ ಆಧಾರವಾಗಿದ್ದರೂ ತನ್ನ ಕೃತಿಯನ್ನು **"ಕೃಷ್ಣರಾಯ ಚರಿತೆ"**ಯನ್ನಾಗಿ ಮಾಡಲು ಕೃಷ್ಣನು ಸಾಕ್ಷಾತ್ ಭಗವಂತನೇ ಹೊರತು ಬೇರೆ ಯಾರೂ ಅಲ್ಲ. **"ಮಹಾಭಾರತವು ಸಕಲ ವೇದದ ತಿರುಳೆಂದರೂ ಅದರಲ್ಲಿ ಅನೇಕ ಪುರಾಣ, ಶಾಸ್ತ್ರಗಳು ಅಡಗಿರುವುದೆಂದೂ ಅದನ್ನು ಓದಿ ತಿಳಿಯುವುದರಿಂದ ಸಮಸ್ತ ಪಾಪಗಳು ಪರಿಹಾರವಾಗಿ ಸಕಲೈಶ್ವರ್ಯ, ಸಂತತಿ, ವರ ಶುಭೋದಯ ಭುಕ್ತಿಮುಕ್ತಿಗಳು ದೊರೆಯುವುದೆಂದು ನಂಬಿ, ಅಂಥ ಉತ್ತಮಫಲವು ಎಲ್ಲರಿಗೂ ದೊರೆಯುವಂತೆ ಮಾಡಬೇಕೆಂಬ ಸಾಮಾನ್ಯೋದ್ದೇಶದಿಂದಲೂ, ದುಷ್ಟಶಿಕ್ಷಣ ಶಿಷ್ಟಪರಿಪಾಲನೆಗಳ ಭಾರವನ್ನು ಹೊತ್ತು ಲೋಕವನ್ನು ಕಾಪಾಡುವ ಭಗವತ್ತತ್ತ್ವರೂಪಿಯಾದ ಶ್ರೀಕೃಷ್ಣನ ಮಂಗಳ ಚರಿತ್ರೆಯನ್ನು ಹಾಡಿ ಕುಣಿಯಬೇಕೆಂಬ ಮುಖ್ಯೋದ್ದೇಶದಿಂದಲೂ ಬರೆಯತೊಡಗಿದನು."**[೫] ಈತನ ಈ ಕೃತಿಯನ್ನು ಓದಿದವರಲ್ಲಿ ಭಕ್ತಿ ಭಾವನೆ ಉಂಟಾಗುವಂತೆ ರಚಿಸಿದ್ದಾನೆ.

ಕುಮಾರವ್ಯಾಸನದು ಹಲಗೆ ಬಳಪ ಪಿಡಿಯದೊಂದಗ್ಗಳಿಕೆ ಮತ್ತು ಪದವಿಟ್ಟಳುಪದೊಂದಗ್ಗಳಿಕೆ ಎನ್ನುವುದಲ್ಲದೆ, ತನ್ನ ಕಾವ್ಯಕ್ಕೆ ವೀರನಾರಾಯಣನೇ ಕವಿ, ಲಿಪಿಕಾರ ಕುಮಾರವ್ಯಾಸ ಎಂದು ಹೇಳುವಲ್ಲಿ ಆತನ ನಮ್ರತೆ ಎದ್ದುಕಾಣುತ್ತದೆ.

"ಭಾರತ ಕಥಾಮಂಜರಿ" ಕಾವ್ಯದ ಭಾಷೆ ನಡುಗನ್ನಡ. ಪಂಪಭಾರತದಷ್ಟು ಹಳಗನ್ನಡವಲ್ಲ, ಕಠಿಣವೂ ಆಗಿಲ್ಲ. ನಾರಾಣಪ್ಪನ ದೃಷ್ಟಿ ಕಾವ್ಯ ಸಾಮಾನ್ಯ ಜನರನ್ನು ಮುಟ್ಟಿಸುವುದೇ ಆಗಿತ್ತು. ಹೀಗಾಗಿ ನಾರಾಣಪ್ಪ ತಾನು ರಚಿಸಿದ ಕಾವ್ಯದಲ್ಲಿ ಮಹಾಮಹಿಮರ, ಲೋಕಪೂಜ್ಯರಾದ ಅನೇಕ ಆದರ್ಶ ಪುರುಷರ ಚಿತ್ರಣಗಳನ್ನು ಕಾಣಿಸುತ್ತಾನೆ. ಅವರಲ್ಲೆಲ್ಲಾ ಸರ್ವೋತ್ಕೃಷ್ಟನಾದವನೇ ಶ್ರೀಕೃಷ್ಣ.

ಕುಮಾರವ್ಯಾಸನ ಅಭಿಪ್ರಾಯದಲ್ಲಿ 'ಮಹಾಭಾರತ' ಒಂದು 'ಕೃಷ್ಣ ಚರಿತ್ರೆ'. ಕೃಷ್ಣನೇ ಇದರ ಕಥಾನಾಯಕ. ಅವನು ಭಗವಂತ **ನಾರಾಯಣನ** ಅವತಾರ, ಸರ್ವಪ್ರೇರಕ. ಭಗವತ್ಪ್ರೇರಣೆಯನ್ನು ಸರಿಯಾಗಿ ಅರಿತುಕೊಂಡು, ಭಗವದಿಚ್ಛೆಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಕವಾಗಿ ನಿರ್ವಹಿಸಿದವನು ನರೋತ್ತಮನಾದ ನರ-ಅರ್ಜುನ.

**ಕುಮಾರವ್ಯಾಸನ "ಗದುಗಿನ ಭಾರತ" ಕೃತಿಯ ವಿಶ್ಲೇಷಣೆ ಕುರಿತಂತೆ ಸಂಕ್ಷಿಪ್ತ ವಿವರಣೆ :**

**ಕವಿಯ ಕಾಲ :** ಕುಮಾರವ್ಯಾಸನು ಕ್ರಿ.ಶ. ೧೪೦೦ರ ಕಾಲಾವಧಿಯಲ್ಲಿದ್ದವನೆಂದು ವಿದ್ವಾಂಸರು ಗುರ್ತಿಸಿದ್ದಾರೆ. ಈತನು ಗದುಗಿನ ಕೋಳೀವಾಡ ಗ್ರಾಮದವನು. ಈತನನ್ನು 'ಗದುಗಿನ ನಾರಾಣಪ್ಪ, ವೀರನಾರಾಯಣ' ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಈತನು ಗದುಗಿನ ವೀರನಾರಾಯಣ ಸ್ವಾಮಿಯ ಅನನ್ಯ ಭಕ್ತನು. ಈತನು ಬದುಕಿದ್ದಂತಹ ಕಾಲ 'ಭಕ್ತಿಯುಗ'ವೇ ಆಗಿತ್ತು. ಶಿವಶರಣರು, ವಚನಕಾರರು, ಹಲವು ಹರಿಸಂಕೀರ್ತನ ಮಾಡುವಂತಹ ದಾಸವರೇಣ್ಯರೂ ಇದ್ದಂತಹ ಕಾಲವಾಗಿತ್ತು!

**ಪ್ರೇರಣೆ :** ಯುಗದ ಬಯಕೆಯಿಂದಲೂ ಮತ್ತು ಮೂಲತಃ ಕುಮಾರವ್ಯಾಸನು ವಿಷ್ಣುಭಕ್ತನಾಗಿದ್ದು, ಪರಮ ವೈಷ್ಣವ ಭಕ್ತಿಕವಿಯಾಗಿದ್ದುದರಿಂದಲೂ ಸಂಸ್ಕೃತ ವ್ಯಾಸಭಾರತವನ್ನು ಕನ್ನಡೀಕರಣಗೊಳಿಸಿದನು. ಆದ್ದರಿಂದ ಆತನ ಈ ಕೃತಿಯನ್ನು 'ಕುಮಾರವ್ಯಾಸಭಾರತ' ಎಂದೂ 'ಕರ್ನಾಟ ಭಾರತ ಕಥಾಮಂಜರಿ' ಅಂತಲೂ ಕರೆಯುತ್ತಾರೆ. ಇದು ಭಕ್ತಿರಸ ಪ್ರಧಾನವುಳ್ಳ ಕೃತಿ. ಇದರಲ್ಲಿ ಭಗವಂತನಾದ ಶ್ರೀಕೃಷ್ಣನೇ ಕಥಾನಾಯಕನು.

**ಹಿನ್ನೆಲೆ :** ಯುಗದ ಕವಿ, ರಸ ಋಷಿಗಳು, ಪ್ರಕೃತಿ ಕವಿಯಾದ ಕುವೆಂಪು ಅವರು ಕುಮಾರವ್ಯಾಸನ ಬಗೆಗೆ;

"ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗವೂ ದ್ವಾಪರಕಾಲವಾಗುವುದು.." ಎಂದಿದ್ದಾರೆ. ಅದರಂತೆಯೇ ಈತನಿಗೆ ಕೃಷ್ಣನು ಸರ್ವಾಂತರ್ಯಾಮಿ, ಸರ್ವನಿಯಾಮಕ ಮತ್ತು ಸರ್ವೋತ್ತಮನಾದ್ದರಿಂದ ತನ್ನ ವ್ಯಾಸಭಾರತ ಕೃತಿಯಲ್ಲೂ ಶ್ರೀಕೃಷ್ಣನ ಮಹಿಮೆಯನ್ನೇ ಸಾರುವುದನ್ನು ಧ್ಯೇಯವಾಗಿಟ್ಟು ಕೊಂಡಿದ್ದಾನೆ. ಆದ್ದರಿಂದ ಈ ಕೃತಿಯಲ್ಲಿ ಶ್ರೀಕೃಷ್ಣಭಕ್ತಿಯ ದರ್ಶನವಾಗುತ್ತದೆ.

"ತಿಳಿಯ ಹೇಳುವೆ ಕೃಷ್ಣ ಕಥೆಯನು ಇಳೆಯ ಜಾಣರು ಮೆಚ್ಚುವಂದದಿ..."

-ಎಂದು ಪ್ರಾರಂಭಿಸುವ ಈ ಕೃತಿಯಲ್ಲಿ ಕವಿ ತನ್ನ ಸ್ವಂತ ಮನೋಧರ್ಮದಿಂದ ತನ್ನ ದೈವವಾದ ಶ್ರೀಕೃಷ್ಣನನ್ನು ಕೊಂಡಾಡುತ್ತಾ ಮೆರೆದಿದ್ದಾನೆ.

**ಶೈಲಿ :** ಈತನ ಕಾಲಕ್ಕಾಗಲೇ ಚಂಪೂ ಶೈಲಿಯ ಅಬ್ಬರ ಪೂರ್ಣವಾಗಿ ಇಳಿದಿತ್ತು. ಆದ್ದರಿಂದ ಈತನು ತನ್ನ ಈ ಕೃತಿಯನ್ನು 'ಷಟ್ಪದಿ'ಯಲ್ಲಿ ರಚಿಸಿದ್ದಾನೆ. "ರೂಪಕ ಸಾಮ್ರಾಜ್ಯ ಚಕ್ರವರ್ತಿ" ಎಂಬ ಬಿರುದಿಗೆ ಪಾತ್ರನಾದಂತೆ ಅಲಂಕಾರಗಳನ್ನು ಬಹಳ ಉನ್ನತ ಮಟ್ಟದಲ್ಲಿ ಸೊಗಸಾಗಿ ಬಳಸಿದ್ದಾನೆ. ಅಲಂಕಾರ ಸಹಿತವಾಗಿ ಬಂದದ್ದು ಕಾವ್ಯ... ಭಾಷೆಯಲ್ಲಿಯೂ ಸರಳ... ಇನ್ನು ಶ್ರೀಮಂತಿಕೆಯಿಂದ ಕೂಡಿದ ಸುಂದರವಾದ ಪದಜೋಡಣೆಗಳಿಂದ ಸೃಷ್ಟಿಯಾದ ಪದಪುಂಜವು ಭಗವಂತನ ಮಹಿಮೆಗಳನ್ನು ಹೊಗಳುವುದಕ್ಕಾಗಿಯೇ ಕುಮಾರವ್ಯಾಸನ ಈ ಕೃತಿಯಲ್ಲಿ ಮೀಸಲಾಗಿದೆ.

**ಕಥಾವಸ್ತು :** ಮೂಲ 'ವ್ಯಾಸಭಾರತ'ದ ಸಂಪ್ರದಾಯದಂತೆಯೇ ಕುಮಾರವ್ಯಾಸನೂ ಕೂಡಾ ಕಾವ್ಯವನ್ನು ಆರಂಭಿಸುತ್ತಾನೆ. 'ವ್ಯಾಸಭಾರತ'ದ ಮೊದಲ ಹತ್ತು ಪರ್ವಗಳನ್ನು ಮಾತ್ರ ಈತನು ತನ್ನ ಕಾವ್ಯದ ವ್ಯಾಪ್ತಿಗೊಳಪಡಿಸಿಕೊಂಡಿದ್ದಾನೆ. ಸಮಗ್ರ ಕಾವ್ಯಕೃತಿಯನ್ನು ಈತನು 'ಭಾಮಿನೀ ಷಟ್ಪದಿ'ಯಲ್ಲಿ ರಚಿಸಿದ್ದಾನೆ. ತಾನು 'ಭಾರತ ಕಥಾ ರಚನೆ'ಯಲ್ಲಿ ಪಂಪನಿಗಿಂತಲೂ ಕಡಿಮೆ ಏನೂ ಇಲ್ಲ ಇನ್ನೂ ಒಂದು ಕೈ ಮೇಲು'

ಎನ್ನುವ ಹುರುಪಿನೊಂದಿಗೆ ರಚಿಸಿರುವಂತೆಯೇ ತೋರುತ್ತದೆ. ಪಂಪ ರನ್ನರಿಗಾದರೋ ಭಾರತ ಒಂದು ಲೌಕಿಕ ಕೃತಿಯಾಗಿಯೇ ತೋರಿತು. ಅವರಿಬ್ಬರೂ ರಾಜಾಶ್ರಯದಡಿಯಲ್ಲಿದ್ದು ಕಾವ್ಯವನ್ನು ತಮ್ಮ ಆಶ್ರಯದಾತರನ್ನು ಸಂತೃಪ್ತಿಗೊಳಿಸಲು, ಸಂತೋಷಪಡಿಸುವುದೇ ಮುಖ್ಯ ಗುರಿಯಾಗಿ ಹೊಂದಿದ್ದರು. ಆದರೆ ಕುಮಾರವ್ಯಾಸನ ಈ ವಿಷಯದಲ್ಲಿ ಈ ಯಾವುದರ ಗೊಡವೆಯೂ ಆತನಿಗಿರಲಿಲ್ಲ. ಕೃಷ್ಣನೇ ನಾಯಕನಾದ ಈತನ ಈ ಕಾವ್ಯವು ಕವಿಯ ಕಾವ್ಯಪ್ರತಿಭೆಯೊಂದಿಗೆ ಕೃಷ್ಣಭಕ್ತಿಯೂ ಒಂದುಗೂಡಿ ಗಂಗಾಪ್ರವಾಹದಂತೆ ಪ್ರವಹಿಸಿದೆ. ಸಹೃದಯರಲ್ಲೂ ಇದೇ ಭಾವನೆ ಮೂಡಿಸುವುದೇ ಕವಿಯ ಮುಖ್ಯ ಉದ್ದೇಶ. 'ಶ್ರೀ ಕೃಷ್ಣಚರಿತೆ'ಯಾಗಿ ಓದುಗರಲ್ಲೂ ಭಕ್ತಿಭಾವಗಳನ್ನು ಹೊರಹೊಮ್ಮಿಸುವುದರ ಜೊತೆಗೆ ಕುಮಾರವ್ಯಾಸನು ತನ್ನ ಈ ಭಾರತ ಕಥೆಯನ್ನು ರಾಜ–ಮಹಾರಾಜರ ಚರಿತ್ರೆ ಎಂದು ತಿಳಿದಿರುವುದರಿಂದ ಇದರಲ್ಲೂ ದಾಯಾದಿ ಮತ್ಸರ, ವಂಶಕ್ಷಯದ ಕಥೆಗೆ ಮೂಲ ಹೆಣ್ಣಿನ ಕಣ್ಣೀರೇ ಆಗಿದೆ. ಹೀಗಾಗಿ 'ಯುದ್ಧ ಸನ್ನಿವೇಶ'ಕ್ಕೆ ಕುಮಾರವ್ಯಾಸ ಅತೀ ಹೆಚ್ಚಿನ ಮಹತ್ವವನ್ನೂ ಕೊಟ್ಟಿದ್ದಾನೆ. ಆದ್ದರಿಂದ ಈತನ ಈ ಕಾವ್ಯವು ಕೃಷ್ಣಭಕ್ತಿಯ ಭಕ್ತಿರಸ ಕೃತಿ ಎನ್ನುವುದಕ್ಕಿಂತಲೂ ಮಿಗಿಲಾಗಿ ಒಂದು 'ವೀರರಸ ಪ್ರಧಾನ'ವಾದ ಕೃತಿ ಎನ್ನುವಷ್ಟರ ಮಟ್ಟಿಗೆ ದುರ್ಯೋಧನ, ಕರ್ಣನ ಪಾತ್ರಗಳು ಮತ್ತು ಇವರ ವ್ಯಕ್ತಿತ್ವವನ್ನು ತೀರಾ ವಿಭಿನ್ನವಾಗಿ, ವೈಶಿಷ್ಟ್ಯಪೂರ್ಣವಾಗಿಯೂ ಚಿತ್ರಿಸಿದ್ದಾನೆ. ಇದೇ ಈತನ ಈ ಕೃತಿಯ ಮುಖ್ಯ ವಿಶೇಷ.

ಕುಮಾರವ್ಯಾಸ ಇಂತಹ 'ಇತಿಹಾಸ ಕಾವ್ಯ'ವನ್ನು ಕಾವ್ಯವಸ್ತುವಾಗಿ ಹೊಂದಿದಾಗ ಸುಮಾರು ಒಂದು ಲಕ್ಷ ಶ್ಲೋಕಗಳಿಗಿಂತಲೂ ಅಧಿಕವಾಗಿರುವಂತಹ ಕೃತಿಯನ್ನು ಆಕರವಾಗಿ ಹೊಂದಿದಾಗ ಅದನ್ನು ಕೇವಲ ೮,೫೦೦ ಶ್ಲೋಕ ಅಥವಾ ಪದ್ಯಗಳಿಗೆ ಸಂಗ್ರಹಿಸುವಲ್ಲಿ ಅನೇಕ ಸುಂದರ ಸನ್ನಿವೇಶಗಳನ್ನು ಕೈಬಿಡಬೇಕಾಯಿತು. ಅನೇಕ ಉಪಾಖ್ಯಾನಗಳನ್ನೂ, ನೀತಿಬೋಧೆಗಳನ್ನೂ ಕತ್ತರಿಸಿದ್ದಾನೆ. ಕೆಲವು ಹೊಸ ವಿಷಯಗಳನ್ನೂ ಸೇರಿಸಿದ್ದಾನೆ. ಮುಖ್ಯ ಕಥಾಂಶವನ್ನು ಮಾತ್ರ ಸೂಚಿಸಿ ಉಳಿದ ನಿರ್ಧಾರ, ವಿವರಗಳನ್ನೆಲ್ಲಾ ಓದುಗರ ಊಹೆಗೇ ಬಿಡುತ್ತಾನೆ. 'ಮಹಾಭಾರತ ಕಥೆಯಾಗಲೀ, ಪಾತ್ರಗಳಾಗಲೀ ಜನರಿಗೆ ಹೊಸದೇನಲ್ಲಾ.. ಸಾವಿರಾರು ವರ್ಷಗಳಿಂದಲೂ ರಕ್ತಗತವಾಗಿದೆ. ಹೇಗಿದ್ದರೂ ಗೊತ್ತಿರುವ ಕಥೆಯಷ್ಟೇ! ವಿಶೇಷವಿದ್ದೆಡೆಗಳಲ್ಲಿ ಮಾತ್ರ ವಿವರಿಸೋಣಾ..' ಎನ್ನುವುದು ಈತನ ಅಭಿಪ್ರಾಯ. ಹೀಗಾಗಿ ಮೂಲದಲ್ಲಿರುವ ಅನೇಕ ವಿವರಗಳನ್ನು ಪ್ರಸ್ತಾಪಿಸುವುದಿಲ್ಲ.

**'ಕುಮಾರವ್ಯಾಸ ಭಾರತ'ದ ವಿಶಿಷ್ಟ ಪ್ರಸಂಗಗಳು ಮತ್ತು 'ವ್ಯಾಸಭಾರತ'ದಿಂದ ಬದಲಾವಣೆಗೊಳಿಸಿರುವ ಪ್ರಸಂಗಗಳು :**

**೧. ಶಂತನು, ಗಂಗಾ, ಸತ್ಯವತಿ, ಅಂಬೆ, ಅಂಬಿಕೆ, ಅಂಬಾಲಿಕೆಯರ ಪ್ರಸಂಗ :**

ಮಹಾಭಿಷಕ್ ರಾಜನೆ ಶಂತನುವಾಗಿ ಜನಿಸುವ ಕಥೆಯ ವಿವರ, ಅಷ್ಟವಸುಗಳು ವಸಿಷ್ಠನಿಂದ ಶಾಪಗೊಂಡ ಕಥೆ, ಶಂತನು–ಗಂಗೆ ಒಪ್ಪಂದದ ಸಂಗತಿ, ಉಪರಿಚರ ರಾಜನಿಂದ ಮತ್ಸ್ಯಗಂಧಿಯ ಜನನ, ಸತ್ಯವರಿ ಪರಾಶರ–ರಿಂದ ವ್ಯಾಸನ ಜನನ ಈ ಎಲ್ಲಾ ವೃತ್ತಾಂತಗಳನ್ನೂ ಕುಮಾರವ್ಯಾಸನು ಕೈಬಿಟ್ಟಿದ್ದಾನೆ. ಶಂತನು ಮಹಾರಾಜನು ಒಮ್ಮೆ ಬೇಟೆಯಾಡಲು ಕಾಡಿಗೆ ಹೋಗಿದ್ದಾಗ ಅಲ್ಲಿನ ಪರಿಮಳದ ಹಾದಿಯನ್ನೇ ಹಿಡಿದು ಹೋಗಿ ಯೋಜನಗಂಧಿಯನ್ನು ಕಂಡು ಅವಳ ಸೌಂದರ್ಯಕ್ಕೆ ಮಾರು ಹೋಗಿ ಕಾಮನ ಶರಕ್ಕೆ ಮೈಯೊಡ್ಡಿದಂತಾಗಿ ಅರಮನೆಗೆ ನಡೆ ಎನಲು ಅವಳು ತಂದೆಯ ಅನುಮತಿಯನ್ನು ಪಡೆಯಬೇಕೆನ್ನುವುದು ಇದರಿಂದ ಭಗ್ನಮೋಹಿತನಾಗಿ ವಿರಹವೇದನೆಯೊಂದಿಗೆ ಭಾರವಾದ ಹೃದಯವನ್ನು ಹೊತ್ತು ಅರಮನೆಗೆ ಹಿಂತಿರುಗುವುದು, ತಂದೆಯ ದುಃಖಕ್ಕೆ ಭೀಷ್ಮನು ಕಾರಣವೇನೆಂದು ಕೇಳಲು ವಂಶಾಭಿವೃದ್ಧಿಗೆ ಒಬ್ಬ ಪುತ್ರ ಪುತ್ರನಲ್ಲ; ಒಂದು ಕಣ್ಣು ಕಣ್ಣಲ್ಲ ಎಂದು ಶಂತನು ಉತ್ತರಿಸುವುದು, ಪುನಃ ಮತ್ತೊಂದು ಸಂತಾನದ ಬಯಕೆಯನ್ನು ಮುಂದಿಟ್ಟು ವಿವಾಹವಾಗಬೇಕೆನ್ನುವ ಅಪೇಕ್ಷೆಯನ್ನು ತನ್ನ ಮಗನ ಮುಂದಿಡುವುದು.. ಅನಂತರ ಭೀಷ್ಮನು ಸಾರಥಿಯಿಂದ ನಿಜ ವಿಷಯವನ್ನರಿತು ದಾಶರಾಜನ ಮನೆಗೆ ಹೋಗಿ ಕನ್ಯಾಭಿಕ್ಷೆಯನ್ನು ಬೇಡುವುದು – ಈ ಯಾವ ವಿಷಯವೂ 'ಕುಮಾರವ್ಯಾಸಭಾರತ'ದಲ್ಲಿಲ್ಲ. ಈ ಎಲ್ಲಾ ವಿಷಯಗಳನ್ನೂ ಕವಿ ಕೈಬಿಟ್ಟಿದ್ದಾನೆ. ಪಂಪನಂತೆಯೇ ಕುಮಾರವ್ಯಾಸನೂ ಕೂಡಾ ಶಂತನುವಿನ ವ್ಯಕ್ತಿತ್ವಕ್ಕೆ ತಗಲಬಹುದಾದ ಕಳಂಕದಿಂದ ದೂರ ಮಾಡುವುದರ ಜೊತೆಗೆ ಭೀಷ್ಮನ ವ್ಯಕ್ತಿತ್ವದ ಘನತೆಯನ್ನು ಇಮ್ಮಡಿಗೊಳಿಸಿದ್ದಾನೆ.

**೨. ಸ್ವಯಂವರದ ಪ್ರಸಂಗ :**

'ಆದಿಪರ್ವ'ದಲ್ಲಿ ಬರುವಂತಹ ಕಾಶೀರಾಜನ ಮಕ್ಕಳಾದ ಅಂಬೆ, ಅಂಬಿಕೆ, ಅಂಬಾಲಿಕೆಯರ ಸ್ವಯಂವರದ ವೃತ್ತಾಂತವನ್ನೂ ಕುಮಾರವ್ಯಾಸನು ಪೂರ್ಣವಾಗಿ ತ್ಯಜಿಸಿದ್ದಾನೆ.

**೩. ನಿಯೋಗದ ಪ್ರಸಂಗ :**

ಸತ್ಯವತಿ ತನ್ನ ಮಗನಾದ ವ್ಯಾಸಋಷಿಗಳನ್ನು ಕರೆಯಿಸಿ ಅಂಬಿಕೆ, ಅಂಬಾಲಿಕೆಯರಲ್ಲಿ ಸಂತಾನೋತ್ಪತ್ತಿಗಾಗಿ 'ನಿಯೋಗ'ವನ್ನು ವಿವರಿಸುವುದಾಗಲೀ, ವ್ಯಾಸನು ಒಂದು ವರ್ಷ ವ್ರತಾಚರಣೆಯನ್ನು ಹೇಳಿ ಅದನ್ನು ಪೂರೈಸಿದ ನಂತರ ತನ್ನನ್ನು ಕೂಡಬಹುದೆಂದು ಮೊದಲು ಹೇಳುವುದು, ಅನಂತರ ಸತ್ಯವತಿ ಒತ್ತಾಯದ ಮೇರೆಗೆ ಆ ಕೂಡಲೇ ಗರ್ಭದಾನ ಮಾಡಲು ಒಪ್ಪಿಕೊಳ್ಳುವುದು – ಈ ಯಾವುದೂ 'ಕುಮಾರವ್ಯಾಸ ಭಾರತ'ದಲ್ಲಿಲ್ಲ.

**೪. ಧೃತರಾಷ್ಟ್ರ, ಪಾಂಡು, ವಿದುರರ ಜನನದ ಪ್ರಸಂಗ :**

ಇವರ ಜನನದ ವಿಚಾರವೂ ಕುಮಾರವ್ಯಾಸನಿಗೆ ಅಪ್ರಾಕೃತ. ಆದ್ದರಿಂದ ಅವನು ಈ ಎಲ್ಲವನ್ನೂ ಕೈಬಿಟ್ಟಿದ್ದಾನೆ. ಧೃತರಾಷ್ಟ್ರನೇಕೆ ಅಂಧನಾಗಿ ಜನಿಸಿದ, ಪಾಂಡು ಏಕೆ ರೋಗಿಷ್ಟನಾಗುತ್ತಾನೆ? ವಿದುರನೇಕೆ ಶೂದ್ರ ಹೆಂಗಸಿನಲ್ಲಿ ಜನಿಸುತ್ತಾನೆ? – ಈ ಯಾವ ವಿವರಣೆಗಳನ್ನೂ ಕವಿ ಪ್ರಸ್ತಾಪಿಸುವುದಿಲ್ಲ.

**೫. ಧೃತರಾಷ್ಟ್ರನ ವಿವಾಹ ಮತ್ತು ನೂರು ಜನ ಕೌರವರ ಜನನದ ಪ್ರಸಂಗ :**

ಅಂಧನಾದ ಧೃತರಾಷ್ಟ್ರನಿಗೆ ತನ್ನ ಮಗಳನ್ನು ಕೊಡಲು ಇಷ್ಟವಿಲ್ಲದಿದ್ದರೂ ವಂಶಗೌರವವನ್ನು ನೋಡಿ ಕೊಟ್ಟನೆನ್ನುವುದು, ಗಾಂಧಾರ ದೇಶದ ರಾಜ ಸುಬಲನು ತನ್ನ ಉಳಿದ ಹತ್ತೂ ಮಂದಿ ಹೆಣ್ಣು ಮಕ್ಕಳನ್ನೂ ಧೃತರಾಷ್ಟ್ರನಿಗೇ ಕೊಟ್ಟು ವಿವಾಹ ಮಾಡಿದನೆನ್ನುವುದಾಗಲೀ ಅಥವಾ ಭೀಷ್ಮನು ನೂರಾರು ರಾಜಕನ್ಯೆಯರನ್ನು ತಂದು ಧೃತರಾಷ್ಟ್ರನಿಗೆ ಲಗ್ನ ಮಾಡಿಸಿದನು ಎನ್ನುವ ಯಾವ ವಿಚಾರಗಳನ್ನೂ ಕುಮಾರವ್ಯಾಸ ಹೇಳುವುದಿಲ್ಲ.

ಗಾಂಧಾರಿಯು ಒಮ್ಮೆ ಹಸಿವು ಬಾಯಾರಿಕೆಗಳಿಂದ ಬಳಲ್ಲಿದ್ದಂತಹ ವ್ಯಾಸರನ್ನು ತನ್ನ ಆದರಾತಿಥ್ಯಗಳಿಂದ ಸಂತುಷ್ಟಗೊಳಿಸಿದ್ದರಿಂದ ಆಕೆಯ ಕೋರಿಕೆಯ ಮೇರೆಗೆ ಅವಳಿಗೆ ನೂರು ಮಕ್ಕಳು ಜನಿಸುವಂತೆ ಅನುಗ್ರಹಿಸಿ ಹೋಗುತ್ತಾರೆ ಎಂದು ವ್ಯಾಸಭಾರತದಲ್ಲಿದೆ. ಆದರೆ ಕುಮಾರವ್ಯಾಸನು ಇದನ್ನು ಸ್ವಲ್ಪ ವಿಭಿನ್ನವಾಗಿಯೇ ವಿಶ್ಲೇಷಣೆ ಮಾಡುತ್ತಾನೆ.

ಸಂತಾನವಿಲ್ಲದೆ ಧೃತರಾಷ್ಟ್ರನು ಬಹಳ ದುಃಖಿತನಾಗಿರುತ್ತಾನೆ. ಚಿಂತಾಭಾರದಿಂದ ಬಹಳವಾಗಿ ಬಳಲುತ್ತಾನೆ. ಈ ಕೊರತೆ ಹೇಗಾದರೂ ನೀಗಬಾರದೇ ಎಂದು ಹಂಬಲಿಸುತ್ತಾನೆ.

**೬. ಶೂರಸೇನ ದತ್ತು ನೀಡುವ ಪ್ರಸಂಗ :**

ಶೂರಸೇನ ರಾಜನು ತನ್ನ ಪುತ್ರಿ ಕುಂತಿಯನ್ನು ಕುಂತಿಭೋಜನಿಗೆ ದತ್ತು ನೀಡುವ ಬಗ್ಗೆಯೂ ಯಾವ ವಿವರಣೆಯನ್ನೂ ಕೊಡುವುದಿಲ್ಲ.

**೭. ಕರ್ಣನ ಜನನ :**

ದೂರ್ವಾಸ ಋಷಿಗಳನ್ನು ಕುಂತಿ ಸತತವಾಗಿ ಒಂದು ವರ್ಷ ಕಾಲ ನಿರಂತರವಾಗಿ ಉಪಚರಿಸಿದ್ದಕ್ಕಾಗಿ ಸಂತೃಪ್ತಿಗೊಂಡ ದೂರ್ವಾಸ ಒಂದು ದಿವ್ಯ ಮಂತ್ರವನ್ನು ಉಪದೇಶಿಸಿದನೆಂದು ಇರುವುದನ್ನು ಕುಮಾರವ್ಯಾಸನು ಸ್ವಲ್ಪ ಬದಲಾವಣೆ ಮಾಡಿ, 'ಒಂದು ದಿನ ದೂರ್ವಾಸ ಮುನಿಗಳನ್ನು ಉಪಚರಿಸಿದಳೆಂದು ಇದರಿಂದ ಸಂತುಷ್ಟಗೊಂಡ ಮುನಿ ಐದು ಮಂತ್ರಗಳನ್ನು ಉಪದೇಶಿಸಿ ಸಂತೋಷದಿಂದ ತನ್ನಾಶ್ರಮಕ್ಕೆ ಹೊರಟುಹೋದನು' ಎಂದು ಸೇರಿಸುತ್ತಾನೆ.

ಕುಂತಿ–ಸೂರ್ಯರ ದೇಹಸಂಸರ್ಗದಿಂದ ಕರ್ಣನ ಜನನವಾಯಿತು ಎಂದು ಕುಮಾರವ್ಯಾಸ ಹೇಳುವುದಿಲ್ಲ. ಅದಕ್ಕೆ ಬದಲಾಗಿ 'ಕನ್ಯೆಯನು ಮುಟ್ಟಿದನು ತನ್ನ ರಥವಿದ್ದೆಡೆಗೆ ರವಿ ತಿರುಗಿದನು..' ಎಂದು ಹೇಳಿ ತೇಲಿಸಿಬಿಡುತ್ತಾನೆ.

ನೀರಿನಲ್ಲಿ ತೇಲಿಬಿಟ್ಟ ಮುತ್ತುರತ್ನಗಳೊಡನೆ ಮಗುವನ್ನು ಇಟ್ಟಿದ್ದ ಪೆಟ್ಟಿಗೆಯನ್ನು ಸೂತನೊಬ್ಬನು ನೋಡಿ ಮನೆಗೆ ಎತ್ತಿಕೊಂಡು ಹೋದನು ಎಂದಿರುವುದನ್ನು ಕುಮಾರವ್ಯಾಸನು, 'ಸಕಲ ಲೋಕದ ತಾಯೆನಿಸಿದ ಜಾಹ್ನವಿಯೇ ತನ್ನ ತರಂಗಗಳಿಂದ ಮಗುವನ್ನು ಮುಳಗಲೀಯದೆ, ನೋಯಲೀಯದೆ ತಂದು ದಡಕ್ಕೆ ಸೇರಿಸಿದಳು.' ಎನ್ನುತ್ತಾನೆ.

**೮. ಪಾಂಡು ಶಾಪಕ್ಕೊಳಗಾಗುವ ಪ್ರಸಂಗ :**

ರಮಿಸುತ್ತಿದ್ದಂತ ಜಿಂಕೆಗಳನ್ನು ಬಾಣದಿಂದ ಹೊಡೆದು ಕೊಲ್ಲುವುದಾಗಲೀ, ಇದು ಮಹಾದೋಷವೆಂದು ಪಾಂಡು ಧರ್ಮ ಜಿಜ್ಞಾಸೆಗೊಳಗಾಗುವುದಾಗಲೀ ಯಾವುದನ್ನೂ ಕುಮಾರವ್ಯಾಸನು ಹೇಳುವುದಿಲ್ಲ.

**೯. ಪಾಂಡವರ ಜನನ :**

ಸಂತಾನವಿಲ್ಲದೇ ಮೂಲ ಕೃತಿಯ ಪಾಂಡು ಬಹಳ ದುಃಖಕ್ಕೊಳಗಾಗುತ್ತಾನೆ, ಕೊರಗುತ್ತಾನೆ. ಮಕ್ಕಳಿಲ್ಲದ ಚಿಂತೆ ಪಾಂಡುವನ್ನು ಬಹಳವಾಗಿ ಕಾಡಿಸುತ್ತದೆ, ಬಾಧಿಸುತ್ತದೆ. ಹೀಗಾಗಿ ಅಷ್ಟೇ ಅಲ್ಲ; ತನಗೆ ಸಮಾನನಾದ ಉತ್ತಮ ಕುಲದ ಬ್ರಾಹ್ಮಣರಿಂದ ತನ್ನ ಕ್ಷೇತ್ರದಲ್ಲಿ ಸಂತಾನ ಪಡೆಯುವಂತೆ ಪತ್ನಿಯನ್ನು ಪ್ರೇರೇಪಿಸುತ್ತಾನೆ. ಆದರೆ ಈ ಪ್ರಸಂಗವನ್ನು ಕುಮಾರವ್ಯಾಸನು ಬಹಳ ಭಿನ್ನರೀತಿಯಿಂದ ಚಿಂತಿಸುತ್ತಾನೆ. ಕುಮಾರವ್ಯಾಸನ ಪಾಂಡು ಬಹಳ ವೈರಾಗ್ಯನಿಧಿಯಂತೆ ಚಿತ್ರಿಸಲ್ಪಟ್ಟಿದ್ದಾನೆ. ಅವನು ಈ ಯಾವುದನ್ನೂ ಮಾಡುವುದಿಲ್ಲ. ಇದರ ಬದಲಿಗೆ ಕುಂತಿ–ಮಾದ್ರಿಯರೇ ತಮಗೆ ಸಂತತಿ ಇಲ್ಲದ್ದಕ್ಕಾಗಿ ಬಹಳ ಮರುಗುತ್ತಾರೆ ಮತ್ತು ಸಂತಾನವನ್ನು ಬಯಸುತ್ತಾರೆ. ಕುಂತಿಯೇ ರಹಸ್ಯವಾಗಿ ಪಾಂಡು ಬಳಿಗೆ ಹೋಗಿ ತನ್ನ ಹೃದಯದ ತಳಮಳವನ್ನು ಬಿನ್ನಹ ಮಾಡಿಕೊಳ್ಳುತ್ತಾಳೆ. ವ್ಯಾಸಮುನಿಯು ತನಗೆ ಕರುಣಿಸಿದ ವರದಿಂದ ಗಾಂಧಾರಿಗೆ ನೂರು ಮಕ್ಕಳು ಜನಿಸಿದಂತೆ ತಾನೂ ಕೂಡಾ ದೂರ್ವಾಸರಿಂದ ಪಡೆದು ಐದು ವರಗಳನ್ನು ನೆನಪಿಸುತ್ತಾಳೆ ಮತ್ತು ಅದನ್ನು ಸ್ವಯಂ ಪ್ರೇರಣೆಯಿಂದ ಬಳಸಿಕೊಳ್ಳಲು ತಾನು ಮುಂದಾಗಲು ಇಚ್ಛಿಸುವುದಾಗಿ ಅವನಿಗೆ ವ್ಯಕ್ತಪಡಿಸುತ್ತಾಳೆ.

**೧೦. ಕೃಪ ಮತ್ತು ದ್ರೋಣರ ಜನನದ ಪ್ರಸಂಗ :**

ಇವರಿಬ್ಬರ ಜನನಕ್ಕೆ ಕಾರಣರಾದವರು ಜಾಲವತಿ ಮತ್ತು ಘೃತಾಚಿ ಎಂದು ಹೇಳದೇ ಸುರವಧು, ದಿವಿಜಾಂಗನೆ ಎಂದಷ್ಟೇ ಹೇಳಿ ಕುಮಾರವ್ಯಾಸನು ಉಳಿದ ವಿಷಯವನ್ನೆಲ್ಲಾ ತೇಲಿಸಿ ಬಿಡುತ್ತಾನೆ. ಇದರಿಂದ ಈ ಘಟನೆಗಳ ಬಗೆಗೆ ಕವಿಗಿರುವ ನಿರಾಸಕ್ತಿಯನ್ನು ತೋರಿಸುತ್ತದೆ.

**೧೧. ಕರ್ಣನ ಕುಲದ ಬಗ್ಗೆ ಉದ್ಭವಿಸುವ ಪ್ರಶ್ನೆಯ ಪ್ರಸಂಗ :**

ಪಾಂಡವರು–ಕೌರವರ ಶಸ್ತ್ರಾಸ್ತ್ರಗಳ ವಿದ್ಯಾಭ್ಯಾಸವೆಲ್ಲವೂ ಮುಗಿದ ನಂತರ ಪ್ರತಿಭಾ ಪ್ರದರ್ಶನದ ವೇಳೆಯಲ್ಲಿ, 'ಕುಲ, ಗೋತ್ರಗಳೊಂದೂ ಯಾವುದೆಂದು ತಿಳಿಯದವನ ಜೊತೆಯಲ್ಲಿ ದ್ವಂದ್ವಯುದ್ಧ ಮಾಡಲು ಸಾಧ್ಯವಿಲ್ಲ.' ಎಂದು ಕೃಪ ಕರ್ಣನ ಕುಲಗೋತ್ರಗಳ ಕುರಿತಾಗಿ ಪ್ರಶ್ನಿಸುವುದೂ ಇದರಿಂದ ಕರ್ಣ ದುಃಖದೊಡನೆ ಅಂತರ್ಮು–ಖಿಯಾಗುವುದು ಎಲ್ಲವೂ ಮೂಲ ಕೃತಿಯಲ್ಲಿದ್ದರೆ; ಕುಮಾರವ್ಯಾಸನ ದ್ವಂದ್ವಯುದ್ಧದ ಕ್ರಮದಲ್ಲಿ ಈ ಯಾವ ಜಿಜ್ಞಾಸೆಗಳೂ ಬರುವುದಿಲ್ಲ. "ಈತನರಸಲ್ಲೆಂದು ಕೃಪ ಹಳಿಮತನೆ? ತಪ್ಪೇನು? ರಾಜ್ಯದೊಳು ಈತನರಸೆನಿಸುವೆನು" ಎಂದು ಹೇಳಿ ದುರ್ಯೋಧನನು ಆ ಕೂಡಲೇ ಪುರೋಹಿತರನ್ನು ಕರೆಯಿಸಿ ಅಂಗದೇಶದ ಅರಸನನ್ನಾಗಿಸುತ್ತಾನೆ.

**೧೨. ದ್ರೌಪದಿಯ 'ಪಂಚ ಪತಿತ್ವ' ಅಥವಾ 'ಬಹುಪತಿತ್ವ'ದ ಪ್ರಸಂಗ :**

ದ್ರುಪದನ ಪತ್ನಿಯ ಕೋರಿಕೆಯಂತೆ ಯಾಜೋಪಯಾಜರು ದ್ರೌಪದಿಗೆ ಐವರು ಪತಿಗಳಾಗುವಂತೆ ಮಾಡಿದರೆಂಬ ವಿಷಯ ಕುಮಾರವ್ಯಾಸ ಹೇಳುವುದಿಲ್ಲ. ದ್ರೌಪದಿಯ "ಪಂಚ ಪತಿತ್ವ"ವನ್ನು ಸಮರ್ಥಿಸುವ

ಸಂದರ್ಭದಲ್ಲಿ ವ್ಯಾಸ ದ್ರುಪದನಿಗೆ ಹೇಳುವ ನಿತಂತುವಿನ ಐವರು ಮಕ್ಕಳಿಗೆ ಭೌಮಾಶ್ವಿಯೊಬ್ಬಳೇ ಪತ್ನಿಯಾಗಿ ಐವರಿಂದಲೂ ಪುತ್ರರನ್ನು ಪಡೆದ ಕಥೆಯೂ ಇಲ್ಲ. –ಈ ಎಲ್ಲವನ್ನೂ ಕುಮಾರವ್ಯಾಸನು ಕೈಬಿಟ್ಟಿದ್ದಾನೆ. ದ್ರೌಪದಿಯ 'ಬಹುಪತ್ನಿತ್ವ'ವನ್ನು ಪಾಪಹೇತುವಾಗುವುದೆಂದು ದೃಷ್ಟದ್ಯುಮ್ನನು ತನ್ನ ತಂದೆಗೆ ಹೇಳುವುದು, ಯುಧಿಷ್ಠಿರ "ಬಹುಪತಿತ್ವ"ವನ್ನು ಸಮರ್ಥಿಸುತ್ತಾ ಜಟ್ಟಲೆ ಮತ್ತು ವಾರ್ಕ್ಷಿಗಳ ನಿದರ್ಶನಗಳನ್ನು ಹೇಳುವುದು –ಈ ಯಾವುದೂ ಕುಮಾರವ್ಯಾಸಭಾರತದಲ್ಲಿಲ್ಲ. ಬದಲಾಗಿ ಬಹಳ ಸಂಕ್ಷಿಪ್ತವಾಗಿ ನಾರಾಯಣಿ ಮತ್ತು ಐವರು ಇಂದ್ರರ ಕಥೆಯನ್ನು ಮಾತ್ರ ಹೇಳುತ್ತಾನೆ.

### ೧೩. ದ್ಯೂತಕ್ಕೆ ಪ್ರೇರಣೆಯಾಗುವ ಪ್ರಸಂಗ :

ಮಯಾಸಭೆಯಲ್ಲಿ ತಾನು ಅನುಭವಿಸಿದಂತಹ ಪರಿಭವ, ನೋವು–ಹಿಂಸೆ, ಯಾತನೆಗಳನ್ನು ದುರ್ಯೋಧನನು ಹಸ್ತಿನಾವತಿಗೆ ಹಿಂತಿರುಗುವ ಮಾರ್ಗದಲ್ಲಿ ಶಕುನಿಗೆ ಹೇಳಿಕೊಂಡು ವ್ಯಥೆ ಪಡುತ್ತಾನೆ. ಮತ್ತು ಧರ್ಮರಾಯನು ತನ್ನ ಸರ್ವಸ್ವವನ್ನೂ, ಸೋದರರನ್ನೂ, ತನ್ನನ್ನೂ ಸೋತ ಮೇಲೆ ದ್ರೌಪದಿಯನ್ನೊಡ್ಡುವಂತೆ ಮೂಲ ಕೃತಿಯಲ್ಲಿ ಶಕುನಿ ಪ್ರೇರೇಪಿಸುತ್ತಾನೆ. ಆದರೆ ಇಲ್ಲಿ 'ಇದನ್ನು ಯುಧಿಷ್ಠಿರನೇ ಸ್ವಯಂ ಪ್ರೇರಣೆಯಿಂದ ಮಾಡುತ್ತಾನೆ.' ಎಂದಿದ್ದಾನೆ.

### ೧೪. ದ್ರೌಪದೀ ವಸ್ತ್ರಾಪಹರಣ :

ಮೂಲ ಕೃತಿಯ ಪ್ರಕಾರ, ದ್ರೌಪದೀ ವಸ್ತ್ರಾಪಹರಣ ಮಾಡುವಂತೆ ಕರ್ಣನು ದುಶ್ಶಾಸನನಿಗೆ ಆಜ್ಞೆ ಮಾಡುತ್ತಾನೆ. ಆದರೆ ಕುಮಾರವ್ಯಾಸನಿಗೆ ಕರ್ಣನ ಮೇಲೆ ಅತೀವ ಪ್ರೀತಿ ಇರುವುದರಿಂದ ಅವನ ವ್ಯಕ್ತಿತ್ವಕ್ಕೆ ಕಳಂಕ ತರಲು ಇಷ್ಟವಿಲ್ಲದೆ ಈ ಕೆಲಸವನ್ನು ದುರ್ಯೋಧನನಿಂದಲೇ ಮಾಡಿಸುತ್ತಾನೆ. ಕರ್ಣನ ವ್ಯಕ್ತಿತ್ವವನ್ನು ಉದಾತ್ತ ರೀತಿಯ ಗುಣಗಳಿಂದಲೇ ಚಿತ್ರಿಸಿದ್ದಾನೆ. ದ್ರೌಪದಿಯು ತಾನು ಜಿತಳೋ ಅಜಿತಳೋ ಎಂದು ಹಿರಿಯರಾದ ಕೌರವರಲ್ಲಿ ಮೊರೆಯಿಟ್ಟಾಗ ಭೀಷ್ಮನು ಅದನ್ನು 'ಧರ್ಮಜನೇ ನಿರ್ಧರಿಸಲಿ.' ಎಂದು ಮೂಲಕೃತಿಯಲ್ಲಿ ಹೇಳಿರುವಂತೆ ಇಲ್ಲಿ ಇಲ್ಲ.

### ೧೫. ಅನುದ್ಯೂತ ಪ್ರಕರಣ :

ಅನುದ್ಯೂತವಾದ ನಂತರ ಧರ್ಮರಾಯನು ಸಕಲವನ್ನೂ ಪಗಡೆಯಲ್ಲಿ ಸೋತ ಪರಿಣಾಮವಾಗಿ ಪಾಂಡವರು ಹದಿನಾಲ್ಕು ವರ್ಷ ವನವಾಸ ಮತ್ತು ಒಂದು ವರ್ಷ ಅಜ್ಞಾತವಾಸಕ್ಕೆ ಗುರಿಯಾಗುತ್ತಾರೆ. ವನವಾಸಕ್ಕೆ ಹೊರಟ ಅವರು ಕಾಮ್ಯಕವನವನ್ನು ತಲುಪಿದ್ದವರನ್ನು ಕೃಷ್ಣನು ಬಂದು ಭೇಟಿಯಾದಾಗ ದ್ರೌಪದಿಯು 'ದ್ಯೂತ ಸಭೆ'ಯಲ್ಲಿ ತನಗೊದಗಿದ ಕಷ್ಟಗಳನ್ನೆಲ್ಲಾ ವಿಸ್ತರಿಸಿ ಹೇಳುತ್ತಾಳೆ. ಆದರೆ ಕುಮಾರವ್ಯಾಸಭಾರತದಲ್ಲಿ ದ್ರೌಪದಿ ತನ್ನ ಮಾನಸಂರಕ್ಷಣೆಗೆ ಮಾಡಿದ ಹೋರಾಟ, ಪ್ರಯತ್ನಗಳನ್ನು ಮಾತ್ರ ವಿವರಿಸುತ್ತಾಳೆ.

### ೧೬. ವಿರಾಟಪರ್ವದ ಪ್ರಸಂಗ :

ಮಹಾಭಾರತದಲ್ಲೇ ಅತ್ಯಂತ ಸುಪ್ರಸಿದ್ಧವಾದ ಸಂದರ್ಭವೆಂದರೆ ಉತ್ತರಕುಮಾರನ ಹೆಂಗೆಳೆಯರ ಮುಂದಿನ ಹಾರಾಟ. ಕುಮಾರವ್ಯಾಸನು ತನ್ನ ಹಾಸ್ಯಪ್ರಜ್ಞೆಯೊಂದಿಗೆ ಅತೀವವಾಗಿ ಹಾಸ್ಯಸ್ಫುರಿಸುವ ಮೂಲಕ ಕನ್ನಡಿಗರಿಗೆ ಉತ್ತರಕುಮಾರನನ್ನು ಚಿರಪರಿಚಿತಗೊಳ್ಳುವಂತೆ ಮಾಡಿದ್ದಾನೆ. ಈ ಪ್ರಕರಣದಲ್ಲಿ ಕವಿ ಅದ್ಭುತ ಹಾಸ್ಯದೊಂದಿಗೆ ವಾಚಕರು ಬೆರಗುಗೊಳ್ಳುವಂತೆ ಮಾಡಿದ್ದಾನೆ.

### ೧೭. ಕೀಚಕ ವಧೆ ಪ್ರಸಂಗ :

ಕೀಚಕ ಸೈರಂಧ್ರಿಯನ್ನು ಸಭೆಗಟ್ಟಿಸಿಕೊಂಡು ಹೋಗಿ ಅವಳ ಕೂದಲನ್ನು ಹಿಡಿದೆಳೆಯುವುದು, ಕೆಡವಿ ಒದೆಯುವುದು, ಅಪಮಾನಗೊಳಿಸುವುದು.. ಈ ಯಾವುದನ್ನೂ ದಂಡಿಸದೇ ಮೌನದಿಂದ ಇದ್ದ ವಿರಾಟನನ್ನು ಸೈರಂಧ್ರಿಯು ಚೆನ್ನಾಗಿ ಬೈಯ್ಯುವುದು, ಭೀಮನು ದ್ರೌಪದಿಗೆ ಸೀತೆ, ಲೋಪಾಮುದ್ರೆ, ಸುಕನ್ಯೆ, ದಮಯಂತಿ ಮತ್ತಿತರ ನಿದರ್ಶನಗಳನ್ನು ಕೊಟ್ಟು ಸ್ವಲ್ಪ ದಿನಗಳ ಕಾಲ ತಾಳ್ಮೆಯಿಂದಿರುವಂತೆ ಉಪದೇಶಿಸುವುದು, ದ್ರೌಪದಿ

ಕೀಚಕನನ್ನು ರಹಸ್ಯವಾಗಿ ಕೊಲ್ಲುವಂತೆ ಭೀಮನನ್ನು ಪ್ರೇರೇಪಿಸುವುದು ಈ ಯಾವುದರ ವಿವರಣೆಯನ್ನೂ ಹೇಳುವುದಿಲ್ಲ.

**೧೮. ಗೋಗ್ರಹಣ ಪ್ರಸಂಗ :**

ಮೂಲ ಕೃತಿಯಲ್ಲಿ ವ್ಯಾಸರು ವಿರಾಟ ಪರ್ವದಲ್ಲಿ ಬರುವಂತಹ 'ಗೋಗ್ರಹಣ'ದಲ್ಲಿನ ಅತೀ ವಿಸ್ತಾರವಾದ "ಯುದ್ಧ ವರ್ಣನೆ"ಯನ್ನು ಹೆಚ್ಚು ಸ್ವಾರಸ್ಯಕರವಾಗಿರುವಂತೆ ರಚಿಸಿರುವುದನ್ನು ಕುಮಾರವ್ಯಾಸನು ತನ್ನ ಕೆಲವೇ ಕೆಲವು ಮಾತುಗಳಲ್ಲಿ ಮೊಟಕುಗೊಳಿಸಿದ್ದಾನೆ.

**೧೯. ಕರ್ಣನ ಔದಾರ್ಯದ ಗುಣ ಪ್ರಕಟಗೊಳ್ಳುವ 'ಕರ್ಣಪರ್ವ'ದ ಪ್ರಸಂಗ :**

'ವ್ಯಾಸಭಾರತ'ಕ್ಕಿಂತಲೂ 'ಕುಮಾರವ್ಯಾಸಭಾರತ'ದಲ್ಲಿ ಕರ್ಣನ ವ್ಯಕ್ತಿತ್ವ, ಅವನ ನಡತೆ, ಅವನ ಗುಣಗಳು ಬಹಳ ತದ್ವಿರುದ್ಧವಾಗಿಯೇ ಚಿತ್ರಿಸಿದ್ದಾನೆ. ಮೂಲ ಕೃತಿಯಲ್ಲಿ ಕರ್ಣನು ತನ್ನ ತಾಯಿಯಾದ ಕುಂತಿಯನ್ನು ಕ್ಷಣ ಕ್ಷಣಕ್ಕೂ ಅಲಕ್ಷ್ಯ ತೋರುತ್ತಾನೆ. ಅಗೌರವವನ್ನೇ ಸೂಚಿಸುತ್ತಿರುತ್ತಾನೆ. ಆದರೆ ಇಲ್ಲಿ ತಾಯಿಯಲ್ಲಿ ಕರ್ಣನಿಗೆ ಬಹಳ ಆದರ, ಗೌರವ, ಅಭಿಮಾನ, ಭಕ್ತಿ ಮೂಡಿ ಬರುತ್ತವೆ. ಅನೌದಾರ್ಯ ಇದ್ದ ಕಡೆಗಳಲ್ಲೆಲ್ಲಾ ಔದಾರ್ಯವೇ ಹೊರಹೊಮ್ಮಿಸುತ್ತಾನೆ ಕವಿ ಕುಮಾರವ್ಯಾಸ. ಕರ್ಣನ ಇಡೀ ವ್ಯಕ್ತಿತ್ವವನ್ನೇ ಕವಿ ಸಂಪೂರ್ಣ ರೂಪಾಂತರಗೊಳಿಸಿದ್ದಾನೆ.

ಇದಕ್ಕಾಗಿ ಕವಿ 'ಕರ್ಣಪರ್ವ'ವನ್ನು ಬಹಳ ವೈಶಿಷ್ಟ್ಯಪೂರ್ಣವಾಗಿ, ತೀರಾ ವಿಭಿನ್ನ ರೀತಿಯಲ್ಲೇ ಚಿತ್ರಿಸಿದ್ದಾನೆ. ಉಳಿದೆಲ್ಲಾ ಪರ್ವಗಳಿಗಿಂತಲೂ ಇದು ಬಹಳ ದೀರ್ಘವಾದ ಮತ್ತು ವಿಶೇಷವಾದ ಭಾಗವಾಗಿದೆ. ಕುಮಾರವ್ಯಾಸಭಾರತದಲ್ಲಿ 'ಯುದ್ಧ ಚಿತ್ರಣ'ಕ್ಕೆ ಅತೀ ಹೆಚ್ಚಿನ ಪ್ರಾಶಸ್ತ್ಯವಿರುವುದನ್ನು ಕಾಣುತ್ತೇವೆ.

ಇಡೀ ಮಹಾಭಾರತದಾದ್ಯಂತ ಅತ್ಯಂತ ಭೀಕರವಾದ, ನಾರುಣವಾದ ಘಟನೆಯೆಂದರೆ; 'ಕರ್ಣಪರ್ವ'ದಲ್ಲಿ ಬರುವಂತಹ **'ದುಶ್ಶಾಸನ ವಧೆ'**. ಅಂದು ತುಂಬಿದ ಸಭೆಯಲ್ಲಿ ದುಶ್ಶಾಸನನು ದ್ರೌಪದಿಗೆ ಮಾಡಿದ ಅಪಮಾನಕ್ಕಾಗಿ ಇಂದು ಭೀಮನು ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ಅವನ ವಿರುದ್ಧ ತೀರಿಸಿಕೊಂಡ ಪ್ರತೀಕಾರವಿದು.

**'ಕುಮಾರವ್ಯಾಸಭಾರತ'ದಲ್ಲಿ ಕಥನ ಸಂಕ್ಷಿಪ್ತತೆ ಮತ್ತು ಮುಖ್ಯ ಮಾರ್ಪಾಡುಗಳ ವಿಶ್ಲೇಷಣೆ :**

ಕರ್ಣನನ್ನು ಸೇನಾಧಿಪತಿಯನ್ನಾಗಿ ಒಪ್ಪಿಸುವ ಸಂದರ್ಭದಲ್ಲಿನ ಕೆಲವು ವಿವರಗಳನ್ನು ಕುಮಾರವ್ಯಾಸನು ಕೈಬಿಟ್ಟಿದ್ದಾನೆ.

ಸಮಸ್ತ ಪರಿವಾರ ಪ್ರಸ್ತಾಪ ಮಾಡಿದುದಾಗಿಯೂ ಕೃಪಾಚಾರ್ಯ, ಅಶ್ವತ್ಥಾಮ ಒಪ್ಪಿ ವಿಷಯ ತಿಳಿಸುತ್ತಾನೆ.

'ವ್ಯಾಸಭಾರತ'ದಲ್ಲಿ ಈ ಪ್ರಸಂಗವು ಒಂದು ಅಧ್ಯಾಯದಷ್ಟು ದೊಡ್ಡದಾಗಿದೆ. ಸ್ವತಃ ದುರ್ಯೋಧನ ಕರ್ಣನ ಬಳಿ ಹೋಗಿ ಕೇಳಿಕೊಳ್ಳುತ್ತಾನೆ. ಭೀಷ್ಮ, ದ್ರೋಣರು ತನ್ನ ಪರವಾಗಿ ಹೋರಾಡಿದರೂ ಅವರು ಹೇಗೆ ಪಾಂಡವರ ಪಕ್ಷಪಾತಿಗಳಾಗಿದ್ದರು ಎಂಬುದನ್ನು ವಿವರಿಸಿ ಅವರು ಪಾಂಡವರನ್ನು ರಕ್ಷಿಸಿದರು ಎನ್ನುತ್ತಾನೆ. ಆ ಇಬ್ಬರನ್ನೂ ನಿನ್ನ ಸೂಚನೆಯ ಮೇರೆಗೆ ಸೇನಾಧಿಪತಿಗಳನ್ನಾಗಿ ಮಾಡಿದೆ. ನೀನು ಎಲ್ಲರಿಗಿಂತ ಪರಾಕ್ರಮಿ, ಎಲ್ಲಕ್ಕಿಂತ ಹೆಚ್ಚಾಗಿ ನನ್ನ ಪರಮ ಮಿತ್ರ, ನೀನು ಸೇನಾಧಿಪತಿಯಾಗು ಎಂದು ಕೇಳುತ್ತಾನೆ. ಕರ್ಣನಿಗೆ ಪಟ್ಟಗಟ್ಟಿದ ಸಂದರ್ಭ ಅನೇಕ ವಿವರಗಳಿಂದ ವರ್ಣಿತಗೊಂಡಿದೆ.

೧೬ನೇ ದಿನದ ಯುದ್ಧದಲ್ಲಿ ಯಾರು ಯಾರೊಡನೆ ಮಾತಾಡಿದರು ಎಂಬುದರಲ್ಲಿ ವ್ಯತ್ಯಾಸವಿಲ್ಲ.

'ವ್ಯಾಸಭಾರತ'ದಲ್ಲಿ ಅಂದು ರಾತ್ರೆ ಮಂತ್ರಾಲೋಚನೆ ನಡೆಯುತ್ತದೆ. ಯುದ್ಧದ ರೀತಿ, ನೀತಿ, ಸಿದ್ಧತೆ–ಇವೇ ಮೊದಲಾದ ವಿಚಾರಗಳು ಚರ್ಚಿತಗೊಳ್ಳುತ್ತವೆ. ತಾನು ಮಾರನೇ ದಿನ ಅರ್ಜುನನೊಡನೆ ಹೋರಾಡುವುದಾಗಿ ತಿಳಿಸಿ, ತನಗೂ, ಅರ್ಜುನನಿಗೂ ಇರುವ ಶಕ್ತಿ ಸಾಮರ್ಥ್ಯದ ಬಲ ಮತ್ತು ಮಿತಿಗಳನ್ನು ಕರ್ಣನು ದುರ್ಯೋಧನನಿಗೆ ವಿವರಿಸುತ್ತಾನೆ.

ಸಮರ್ಥ ಸಾರಥಿಯೊಬ್ಬನ ಅಗತ್ಯವಿರುವುದನ್ನು ಸ್ಪಷ್ಟಪಡಿಸುತ್ತಾನೆ. ಶಲ್ಯನನ್ನು ಸಾರಥಿಯನ್ನಾಗಿ ಮಾಡು ಎಂದು ಕೇಳಿಕೊಳ್ಳುತ್ತಾನೆ. ಈ ಸಂಭಾಷಣೆಯಲ್ಲಿ ಅರ್ಜುನ, ಕೃಷ್ಣ ಮತ್ತು ಕರ್ಣ, ಶಲ್ಯರ ಶಕ್ತಿ ಸಾಮರ್ಥ್ಯಗಳು ಮತ್ತು ಅವರ ಮಿತಿಗಳು ವಿವರವಾಗಿ ಹೇಳಲ್ಪಟ್ಟಿವೆ.

ಈ ವಿಧವಾದ ವಿವರಗಳು 'ವ್ಯಾಸಭಾರತ'ದಲ್ಲಿ ಮುಕ್ಕಾಲು ಅಧ್ಯಾಯಾವನ್ನೇ ಒಳಗೊಂಡಿದೆ. ಆದರೆ ಕುಮಾರವ್ಯಾಸ ಇಷ್ಟೆಲ್ಲಾ ವಿವರಗಳಿಗೆ ಹೋಗದೇ; ರಣದೊಳಗತಿಶಯದ ಸಾರಥಿ ಅಗತ್ಯವಿರುವುದನ್ನು ಪ್ರಸ್ತಾಪಿಸಿ ಮದ್ರರಾಜ ಶಲ್ಯನನ್ನು ಸಾರಥಿಯನ್ನಾಗಿ ಮಾಡಿಕೊಡು ಎಂದು ಕೇಳುತ್ತಾನೆ. ನಾಲ್ಕೈದು ಪದ್ಯಗಳಲ್ಲಿ ಈ ಪ್ರಸಂಗವನ್ನು ಮುಗಿಸುತ್ತಾನೆ.

ಕರ್ಣನ ಸಾರಥ್ಯಕ್ಕೆ ಮದ್ರರಾಜ ಶಲ್ಯನನ್ನು ಒಪ್ಪಿಸುವ ಸಂದರ್ಭದ ಶಲ್ಯ ದುರ್ಯೋಧನರ ಸಂಭಾಷಣೆಯು ಕುಮಾರವ್ಯಾಸನಿಗಿಂತಲೂ ಮೂಲದಲ್ಲಿ ಬೇರೆ ರೀತಿಯಲ್ಲಿದೆ.

'ಸೂತಪುತ್ರನಿಗೆ ತಾನು ಸಾರಥಿಯಾಗಬೇಕೇ...?!' – ಎಂಬ ಭಾವವನ್ನೇ ಮುಂದು ಮಾಡಿಕೊಂಡು ವಿರೋಧಿಸುತ್ತಾನಾದರೂ,

"ನಮ್ಮೊಡನೆ ಈಸು ಮಾತೇಕೇ? ಎಮ್ಮನು ರಕ್ಷಿಸುವ ಮನಸ್ಸಿದ್ದರೆ ಮಾಡಿ, ಕರುಣೆಯಿಲ್ಲದಿದ್ದರೆ ಬಿಡಿ..." ಎಂಬ ಭಾವ 'ವ್ಯಾಸಭಾರತ'ದಲ್ಲಿರುವುದಿಲ್ಲ. ಶಲ್ಯನನ್ನು ಒಪ್ಪಿಸಲು ಪರಿಪರಿಯಾಗಿ ಬೇಡುತ್ತಾನೆ. ಅವನ ಶಕ್ತಿಸಾಮರ್ಥ್ಯಗಳನ್ನು ಹಾಡಿ ಹೊಗಳುತ್ತಾನೆ. ಕೃಷ್ಣ ಮತ್ತು ಅರ್ಜುನರಿಗಿಂತಲೂ ನೀನೇ ಶ್ರೇಷ್ಠ ಎಂದು ಪ್ರಶಂಸಿಸುತ್ತಾನೆ.

ಸಾರಥಿಯಾಗಲು ಒಪ್ಪುವ ಸಂದರ್ಭದಲ್ಲಿ ಶಲ್ಯನು ದುರ್ಯೋಧನನಿಗೆ ಒಂದು ಷರತ್ತನ್ನು ಹಾಕುತ್ತಾನೆ. ಸಾರಥ್ಯ ಮಾಡುತ್ತಿರುವಾಗ ನಾನು ನನಗಿಚ್ಛೆ ಬಂದಂತೆ ಕರ್ಣನೊಡನೆ ಮಾತಾಡುತ್ತೇನೆ. ಇದಕ್ಕೆ ಯಾವ ಪ್ರತಿರೋಧವೂ ಇರಬಾರದು ಎಂಬುವ ಈ ಅಂಶವು ಕುಮಾರವ್ಯಾಸ ಶಲ್ಯನ ನಿಬಂಧನೆಯ ಪ್ರಸ್ತಾಪವನ್ನೇ ಮಾಡುವುದಿಲ್ಲ..

'ವ್ಯಾಸಭಾರತ'ದಲ್ಲಿ ಶಲ್ಯನ ಸಾರಥ್ಯದಲ್ಲಿ ಯುದ್ಧಕ್ಕೆ ಹೊರಟ ಕರ್ಣನಿಗೆ ಅಪಶಕುನಗಳಾಗುತ್ತವೆ. ಅದೃಷ್ಟ ಹೇಗಿದೆಯೋ ಹಾಗೆಯೇ ನಡೆಯುತ್ತದೆ. ದೈವ ನಿಯಮವನ್ನು ಯಾರಿದಂಲೂ ತಪ್ಪಿಸಲು ಸಾಧ್ಯವಾಗುವುದಿಲ್ಲ ಎನ್ನುವ ಈ ಭಾವ 'ವ್ಯಾಸಭಾರತ'ದಲ್ಲಿದೆ. ಈ ಭಾವ ಕುಮಾರವ್ಯಾಸಭಾರತದಲ್ಲಿ ಕಾಣಿಸುವುದಿಲ್ಲ. ಕುಮಾರವ್ಯಾಸನ ಕರ್ಣನಿಗೆ ತನ್ನ ಬಾಹುಬಲದಲ್ಲಿ ಪೂರ್ಣ ವಿಶ್ವಾಸವಿರುತ್ತದೆ. ತನ್ನ "ತೋಳ ಬಲಹನು ಹಗೆಗೆ ತೋರುವೆ..." ಎಂದು ಮುನ್ನುಗ್ಗುತ್ತಾನೆ.

'ವ್ಯಾಸಭಾರತ'ದಲ್ಲಿ ಕರ್ಣನ ಅತ್ಯುತ್ಸಾಹದ ಮಾತುಗಳನ್ನು ಕೇಳಿದ ಶಲ್ಯ ಅವು 'ಪೊಳ್ಳು ಮಾತುಗಳು' ಎಂದು ಸೂಚಿಸಲು ಗಹಗಹನೆ ನಗುತ್ತಾನೆ.

"ನಿನ್ನ ಈ ಹರಟೆಯಿಂದ ವಿರತನಾಗು ಕರ್ಣ! ಮಾತನ್ನು ನಿಲ್ಲಿಸಿ ಬಿಡು. ನಿನ್ನ ಪರಾಕ್ರಮದ ಬಗ್ಗೆ ಹೆಚ್ಚು ಮಾತನಾಡಿದೆ.. ಇದು ನಿನಗೆ ತಕ್ಕದ್ದಲ್ಲ.. ನಿನಗೂ ಧನಂಜಯನಿಗೂ ಯಾವುದರಲ್ಲಾದರೂ ಸಾಮ್ಯವಿದರುವುದೇ? ನರಶ್ರೇಷ್ಠನಾದ ಧನಂಜಯನೆಲ್ಲಿ? ನರಾಧಮನಾದ ನೀನೆಲ್ಲಿ? ಎಂದು ಮೂದಲಿಸುತ್ತಾನೆ. ಹಿಂದೆ ಅರ್ಜುನ ಮೆರೆದ ಕೆಲವು ಪ್ರಸಂಗಗಳಲ್ಲಿನ ಪರಾಕ್ರಮಗಳನ್ನು **ಕುಮಾರವ್ಯಾಸ ತನ್ನ ಕಾವ್ಯದಲ್ಲಿ ಕೃಷ್ಣಾರ್ಜುನರನ್ನು ಅತಿಯಾಗಿ ಹೊಗಳಿ ಕರ್ಣನನ್ನು ಹೀನಾಯವಾಗಿ ನಿಂದಿಸಿದ ಭಾಗವನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾನೆ.**

'ವ್ಯಾಸಭಾರತ'ದಲ್ಲಿ ಅಶ್ವತ್ಥಾಮನು ಮಾಡುವ ಪ್ರತಿಜ್ಞೆಯ ಧೀರ್ಘವಾದ ವಿವರವಿದೆ. ಶಸ್ತ್ರ ಸನ್ಯಾಸ ಮಾಡಿದ್ದ ತನ್ನ ತಂದೆಯನ್ನು ಮೋಸದಿಂದ ದೃಷ್ಟದ್ಯುಮ್ನನು ಕೊಂದದ್ದನ್ನು ನೆನಪಿಸಿಕೊಂಡು,

"ದೃಷ್ಟದ್ಯುಮ್ನನನ್ನು ಸಂಹರಿಸದೇ ನಾನು ಕವಚವನ್ನು ಬಿಚ್ಚುವುದಿಲ್ಲ.. ಈ ನನ್ನ ಪ್ರತಿಜ್ಞೆ ಸುಳ್ಳಾದರೆ ನನಗೆ ಸ್ವರ್ಗವು ಲಭಿಸದೇ ಹೋಗಲಿ. ಅರ್ಜುನ ಅಥವಾ ಭೀಮ ಯಾರೇ ಆಗಲಿ ಅವನಿಗೆ ರಕ್ಷಣೆ ನೀಡಿದರೆ ಅವರನ್ನೂ ಬಾಣಗಳಿಂದ ಸಂಹರಿಸುತ್ತೇನೆ.' ಎಂದು ಹೇಳಿರುವ ಅಂಶವು ನಮಗೆ ತಿಳಿದುಬರುತ್ತದೆ.

ಕುಮಾರವ್ಯಾಸನಲ್ಲಿ ಅಶ್ವತ್ಥಾಮ. ದೃಷ್ಟದ್ಯುಮ್ನನನ್ನು ಕೊಲ್ಲಲು ಮಾಡಿದ ಪ್ರತಿಜ್ಞೆಯನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾನೆ.

'ವ್ಯಾಸಭಾರತ'ದಲ್ಲಿ ಧರ್ಮರಾಜನು ಯುದ್ಧರಂಗದಲ್ಲಿ ಕಾಣದೇ ಹೋದ ಆತಂಕ ಅರ್ಜುನನನ್ನು ಕಾಡುತ್ತದೆ. ಯುದ್ಧ ಮಾಡಲು ತನ್ನ ಕಡೆ ಯಾರೂ ಬಾರದಿರುವುದರಿಂದ ಅಣ್ಣನನ್ನು ನೋಡಬೇಕೆಂದು ಬಯಸುತ್ತಾನೆ. ಈಗ ಹಗಲಿನ ಒಂದು ಭಾಗದಷ್ಟು ಮಾತ್ರ ಉಳಿದಿದೆ. ನಮ್ಮೊಡನೆ ಯುದ್ಧ ಮಾಡಲು ದುರ್ಯೋಧನನ ಸೈನ್ಯದಲ್ಲಿ ಯಾರೂ ಮುಂದೆ ಬರುತ್ತಿಲ್ಲ. ಧರ್ಮರಾಯನು ಇರುವಲ್ಲಿಗೆ ಹೋಗೋಣ ಎಂದು ಅರ್ಜುನ ಕೃಷ್ಣನಿಗೆ ಹೇಳುತ್ತಾನೆ.

ಆದರೆ ಕುಮಾರವ್ಯಾಸನಲ್ಲಿ ಹಾಗೆ ಹೊರಟ ಅರ್ಜುನನಿಗೆ ಕುರು ಸೈನ್ಯದ ಅನೇಕರು ಅಡ್ಡಗಟ್ಟುತ್ತಾರೆ. ಸ್ವತಃ ಕರ್ಣನೇ ಎದುರಿಸಿ ಬರುತ್ತಾನೆ. ಧರ್ಮರಾಯನನ್ನು ನೀನು ಸಂತೈಸು ನಡೆ.. ಎಂದು ಭೀಮನು ಅರ್ಜುನನನ್ನು ಕಳುಹಿಸಿ ತಾನು ಯುದ್ಧ ಮಾಡುತ್ತಾನೆ. ಹೀಗೆ ಕುಮಾರವ್ಯಾಸ ಕೆಲವೆಡೆ ಬದಲಿಸಿಕೊಂಡಿದ್ದಾನೆ.

'ವ್ಯಾಸಭಾರತ'ದಲ್ಲಿ ಭೀಮನು ದುಶ್ಯಾಸನನನ್ನು ಕೊಲ್ಲುವ ಸಂದರ್ಭದಲ್ಲಿ ಕೌರವ ವೀರರನ್ನು ಕರೆದು ದುಶ್ಯಾಸನನನ್ನು ಉಳಿಸಿಕೊಳ್ಳುವಂತೆ ಕೂಗಿ ಹೇಳುತ್ತಾನೆ..

"ಇದೋ ನಾನೀಗ ಪಾಪಿಯಾದ ದುಶ್ಯಾಸನನನ್ನು ಕೊಲ್ಲುತ್ತಿರುವೆನು ಯೋಧ ವೀರರಿರಾ! ನೀವೆಲ್ಲರೂ ಬಿಡಿಸಿಕೊಳ್ಳಿ..." ಎಂದಷ್ಟೇ ಹೇಳುತ್ತಾನೆ.

ಆದರೆ ಕುಮಾರವ್ಯಾಸನ ಭೀಮನು, ಕೌರವರ ಕಡೆಯವರನ್ನೆಲ್ಲಾ ಕರೆಯುವುದರ ಜೊತೆಗೆ ಧರ್ಮರಾಯ ನಕುಲ ಮೊದಲಾದ ಪಾಂಡವ ವೀರರನ್ನೂ ಕರೆಯುತ್ತಾನೆ. ಅರ್ಜುನನು ಪೂರ್ವಾಪರಗಳನ್ನು ಯೋಚನೆ ಮಾಡದೇ ದುಶ್ಯಾಸನನ ನೆರವಿಗೆ ಹೋಗಲು ಧಾವಿಸಿದನೆಂದೂ, ಕೃಷ್ಣನು ಅವನನ್ನು ತಡೆದನೆಂದೂ ಕವಿ ಹೇಳುತ್ತಾನೆ. ಈ ಮಾರ್ಪಾಡು ಭೀಮನಿಗೆ ಆದ ಅವಮಾನದ ಪ್ರಮಾಣ, ಅದನ್ನು ತೀರಿಸಿಕೊಳ್ಳುವಲ್ಲಿ ಅವನಿಗಾಗುತ್ತಿರುವ ಸಂತೋಷವನ್ನು ಧ್ವನಿಸುತ್ತದೆ.

ಭೀಮನು ದುಶ್ಯಾಸನನ ರಕ್ತವನ್ನು ಕುಡಿದು ಅವನ ಕರುಳನ್ನು ಬಗೆದು ದ್ರೌಪದಿಯನ್ನು ಕರೆಸಿ ರಕ್ತವನ್ನು ಆಕೆಯ ತಲೆಗೂದಲಿಗೆ ಸವರಿ ದುಶ್ಯಾಸನನ ಹಲ್ಲುಗಳನ್ನೇ ಬಾಚಣಿಗೆಯಾಗಿ ಮಾಡಿ, ಸಿಕ್ಕು ಬಿಡಿಸಿ ಬಾಚಿ ಮುಡಿ ಹಾಕಿ ಕರುಳ ಹೂಮಾಲೆಯನ್ನು ಮುಡಿದನೆಂದು ಕುಮಾರವ್ಯಾಸ ಭಾರತದಲ್ಲಿದೆ. ಆದರೆ ಈ ಕಲ್ಪನೆಯು 'ವ್ಯಾಸಭಾರತ'ದಲ್ಲಿಲ್ಲ.

ಕರ್ಣಾರ್ಜುನರ ಯುದ್ಧ ಸಂದರ್ಭದಲ್ಲಿ ಕರ್ಣನ ರಥ ರಣಭೂಮಿಯಲ್ಲಿ ಹೂತು ಹೋದಾಗ,

'ಇದೇ ತಕ್ಕ ಸಮಯ, ವೈರಿಯನ್ನು ಸಂಹರಿಸು' ಎಂದಾಗ ಅರ್ಜುನನಿಗೆ ಕರ್ಣನ ಮೇಲೆ ಅಪೂರ್ವವಾದ ಮಮತೆ ಕರುಣೆ ವಾತ್ಸಲ್ಯ ಉಕ್ಕುತ್ತದೆ. ಎಂದು ಕುಮಾರವ್ಯಾಸ ಭಾರತದಲ್ಲಿದೆ. ಇದು 'ವ್ಯಾಸಭಾರತ'ದಲ್ಲಿಲ್ಲ.

ಮೂಲಕೃತಿಯಾದ 'ವ್ಯಾಸಭಾರತ'ದಲ್ಲಿ ಕರ್ಣನ ಮೇಲೆ ಅರ್ಜುನನಿಗೆ ಕನಿಕರ ಬರುವುದೇ ಇಲ್ಲಾ. ಬದಲಿಗೆ ಕ್ಷಣಕ್ಷಣಕ್ಕೂ ಅವನ ಮೇಲಿನ ಕ್ರೋಧ ಹೆಚ್ಚಾಗುತ್ತಾ ಹೋಗುತ್ತದೆ.

–ಈ ರೀತಿಯಾಗಿ 'ವ್ಯಾಸಭಾರತ'ಕ್ಕೂ 'ಕುಮಾರವ್ಯಾಸಭಾರತ'ಕ್ಕೂ ಇರುವ ಕೆಲವು ಮುಖ್ಯ ಪ್ರಸಂಗ, ಸನ್ನಿವೇಶಗಳಲ್ಲಿ ಇರುವ ಬದಲಾವಣೆ, ಮಾರ್ಪಾಡುಗಳು ಈ ಅಧ್ಯಯನದ ಮೂಲಕ ನಡೆಸಲಾದ ವಿಶ್ಲೇಷಣೆಯಿಂದಾಗಿ ಗುರ್ತಿಸಲಾಗಿದೆ.

~~~***~~~
~~~

**ಅಡಿಟಿಪ್ಪಣಿಗಳು**

೧. ಮಹಾಭಾರತ ಭಾಗ–೧, ಪು.೫೫.

೨. ಶಂ.ಬಾ. ಜೋಶಿ, ಸ್ಥಿತ್ಯಂತರ (೧೯೯೯), ಬೆಂಗಳೂರು, ಪು. ೬೬.

೩. ಕೀರ್ತಿನಾಥ ಕುರ್ತುಕೋಟಿ, "ಕುಮಾರವ್ಯಾಸ", ನವದೆಹಲಿ (೨೦೦೭), ಪು. ೧೫.

೪. -- " -- ಅದೇ -- "--, ಪು. ೧೫.

೩. **ಎಲ್. ಗುಂಡಪ್ಪ, ಕರ್ನಾಟಕ ಭಾರತ ಕಥಾಮಂಜರಿ, ಬೆಂಗಳೂರು (೨೦೦೨), ಪು. ೧೧**

೪. -- " -- ಅದೇ -- "--, ಪು, ।।

೫. -- " -- ಅದೇ -- "--, ಪು. ೧೩.

೧. ಶ್ರೀಮನ್ಮಹಾಭಾರತ ಮಹಾಮಂಗಳ ಸಮರಣ ಸಂಚಿಕೆ, ಭಾರತದರ್ಶನ, ಲೇ: ಡಾ॥ ಎನ್.ಎಸ್. ಅ. ಪು. ೬೨.

೨. ಸಂ. ಗೋ. ಬಿಂದೂರಾಯರು, ಕುಮಾರವ್ಯಾಸ ಭಾರತ ಸಾರೋದ್ಧಾರ (೧೯೫೪) ಪು. ೧೩.

೩. ಆರ್.ವಿ. ಕುಲಕರ್ಣಿ, ಸಾಹಸಭೀಮ ವಿಜಯಂ (೧೯೮೫) ಪು. ೨೧.

೪. -- " -- ಅದೇ -- "--, ಪು. ೨೪

೫. -- " -- ಅದೇ -- "--, ಪು. ೨೬.

(೬) -- " -- ಅದೇ -- "--, ಪು.

೧. ಡಾ॥ ಶಂ.ಭಾ. ಜೋಶಿ, ಸ್ಥಿತ್ಯಂತರ (೧೯೯೯), ಶಂ.ಭಾ. ವಿಚಾರ ವೇದಿಕೆ ಪ್ರಕಾಶನ, ಬೆಂ. ಪು. ೭೬.

೨. -- " -- , --"-- , -- " -- , -- " -- , ಪು. ೬೧.

೩. ಆನಂದ ತೀರ್ಥರು, ಮಹಾಭಾರತ ತಾತ್ಪರ್ಯ ನಿರ್ಣಯ, ಭಾ– ೨.೧, ಪು. ೨೮.

೪. ಡಾ॥ ಶಂ.ಭಾ. ಜೋಶಿ, ಸ್ಥಿತ್ಯಂತರ (೧೯೯೯), ಶಂ.ಭಾ. ವಿಚಾರ ವೇದಿಕೆ ಪ್ರಕಾಶನ, ಬೆಂ. ಪು. ೭೪.

೫. ಋಗ್ವೇದ ಭಾ – ೨೫, ಪು.

೬. ಡಾ॥ ಪ್ರಧಾನ ಗುರುದತ್, ಶ್ರೀಕೃಷ್ಣ ಕಥೆ, ಪು. ೧೩೮.

೭. ಋಗ್ವೇದ, ಭಾಗ– ೨೫, ಪು. ೫೦೨.

೮. ಡಾ॥ ಪ್ರಧಾನ ಗುರುದತ್, ಶ್ರೀಕೃಷ್ಣ ಕಥೆ, ಪು. ೧೩೮.

೯. ----"----

೧೦. **ಶಾಸಿತ್ಥಾ ಮಹಾ ಅಸ್ಯಮಿತ್ರ ಖಾದೋ ಅದ್ಭುತಃ । ನಯಸ್ಯ ಹನ್ಯತೇ ಸಖಾನ ಜೀಯತೇ ಕದಾಚನ ॥**
**–(ಋಗ್ವೇದ, ಭಾ – ೩೦, ಪು. ೧೦೨)**

೧೧. ಅ.ನ.ಕೃ. ಭಾ.ಸ.ದ., ಲೇ: ಎಂ.ಎಸ್.ಎಸ್. ವೆಂಕಟಶಾಸ್ತ್ರಿ, ಪು. ೧೦೧.

೧೨. ಎನ್.ಸೂರ್ಯ ಪ್ರಕಾಶ್, ಪ್ರಜಾವಾಣಿ, ತಾ॥ ೪–೧೧–೨೦೧೭.

೧೩. ರಂ.ಶ್ರೀ. ಮುಗುಳಿ, ನವೀನ ಪ್ರಜ್ಞೆಯು ಸೂತ್ರಗಳು, (೧೯೮೬), ಪು. ೧.

೧೪. **"॥ ಆಖ್ಯಾನೈಶ್ಚಾಪ್ಯುಪಾಖ್ಯಾನೈರ್ಗಾಥಾಬಿಃ ಕಲ್ಪಶುದ್ಧಿ ಭೀಃ ॥ ಪುರಾಣ ಸಂಹಿತಾಂ ಚಕ್ರೇ ಪುರಾಣಾರ್ಥ ವಿಶಾರದಃ ॥"**
**–(ಆದಿಪರ್ವ, ಸಂಪುಟ –೩, ಅಧ್ಯಾಯ –೬, ಶ್ಲೋಕ ೧೫.)**

೧೫. ಡಾ॥ ಕೆ.ಎಲ್. ಗೋಪಾಲಕೃಷ್ಣಯ್ಯ,, ಕ.ಸಾ.ಪ. ಪ್ರಕ. ಪು. ೧೨೫೪

೧೬. ಎಂ.ಆರ್. ಕೃಷ್ಣಶಾಸ್ತ್ರ, ವಚನಭಾರತ, ಪು.೨೧.

೧೭. ಶ್ರೀಮನ್ಮಹಾಭಾರತ ಭಾಗ–೨, ಪರಿಶಿಷ್ಟ, ಪು.೧೪.

೧೮. ಮನ್ವಾದಿ ಭಾರತಂ ಕೇಚಿದಾಸ್ತೀಕಾದಿ ತಥಾ ಪರೇ । ತಥೊ ಪರಿಚರಾದ್ಯನ್ಯೇ ವಿಪ್ರಾಃ ಸಮ್ಯಗಧೀಯತೇ ॥ –(ಆ.ಪ., ಭಾ–೧, ಶ್ಲೋಕ : ೫೨)

೧೯. ಶ್ರೀಮನ್ಮಹಾಭಾರತ ಭಾಗ–೨, ಪರಿಶಿಷ್ಟ, ಪು. ೧೭.

೨೦. ಶ್ರೀಮನ್ಮಹಾಭಾರತ ಭಾಗ–೧, ಪು. ೩೭೩.

೨೧. ಶ್ರೀಮನ್ಮಹಾಭಾರತ ಭಾಗ–೧, ಪು. ।।

೨೨. ಶ್ರೀಮನ್ಮಹಾಭಾರತ ಭಾಗ–೧, ಮುನ್ನುಡಿ, ಎಂ. ಪಿ. ಎಲ್. ಶಾಸ್ತ್ರಿ, ಪು. ೮

೨೩. ಶ್ರೀಮನ್ಮಹಾಭಾರತ ಭಾಗ–೧, ಮುನ್ನುಡಿ, ಎಂ. ಪಿ. ಎಲ್. ಶಾಸ್ತ್ರಿ, ಪು. ೪

೨೪. ಅಸ್ಯ ಕಾವ್ಯಸ್ಯ ಕವಯೋನಸಮಥಾ ವಿಶೇಷಣೇ । ವಿಶೇಷಣ ಗ್ರಹಸ್ಥಸ್ಯಶೇಷಾಸ್ತ್ರಯ ಇವಾಶ್ರಮಾಃ ॥ ಅಲಂಕೃತಂ ಶುಭೈಃ ಶಬ್ದೈಃ ಸವರ್ಥೈರ್ದಿವ್ಯಮಾನುಷಃ । ಸರ್ವೇಷಾಂ ಕವಿಮುಖ್ಯಾನಾಮುಪಜೀವ್ಯೋ ಭವಿಷ್ಯತಿ ॥

ಪರ್ಜನ್ಯ ಇವ ಭೂತಾನಾಮಕ್ಷಯೋ ಭಾರತ ದ್ರುಮಃ ॥ (ಮ.ಭಾ. ಭಾಗ–೧, ಪು.೩)

೨೫. ॥ ಇತಿಹಾಸೋತ್ತಮಾದಸ್ಮಾತ್ । ಜಾಯಂತೇ ಕವಿಬುದ್ಧಯಃ ॥ –
(ಆದಿಪರ್ವ – ಭಾಗ–೨, ಶ್ಲೋಕ : ೮೬)

೨೬. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, (೧೯೮೫), ಲೇ: ವಿದ್ವಾನ್ ಛಾಯಾಪತಿ, ಪು. ೩೩

೨೭. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, (೧೯೮೫), ಲೇ: ವಿದ್ವಾನ್ ಛಾಯಾಪತಿ, ಪು. ೩೪.

೨೮. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, (೧೯೮೫), ಲೇ: ವಿದ್ವಾನ್ ಛಾಯಾಪತಿ, ಪು. ೩೪.

೨೯. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, (೧೯೮೫), ಲೇ: ವಿದ್ವಾನ್ ಛಾಯಾಪತಿ, ಪು. ೩೪.

೩೦. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, ಬೆಂ. (೧೯೮೫), ಲೇ: ಪ್ರೊ॥ ಸಾ.ಕೃ. ರಾಮಚಂದ್ರರಾಯರು, ಪು. ೪೬೭.

೧. ಡಾ॥ ಶಂ.ಭಾ. ಜೋಶಿ, ಸ್ಥಿತ್ಯಂತರ (೧೯೯೯), ಶಂ.ಭಾ. ವಿಚಾರ ವೇದಿಕೆ ಪ್ರಕಾಶನ, ಬೆಂ. ಪು. ೭೬.

೨. -- " -- , --"-- , -- " -- , -- " -- , ಪು. ೬೧.

೩. ಆನಂದ ತೀರ್ಥರು, ಮಹಾಭಾರತ ತಾತ್ಪರ್ಯ ನಿರ್ಣಯ, ಭಾ– ೨.೧, ಪು. ೨೮.

೪. ಡಾ॥ ಶಂ.ಭಾ. ಜೋಶಿ, ಸ್ಥಿತ್ಯಂತರ (೧೯೯೯), ಶಂ.ಭಾ. ವಿಚಾರ ವೇದಿಕೆ ಪ್ರಕಾಶನ, ಬೆಂ. ಪು. ೭೪.

೫. ಋಗ್ವೇದ ಭಾ – ೨೫, ಪು.

೬. ಡಾ॥ ಪ್ರಧಾನ ಗುರುದತ್, ಶ್ರೀಕೃಷ್ಣ ಕಥೆ, ಪು. ೧೩೮.

೭. ಋಗ್ವೇದ, ಭಾಗ– ೨೫, ಪು. ೫೦೨.

೮. ಡಾ॥ ಪ್ರಧಾನ ಗುರುದತ್, ಶ್ರೀಕೃಷ್ಣ ಕಥೆ, ಪು. ೧೩೮.

೯. ----"----

೧೦. ಶಾಸಿತ್ಥಾ ಮಹಾ ಅಸ್ಯಮಿತ್ರ ಖಾದೋ ಅದ್ಭುತಃ । ನಯಸ್ಯ ಹನ್ಯತೇ ಸಖಾನ ಜೀಯತೇ ಕದಾಚನ ॥
–(ಋಗ್ವೇದ, ಭಾ – ೩೦, ಪು. ೧೦೨)

೧೧. ಅ.ನ.ಕೃ. ಭಾ.ಸ.ದ., ಲೇ: ಎಂ.ಎಸ್.ಎಸ್. ವೆಂಕಟಶಾಸ್ತ್ರಿ, ಪು. ೧೦೧.

೧೨. ಎನ್.ಸೂರ್ಯ ಪ್ರಕಾಶ್, ಪ್ರಜಾವಾಣಿ, ತಾ॥ ೪–೧೧–೨೦೧೭.

೧೩. ರಂ.ಶ್ರೀ. ಮುಗುಳಿ, ನವೀನ ಪ್ರಜ್ಞೆಯು ಸೂತ್ರಗಳು, (೧೯೮೬), ಪು. ೧.

೧೪. "॥ ಆಖ್ಯಾನೈಶ್ಚಾಪ್ಯುಪಾಖ್ಯಾನೈರ್ಗಾಥಾಬಿಃ ಕಲ್ಪಶುದ್ಧಿ ಭೀಃ ॥ ಪುರಾಣ ಸಂಹಿತಾಂ ಚಕ್ರೇ ಪುರಾಣಾರ್ಥ ವಿಶಾರದಃ ॥" –(ಆದಿಪರ್ವ, ಸಂಪುಟ –೩, ಅಧ್ಯಾಯ –೬, ಶ್ಲೋಕ ೧೫.)

೧೫. ಡಾ॥ ಕೆ.ಎಲ್. ಗೋಪಾಲಕೃಷ್ಣಯ್ಯ,, ಕ.ಸಾ.ಪ. ಪ್ರಕ. ಪು. ೧೨೫೪

೧೬. ಎಂ.ಆರ್. ಕೃಷ್ಣಶಾಸ್ತ್ರ, ವಚನಭಾರತ, ಪು.೨೧.

೧೭. ಶ್ರೀಮನ್ಮಹಾಭಾರತ ಭಾಗ–೨, ಪರಿಶಿಷ್ಟ, ಪು.೧೪.

೧೮. ಮನ್ವಾದಿ ಭಾರತಂ ಕೇಚದಾಸ್ತೀಕಾದಿ ತಥಾ ಪರೇ । ತಥೊ ಪರಿಚರಾದ್ಯನ್ನೇ ವಿಪ್ರಾಃ ಸಮ್ಯಗಧೀಯತೇ ॥
–(ಆ.ಪ., ಭಾ–೧, ಶ್ಲೋಕ : ೫೨)

೧೯. ಶ್ರೀಮನ್ಮಹಾಭಾರತ ಭಾಗ–೨, ಪರಿಶಿಷ್ಟ, ಪು. ೧೭.

೨೦. ಶ್ರೀಮನ್ಮಹಾಭಾರತ ಭಾಗ–೧, ಪು. ೩೭೩.

೨೧. ಶ್ರೀಮನ್ಮಹಾಭಾರತ ಭಾಗ–೧, ಪು. ।।

೨೨. ಶ್ರೀಮನ್ಮಹಾಭಾರತ ಭಾಗ–೧, ಮುನ್ನುಡಿ, ಎಂ. ಪಿ. ಎಲ್. ಶಾಸ್ತ್ರಿ, ಪು. ೮

೨೩. ಶ್ರೀಮನ್ಮಹಾಭಾರತ ಭಾಗ–೧, ಮುನ್ನುಡಿ, ಎಂ. ಪಿ. ಎಲ್. ಶಾಸ್ತ್ರಿ, ಪು. ೪

೨೪. ಅಸ್ಯ ಕಾವ್ಯಸ್ಯ ಕವಯೋನಸಮಥಾ ವಿಶೇಷಣೇ । ವಿಶೇಷಣ ಗ್ರಹಸ್ಥಸ್ಯಶೇಷಾಸ್ತ್ರಯ ಇವಾಶ್ರಮಾಃ ॥
ಅಲಂಕೃತಂ ಶುಭೈಃ ಶಬ್ದೈಃ ಸವರ್ಥೈರ್ದಿವ್ಯಮಾನುಷಃ । ಸರ್ವೇಷಾಂ ಕವಿಮುಖ್ಯಾನಾಮುಪಜೀವ್ಯೋ ಭವಿಷ್ಯತಿ ॥
ಪರ್ಜನ್ಯ ಇವ ಭೂತಾನಾಮಕ್ಷಯೋ ಭಾರತ ದ್ರುಮಃ ॥ (ಮ.ಭಾ. ಭಾಗ–೧, ಪು.೩)

೨೫. । ಇತಿಹಾಸೋತ್ತಮಾದಸ್ಮಾತ್ । ಜಾಯಂತೇ ಕವಿಬುದ್ಧಯಃ ॥ – (ಆದಿಪರ್ವ – ಭಾಗ–೨, ಶ್ಲೋಕ : ೮೬)

೨೬. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, ಬೆಂ. (೧೯೮೫), ಲೇ: ವಿದ್ವಾನ್ ಛಾಯಾಪತಿ, ಪು. ೩

೨೭. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, ಬೆಂ. (೧೯೮೫), ಲೇ: ವಿದ್ವಾನ್ ಛಾಯಾಪತಿ, ಪು. ೩೪.

೩೦. ಶ್ರೀಮನ್ಮಹಾಭಾರತ ಮಹಾಮಂಗಳ ಸ್ಮರಣ ಸಂಚಿಕೆ, ಭಾರತದರ್ಶನ ಪ್ರಕಾಶನ, ಬೆಂ. (೧೯೮೫), ಲೇ: ಪ್ರೊ॥ ಸಾ.ಕೃ. ರಾಮಚಂದ್ರರಾಯರು, ಪು. ೪೬೭.

~~~***~~~
~~~

## ಅಧ್ಯಾಯ-7
# ಮಹಾಭಾರತ ಕುರಿತು ಆಧುನಿಕ ಚಿಂತನೆಗಳ ವಿಮರ್ಶಾತ್ಮಕ ಅಧ್ಯಯನ

### 1. ಆಧುನಿಕ ಚಿಂತನೆಗಳ ವಿಮರ್ಶೆ :

'ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು' ಎಂಬ ನನ್ನ ಈ ಅಧ್ಯಯನದಿಂದಾಗಿ ಇತಿಹಾಸ ಎನಿಸಿದ ಮಹಾಕಾವ್ಯವಾದ 'ಮಹಾಭಾರತ'ದ ಕೆಲವೊಂದು ಪ್ರಕರಣಗಳು, ಘಟನೆಗಳ ಪರಿಕಲ್ಪನೆಗೆ ಹೊಸದೊಂದು ಆಯಾಮ ಲಭಿಸಿತು.

ಗ್ರಂಥವು ಮೂರು ಘಟ್ಟಗಳಲ್ಲಿ ವಿಕಾಸಗೊಂಡಿರುವಂತೆಯೇ ಕಥೆಯನ್ನು ಉಪದೇಶ ಮಾಡಿದವರೂ ಕೂಡಾ ಮೂರು ಮಂದಿ. 'ಋಗ್ವೇದ' ಮತ್ತು 'ರಾಮಾಯಣ' ಮಹಾಕಾವ್ಯಗಳ ಪ್ರಭಾವದಿಂದ ವ್ಯಾಸರು 'ಮಹಾಭಾರತ'ವನ್ನು ಹೊಸದೊಂದು **ಪರಿದೃಷ್ಟಿ (Approach) ಯಿಂದ ರೂಪುಗೊಳಿಸಿರಬಾರದೇಕೇ? ಎನ್ನುವ ಜಿಜ್ಞಾಸೆಯು ನನ್ನ ಈ ಅಧ್ಯಯನದಲ್ಲಿ ಕಾಣಿಸಿಕೊಂಡಿತು.** ಏಕೆಂದರೆ; **"ಕುರುವಂಶದವರನ್ನು ಕುರಿತು ಇದ್ದ ಪ್ರಾಚೀನ ವೀರಗಾಥೆಗಳೇ 'ಮಹಾಭಾರತ'ಕ್ಕೆ ಉಗಮಸ್ಥಾನಗಳು. ಇವು ಋಗ್ವೇದದಲ್ಲಿರುವ ನಾರಾಶಂಸಿ, ಗಾಥೆಗಳ ಮಾದರಿಯವು. ಅನೇಕ ಶತಮಾನಗಳಿಂದ ಜನತೆಯ ಬಾಯಲ್ಲಿದ್ದಂತಹ ಇವುಗಳನ್ನು ಯಾವಾನೋ ಒಬ್ಬ ಕವಿ ಒಂದು 'ವೀರಕಾವ್ಯ'ವನ್ನಾಗಿ ಪರಿವರ್ತಿಸಿದನು."** (ಪ್ರೊ॥ ಕೆ.ಟಿ. ಪಾಂಡುರಂಗಿ, ಪು. ೨೩೨) ಎಂದಿರುವುದು ಬೇರೆ ಯಾರನ್ನೋ ಕುರಿತಾಗಿಯೂ ಆಗಿರದೆ ವೇದಗಳನ್ನು ವಿಂಗಡಿಸಿದ, ಅಕ್ಷದ್ಯೂತ ಪ್ರಭಾವಕ್ಕೆ ಒಳಗಾದ ವೇದವ್ಯಾಸ ಮಹರ್ಷಿಗಳೇ ಆಗಿದ್ದಾರೆ.

೧. **ವ್ಯಾಸರು** ವೈಶಂಪಾಯನನಿಗೆ ಹೇಳಿದ ಮೂಲಕಥೆಯು **'ಜಯೋ ನಾಮೇತಿಹಾಸೋಯಂ..'** ಎಂಬುದಾ–ಗಿಯೇ ಆರಂಭವಾಗುವುದರಿಂದ **'ಮಹಾಭಾರತ'ಕ್ಕೆ 'ಜಯ'ವೆಂದೂ ಹೆಸರು."**[೧] ಇದ್ದದ್ದನ್ನೂ ಅಲ್ಲಗೆಳೆಯುವಂತಿಲ್ಲ.

೨. **ವೈಶಂಪಾಯನರು** ಜನಮೇಜಯ ರಾಜನಿಗೆ, ಮತ್ತು

೩. **ಸೂತ ಪುರಾಣಿಕರು** ನೈಮಿಷಾರಣ್ಯದಲ್ಲಿ ಋಷಿಗಳಿಗೆ ಹೇಳಿದ್ದಾರೆ. 'ಮಹಾಭಾರತ'ದಲ್ಲಿ ಈಗ ಕಂಡುಬರುವ ಎಲ್ಲಾ ಶ್ಲೋಕಗಳೂ ಸಾಕ್ಷಾತ್ತಾಗಿ **ವ್ಯಾಸಕೃತವೆಂದು ನಾವು ವೀರಪ್ರತಿಜ್ಞೆ ಮಾಡಬೇಕಾಗಿಲ್ಲ.** ಇದನ್ನೇ **"**ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತ ಸಂಹಿತಾಮ್ । ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ**"** ೨೪,೦೦೦ ಶ್ಲೋಕಗಳಿರುವುದೇ ಮೂಲ ವ್ಯಾಸಕೃತ 'ಜಯ' ಗ್ರಂಥ ಎಂದು ತಿಳಿಸುತ್ತದೆ.

ಇಲ್ಲಿ ಆಧುನಿಕ ಚಿಂತನೆಯೆಂದರೆ; ಯೋಗ್ಯವಾದ, ಪ್ರಾಮಾಣಿಕವಾದ, ಆಧಾರಸಹಿತವಾದ, ಪ್ರಭಾವಯುತವಾದ, ಪ್ರಬುದ್ಧವಾದ ಮತ್ತು ಸತ್ಯದ ಒರೆಗೆ ಹಚ್ಚಿ ತೆಗೆದ ಚಿಂತನೆ. ಇಂದಿನ ಜನಜೀವನಕ್ಕೆ ಮಹಾಭಾರತದ ನಾಗರಿಕತೆ ಮೂಲಾಧಾರವೆಂಬುದನ್ನಂತೂ ಒಪ್ಪಲೇಬೇಕು.

ಇಂದಿನ ಭಾರತೀಯ ಸಂಸ್ಕೃತಿಯ ಹೆಚ್ಚಿನ ಅಂಶವೆಲ್ಲಾ ಮಹಾಭಾರತ ಸಂಸ್ಕೃತಿಯಿಂದಲೇ ಪ್ರಭಾವಿತವಾಗಿ ರೂಪುಗೊಂಡಿರುವುದೇ ಆಗಿದೆ. **ಮಹಾಭಾರತದ ಸಂಸ್ಕೃತಿಯ ವಿಷಯದಲ್ಲಿ ನಿರ್ಣಯ ಮಾಡಲು ಹೊರಗಿನ ಯಾವ ಪ್ರಮಾಣದ ಅಗತ್ಯವೂ ಇಲ್ಲ. ಒಂದು ಋಗ್ವೇದ ಮತ್ತೊಂದು ರಾಮಾಯಣ ಮಹಾಕಾವ್ಯ ಗ್ರಂಥಗಳೇ ಸಾಕು.**

ಪ್ರತಿಯೊಂದು ಸಂದರ್ಭದಲ್ಲಿಯೂ ನಾವು ವೈಜ್ಞಾನಿಕವಾಗಿ ನೋಡುವ ಪ್ರತಿಯೊಂದು ಪ್ರಕರಣವನ್ನೂ ಆಧುನಿಕ ಮಾನದಂಡದಿಂದ ಅಳೆದು ನೋಡಿದಾಗ ಆ ಕಾಲದಲ್ಲಿದ್ದಂತಹ ನಂಬಿಕೆಗಳ ನಿಜವಾದ ಸ್ಥಿತಿಯ ಅರಿವಾಗಿ ಇಂದು ನಾವು ಅಂಧಶ್ರದ್ಧೆ, ಕುರುಡು ನಂಬಿಕೆ ಅಂದುಕೊಂಡಿರುವ ಮನೋಭಾವ ದೂರವಾಗುತ್ತದೆ.

"ಈ ನೆಲದಲ್ಲಿಯ ಸಮಸ್ಯೆಗಳಿಗೆ ಇಲ್ಲಿಯೇ ಪರಿಹಾರ ಅರಸಬೇಕು. ಎಲ್ಲಿಯೋ ಇರಬಹುದಾದ ಅಜ್ಞಾತ ದೈವದಲ್ಲಿ ಅಲ್ಲ ಎಂಬುದೇ ವೈಜ್ಞಾನಿಕ ಮನೋಧರ್ಮ."[೨]

**ಮೂಲ ಸ್ವರೂಪ :**

ಮಹಾಭಾರತವನ್ನು ನಾವು ಆಧುನಿಕ ದೃಷ್ಟಿಯಿಂದ ನೋಡಬೇಕಾದರೆ, ಮೊದಲು ಅದರ ಮೂಲ ಸ್ವರೂಪವನ್ನು ಕಂಡು ಕೊಳ್ಳಬೇಕು. ಕಾರಣ, "ಸಹಸ್ರಾರು ವರ್ಷಗಳಲ್ಲಿ ಬೆಳೆದು ಬಂದ ಮಹಾಭಾರತದಲ್ಲಿ ಅನೇಕ ಪ್ರಕ್ಷಿಪ್ತ ಅಂಶಗಳು ಸೇರಿ ಅದು ಲಕ್ಷಶ್ಲೋಕದಷ್ಟು ಬೃಹತ್ ಗಾತ್ರವನ್ನು ಹೊಂದಿದೆ. ಇದನ್ನು ಗುರುತಿಸಿ ಮೂಲ ಮಹಾಭಾರತದ ಸ್ವರೂಪವನ್ನು ಪತ್ತೆ ಹಚ್ಚುವುದು ಅತ್ಯಂತ ದುಸ್ತರವಾದ ಕಾರ್ಯವೇ ಸರಿ." ಇದಕ್ಕೊಂದು ಸುಲಭವಾದ ಮಾರ್ಗ ಅನುಕ್ರಮಣಿಕಾ ಅಧ್ಯಾಯದಲ್ಲಿರುವ ಶ್ಲೋಕವೇ ದೃಢಪಡಿಸುತ್ತದೆ. (ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತ ಸಂಹಿತಾ । ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ") ಮೂಲಕಾವ್ಯದ ಸ್ವರೂಪವನ್ನು ತಿಳಿಸಲು ನಮಗೆ ಇದಕ್ಕಿಂತಲೂ ಪ್ರಮಾಣ ಬೇಕೇ?! ಉಪಾಖ್ಯಾನಗಳನ್ನು ಬಿಟ್ಟು ಉಳಿದ ೨೪,೦೦೦ ಶ್ಲೋಕಗಳಿರುವ 'ಜಯ' ಗ್ರಂಥವೇ ವ್ಯಾಸಕೃತ ಮೂಲ 'ಮಹಾಭಾರತ'ವಾಗಿದೆ.

'ದ್ಯೂತ'ದ ಪರಿಣಾಮವಾಗಿ ಸೋತ ಪಾಂಡವರು ವನವಾಸ, ಅಜ್ಞಾತವಾಸಗಳನ್ನು ಅನುಭವಿಸಿ ಬಂದ ಮೇಲೂ ಅವರಿಗೆ ರಾಜ್ಯ ಕೊಡಲು ನಿರಾಕರಿಸಿದ ದುರ್ಯೋಧನನ ಅನೀತಿಯಿಂದಾಗಿ 'ಪಾಂಡವರಿಗೂ ಕೌರವರಿಗೂ ನಡೆದ ಯುದ್ಧವೇ (ಜಯ ಗ್ರಂಥದ) ಮಹಾಭಾರತದ ಹೃದ್ಭಾಗ. "ಈ ಕಥೆಗೆ ಕಾಲಕ್ರಮದಲ್ಲಿ ಆನುಷಂಗಿಕವಾಗಿ ವಿಷಯಗಳೂ ಉಪಾಖ್ಯಾನಗಳೂ ದೃಷ್ಟಾಂತ ಕಥೆಗಳು ಮೋಕ್ಷಬೋಧಕ ಪ್ರಕರಣಗಳೂ ಅಲ್ಲಲ್ಲಿ ಕೆಲವು ಗದ್ಯಭಾಗಗಳು ಸೇರಿಸಲ್ಪಟ್ಟವೆ."[೩] ಇದು ಗಮನಾರ್ಹವಾದ ಅಂಶ.

**ವ್ಯಾಸ ಋಷಿಗಳ** ಮನಸ್ಸನ್ನು ಸೆಳೆದ **'ದ್ಯೂತ' ಪ್ರಕರಣ**ದಲ್ಲೇ ಅವರು **ಮಹಾಭಾರತ ಕಥೆಯ ಆತ್ಮವನ್ನು ಕಾಣುತ್ತಾರೆ**. ಮಹಾಭಾರತದ ಹಲವಾರು ಆಖ್ಯಾನಗಳ ಮೂಲಗಳನ್ನು ವೇದಗಳಲ್ಲಿ ನಾವು ಕಾಣುತ್ತೇವೆ. ಹಾಗಾ-ಗಿಯೇ ಮೂಲ 'ಜಯ' ಪಂಚಮವೇದವಾಯಿತು. ಸ್ಮೃತಿ, ಬುದ್ಧಿ, ಮತಿ -ಈ ಮೂರೂ ಕಾಲದ ಪ್ರಜ್ಞಾವಸ್ಥೆಗಳು. **'ಪ್ರಜ್ಞಾನವನವೋನ್ಮೇಶಶಾಲಿನಿ ಪ್ರತಿಭಾ ಮತಾ' ಎಂದು ಹೇಳಿಲ್ಲವೇ?** ವ್ಯಾಸ ಋಷಿಗಳಲ್ಲೂ ಈ ಪ್ರಜ್ಞೆ ಪ್ರತಿಭೆಯಾಗಿ 'ಭಾರತ' ಮಹಾಕಾವ್ಯೋತ್ಪತ್ತಿಗೆ ಕಾರಣವಾಗಿದೆ. ಹೀಗಾಗಿ ಅವರು ಋಗ್ವೇದದ 'ಅಕ್ಷದ್ಯೂತ'ದ ದುರಂತ ಸೃಷ್ಟಿಶೀಲ ವೈಚಾರಿಕ ನಿಲುವಿನ ದರ್ಶನ ಕಾವ್ಯರೂಪ ಪಡೆಯಲು ಪ್ರೇರಣೆ ನೀಡಿದೆ.

ಕವಿಯು ತನ್ನ ಪ್ರತಿಭಾ ಸಾಮರ್ಥ್ಯದಿಂದ ವಾಕ್ಚಾತುರ್ಯ, ಚಮತ್ಕಾರಗಳಿಂದ ಎಂತಹ ಕಾವ್ಯವನ್ನಾದರೂ ಸೃಷ್ಟಿಸಬಹುದು ಎನ್ನುವುದಕ್ಕೆ ಮಹಾಕಾವ್ಯ 'ಮಹಾಭಾರತ'ವೇ ಸಾಕ್ಷಿ. ಕುರು-ಪಾಂಡವರು ಆಡುವ ಜೂಜಾಟ ದ್ಯೂತವು ಎಂತಹ ವಿನಾಶಕಾರಿ ರಾಜಕ್ರೀಡೆ, ಹೇಗೆ ಅದು ಸಾಮ್ರಾಜ್ಯವನ್ನೇ ಧೂಳೀಪಟಗೊಳಿಸಿ ಒಂದು ಯುಗವನ್ನೇ ಅಂತ್ಯಗೊಳಿಸಬಲ್ಲದು ಎಂದು ಲೋಕಕ್ಕೆ ತಿಳಿಸಲು ಮಹಾಕವಿಯ ಸ್ವಾನುಭವ ಸಿದ್ಧಾಂತವೇ ಹತ್ತು ಪರ್ವಗಳಲ್ಲಿ ಗರ್ಭಿಸಿರುವುದೇ ಪ್ರಮಾಣಬದ್ಧ ಸಾಕ್ಷಿ.

ಜೂಜಿಗೆ ಮುಖ್ಯ ಕಾರಣ **ರಾಜಸೂಯಾ ಯಾಗದ ನಂತರ** ಪಾಂಡವರು ಗಳಿಸಿದ ಅಪಾರ ಸಂಪತ್ತು. ಅಂದರೆ ಧರ್ಮಾರ್ಥ ಕಾಮಮೋಕ್ಷಗಳ ಪುರುಷಾರ್ಥ ಚತುಷ್ಟಯದಲ್ಲಿ ದುರ್ಯೋಧನನಿಗೆ ಅರ್ಥ ಒಂದೇ ಮುಖ್ಯವಾಯಿತು. ದುರ್ಯೋಧನ ಅರ್ಥದ ಸ್ವಾರ್ಥ ಧರ್ಮವನ್ನೇ ಅಲುಗಾಡಿಸುವ ಪ್ರಚಂಡ ಆಯುಧವಾಯಿತು. ಈ ಅರ್ಥ-ಕಾಮಗಳೆಂಬ ಪುರುಷಾರ್ಥಗಳು ಮನುಷ್ಯನನ್ನು ಯಾವ ಹಂತಕ್ಕೆ ಮುಟ್ಟಿಸಬಲ್ಲದು ಎಂದು ತೋರಿಸುವುದೇ ಕವಿಯ ಮುಖ್ಯ ಉದ್ದೇಶ.

ಪ್ರಪಂಚದ ನಾನಾ ಜಾತಿ-ನೀತಿ, ವರ್ಗ ಅವಸ್ಥೆಗಳ, ನಾನಾ ಸಂಸರ್ಗ ಪ್ರಕಾರಗಳ, ರಾಜ-ಮಹಾರಾಜ, ಸಾಮಾನ್ಯ ಪ್ರಜೆಗಳ, ಸ್ತ್ರೀ-ಪುರುಷ ವರ್ಗಗಳಲ್ಲಿ ಈ ಅತಿ ಕಾಮುಕರದೂ ಒಂದು ವಿಶೇಷ ಜಾತಿ. ಈ ಅತಿಕಾಮುಕತೆಯ ವ್ಯಾಧಿ ಬಂದರೆ ಅದರ ಪರಿಣಾಮ ಏನು? ಎಂದು ಚಿತ್ರಾಂಗದ, ಪಾಂಡೂನಂತಹ ಪಾತ್ರಗಳಿಂದ ತೋರಿಸುವುದು. ಕಾಮದ ಅತಿರೇಕಕ್ಕೆ ಚಿಕಿತ್ಸೆಯೇ ಇಲ್ಲ. ಸಾವೊಂದೇ ಇದಕ್ಕೆ ಪರಿಹಾರವೆಂದು

ಹೇಳುವ ಉದ್ದೇಶ. ಮಹಾಭಾರತದಲ್ಲಿರುವ ವಿದುರನನ್ನು ಬಿಟ್ಟರೆ ತನ್ನ ಜೀವಿತ ಕಾಲದಲ್ಲಿ ಯಾವ ಮನೋವಿಕಾರಕ್ಕೂ ಒಳಗಾಗದೇ, ಆಗಲು ಎಡಗೊಡದೇ ತನ್ನ ಸ್ವಭಾವವನ್ನು ಪಂಚೇಂದ್ರಿಯಗಳನ್ನು ತನ್ನ ಹದ್ದುಬಸ್ತಿನಲ್ಲಿರಿಸಿಕೊಂಡ ತತ್ವೈಕನಿಷ್ಠ ಹಾಗೂ ಆತ್ಮೌಪವನ್ನು ಅನುಭವಿಸಿದ ವ್ಯಕ್ತಿ ಎಂದರೇ ಭೀಷ್ಮ.

**ಒಟ್ಟಿನಲ್ಲಿ ಮಹಾಭಾರತವನ್ನು 'ಇತಿಹಾಸ'ವೆಂದರೂ ಅದನ್ನು 'ಮಹಾಕಾವ್ಯ' ಎಂದೂ ಗ್ರಹಿಸಬೇಕೇ ಹೊರತು 'ಚರಿತ್ರೆ' ಎಂದಲ್ಲ. ಇದನ್ನು ತಿಳಿಯಬೇಕಾದರೆ ವೇದ-ಮಹಾಭಾರತ-ಪುರಾಣೇತಿಹಾಸಗಳನ್ನು ಕುರಿತ ತೌಲನಿಕ ಅಧ್ಯಯನ ಮಾಡಬೇಕು. ಇದು ಆಧುನಿಕ ಚಿಂತನೆಗಳ ಅಧ್ಯಯನದ ಬೆಳಕಿನಲ್ಲಿ ಮಾತ್ರ ಸಾಧ್ಯ.**

ಆಧುನಿಕ ಮಾನವನಿಗಿರುವ ಯಂತ್ರೋಪಕರಣಗಳ ಸೌಲಭ್ಯ, ಅವನು ತೊಡುವ ಬಟ್ಟೆ-ಬರೆ, ಅವನ ಪುರುಸತ್ತಿನ ಹವ್ಯಾಸಗಳನ್ನು ಕಂಡರೆ ಅವನಷ್ಟು ಶ್ರೀಮಂತನು ಹಿಂದಿನ ಮಾನವ ಇರಲಿಲ್ಲ ಎಂದು ತೋರುತ್ತದೆ. ಹಿಂದಿನವರು ಸದೇಹ ಸ್ವರ್ಗವನ್ನು ಬಯಸಿದರೆ, "ಆಧುನಿಕರು ಸ್ವರ್ಗವನ್ನೇ ಭೂಮಿಗೆ ತರುವ ವಿಶ್ವ ಪ್ರಯತ್ನದಲ್ಲಿ ತೊಡಗಿದ್ದಾರೆ. ಇದೂ ಕಾಲಮಹಿಮೆ! ದೇಹಕ್ಕಾಗಿ ಸ್ವರ್ಗವನ್ನೇ ಭೂಲೋಕಕ್ಕೆ ತರುವ ಪ್ರಯತ್ನ ಶ್ರೀರಾಮನ ಕಾಲಕ್ಕೆ ಹಿರಣ್ಯಕಶಿಪುವಿನ ಕಾಲಕ್ಕೆ, ಧ್ರುವ ಉತ್ತಾನಪಾದರ ಕಾಲಕ್ಕೆ ನಡೆದಿದೆ."[೪] ವ್ಯಾಸ ಋಷಿಗಳು ಧಾರ್ಮಿಕ ಮನೋಧರ್ಮವುಳ್ಳವರಾಗಿ ರಚಿಸಿದ ಮಹಾಭಾರತ ಇತಿಹಾಸ ಪ್ರದೀಪ ಕೂಡಾ ಎಂದಿದ್ದಾರೆ.

**"॥ ಲೋಕಗರ್ಭ ಗೃಹಂ ಕೃತ್ಸಂಯಥಾವರ್ತ ಸಂಪ್ರಕಾಶಿತಂ ॥"**

ಇದರಲ್ಲಿ ಸಕಲ ಲೋಕ ವ್ಯವಹಾರಗಳೂ ವಿಸ್ತೃತವಾಗಿವೆ. "ಆಸ್ತಿಕ ಭಗವದ್ಭಕ್ತರು ಇದರಲ್ಲಿ ಭಕ್ತಿಮಾರ್ಗವನ್ನು, ವೇದಾಂತಿಗಳು ಆತ್ಮಪ್ರತ್ಯಯದ ಜ್ಞಾನವನ್ನು, ತಾರ್ಕಿಕ ನೈಯ್ಯಾಯಿಕರು ಯುಕ್ತಿಯನ್ನೂ, ಶಾಸ್ತ್ರಜಿಜ್ಞಾಸುಗಳು ಶಾಸ್ತ್ರ ಸಿದ್ಧಾಂತಗಳನ್ನು, ಇತಿಹಾಸಕಾರರು ವಿಸ್ತೃತವಾದ ಕಾರ್ಯಕ್ಷೇತ್ರವನ್ನೂ, ಗೃಹಸ್ಥನು ಉತ್ತಮವಾದ ಗೃಹಸ್ಥಜೀವನವನ್ನು, ಬ್ರಹ್ಮಚಾರಿಯು ಆದರ್ಶ ಬ್ರಹ್ಮಚರ್ಯವನ್ನು ಪಡೆದು ಹೊಂದಬಲ್ಲರು."[೫] ವಿವಿಧ ಜಿಜ್ಞಾಸೆಗಳು ಇದರಿಂದ ಸಂತೃಪ್ತವಾಗಬಲ್ಲವು. ಇಂತಹ ಅಪೂರ್ವ ಕಾವ್ಯಮಯ ಇತಿಹಾಸವು ಮಹಾಕಾವ್ಯವಾದ ಈ ಮಹಾಭಾರತವು. ಇದು ವ್ಯಾಸರ ಐತಿಹಾಸಿಕ ಪ್ರಜ್ಞೆಯನ್ನು ತೋರಿಸುತ್ತದೆ.

ಭಾರತೀಯ ಸಂಸ್ಕೃತಿಯು ಜಾಗತಿಕ ಜ್ಞಾನಭಂಡಾರಕ್ಕೆ ಇತ್ತ ಮೌಲ್ಯಯುತವಾದ ಕಾಣಿಕೆಯೇ ಈ ಮಹಾಭಾರತ ಮಹಾಕಾವ್ಯ. ಆಧುನಿಕ ವಿದ್ಯಮಾನದಲ್ಲಿ **ವಿಮರ್ಶೆ** ಹಲವಾರು ಆಯಾಮಗಳಲ್ಲಿ ಬೆಳೆದು ಬಂದಿದ್ದರೆ ಮಹಾಭಾರತದಂತಹ ಮಹಾಕಾವ್ಯವನ್ನು **ಆಧುನಿಕ ಚಿಂತನೆಗೊಳಪಡಿಸಿದ ಪ್ರಯತ್ನ ಕನ್ನಡದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ**. ಮತ್ತು ಶಿಸ್ತುಬದ್ಧ ವೈಜ್ಞಾನಿಕ ಅಧ್ಯಯನವಾಗಲೀ **ಪುನರ್ ಮೌಲೀಕರಣವಾಗಲೀ** ಮಾಡಿದ ಬಗ್ಗೆಯೂ ಅಷ್ಟಾಗಿ ಮಾಹಿತಿ ಸಿಗುವುದಿಲ್ಲ. "ಮಾನವನ ಅಭಿವ್ಯಕ್ತಿಯ ಮಾಧ್ಯಮವೂ ಇತ್ತೀಚೆಗೆ ಆಧುನಿಕರ ಚಿತ್ತವನ್ನು ಸೆಳೆದಿದೆ. ದೇವತಾಪುರುಷ, ಮಂತ್ರಶಕ್ತಿ ಎಂಬ ಈ ಬಗೆಯ ಹಿಂದಿನ ಕಾಲದ ಗ್ರಹಿಕೆಗಳ ಅರ್ಥ ಗ್ರಹಣದ ಪ್ರಯತ್ನವಾಗಿರುವಂತೆ ಕಾಲ; ಸಮಯ ಈ ಗ್ರಹಿಕೆಯ ವಿಮರ್ಶೆಯು ಇನ್ನೂ ಸಾಕಷ್ಟು ಆಗಿಲ್ಲ."[೬] ಎಂದರೆ ಇದನ್ನು ಗ್ರಹಿಸುವ ವೈಜ್ಞಾನಿಕ ಮನೋಭಾವನೆ ಮುಖ್ಯ. ಈ **ವೈಜ್ಞಾನಿಕ ಚಿಂತನೆಗೆ ಮೊದಲು ವಿಜ್ಞಾನ ಎಂದರೇನೆಂದು ತಿಳಿಯಬೇಕು. "ವಿಜ್ಞಾನ ಎಂದರೆ ವಸ್ತುವಿನ ವಿಶ್ಲೇಷಣೆಯಿಂದ ಬರುವ ವಿಶಿಷ್ಟವಾದ ಜ್ಞಾನ. ವಿಶ್ಲೇಷಣೆಯಿಲ್ಲದೇ ಯಥಾರ್ಥವಾದ ಜ್ಞಾನವಾಗಲಾರದು. ಹಾಗೂ ವಿಶಿಷ್ಟವಾದ ಜ್ಞಾನವೂ ಉಂಟಾಗಲಾರದು."[೭]** ಮಹಾಭಾರತ ಕಾಲದ ವಿಶಿಷ್ಟ ಜೀವನ; ಸಂಸ್ಕೃತಿಯನ್ನು ಗ್ರಹಿಸಿಕೊಳ್ಳುವಾಗ ಅದರ ಅಂದಿನ "ಆಚಾರ-ವಿಚಾರಗಳಿಗೆ ಪ್ರತಿಮಾ ಸಂಕೇತಗಳಿಗೆ ಆಧಾರಭೂತವಾದ ಸಮಯದ **ಆಕೃತಿ**ಯನ್ನು ಗ್ರಹಿಸಿಕೊಳಳುವುದೂ ಅವಶ್ಯವಿದೆ."[೮] ಅಂದಿನ ಮಾನವನ ಜೀವನ ರೀತಿಯನ್ನು ರೂಪಿಸುವ ವೈಚಾರಿಕ ಆಕೃತಿ (Thought Form) ಸನಾತನವಾಗಿರುವುದರಿಂದ ಇವು ಪುರಾತನ ಸಂಸ್ಕೃತಿಗಳ ಅರಿಕೆಗೆ ಬಂದರೀತಿ ಮತ್ತು ಆ ಸಮಯದ ವಿಮರ್ಶೆಗೆ ಮಹತ್ವವೂ ಪ್ರಾಪ್ತವಾಗುತ್ತದೆ."[೯] ಋಗ್ವೇದ ಭಾರತೀಯ ಧಾರ್ಮಿಕ ಕ್ಷೇತ್ರದಲ್ಲಿ ಗಳಿಸಿದ್ದ ಗಳಿಸಿರುವ ಮಹತ್ವದ ಸ್ಥಾನವನ್ನು ಆ ಕಾಲದಲ್ಲಿ ಅದರ ಅಧ್ಯಯನಕ್ಕೆ ಕೊಡಲಾಗಿದ್ದ ಪ್ರಾಮುಖ್ಯವನ್ನೂ ವೇದಾಧ್ಯಯನದಲ್ಲಿ ಮಗ್ನವಾಗಿದ್ದ ಅಂದಿನ ಮನೋಧರ್ಮವನ್ನು ಗಮನಿಸಿದರೆ **ಋಗ್ವೇದ ಪ್ರಭಾವ-ಪ್ರೇರಣೆಗಳ** ವಲಯ ಸಹಜವಾಗಿಯೇ ಸಾಕಷ್ಟು ವ್ಯಾಪಕವಾಗಿದ್ದಿರಬೇಕೆಮಬುದು ಸ್ಪಷ್ಟವಾಗುತ್ತದೆ. ಧರ್ಮಜ್ಞಾನದ ಲಾಲನೆಯಿಂದ ವೇದಾಧ್ಯಯನ ಮಾಡುವವರಿಗೆ **ಕೂಡ ಮಹಾಭಾರತದ** ಅಧ್ಯಯನದಿಂದ ಲಾಭವಾಗಬಲ್ಲದು; ತಾತ್ಪರ್ಯವೇನೆಂದರೆ; ವೇದದ ಅರ್ಥ

ನಿರ್ಣಯಿಸಲು ಅನೇಕ ಸಾಧನೆಗಳಿವೆ; ಅವುಗಳಲ್ಲಿ ಮಹಭಾರತದ ಕೆಲವು ಭಾಗಗಳೂ ಕೂಡಾ ಆಗಿವೆ; ಆದುದರಿಂದಲೇ **ಮಹಾಭಾರತದ** ಮನನವು ಈ ದೃಷ್ಟಿಯಿಂದಲೂ ಉಪಯೋಗಕರವಾಗಿದೆ. ವೇದದ ನಂತರ ಪ್ರಮಾಣಗ್ರಂಥವೇ ಈ **'ಪಂಚಮವೇದ'ವೆಂದ ಮಹಾಕಾವ್ಯವಾದ ಈ 'ಮಹಾಭಾರತ'ವನ್ನು ಪರಿಗಣಿಸಲಾಗಿದೆ.**"[೧೦] ಈ ಎಲ್ಲದಕ್ಕೂ ಕಾರಣ ಇದೇ ಆಗಿದೆ. ಮಹಾಭಾರತದ ವಿವಿಧ ಪಾಠಗಳು ಕಣ್ಣಿಗೆ ಬೀಳುತ್ತವೆ. ಅವುಗಳ ಗಾತ್ರ ಬಾಹುಳ್ಯವನ್ನು ಈ ಅಂಕಿಅಂಶಗಳಿಂದಲೂ ಊಹಿಸಬಹುದು; **'ಆದಿಪರ್ವ'ದಲ್ಲಿ ೧೨೧ ದೀರ್ಘ ಪ್ರಕರಣಗಳೂ, ೧೬೩೪ ಸಣ್ಣ ಪ್ರಕರಣಗಳೂ** ಪ್ರಕ್ಷಿಪ್ತಗಳೆಂದು ಹಸ್ತಪ್ರತಿಗಳು ಸಾಕ್ಷ್ಯವಿತ್ತಿವೆ. **'ವಿರಾಟ ಪರ್ವ'ದಲ್ಲಿ ೬೨ ದೀರ್ಘ ಪ್ರಕರಣಗಳು, ೧೧೭೮ ಸಣ್ಣ ಪ್ರಕರಣಗಳು; 'ಉದ್ಯೋಗಪರ್ವ'ದಲ್ಲಿ ೧೪ ದೀರ್ಘ ಪ್ರಕರಣಗಳು, ೫೫೫ ಸಣ್ಣ ಪ್ರಕರಣಗಳು ಅಧಿಕವಾಗಿವೆ.**"[೧೧] ಮಹಾಭಾರತದ ಬೆಳವಣಿಗೆಯಲ್ಲಿ ಇಂಥ ಶ್ರದ್ಧಾಳುಗಳ ಕೊಡುಗೆಗಳು ಲೆಕ್ಕವಿಲ್ಲದಷ್ಟು ಕಂಡುಬರುತ್ತವೆ. ಅಸಮಂಜಸಗಳೂ ಆದ ತುಂಡುಗಳು, ತುಣುಕುಗಳೂ ಗ್ರಂಥದುದ್ದಕ್ಕೂ ಕಾಣಸಿಗುತ್ತವೆ. **ಗತಯುಗದ ವರ್ಣನೆ ಪ್ರಕೃತ ಕಾಲದ ದೃಷ್ಟಿಯಿಂದ ಮರ್ಯಾದಾತಿಕ್ರಮವೆನಿಸಿದಾಗ** ಪೂರ್ವಪಾಠವನ್ನು ಯಥೋಚಿತವಾಗಿ ವ್ಯತ್ಯಾಸ ಮಾಡಲು ಹರಿಕಥಾಕಾರರು ಹಿಂದೆಗೆಯಲಿಲ್ಲ.

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಹಾಭಾರತ, ಭಾ.ದ.ಪ್ರ., ಭಾ–೧, ಪು. ೨

೨. ಡಾ॥ ಜಿ.ಎಂ. ಹೆಗಡೆ, "ಮಾಸ್ತಿಯವರ ವಿಮರ್ಶೆ ಒಂದು ಅಧ್ಯಯನ", ಪು. ೮೩.

೩. ಎಸ್.ಆರ್. ರಾಮಸ್ವಾಮಿ, "ಮಹಾಭಾರತ ಬೆಳವಣಿಗೆ", ಪು. ೨೨

೪. ಡಾ॥ ದ.ರಾ.ಬೇಂದ್ರೆ, "ಮತಧರ್ಮ ಮತ್ತು ಆಧುನಿಕ ಮಾನವ", ಪು. ೧೭.

೫. ವೈದ್ಯಗುರು ಎಂ.ಆರ್. ಭಟ್, "ಭಾರತ ಗಾಂಭೀರ್ಯ", ಪು. ೬

೬. ಡಾ॥ ಶಂ.ಬಾ. ಜೋಶಿ., "ಋಗ್ವೇದ ಸಾರ", ಭಾ–೧, ಪು.೧೧

೭. ಡಾ॥ ವಾ.ರಾ. ಪಂಚಮುಖಿ, "ಗುರುಸ್ತೋತ್ರದಲ್ಲಿ ತತ್ವಜ್ಞಾನ", ಪು. ೨೭.

೮. ಋ.ಸಾ.ಪು , ಪು. ೨೭.

೯. –– ಅದೇ ––, ಪು. ೧೭.

೧೦. ಡಾ॥ ಪ್ರಧಾನ ಗುರುದತ್ತ, ಮುನ್ನುಡಿ: ಡಿ.ವಿ.ಜಿ., "ಶ್ರೀಕೃಷ್ಣ ಚರಿತೆ", ಪು. ೧೫೬.

೧೧. ಎಸ್.ಆರ್.ರಾಮಸ್ವಾಮಿ, "ಮಹಾಭಾರತದ ಬೆಳವಣಿಗೆ", ಪು. ೬೫, ೬೭.

~~~\*\*\*~~~

## 2. ಮಹಾಕಾವ್ಯವಾದ 'ಮಹಾಭಾರತ'ದ 'ಆಶಯ', 'ಕಥಾವಸ್ತು' ಮತ್ತು 'ಪಾತ್ರಗಳ ಸೃಷ್ಟಿ'ಯ ಕುರಿತು ವಿಮರ್ಶಾತ್ಮಕ ಚಿಂತನೆ :

ವ್ಯಾಸ ಋಷಿ ರಚಿಸಿರುವ ಮಹಾಕಾವ್ಯ 'ಮಹಭಾರತ'ದ ಒಟ್ಟಾರೆ ಆಶಯವೇನು? ಮತ್ತು ಇದರ ಕಥಾವಸ್ತು, ಅದರೊಳಗಿನ ಪಾತ್ರಗಳ ಮೂಲ ಆಕೃತಿ ಎಲ್ಲಿಯವು? ಎನ್ನುವ ಸಮಸ್ಯೆಗಳಿಗೆ ಸೂಕ್ತ ಪರಿಹಾರವನ್ನು ಈ ಅಧ್ಯಾಯದಲ್ಲಿ ಹುಡುಕಲು ಪ್ರಯತ್ನಿಸಲಾಗಿದೆ.

**'ಮಹಾಭಾರತ'ಕ್ಕೂ** ಹಿಂದಿನ ಕಾಲ 'ವೇದಗಳ'ದ್ದು. ಆದ್ದರಿಂದ 'ಮಹಾಭಾರತ' ಮಹಾಕಾವ್ಯಕ್ಕೆ 'ಋಗ್ವೇದ'ದ ಹಿನ್ನೆಲೆ, ಪ್ರೇರಣೆ, ಪ್ರಭಾವಗಳು ಅಪಾರ ಪ್ರಮಾಣದಲ್ಲಿ ಹೊಂದಿರುವುದನ್ನೇ ಕಾಣುತ್ತೇವೆ.
~~~

ಭಾರತೀಯ ಸಂಸ್ಕೃತಿ, ನಾಗರೀಕತೆಗಳಿಗೆ ಉಗಮಸ್ಥಾನವೂ, ಜಗತ್ತಿನಲ್ಲಿಯೇ ಅತೀ ಪ್ರಾಚೀನವಾದ ಗ್ರಂಥ ಈ **'ಋಗ್ವೇದ.' 'ಮಹಾಭಾರತದ ಅಧ್ಯಯನಕ್ಕೆ ಹಿನ್ನೆಲೆಯಾಗಿ ಏಕೆ ಮತ್ತು ಹೇಗೆ ಇದು ಪರಾಮರ್ಶನ ಗ್ರಂಥವಾಗಬೇಕು**? ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ. ಕೆಲವರಿಗಂತೂ ಇದು ತೀರಾ ಅಸಂಬದ್ಧವಾದದ್ದು ಮತ್ತು ನಿಷ್ಕಾರಣವಾದುದು ಎಂದೂ ಅನಿಸದೇ ಇರಲು ಸಾಧ್ಯವಿಲ್ಲ. **'ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು'** ಎಂಬ ವಿಷಯವನ್ನು ಅಧ್ಯಯನಕ್ಕೆ ತೆಗೆದುಕೊಂಡಾಗ 'ಋಗ್ವೇದ' ಹೇಗೆ ಉಪಯುಕ್ತವಾಗುತ್ತದೆ? ಅದರಿಂದ ಅಂತಹ 'ಆಧುನಿಕ ಚಿಂತನೆ'ಗಳನ್ನು ಮಾಡಲು ಹೇಗೆ ಸಾಧ್ಯ? ಎಂದು ಅಲ್ಲಗೆಳೆಯಲೂಬಹುದು. ಆದರೆ ವೇದವ್ಯಾಸರು 'ಋಗ್ವೇದ' ಮತ್ತು 'ರಾಮಾಯಣ'ದಂತಹ ಕೃತಿಗಳನ್ನು ಆಕರವಾಗಿಯೋ ಅಥವಾ ಸ್ಫೂರ್ತಿಯಾಗಿಯೋ ಪಡೆದು 'ಮಹಾಭಾರತ'ವನ್ನು ರಚಿಸಿರುವುದಂತೂ ಸತ್ಯ. ಇದನ್ನು 'ಮಹಾಕಾವ್ಯವಾದ ಮಹಾಭಾರತ'ದಲ್ಲಿ ಬರುವ **ಮುಖ್ಯ ಘಟನೆಗಳು** ಮತ್ತು ಅವುಗಳು ಹೇಗೆ ಹುಟ್ಟಿದವು? ಎಂಬ **ತಾತ್ವಿಕ** ಸಮೀಕ್ಷೆಯು ಕಾವ್ಯದೊಳಗಿರುವ ಪ್ರಮುಖ ಪಾತ್ರಗಳಲ್ಲಿ ಕಂಡಬರುವಂತಹ ಪುರುಷಾರ್ಥಗಳಲ್ಲಿ ಮುಖ್ಯವಾದ ಕಾಮವನ್ನು ನಡೆಸಿಕೊಳ್ಳುವ ರೀತಿಯಲ್ಲಿ ಕಂಡುಬರುವ **ನೈತಿಕತೆ** ಹಾಗೂ **'ಮಹಾಭಾರತ'ದ ಸಮಕಾಲೀನ ಸಾಮಾಜಿಕ ಜೀವನದ ಸಾಂಸ್ಕೃತಿಕ** ಅಧ್ಯಯನ ಸಮೀಕ್ಷೆಯಲ್ಲಿ ಇದಕ್ಕೆಲ್ಲಾ ಉತ್ತರ ಸಿಗುತ್ತದೆ.

ಪ್ರಮುಖವಾಗಿ 'ಋಗ್ವೇದದ ೧೦ನೇ ಮಂಡಲದ ೩೪ನೇ ಸೂಕ್ತದ ೧೪ನೇ ಋಕ್ಕು' ಇದನ್ನು ಪರಾಮರ್ಶಿಸಿದಾಗ ವ್ಯಾಸರು ರಚಿಸಿರುವ 'ಮಹಾಭಾರತ' ಮಹಾಕಾವ್ಯದಲ್ಲಿ ಬರುವಂತಹ ಪ್ರಮುಖ ಘಟನೆಗಳಿಗೆ ಹಿನ್ನೆಲೆಯು ಸ್ಪಷ್ಟಚಿತ್ರಣ ನಮಗೆ ಅರ್ಥವಾಗುತ್ತದೆ. ಈ ಸೂಕ್ತಕ್ಕೆ 'ಇಲೂಷ'ನೆಂಬ ಋಷಿಯ ಪುತ್ರನಾದ 'ಕವಷ'ನೆಂಬ ಋಷಿಯು ಅಥವಾ 'ಮುಜವಾನ್' ಎಂಬುವವನ ಪುತ್ರನಾದ 'ಅಕ್ಷ'ನೆಂಬುವವನು ಋಷಿಯು ಅವನೇ. ೧೦ನೇ ಮಂಡಲದಲ್ಲಿ ಬರುವ ಋಕ್ಕುಗಳಲ್ಲಿ ಜೂಜುಗಾರರ ಮತ್ತು 'ದ್ಯೂತ'ವೆಂಬ ಪಗಡೆಯಾಟದ ಪ್ರಸಕ್ತಿಯೂ ಅದರಿಂದುಂಟಾಗುವ ನಿಂದೆಯೂ ಸಂಪೂರ್ಣವಾಗಿರುವುದು. ಹೀಗೆ 'ಋಗ್ವೇದ'ದಲ್ಲಿರುವ 'ಅಕ್ಷದ್ಯೂತ' ವ್ಯಾಸ ಮಹರ್ಷಿಗಳ ಮೇಲೆ ವಿಶೇಷ ಪ್ರಭಾವ ಬೀರಿದೆ.

ಪಾಂಡವರು 'ಕಾಮ್ಯಕವನ'ದಲ್ಲಿ 'ವನವಾಸ'ವನ್ನು ಅನುಭವಿಸುತ್ತಿದ್ದಾಗ ಅಲ್ಲಿಗೆ ಒಮ್ಮೆ ಬೃಹದಶ್ವ ಮಹರ್ಷಿಗಳು ಆಗಮಿಸುತ್ತಾರೆ. ತಾನೆಂತಹ ದುರದೃಷ್ಟಶಾಲಿಯೆಂದು ದುಃಖಿಸಿದಾಗ ಯುಧಿಷ್ಠರನಿಗಿಂತ ಹೆಚ್ಚು ದುಃಖವನ್ನು ಅನುಭವಿಸಿದ ನಿಷಧ ದೇಶದ ರಾಜನಾದ ನಳಚಕ್ರವರ್ತಿ ತನ್ನ ತಮ್ಮನಾದ ಪುಷ್ಕರನೊಂದಿಗೆ ಪಗಡೆಯಾಟವನ್ನಾಡಿ ರಾಜ್ಯಕೋಶಾಧಿಗಳನ್ನೆಲ್ಲಾ ಪಣವಿಟ್ಟು ಸೋಲುತ್ತಾನೆ. ವನವಾಸಿಯಾಗುತ್ತಾನೆ. (ವನಪರ್ವ-೫೩ನೇಅಧ್ಯಾಯ) ಈ 'ನಳೋಪಾಖ್ಯಾನ' ಮಹಾಭಾರತಕ್ಕಿಂತಲೂ ಹಿಂದೆಯೇ ನಡೆದಿರುವಂತಹದ್ದು. ಬೃಹದಶ್ವ ಮಹರ್ಷಿಗಳು ಯುಧಿಷ್ಠಿರನಿಗೆ ಹೇಳಿದ ಈ ಉಪಾಖ್ಯಾನವು ವ್ಯಾಸ ಋಷಿಗಳಿಗೆ ವೇದ ವಿಂಗಡಿಸುವಾಗಲೇ ತಿಳಿದಿರುತ್ತದೆ. ಅಂದರೆ ರಾಜ-ಮಹಾರಾಜರ, ಜನಸಾಮಾನಯರ ಜೀವನಕ್ಕೂ ಸರ್ವವಿನಾಶಕವಾದ ಈ ಪಗಡೆಯಾಟವನ್ನು ನಿಷೇಧಿಸಬೇಕೆಂದು ವ್ಯಾಸ ಋಷಿಗಳು ದೃಢನಿರ್ಧಾರ ಮಾಡುತ್ತಾರೆ. ಹೀಗೆ 'ರಾಮಾಯಣ ಮಹಾಕಾವ್ಯ'ವು ಪ್ರೇರಣೆ ನೀಡಿ, ಪ್ರಭಾವವನ್ನು ಬೀರಿರುವುದು ನಮಗೆ ತಿಳಿದುಬರುತ್ತದೆ. ಕ್ರೌಂಚ ಪಕ್ಷಿಗಳ ಮಿಥುನಕ್ಕೆ ರಾಮಾಯಣ ಮಹಾಕಾವ್ಯಕ್ಕೆ 'ಕಾವ್ಯಪ್ರತಿಮೆ'ಯಾದಂತೆ; ಅಂದರೆ ಕ್ರೌಂಚ ಪಕ್ಷಿಗಳಾಗಿ ರಾಮ-ಸೀತಾ, ನಿಷಾದನ ಬದಲಾಗಿ ರಾವಣ ಪಾತ್ರಗಳು ಉದ್ಭವಿಸಿತು. ಅದೇರೀತಿ 'ಋಗ್ವೇದ'ದಲ್ಲಿನ ಬಹಳ ವಿನಾಶಕಾರಿಯಾದ 'ಅಕ್ಷದ್ಯೂತ'ವು ವ್ಯಾಸ ಮಹರ್ಷಿಗಳಿಗೆ 'ಕಾವ್ಯಪ್ರತಿಮೆ'ಯಾಯಿತು.

"ಮಹಾಭಾರತವನ್ನು ಓದುತ್ತಾ ಹೋದಂತೆ ನಮಗೆ ಈ ಕಾವ್ಯವು ಮನುಷ್ಯಜೀವನದ ದಿವ್ಯ ನಿಗೂಢ ವಿಶ್ಲೇಷಣೆಗೆ ಹೇಗೆ ತೊಡಗಿದೆ ಎಂಬುದನ್ನು ಪ್ರತ್ಯಕ್ಷ ಸಾಕ್ಷಿಗಳ ಮೂಲಕ ಸಂಸ್ಥಾಪಿಸುತ್ತಾ, ಸತ್ಯವನ್ನು ಪ್ರಾಂಜಲವಾಗಿ ಸ್ಥಾಪಿಸುವ ವಿಧಾನವನ್ನು ಗಮನಿಸಬಹುದು."[1] ವೇದವ್ಯಾಸರು 'ಋಗ್ವೇದ'ದಲ್ಲಿ ಪ್ರಸ್ತಾಪಿಸಿರುವ 'ಪಗಡೆಆಟ' ಹೇಗೆ ನಳಚಕ್ರವರ್ತಿಯರಂತಹ ಉತ್ತಮರನ್ನೂ ನಿರ್ಭಾಗ್ಯರನ್ನಾಗಿ ಮಾಡಿಸಲು ಕಾರಣವಾಗುತ್ತದೆ ಎಂಬುದನ್ನು ಗಂಭೀರವಾಗಿ ಚಿಂತಿಸತೊಡಗಿದ್ದಾರೆ. "ಜೂಜುಗಾರರ ಜೀವನವನ್ನು ಗಂಭೀರವಾಗಿ ಆವರಿಸಿದ ಮಹಾ ನಿಗೂಢದ ನಿಸ್ತಂತುಗಳನ್ನು ಕಂಡು ಅವಾಕ್ಕಾದ ಮಹರ್ಷಿಯ ಈ ಬೃಹದ್ರಹಸ್ಯದ ಘಟನ ಪರ್ಯಾಯಗಳನ್ನು ಸಂಭೇದಿಸಲೆಂದೇ, ದಿವ್ಯಸತ್ಯವನ್ನು ಸಂಬೋಧಿಸಲೆಂದೇ 'ಮಹಾಭಾರತ' ರಚನೆ ಮಾಡಿದ್ದರೆ."[2] 'ಋಗ್ವೇದ' ಕಾಲದಷ್ಟು ಹಿಂದೆಯೇ ಆಚರಣೆಯಲ್ಲಿದ್ದ 'ದ್ಯೂತ'ದಂತಹ ರಾಜಕ್ರೀಡೆಯ ಬಗ್ಗೆ ಬಹುಶಃ ಜಗತ್ತಿನ ಯಾವೊಬ್ಬ

ಅನ್ಯ ದಾರ್ಶನಿಕ ಕವಿಯೂ ವ್ಯಾಸರಷ್ಟು ಗಂಭೀರವಾಗಿ ಜೀವನ ನಿಗೂಢದ ನಿರ್ಭೇದ ಮಾಡಲು ಸಮರ್ಥವಾಗಿಲ್ಲ ಎಂಬುದೇ 'ಮಹಾಭಾರತ'ದ ಹಿಮಾಲಯ ತುಲ್ಯ ಹಿರಿಮೆಗೆ ಸ್ವಯಂ ಸಾಕ್ಷಿಯಾಗಿದೆ. ಇಲ್ಲಿ ಕಥೆಗೆ ನೀಡುವ ಪ್ರಾಶಸ್ತ್ಯಕ್ಕಿಂತಲೂ ಹೆಚ್ಚಾಗಿ ನಾವು ಈ ಬೃಹತ್ಕಾವ್ಯದ ಸಮುದ್ರ ಗರ್ಭದಲ್ಲಿ ಸುಸ್ಥಿತವಾದ ಸಂಚಿಂತನೆಗೆ, ಇದರ ಒಡಲಾಳದಲ್ಲಿ ಅಡಗಿದ ತತ್ವರಹಸ್ಯಕ್ಕೆ ಪ್ರಾಧಾನ್ಯವನ್ನು ನೀಡಿದಾಗ ಮಾತ್ರ ಕವಿಯ ಸದಾಶಯಕ್ಕೆ ಸಮುಚಿತವಾದ ಬೆಲೆ ನೀಡಿದಂತಾಗುತ್ತದೆ. ಅಪ್ರತಿಮವಾದ ವ್ಯಾಸ ಋಷಿಯ ವಿಶಾಲ ಜ್ಞಾನಚಕ್ಷುವಿಗೆ ಕಾಣದ ಸತ್ಯವೇ ಇಲ್ಲ. ಅರ್ಥವಾಗದ ರಹಸ್ಯವೇ ಇಲ್ಲ. ಗೋಚರಿಸದ ಗೂಢವೇ ಇಲ್ಲಾ; ಎಲ್ಲಾ ಇಂದ್ರಿಯ ಹಾಗೂ ಅತೀಂದ್ರಿಯ ಸತ್ಯಗಳು ಬೊಂಬೆಯಂತೆ ಆ ಮಹರ್ಷಿಯ ಎದುರಿನಲ್ಲಿ ಮೌನವಾಗಿ ನಿಂತುಕೊಂಡಿವೆ."[೩] 'ಋಗ್ವೇದ'ದ 'ದ್ಯೂತ ಪ್ರಕರಣ' ಹೇಗೆ ನಳನಂತಹ ಚಕ್ರವರ್ತಿಯ ಅಧಃಪಾತಕ್ಕೆ ಕಾರಣವಾಗುತ್ತದೆ ಎಂಬ ಚಿಂತನೆಯಲ್ಲಿ ಉದ್ಭವವಾದ ಕಥಾವಸ್ತುವಿಗೆ ವಾಲ್ಮೀಕಿ ಮಹರ್ಷಿಗಳ ರಾಮಾಯಣ ಮಹಾಕಾವ್ಯದ ಪಾತ್ರಗಳೂ ಪ್ರಚೋದಿಸಿತು ಎಂಬುದನ್ನು ವ್ಯಾಸ ಮಹರ್ಷಿಯು ಮಾನವ್ಯದ ವಿಜಯವನ್ನು, ನೀತಿಯ ಅಧಿಪತ್ಯವನ್ನು, ಆತ್ಮದ ಸರ್ವ ವ್ಯಾಪಕತೆಯನ್ನು, ಪಾತ್ರಗಳ ಹೃದಯ ಸಂವಾದಶೀಲತೆಯನ್ನು, ಭಾವದ ಸಮಾಲಿಂಗವನ್ನು, ಪ್ರೇಮದ ಪುನೀತ ಸಾರ್ವಭೌಮಿಕತೆಯನ್ನು, ಸತ್ಯದ ಅಜಿಂಕ್ಯ ಸ್ವಾಮಿತ್ವವನ್ನು ಮಹಾಭಾರತದ ಪಾತ್ರಗಳಾದ ಭೀಷ್ಮ, ಪಾಂಡು, ಯುಧಿಷ್ಠಿರ, ವಿದುರ, ಕುಂತಿ, ಗಾಂಧಾರಿ, ದ್ರೌಪದಿ, ದ್ರೋಣ, ಕೃಪ ಮುಂತಾದ ಪಾತ್ರಗಳಲ್ಲಿ ನಿಸ್ಸಂದಿಗ್ಧವಾಗಿ ಮಹಾಕವಿ ಸಾಧಿಸಿರುವುದನ್ನು ಕಾಣುತ್ತೇವೆ. ಈ ಕಾರಣಕ್ಕಾಗಿಯೇ ವ್ಯಾಸ ಮಹರ್ಷಿಗಳು ಆಯ್ಕೆ ಮಾಡಿದ ಪಾತ್ರಗಳಿಂದ ಕೂಡಿದ ಮಹಾಕಾವ್ಯ 'ಮಹಾಭಾರತ' ರಚನೆಯ ಸ್ವರೂಪವೇ ಹೇಗೆ ಸಂಗತಿಗಳಿಗೆ ಕುಲವಂಶ ಪರಂಪರೆಯ ವೇಷವನ್ನು ತೊಡಿಸಿ ಅವನ್ನು ಮಹಭಾರತಕ್ಕೆ ಜೋಡಿಸಲಾಗಿದೆ ಮತ್ತು ಭಾರತವೇ 'ಪಂಚಮವೇದ'ವೆಂದು ಅದಕ್ಕೆ ದೈವೀ ಪ್ರತಿಷ್ಠೆಯನ್ನು ಗಳಿಸಿಕೊಡಲಾಯಿತು ಮತ್ತು ಅದರ ಪರಿಣಾಮವು ಏನಾಯಿತೆಂದರೆ, "ಜನಸಾಮಾನ್ಯರೂ ಈ ಸಂಕೇತಪೂರ್ಣ ವೇದದಲ್ಲಿಯೂ ಇತಿಹಾಸವನ್ನು ನೋಡುತ್ತಿದ್ದರು. ಇದು ಈ ಮಹಾಕವಿಯ ವಿಸ್ಮಯಜನಕವಾದ ನಿರಂಕುಶತ್ವ ಎನ್ನಬೇಕಲ್ಲದೇ ಮತ್ತೇನು? ಅನಿಸುತ್ತದೆ. ವ್ಯಾಸರಿಗೆ ದಿವ್ಯತ್ವವನ್ನು ನೀಡಿ ಭಗವಂತನನ್ನು ಮಾಡಿದ ಮೇಲೆ ಅವರ ಹೆಸರುಳ್ಳ ಕಾವ್ಯದ ವಿಷಯವಾಗಿ ಶಂಕೆಯನ್ನು ಹೇಗೆ ಮತ್ತು ಯಾರು ಎತ್ತಬೇಕು?"[೪]

"ಭಾರತೀಯರ ಜೀವನದ ಪ್ರಣಾಳಿಕೆಯಂತಿರುವ ವಿಶ್ವಕೋಶವೆಂದೇ ಪ್ರಸಿದ್ಧವಾಗಿರುವ ಇಂಥ ಅಖಂಡ ಆತ್ಮವಿಶ್ವಾಸದೊಂದಿಗೆ ಬದುಕಿನ ಅರ್ಥಾನ್ವೇಷಣೆಯನ್ನು ಪ್ರಾರಂಭಿಸಿದ ಮಹಾಭಾರತದ ಮಹರ್ಷಿಯು ತನ್ನ ಅನುಭವದ ಶ್ರೀಮಂತವಾದ ವಾಣಿಯ ಮೂಲಕ ಭಾರತೀಯ ಜನಮಾನಸದ ಸಮಷ್ಟಿ ಭಾವನೆಗಳಿಗೆ ಅಭಿವ್ಯಕ್ತಿ ನೀಡಿದ್ದಾರೆ."[೫] 'ದ್ಯೂತ'ದಂತಹ ವಿನಾಶಕಾರಿ ಜೂಜಿನ ದುಷ್ಪರಿಣಾಮವನ್ನು ಅಭಿವ್ಯಕ್ತಿಗೊಳಿಸುವ ಜಗತ್ತಿನ ಕಲ್ಯಾಣದ ಏಕಮೇವ ಕಾಮನೆಯಿಂದ ರಚಿತವಾದ ಗ್ರಂಥ ಈ ಮಹಾಭಾರತ."[೬] ಆದ್ದರಿಂದ ವ್ಯಾಸ ಮಹರ್ಷಿಗಳು 'ಮಹಾಭಾರತ' ರಚಿಸುವ ಮೂಲೋದ್ದೇಶದ ಧರ್ಮಚಿಂತನೆಯು 'ದ್ಯೂತ'ದ ದುಷ್ಪರಿಣಾಮವನ್ನು ಗ್ರಂಥದ ಪ್ರಾಣ ಚೈತನ್ಯವನ್ನಾಗಿಸಿದೆ. "ವೇದಕಾಲದ ಸಮಕಾಲೀನ ಜೀವನದ ಜ್ವಲಂತ ದೃಷ್ಟಾಂತವೊಂದರ (ದ್ಯೂತ)ದ ಮೂಲಕ ತನ್ನ ಸುತ್ತಲಿನ ಸಮಾಜಕ್ಕೆ, ರಾಷ್ಟ್ರಕ್ಕೆ ಹಾಗೆಯೇ ಸಮಗ್ರ ಮಾನವ ಕುಲಕೋಟಿಯ ಅರಿವಿನ ಹಾದಿಯಾಯಿತೆಂದು ತೋರಿಸುವ ಏಕಮೇವ ಗಂತವ್ಯದೊಂದಿಗೆ ಮಹರ್ಷಿ ವ್ಯಾಸರು ಈ ಮಹಾಕೃತಿಯನ್ನು ರಚಿಸಿದರು."[೭] ಎಂದು ತಿಳಿದುಬರುತ್ತದೆ. 'ಸಭಾಪರ್ವ'ದಲ್ಲಿ 'ದ್ಯೂತ'ದ ಬಗ್ಗೆ ಹೆಚ್ಚಿನ ವಿವರಗಳನ್ನು ತಿಳಿದುಬರುತ್ತದೆ. ಬಹುಶಃ ಮಹಾಭಾರತದ ಇತರ ಪ್ರಮುಖ ಚರಿತ್ರನಾಯಕರ ಹಾಗೇಯೇ ವ್ಯಾಸರೂ ತಮ್ಮ ಜೀವಿತದ ಕಾಲದಲ್ಲೇ ತನ್ನ ಸುತ್ತಲೂ ನಡೆದ (ದ್ಯೂತದ ದುಷ್ಪರಿಣಾಮ) ಅಭೂತಪೂರ್ವ ವಿಧ್ವಂಸವನ್ನು ಕಂಡು ತೀವ್ರವಾಗಿ ತಳಮಳಗೊಂಡಿದ್ದಾರೆ. ಭೀಷ್ಮ, ಗಾಂಧಾರಿ, ಧೃತರಾಷ್ಟ್ರ, ಕರ್ಣ,ಕುಂತಿ, ಯುಧಿಷ್ಠಿರ, ದ್ರೌಪದಿ ಇತ್ಯಾದಿಯಾಗಿ ಎಲ್ಲರೂ ಚಿತ್ತವೇಧಕವಾದ ವೇದನೆಯಲ್ಲಿ ತಬ್ಬಿಬ್ಬುಗೊಂಡಿದ್ದಾರೆ. ಕಾಲ ಕೆಳಗೆ ಕುಸಿಯುತ್ತಿರುವ ನೆಲ, ಕಣ್ಣ ಮುಂದೆ ಹುಡಿಯಾಗುತ್ತಿರುವ ಕನಸುಗಳು ಆ ಚೇತನಗಳ ಅಂತಃಸತ್ವವನ್ನೇ ಉಡುಗಿಸಿಬಿಟ್ಟಿವೆ. ಮನುಷ್ಯನು ತನ್ನ ಮೂಲ ಧರ್ಮವಾದ ಬದುಕನ್ನು ಬಿಟ್ಟು ಇನ್ನೆಲ್ಲಾ ಅಚಾತುರ್ಯಗಳಿಗೆ ಕೈಹಾಕಿ ವಿಶಾಲವಾದ ಜನಪದದ ಸಮಸ್ತವನ್ನೂ ತುಳಿದು-ಅಳಿದು ವಿಕಟಾಟ್ಟಹಾಸ ಮಾಡಿದ ಭೀಕರ ದುರಂತದ ಆಘಾತಕ್ಕೆ ಸಿಕ್ಕಿ ಸೋತು ಸುಣ್ಣವಾಗಿವೆ. ಈ ಧೀರೋದಾತ್ತ ಚೇತನಗಳು. "ಅರ್ಧಸತ್ಯಗಳ ಅವಲಂಬನದ ಮೇಲೆ ನಿಲ್ಲಿಸಿದ ಮಹಾಭಾರತದ

ಸಂಮೋಹನೆಯಿಂದ ಹೊರಬರುವುದು ಸತ್ಯಶೋಧನೆಯ ದೃಷ್ಟಿಯಿಂದ ಅಗತ್ಯವಾಗಿದೆ. ಇದಕ್ಕಾಗಿಯೇ ವೇದಗಳೊಳಗಿನ ವೃಶ್ಚಿಕ ಸಂಕೇತಗಳ ಹಿನ್ನೆಲೆಯಿಂದಲೇ ಮಹಾಭಾರತದಂಥ ಈ ರಾಷ್ಟ್ರೀಯ ಆರ್ಷ ಮಹಾಕಾವ್ಯದ ಸಮೀಕ್ಷೆ ಅಗತ್ಯದ್ದು."[೮] ಈ ಸಿದ್ಧಾಂತವನ್ನು ಪ್ರತಿಪಾದಿಸಲು ಮಹಾಭಾರತದ ಆಧುನಿಕ, ವೈಜ್ಞಾನಿಕ ಚಿಂತನೆಗಳ ಮರೆ ಹೋಗಲೇಬೇಕಾಗುತ್ತದೆ.

ಒಟ್ಟಾರೆಯಾಗಿ, ಈ ಮಹಾಕಾವ್ಯದ ಆಶಯವೆಂದರೆ; ಮಹಾಭಾರತದ ಕಥಾವಸ್ತು ವಿನ್ಯಾಸಗೊಂಡು ತಳೆಯುವ ದೃಷ್ಟಿಕೋನಕ್ಕೆ ಕಾರಣ 'ಸಭಾಪರ್ವ'ದ 'ದ್ಯೂತ'ವೆಂಬ ವಿನಾಶಕಾರೀ ಪಗಡೆಯಾಟ. ಏಕೆಂದರೆ; ಈ 'ದ್ಯೂತ'ವೆಂಬ ಪ್ರಕರಣವೇ ಇಲ್ಲದೇ ಹೋಗಿದ್ದರೆ 'ದ್ರೌಪದೀ ವಸ್ತ್ರಾಪಹರಣ'ದ ಸನ್ನಿವೇಶವೂ ಬರುತ್ತಿರಲಿಲ್ಲ. ಕುರು-ಪಾಂಡವರ ದ್ವೇಷವು ಕುರುಕ್ಷೇತ್ರ ಯುದ್ಧವೆಂಬ ಪರಾಕಾಷ್ಠೆಗೂ ಏರುತ್ತಿರಲಿಲ್ಲ. ಭಾರತ ಯುದ್ಧದಿಂದ ಯಾವ ವಿನಾಶವೂ ಸಂಭವಿಸುತ್ತಿರಲಿಲ್ಲ. ಆದ್ದರಿಂದ ಮಹಾಭಾರತದಲ್ಲಿ ವ್ಯಾಸ ಋಷಿಗಳು ತಂದಿರುವ ಈ ಆಶಯದ ಹಿನ್ನೆಲೆ ತಿಳಿಯಬೇಕಾದರೆ ಋಗ್ವೇದದ ೧೦ನೇ ಮಂಡಲದ ೩೪ನೇ ಸೂಕ್ತದ 'ಅಕ್ಷದ್ಯೂತ'ದ ಪರಿಚಯವಿರಬೇಕು. ಸ್ವತಃ ವ್ಯಾಸರ ಈ ಪಾತ್ರಸೃಷ್ಟಿಯ ಸ್ಫೂರ್ತಿಸ್ಥಾನವೂ 'ದ್ಯೂತ' ಪ್ರಕರಣವೇ ಆಗಿದೆ. **ಡಾ॥ ಶಂ.ಬಾ. ಜೋಶಿ** ಅವರು ಅದೇ ಲೇಖನದಲ್ಲಿ ಡಾ॥ ಇರಾವತಿ ಕರ್ವೆ ಅವರ **ಮಹಾಭಾರತದ ಆಶಯದ ವಿಷಯ** ತಿಳಿಸಿ ಶಂಕಾರೂಪಿಯಾದ ಸವಾಲು ಓದುಗರ ಇದಿರು ಇಡುತ್ತಾರೆ. "ಮಾನವೀ ಪ್ರಯತ್ನಗಳು ನಿಷ್ಫಲವಾಗಿರುತ್ತವೆ. ಮಾನವೀಯ ಜೀವನವು ವಿಫಲವೇ ಆಗಿರುವುದು. ಈ ಪಾಠವನ್ನು ಮನಸ್ಸಿನಲ್ಲಿ ಬಿಂಬಿಸಲಿಕ್ಕೆ ರಚಿಸಿರಲಿಕ್ಕಿಲ್ಲವೇ? ಹೀಗೆ ಅವರು (ಸತ್ಯಕಥಾ, ಮಾರ್ಚ್, ೭೩, ಪು. ೭೩) ಹೇಳಿದ್ದಾರೆ. **ಡಾ॥ ಇರಾವತಿ** ಬಾಯಿ ಅವರು ಪ್ರತ್ಯಕ್ಷವಾಗಿ 'ದ್ಯೂತ'ದ ಹೆಸರು ಹೇಳದಿದ್ದರೂ ಪರೋಕ್ಷವಾಗಿ 'ಮಾನವೀಯ ಪ್ರಯತ್ನಗಳು ನಿಷ್ಫಲವಾಗುತ್ತವೆ' ಎಂದು ಒಪ್ಪಿಕೊಂಡಿರುತ್ತಾರೆ. 'ದ್ಯೂತ'ದಲ್ಲಿ ಪಾಂಡವರ ಪ್ರಯತ್ನ ವಿಫಲವಾಗುವುದೇ ಇದಕ್ಕೆ ಸಾಕ್ಷಿ. ಮುಂದುವರೆಯುತ್ತಾ ***ಮಹಾಭಾರತದ ಕಥಾವಸ್ತು ಅದರೊಳಗಿನ ಪಾತ್ರಗಳ ಮೂಲ ಆಕೃತಿ ಇವು ಎಲ್ಲಿವೆಯೆಂದು*** ನಿಶ್ಚಿತವಾದರೇನೇ ಇವರೀರ್ವರಲ್ಲಿ ಯಾರ ಮತವು ನಿಜವೆಂದು ಸ್ಪಷ್ಟವಾಗುವುದು ಸಾಧ್ಯವೆಂದು **ಡಾ॥ ಸುಕ್ತಂಕರ್** ಅವರು ಹೇಳಿರುವುದು ನಮಗೆ ತಿಳಿದುಬರುತ್ತದೆ.

ನನ್ನ ಈ ಅಧ್ಯಯನದಲ್ಲಿ ಮಹಾಭಾರತದ ಕಥಾವಸ್ತು, ಅದರೊಳಗಿನ ಪಾತ್ರಗಳ ಮೂಲ ಆಕೃತಿ ಇವುಗಳ ಶೋಧವೂ ಒಂದು ಅಂಶವಾಗಿದೆ. ಈ ಕುರಿತಾಗಿ ಪ್ರಸ್ತುತ ಅಧ್ಯಾಯದಲ್ಲಿ ಸಂಪೂರ್ಣವಾಗಿ ಪ್ರಮಾಣಸಹಿತವಾಗಿ ವಿವರಿಸಲಾಗಿದೆ.

ಋಗ್ವೇದ ಮತ್ತು ಮಹಾಭಾರತಗಳ ತೌಲನಿಕ ಅಧ್ಯಯನ ಮಾಡಿದಂತೆಲ್ಲಾ ನನ್ನ ಈ ಕನ್ನಡದಲ್ಲಿ ಮಹಾಭಾರತ ಕುರಿತಾದ ಆಧುನಿಕ ಚಿಂತನೆಗಳು ಅಧ್ಯಯನವನ್ನು ಪುಷ್ಟೀಕರಿಸುವ ಹಲವಾರು ಅಂಶಗಳು ನಿಚ್ಚಳವಾಗತೊಡಗುತ್ತದೆ. 'ನಮ್ಮ ರಾಷ್ಟ್ರೀಯ ಪ್ರತಿಭೆ, ಪರಂಪರೆ, ತತ್ವಜ್ಞಾನ, ಜೀವನಾದರ್ಶ ಇವೆಲ್ಲಕ್ಕೂ ಇಂದ್ರ ಗ್ರಹಣ ಹಿಡಿದಂತಾಗಿದೆ..... ಜನಸಾಮಾನ್ಯರ ಅಂತಃಕರಣವನ್ನು ತಟ್ಟಿ ಎಬ್ಬಿಸುವ ರಾಷ್ಟ್ರೀಯ ಆದರ್ಶಗಳಿಲ್ಲದೇ ಹೋದಲ್ಲಿ **ರಾಷ್ಟ್ರದ ಪುನರುತ್ಥಾನ** ಅವರಲ್ಲಿ ಸ್ವಯಂಪ್ರೇರಣೆ, ಕಾರ್ಯೋತ್ಸಾಹ, ತ್ಯಾಗ, ಪೌರುಷಗಳು ಬೆಳೆದು ನಿಲ್ಲವುದಾದರೂ ಹೇಗೆ?.. ಎಂದ ಮೇಲೆ ಜನರೆದೆಗೆ ಸ್ಫೂರ್ತಿ, ಉತ್ಸಾಹಗಳನ್ನು ಎರೆಯಬಲ್ಲ ಭಾರತೀಯತೆಯ ಆದರ್ಶವನ್ನು ಎತ್ತಿಹಿಡಿಯುವುದು ಇದು ತೀರ ಅನಿವಾರ್ಯ ಹಾಗೂ ತುರ್ತು ಕರ್ತವ್ಯವಾಗಿದೆ. ನಮ್ಮ ಭಾರತೀಯತೆಯ ನಮ್ಮ ಸಂಸ್ಕೃತಿ, ಪರಂಪರೆ, ಇತಿಹಾಸ, ತತ್ವಜ್ಞಾನ, ಜೀವನಾದರ್ಶಗಳ ಹಿರಿಮೆ ಈ ಲೋಕದಲ್ಲಿ ಸಾಟಿಯಿಲ್ಲದ್ದು. ನೂರಾರು ಶತಮಾನಗಳವರೆಗೆ ನಮ್ಮ ರಾಷ್ಟ್ರ ಜೀವನವನ್ನು ವೈಭವಶಾಲಿಯಾಗಿ ಮಾಡಿದ್ದಷ್ಟೇ ಅಲ್ಲ; ಜಗತ್ತಿಗೆಲ್ಲ **ದಿವ್ಯಜೀವನ** ಸುಧೆ ಕುಡಿಸಿದಂತಹ ಅದ್ಭುತ ಚೈತನ್ಯ ಅದರಲ್ಲಿದೆ. ಇಂದಿಗೂ ಸಹ "ಆಧುನಿಕ ಜೀವನದ ಅನೇಕ **ವಿಕಟ ಸಮಸ್ಯೆ-ಸವಾಲುಗಳಿಗೆ** ಸಮರ್ಪಕವಾಗಿ ಸಮಾಧಾನ ನೀಡಬಲ್ಲಂತಹ ಸಮಗ್ರ ಜೀವನದೃಷ್ಟಿ, ವಿಚಾರ ಸಂಪತ್ತುಗಳಲ್ಲಿ ಕಂಡುಬರುವ ಮೌಲ್ಯಗಳನ್ನು ಭಾರತದ ಯುವಕರಿಗೆ ನಮ್ಮ ಪ್ರಾಚೀನ ಸಂಸ್ಕೃತಿ, ಅದರ ನಾಗರಿಕತೆ ಮತ್ತು ಪರಂಪರಾಗತವಾದ ಸದಾಚಾರಗಳ ವಿಚಾರಗಳ ತಲಸ್ಪರ್ಶಿಯಾಗಿ ಪರಿಚಯ ಮಾಡಿಕೊಡುವ ಮತ್ತು ಈಗಿನ ವಿಜ್ಞಾನದ ಸಂಶೋಧನೆಗಳು ಆಧುನಿಕ ಸಾಹಿತ್ಯವೂ ನಮ್ಮ ಜೀವನವನ್ನು ಸಾರ್ಥಕವಾಗಿ ರೂಪಗೊಳಿಸುವುದರಲ್ಲಿ ನಮ್ಮ ಸಂಸ್ಕೃತಿಗೆ ಭದ್ರವಾದ ತಳಹದಿಯನ್ನು ಹಾಕಿದೆ."[೯] ಇದರಲ್ಲಿ ಮಹಾಭಾರತದ ಪಾಲೆಷ್ಟು? ಎಂದು ತಿಳಿಯುವುದು ಉದ್ದೇಶ.

"ಇತಿಹಾಸದ ಪರಂಪರಾಗತ ಬರವಣಿಗೆಯಲ್ಲಿ ಗುಣಾವಲಂಬಿಯಾದ ಅನೇಕ ಬದಲಾವಣೆಗಳಾಗಿವೆ. ಇತಿಹಾಸದ ಈಗಿನ ಬರವಣಿಗೆಯು ಎರಡು ಸಂಗತಿಗಳಿಂದ ಪ್ರಭಾವಿತವಾಗಿವೆ.

೧. ವೈಜ್ಞಾನಿಕ ಕ್ರಾಂತಿಯು ಉಂಟುಮಾಡಿದ **ಬೌದ್ಧಿಕ ಪ್ರಭಾವ.**

೨. ಇದರಿಂದ ಗತಕಾಲವನ್ನು ಕ್ರಮಬದ್ಧವಾಗಿ ಬೆಳಕಿಗೆ ತರುವ ಹಾಗೂ ಐತಿಹಾಸಿಕ ಸಂಗತಿಗಳ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚು ನಿಲುವಿಗೆ ಮಹತ್ವ ಬಂದಿದೆ."[೧೦]

ಈ ದೃಷ್ಟಿಯಿಂದ ಮಹಾಭಾರತ ಕಾಲದ 'ಭಾರತದ ಪ್ರಾಚೀನ ಕಾಲದ ಕೆಲವು ಅಂಶಗಳನ್ನು ಪರಿಶೀಲಿಸಿ ಅದರ ಐತಿಹಾಸಿಕ ಋಜುತ್ವದ ವಿಶ್ಲೇಷಣೆ ಮಾಡುವ ಉದ್ದೇಶ. ಸ್ವತಃ ವ್ಯಾಸರೂ ಈ ಪಾತ್ರಸೃಷ್ಟಿಯ ಸ್ಫೂರ್ತಿಸ್ಥಾನವು ಎಲ್ಲಿದೆ ಎಂಬುದನ್ನು ಎಲ್ಲಿಯೂ ಹೇಳಿಲ್ಲ. ಆದರೆ ಆಕರ ಯಾವುದೆಂದೂ ಅವರ ಮಾತುಗಳಲ್ಲಿಯೇ ತಿಳಿದುಬರುತ್ತದೆ.

"ನಾನು ಈ ಮಹಾಗ್ರಂಥದಲ್ಲಿ **ವೇದಗಳ ರಹಸ್ಯವನ್ನು** ಇತರ ಶಾಸ್ತ್ರಗಳ ಸಾರವನ್ನೂ, ದೇವತೆಗಳ, ಮನುಷ್ಯರ ಮತ್ತು ಮೃಗ-ಪಕ್ಷಿಗಳ ಯೋನಿಗಳಲ್ಲಿ ಜನ್ಮಪಡೆಯುವ ಕಾರಣಗಳನ್ನೂ ನಿರೂಪಿಸಿದ್ದೇನೆ. **ಹಿಂದಿನ ಕಾಲದಲ್ಲಿ** ರಾಜರಲ್ಲಿದ್ದ **ಯುದ್ಧಕೌಶಲ** ಇವುಗಳ ವರ್ಣನೆ ಇದೆ. ಆದರೆ ಈ ಮಹಾಗ್ರಂಥವನ್ನು ಪುಸ್ತಕ ರೂಪಕ್ಕೆ ತರಲು ಲೇಖಕನೊಬ್ಬನನ್ನು ಈ ಪೃಥ್ವಿಯಲ್ಲಿ ಕಾಣದವನಾಗಿದ್ದೇನೆ. ಎಂದಾಗ ಬ್ರಹ್ಮನ ಸಲಹೆಯಂತೆ ಗಣೇಶನನ್ನು ವ್ಯಾಸರು ಸ್ಮರಿಸುತ್ತಾರೆ. ಗಣೇಶ ಆಗಮಿಸುತ್ತಾನೆ. ವ್ಯಾಸರು,

**"ನನ್ನ ಮನಸ್ಸಿನಿಂದ ಕಲ್ಪಿತವಾಗಿರುವ ಮತ್ತು ನನ್ನಿಂದಲೇ ಹೇಳಲ್ಪಡುವ ಮಹಾಭಾರತ ಗ್ರಂಥಕ್ಕೆ ನೀನು ಲೇಖಕನಾಗು"**[೧೧] ಎನ್ನುತ್ತಾರೆ. ಇಲ್ಲಿ 'ನನ್ನ ಮನಸ್ಸಿನಲ್ಲಿ ಕಲ್ಪಿತವಾಗಿರುವ' ಎಂದು ವ್ಯಾಸರೇ ಹೇಳುವ ಮಾತನ್ನು ಗಮನಿಸಬೇಕು. ಮತ್ತು ಇಲ್ಲಿಯ ಪಾತ್ರಗಳಿಗೆ ವೈದಿಕ ಸಾಹಿತ್ಯವೇ ಪ್ರೇರಣೆ ಎನ್ನುವುದೂ ಸಿದ್ಧಾಂತವಾಗುತ್ತದೆ.

**ಹಾಗಾದರೆ ದೇವತೆಗಳು ದೇವರುಗಳು ಎಂದರೆ ಯಾರು?**

ಪಾಂಡವರ ಜನನದ ಬಗ್ಗೆ ತಿಳಿಯುವ ಅಧ್ಯಯನ ನಡೆಸಿದಾಗ ಕೆಲವು ಕುತೂಹಲ ಸಂಗತಿಗಳ ಅನಾವರಣವಾಗುತ್ತದೆ. "ದೇವ ಜನರೆಲ್ಲರೂ ಮಾನವ ಜಾತಿಯವರೇ ಆಗಿದ್ದರು. ದೇವಜನರು ಆರ್ಯ ಜನರಂತೆ ಒಂದು ಜನಾಂಗ. ಮಾನವಕೂಟದ ಜನಾಂಗ; ಅನ್ಯಥಾ ಭಾವಿಸುವುದು ಯುಕ್ತವಲ್ಲ. ಟಿಬೆಟ್ಟಿನಲ್ಲಿ ಪ್ರಾಚೀನ ಕಾಲದಲ್ಲಿ ನೆಲೆಸಿದ್ದ ಮಾನವ ಜಾತಿಯ ಜನಾಂಗವೇ ಹಿಮಾಲಯದಲ್ಲಿ ವಾಸಿಸುವ **ದೇವಜನಾಂಗವೆಂದು** ಕರೆಯಲ್ಪಡುತ್ತಿದ್ದರು."[೧೨] ಇವರೆಲ್ಲ ಮನುಷ್ಯರೇ ಆಗಿದ್ದರು. ಈ ಐತಿಹಾಸಿಕ ವಿಷಯವನ್ನು ತಿಳಿದರೆ ಪೌರಾಣಿಕ, ಕಥೆಗಳ **ಭ್ರಮೆಯು ಮಾಯವಾಗುವುದು.** 'ಗಣದೇವರೊಳಗೆ 'ಮರುತ್'ರು ಇದ್ದರು; **'ಮರುತ್'** ಶಬ್ದದೊಡನೆ ಸಂಬಂಧವಿರುವ ಶಬ್ದಗಳು **ಮರ್ತು, ಮರ್ಯ, ಮರ್ತ್ಯ** ಮುಂತಾದವುಗಳು. ಇವರೂ ಕೂಡಾ **ಮನುಷ್ಯ ವಾಚಕರೇ** ಆಗಿರುತ್ತಾರೆ. ವೇದಾಭ್ಯಾಸದ ಸಾಯಣಾಚಾರ್ಯರು ಕೂಡಾ;- **ಮರುತರು ಮೊತ್ತ ಮೊದಲು ಮನುಷ್ಯರೇ ಆಗಿದ್ದರು.** ಆನಂತರ ದೇವರಾದರೆಂದು ಹೇಳುತ್ತಾರೆ.

**"॥ ಸತ್ಮಾತ್ ಸಮಸ್ತಾ ಹರಿ ಸದ್ಗುಣಾನಾಂ ।**
**ನಿರ್ಣೇತೆಯೇಯತೇ ಭಾರತಗಾಕಥೈ ಪಾ ॥ (ಮ.ಭಾ.ತಾ.ನಿ. ಅಧ್ಯಾಯ-೨, ಪದ್ಯ-೬೯.)**

ಮಹಾಭಾರತವು ಸರ್ವಾತ್ಮನಾ ವಿಷ್ಣು ಸರ್ವೋತ್ತಮತ್ವ ಪ್ರತಿಪಾದಾತ್ಮಕವಾದ ಗ್ರಂಥವೇ ಆಗಿದೆ. ಮಹಾಭಾರತವನ್ನು ಬರೆದವರು ವೇದವ್ಯಾಸರು. ಸಾಕ್ಷಾತ್ ಭಗವಂತ ಎಂಬುದೇ ಅಂತರಂಗ ಬಹಿರಂಗ ಪ್ರಮಾ-ಣಗಳ ನಿರ್ಣಯ"[೧೩] **ಎಂದು ಮಹಾಭಾರತದ ಪಾವಿತ್ರ್ಯತೆಯನ್ನು ಕಾಪಾಡಿಕೊಂಡು ಬಂದಿರುವವರು ಪುರಾಣಿಕರು ಮತ್ತು ಯತಿಗಳು.**

ಆಧ್ಯಾತ್ಮ, ಧರ್ಮ, ಭಕ್ತಿ, ದೇವರು-ದಿಂಡಿರುಗಳ ಬೆಳಕಿನಲ್ಲಿಯೇ ಬೆಳಕೊಂಡು ಬಂದ ಮಹಾಭಾರತವನ್ನು ಅನ್ಯದೃಷ್ಟಿಯಿಂದ ಚಿಂತಿಸುವ ಪ್ರಮೇಯವಾಗಲೀ, ವಿಶ್ಲೇಷಿಸುವ ಅಗತ್ಯವಾಗಲೀ ಈವರೆವಿಗೂ ಯಾರಿಗೂ ಕಂಡು

ಬರಲಿಲ್ಲವಾದದ್ದು ಸಹಜ. "ವೈಜ್ಞಾನಿಕ ಮನೋಧರ್ಮದ ಪ್ರಥಮ ಹಾಗೂ ಪ್ರಬಲ ಶತ್ರು ಜನರಿಂದ ಲಂಚ ಪಡೆದು ಅವರು ಕೋರಿದ ವರಗಳನ್ನು ಕರುಣಿಸುವ ಈ ದೇವರು. ಮಾನವಸೃಷ್ಟಿಯಾದ ಮತ್ತು ಸ್ವಾರ್ಥಾತೀತನಲ್ಲದ ಈ ದೇವರ ಸುತ್ತ ಗುರು, ಮಠ–ಮಂದಿರಗಳು, ಜಾತಿ–ಮತ, ಅಂಧಶ್ರದ್ಧೆ ಮುಂತಾದ ವಿಗತಿಗಾಮಿ ಬಲಗಳೆಲ್ಲವೂ ನೇಯ್ದುಕೊಂಡು ಬದುಕನ್ನು ಕಳ್ಳಹಾದಿಯಲ್ಲಿ ತಳ್ಳಿಕೊಂಡು ಹೋಗುತ್ತಿವೆ. **ವೈಜ್ಞಾನಿಕ ಮನೋಧರ್ಮದ ತಾಯಿಬೇರಿಗೆ ಹಿಡಿದಿರುವ ಗೆದ್ದಲು ಈ ದೇವರು.** ರೂಪ, ಗುಣ, ಭಾವನೆ, ಲಹರಿ, ಸಂತೋಷ, ದುಃಖ, ಕೋಪ, ಮತ್ಸರ, ಕಾಮ ಮುಂತಾದ ಸಕಲ ಮಾನವೀಯ ಸದ್ಗುಣ–ದುರ್ಗುಣಗಳಿಂದ ಭಾಧಿತನಾಗಿರುವ, ಜನರ ಅದೃಷ್ಟದ ಜೊತೆ ಚಕ್ಕಂದವಾಡುತ್ತಿರುವ ಮತ್ತು ಅವರಲ್ಲಿ **ನಿಷ್ಕ್ರಿಯತೆ ಪ್ರಚೋದಿಸುತ್ತಿರುವ ಈ ವಿಕರ್ಷಕ ದೇವರನ್ನು ನಿವಾರಿಸದ ಹೊರತು ವೈಜ್ಞಾನಿಕ ಮನೋಧರ್ಮ ಅಭಿವರ್ಧಿಸಲಾರದು.**"[೧೪] ಎನ್ನುವ ಈ ಅಂಶ ಅತ್ಯಂತ ಗಮನಾರ್ಹವಾದುದು.

ಋಷಿಗಳ ಸ್ತ್ರೀಸಂಗ, ಪ್ರಸವವಾದೊಡನೆಯೇ ಮತ್ತೆ ಆ ಸ್ತ್ರೀಗೆ ಕನ್ಯಾವಸ್ಥೆ ಮರಳುವುದು, ವಂಶಾಭಿವೃದ್ಧಿಗಾಗಿ ಅನುಸರಿಸುವ ಅನ್ಯಪುರುಷರೊಂದಿಗಿನ ನಿಯೋಗಪದ್ಧತಿ, ಯಜ್ಞಕುಂಡದಿಂದ ಅನೈಸರ್ಗಿಕವಾಗಿ ಮಕ್ಕಳು ಜನಿಸುವುದು, ಮಡಿಕೆಗಳಲ್ಲಿ ನೂರಾರು ಮಕ್ಕಳು ಜನಿಸುವುದು, ಸ್ತ್ರೀ–ಪುರುಷರ ಸಂಯೋಗವಿಲ್ಲದೇ ಸಂತಾನ ಪ್ರಾಪ್ತಿಯಾಗುವುದು, ರೇತಸ್ಸು ನುಂಗಿದ ಮೀನು, ಜಿಂಕೆಗಳು ಮಾನವ ಶಿಶುವನ್ನು ಕೊಡುವುದು, ಅಭಿಚಾರಕ್ರಮದಿಂದಲೇ ಸಂತಾನ ಪಡೆಯುವುದು.. ಹೀಗೆ ಇತ್ಯಾದಿಯಾಗಿ ರೇತಸ್ಸು ಅಥವಾ ಅಂಡಾಣುಗಳ ಅವಶ್ಯಕತೆಯಾಗಲೀ, ಸ್ತ್ರೀಗರ್ಭಾಶಯದ ಆಸರೆಯೇ ಇಲ್ಲದೇ ಅವೈಜ್ಞಾನಿಕವಾಗಿ, ಅನೈಸರ್ಗಿಕವಾದ ವಿಧಾನಗಳಿಂದ ಪಡೆದಿರುವ ಸಂತಾನದ ಬಗೆಗೆ ಆಧುನಿಕವಾಗಿ ಚಿಂತಿಸಿ ಇವುಗಳ ನೈಜಮುಖವನ್ನು ಬಹಿರಂಗಪಡಿಸುವುದು ಈ ಅಧ್ಯಯನದಲ್ಲಿ ನಡೆಸಲಾಗಿದೆ.

ಬದುಕಿನ ಯಾವುದೇ ಚಟುವಟಿಕೆಯ ತಳದಲ್ಲಿರುವ ಕಾರಣ ಶೋಧನೆಗೆ ವೈಜ್ಞಾನಿಕ ವಿಧಾನ ಅನುಸರಿಸುವ ಮತ್ತು 'ಮಹಾಭಾರತ' ಮಹಾಕಾವ್ಯವನ್ನು ವೈಜ್ಞಾನಿಕ ಮನೋಧರ್ಮದಿಂದ ತಪಾಸು ಮಾಡಿ ನೋಡುವ ಅಗತ್ಯ ಈ ಅಧ್ಯಯನದಲ್ಲಿ ಕಂಡುಬಂದಿದೆ.

ಅ) 'ಮಹಾಭಾರತ' ಮಹಾಕಾವ್ಯದ ಒಟ್ಟಿನ ಆಶಯ "ದ್ಯೂತದ ದುಷ್ಪರಿಣಾಮ"ವನ್ನು ಪ್ರಚುರಪಡಿಸುವುದು.

ಆ) 'ಮಹಾಭಾರತ' ಮಹಾಕಾವ್ಯ ಇಂದು ಲಕ್ಷೋಪಲಕ್ಷ ಶ್ಲೋಕಗಳ ಬೃಹತ್ ಗ್ರಂಥವಾಗಿ ಬೆಳೆದಿದೆ ನಿಜ. ಆದರೆ ಗ್ರಂಥದೊಳಗಿನ ಆಂತರಿಕ ಪ್ರಮಾಣಗಳ ಶೋಧ, ಆಧುನಿಕ ತಂತ್ರಜ್ಞಾನ ಬದಲಾವಣೆಗಳಿಂದ ಆಶಯವನ್ನು ಹುಡುಕಿ ನೋಡಿವುದು ಸಾಧ್ಯವಿದೆ. ಇದಕ್ಕೆ ವ್ಯಾಸರು ರಚಿಸಿದ ಉಪಾಖ್ಯಾನಗಳನ್ನು ಹೊರತುಪಡಿಸಿದ ಮೂಲಕೃತಿ ಇಪ್ಪತ್ತನಾಲ್ಕು ಸಾವಿರದ **"ಜಯ"** ಗ್ರಂಥವನ್ನಷ್ಟೇ ಆಶ್ರಯಿಸಿಬೇಕಾಗಿದೆ. ಇದಕ್ಕೆ ಅನುಕ್ರಮಣಿಕಾ ಅಧ್ಯಾಯವೇ ಪ್ರಮಾಣ."[೧೫] ಇದೇ ನನ್ನ ಈ ಅಧ್ಯಯನದ ಮೂಲ ಸಾಮಗ್ರಿ ಕೂಡಾ.

ಇ) ಮಹಾಕಾವ್ಯವಾದ 'ಮಹಾಭಾರತ'ದೊಳಗಿನ ಕಥಾವಸ್ತು, ಪಾತ್ರಗಳ ಮೂಲ ಆಕೃತಿ ಎಲ್ಲಿವೆಯೆಂದು ನಿಶ್ಚಿತಪಡಿಸುವುದು. "ಆಗ ಮಾತ್ರ ಡಾ॥ ಸುಕ್ತಂಕರ್ ಅಥವಾ ಇರಾವತಿ ಬಾಯಿ ಕರ್ವೆ ಇವರೀರ್ವರಲ್ಲಿ ಯಾರ ಮತವು ನಿಜವೆಂದು ಸ್ಪಷ್ಟವಾಗುವುದು ಸಾಧ್ಯ."[೧೬] ಎಂದು ವಿದ್ವಾಂಸರು ಈವರೆಗೂ ತೀರ್ಮಾನಿಸಿದ್ದಾರೆ.

"ಮಹಾಕಾವ್ಯ 'ಮಹಾಭಾರತ'ವನ್ನು ರಚಿಸಿದ ಕವಿಯು ಸಾಮಾನ್ಯ ಕವಿಯಾಗಿರದೆ ಅಧಿಕಾಂಶ ವೈದಿಕ ಸಾಹಿತ್ಯವನ್ನು ವಿವರವಾಗಿ ಅಧ್ಯಯನ ಮಾಡಿದ ಮಹಾಮೇಧಾವಿಯೂ ಆಗಿದ್ದಾರೆ. ಭೂತ–ಭವಿಷ್ಯತ್‌ವರ್ತಮಾನ ಕಾಲಗಳ ವ್ಯವಹಾರಗಳನ್ನೆಲ್ಲಾ ತಿಳಿಯತಕ್ಕ ಅಸಾಧಾರಣವೂ, ಅಲೌಕಿಕವೂ ಆದ ಶಕ್ತಿಯನ್ನುಳ್ಳವರೇ ಧೀರನೂ, ಋಷಿಯೂ ಅವನೇ ಕವಿಯೂ ಆಗಿದ್ದು ದರ್ಶನ ಶಕ್ತಿಯುಳ್ಳವರು ಮಾನವರೇ ಆದರೂ ಕವಿಯು ದಿವ್ಯಚಕ್ಷುಸ್ಸುಳ್ಳವನಾದ್ದರಿಂದ ಅವನಲ್ಲಿಯೂ ದೇವತ್ವವಿದೆ."[೧೭] ಇಂತಹ ಎಲ್ಲಾ ಅಭಿಪ್ರಾಯಗಳು ಪಂಡಿತರು, ವಿದ್ವಾಂಸರುಗಳಿಂದ 'ಮಹಾಭಾರತ'ದ ಕರ್ತೃ ವ್ಯಾಸ ಋಷಿಗಳನ್ನು ಕುರಿತು ಬಂದಿರುವುದನ್ನು ಕಾಣುತ್ತೇವೆ.

ವ್ಯಾಸರು ವೇದವನ್ನು ವಿಂಗಡಿಸುವಾಗ ೧೦ನೇ ಮಂಡಲದ "ಅಕ್ಷದ್ಯೂತ"ದ ದುಷ್ಪರಿಣಾಮವನ್ನು ವರ್ಣಿಸುವ ಸೂಕ್ತ ಅವರ ದೃಷ್ಟಿಗೆ ಬಿದ್ದು ವಿಶೇಷವಾಗಿ ಗಮನ ಸೆಳೆಯುತ್ತದೆ. ಇದೇ ಅಕ್ಷದ್ಯೂತವೇ ಅಲ್ಲವೇ ಪಣ ಕಟ್ಟಿ

ಸ್ರೋತ ಒಂದು ಸಾಮ್ರಾಜ್ಯದ ಸಾಮ್ರಾಟನ ಸರ್ವನಾಶಕ್ಕೂ ಕಾರಣವಾಗಿದ್ದು?! ಅಂದರೆ ಈ **ಜೂಜಿನ ಅಗ್ನಿಬೀಜ** ಬಿದ್ದ ಯಾವ ಸಾಮ್ರಾಜ್ಯವಾದರೂ ಹೇಳ ಹೆಸರಿಲ್ಲದಂತಾಗಿ ಯುಗಾಂತರಕ್ಕೂ ಕಾರಣವಾಗಬಹುದೆಂದು ಕವಿ-ಋಷಿ ಮನದಲ್ಲೇ ಊಹಿಸಿದರು, ಮನಗಂಡರು, ಚಿಂತಾಕುಲರಾದರು.

ಕ್ರಾಂತದರ್ಶಿಗಳಾದ ವ್ಯಾಸ ಋಷಿಗಳು ಸಹಸ್ರ ನಯನವುಳ್ಳವರಾಗಿದ್ದರು. ಸಹಸ್ರ ನಯನವೆಂದರೆ, ಸಹಸ್ರ ಚಕ್ಷುಸ್ಸುಳವರೆಂದಾಗಲೀ ಅಥವಾ ಸಹಸ್ರಾರು ಅನುಯಾಯಿಗಳಿಗೆ ಮಾರ್ಗದರ್ಶಕರಾಗಿದ್ದರೆಂದಾಗಲೀ ಅರ್ಥವಾಗಬಹುದು. ಮಾರ್ಗದರ್ಶಕರೆಂದು ಹೇಳುವುದಾದರೆ ತಾವು **ತತ್ವಾರ್ಥವನ್ನು ತಿಳಿದು ಇತರರಿಗೆ ಬೋಧಿಸುವ ಶಕ್ತಿಯುಳ್ಳವರೆಂದರ್ಥ. ಇಂತಹ ಶಕ್ತಿಯುತರಾದುದರಿಂದಲೇ ಋಗ್ವೇದದೊಳಗಿನ ಪಗಡೆ ಆಟ- ದ್ಯೂತದ ಹಿನ್ನೆಲೆಯಲ್ಲಿ ಹಲವು ಋಷಿಗಳು, ರಾಜ-ಮಹಾರಾಜರು ಜನಸಾಮಾನ್ಯರ ದುರಂತ ಚಿತ್ರಗಳು, ವೈದಿಕ ಕಥೆಗಳು, ದೇವತೆಗಳು ದೃಷ್ಟಿಪಥಕ್ಕೆ ಬಂದು ಪಾತ್ರಗಳ ಆಧಾರದ ಕಲ್ಪಿತಕಥೆಗಳೆಲ್ಲದರ ಕೇಂದ್ರವಾದ "ಜಯ"ದಂತಹ ಅಮೋಘ ಮಹಾಕಾವ್ಯ ಸೃಷ್ಟಿಯಾಯಿತು.** ಮಹಾಭಾರತಕಾರನು ಬೃಹದ್‌ದೇವತಾ ಗ್ರಂಥದೊಳಗಿನ ಕಥೆಯನ್ನೆತ್ತಿಕೊಂಡು ಅದರೊಂದಿಗೆ ಶತಪಥಬ್ರಾಹ್ಮಣದೊಳಗಿನ ಪ್ರಾತಿಪೀಯ ಬಲ್ಹಿಕನನ್ನು ಸೇರಿಸಿದ್ದಾನೆಂದು ಮತ್ತು ಕೆಲವು ಪರಿವರ್ತನೆಗಳನ್ನೂ ಮಾಡಿ ಅದನ್ನು **"ಕೌರವ-ಪಾಂಡವ"**ರ ಕಥೆಯ ಮೂಲವನ್ನಾಗಿ ಮಾಡಿದ್ದಾನೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. 'ಮಹಾಭಾರತ'ದ ಕಥೆಗಳ ಮೂಲ ಅಂಶವು ವೈದಿಕ ಗ್ರಂಥಗಳಲ್ಲಿ ಇದ್ದುದೇ ಎಂದು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಅಲ್ಲದೆ ಹಲವು "ವೇದಗಳ ಮೂಲದ ಕಥೆಗಳು ಮಹಾಭಾರತದಲ್ಲಿ ಬರಬೇಕಾದರೆ ಎಷ್ಟು ಹಂತಗಳನ್ನು ದಾಟಿತ್ತು ಅಥವಾ ಎಂಥೆಂಥ ರೂಪಾಂತರಗಳನ್ನು ಹೊಂದಿತ್ತು ಎಂಬುದೂ ಸ್ಪಷ್ಟವಾಗುತ್ತದೆ."[೧೮]. 'ಅರ್ಜುನ; ಅಂರ್ಜುನಿ' ಎಂಬ ಪದಗಳು ಇಂದ್ರ ಸಂಬಂಧವಾದವು ಎಂದು ಶ್ರುತ್ಯಂತರಗಳಲ್ಲಿ ಹೇಳಿದೆ. ಇಂದ್ರನಿಗೂ ಅರ್ಜುನನೆಂಬ ಹೆಸರಿದೆ. ಫಲ್ಗುನಿಗಳಿಗೂ 'ಅರ್ಜುನ'ನೆಂಬ ಹೆಸರಿದೆ. (ಋ.ವೇ.ಭಾ-೧೩, ಪು. ೩೮೧.) "ದ್ಯೂತ"ವುಂಟು ಮಾಡಬಹುದಾದ ದುಷ್ಪರಿಣಾಮವನ್ನು ಸುದೀರ್ಘವಾಗಿ ಚಿಂತಿಸಿ, ವೇದದಲ್ಲಿಯೇ ಸಿಗುವ ಕೆಲವು ಪಾತ್ರಗಳ ಹೆಸರುಗಳನ್ನು ಪರಾಮರ್ಶಿಸಿ ಮನಸ್ಸಿನಲ್ಲಿಯೇ ಮೊದಲು "ಜಯ" ಗ್ರಂಥದ ಕಥಾವಸ್ತುವಿನ ಹಂದರವನ್ನು ಸೃಷ್ಟಿಸಿಕೊಂಡು ಕಾವ್ಯವನ್ನು ವ್ಯಾಸ ಋಷಿಗಳು ಹೆಣೆದಿದ್ದಾರೆ. ನಂತರ ಅದರ ಪ್ರಚಾರಕ್ಕಾಗಿ ಶಿಷ್ಯರಿಗೆ ಅಧ್ಯಯನ ಮಾಡಿಸುವುದರಿಂದ, ಅದು ಕ್ಷೀಣವಾಗದಂತೆ ಕಾಪಾಡುತ್ತಾರೆಂದು ನಂಬಿ ಗ್ರಂಥ ಗುರುವಿನಿಂದ ಶಿಷ್ಯರಿಗೆ ಅಧ್ಯಯನ ರೂಪವಾಗಿ ಉಪದೇಶಿಸಲ್ಪಟ್ಟಿತು. ಆ ಶಿಷ್ಯಯರು ತಮ್ಮ ಶಿಷ್ಯರಿಗೆ ಉಪದೇಶಿಸುತ್ತಾ ಪರಂಪರೆಯಾಗಿ ಒಬ್ಬರಿಂದ ಮತ್ತೊಬ್ಬರಿಗೆ ಉಪದೇಶಿಸುತ್ತಾ ಹೋಗಿದ್ದರಿಂದ ಗ್ರಂಥ ನಶಿಸದೇ ಸಹಸ್ರಾರು ವರ್ಷಗಳಿಂದ ಉಳಿದುಕೊಂಡು ಬಂದಿದೆ. ಬೆಳೆದುಕೊಂಡೂ ಬಂದಿದೆ.

ಋಗ್ವೇದದ "ದ್ಯೂತ"ದ ಜೂಜಿನ ದುರಂತಗಳನ್ನು ಕಂಡ ಮೇಲೆಯೇ ವ್ಯಾಸರ ಮನಸ್ಸಿನಲ್ಲಿ "ಜಯ" ಎಂಬ ಇತಿಹಾಸ ಗ್ರಂಥ ಸೃಷ್ಟಿ ಮಾಡುವ ಅಪೇಕ್ಷೆ ಉಂಟಾಯಿತು. ಕವಿ ಪ್ರತಿಭೆಯ ಲೀಲಾವ್ಯಾಪಾರಕ್ಕೆ ಲೋಕ ವ್ಯವಹಾರವೇ ಆಧಾರ ಎನ್ನುವ ಸಿದ್ಧಾಂತವನ್ನು ವ್ಯಾಸರು ಮಹಾಕಾವ್ಯ ಸೃಷ್ಟಿಸಿ ಋಜುವಾತುಪಡಿಸಿದ್ದಾರೆ. ಮನಸ್ಸಿನಲ್ಲಿ ಹೊಳೆದ ಗಿಡ ಹುಟ್ಟಲಿಕ್ಕೆ ಬೀಜ ಹೇಗೆ ಅವಶ್ಯವೋ ಹಾಗೆ ಇಲ್ಲಿಯ ಕಾವ್ಯಸೃಷ್ಟಿಗೆ 'ದ್ಯೂತ' ಕಾರಣವಾಗಿದೆ.

ವೇದವ್ಯಾಸರು ಭಾರತವನ್ನು ಯಾಕೆ ರಚಿಸಿದರು? ಎಂಬ ಪ್ರಶ್ನೆಗೆ ನಮ್ಮ ಮುಂದೆ ಎದುರಾಗುವ ಉತ್ತರವೇ ಈ "ಪಗಡೇ ಆಟ"ದಲ್ಲಿ ಪಣ ಕಟ್ಟುವ ಚಾಳಿಯಿಂದ ಉಂಟಾಗುವ ಅನರ್ಥಗಳಿಂದ ಸರ್ವಸ್ವವನ್ನೂ ಕಳೆದುಕೊಂಡು ಬೀದಿಗೆ ಬೀಳುವ ವಿಚಾರವನ್ನು ಲೋಕಕ್ಕೆ ಅರುಹುವುದೇ ಆಗಿದೆ. ಇದೇ ನನ್ನ ಈ ಅಧ್ಯಯನದ ಆಧುನಿಕ ಚಿಂತನೆಯ ಸಿದ್ಧಾಂತ. ವ್ಯಾಸರೂ ಒಂದು ಪಾತ್ರವಾಗಿ ಕವಿ ಪ್ರತಿಭೆಯಿಂದ ಎಂಥ ಪಾತ್ರಗಳನ್ನಾದರೂ ಸೃಷ್ಟಿಸಬಹುದೆಂದು ತೋರಿಸಿದ್ದಾರೆ. "ಆ ಸೃಷ್ಟಿ ಕೇವಲ ಮಾನಸಿಕವಾದೀತು. ಅದು ವಾಸ್ತವ ಪ್ರಪಂಚದಿಂದ ವಿಲಕ್ಷಣವಾಗಿರುತ್ತದೆ. ಜನ ಅದನ್ನು ಅನುಕರಿಸುವುದು ಸಾಧ್ಯವಾಗದು. ಆದ್ದರಿಂದ ಆ ಕಲ್ಪನೆ ಲೋಕಕ್ಕೆ ಆದರ್ಶವಾಗಲಾರದು. ಲೋಕಕ್ಕೆ ಆದರ್ಶವಾಗ ಬೇಕಾದರೆ ಆ ಮಹಾಪುರುಷನು ಲೋಕದ ಜನರಂತೆ ದುರ್ಬಲನಾಗಿದ್ದು ನಿಸ್ಸಹಾಯಕನಾಗಿದ್ದು ಈ ನಾನಾ ನ್ಯೂನ್ಯತೆಗಳಿದ್ದರೂ ಅವುಗಳನ್ನು ದಾಟಿ ಮೇಲಕ್ಕೆದ್ದವನಾಗಿರಬೇಕು."[೧೯] ಎನ್ನುವುದನ್ನು ತೋರಿಸಲೆಂದೂ ವ್ಯಾಸರು ಈ ಕಾವ್ಯದಲ್ಲಿ ಚಾರಿತ್ರಿಕ ವ್ಯಕ್ತಿಯಾಗಿ ಕಾಣಿಸಿಕೊಂಡಿದ್ದಾರೆ.

"ದ್ಯೂತ"ವೆಂಬ ಈ ಪಗಡೆಯಾಟದಿಂದ ಉಂಟಾಗುವ ದುಷ್ಪರಿಣಾಮವನ್ನು ಮಹಾಕವಿಯು ಒಂದು ಮಹಾತತ್ವವನ್ನು ಜನಕ್ಕೆ ಮನದಟ್ಟು ಮಾಡಿಸುವ ಉದ್ದೇಶವುಳ್ಳವರಾಗಿದ್ದಾರೆ. ಅವರ "ಅಂತರ್ದೃಷ್ಟಿಯಲ್ಲಿರುವ ಮಹಾಜೀವ ತತ್ವವು ವಾಚಕರ ಅಂತರಂಗದಲ್ಲಿ ತಾನಾಗಿ ಒಡಮೂಡಿ ಭೂತವಾಗಬೇಕೆಂಬುದು ಸಂಕಲ್ಪ. ತತ್ವವು ಸ್ವಾನುಭವವಾಗಬೇಕು ಎಂಬುದು ಮುಖ್ಯ. ಆ ಸ್ವಾನುಭವವನ್ನು ಉಂಟುಮಾಡುವುದಕ್ಕಾಗಿ ಕಥಾಸಂವಿಧಾನ. ಕಥೆಯ ಪೋಷಣೆ ಪಾತ್ರಸೃಷ್ಟಿ, ಸಂದರ್ಭವರ್ಣನೆ, ವಾಕ್ಯಾಲಂಕಾರಗಳೆಲ್ಲಾ ವೈದಿಕ ಸಾಹಿತ್ಯ ಸಾಕ್ಷಿಯಾಗಿ ಪ್ರಮಾಣಭೂತವಾಗಿ ಕಥಾಹಂದರದ ಮೂಡಿ ಬಂದಿದೆ."[೧೦]

ಮಹಾಭಾರತ ಕಥೆಯ ಘಟನೆಗಳೆಲ್ಲವೂ ನೈಜವಾಗಿ ನಡೆದದ್ದಲ್ಲವಾದರೂ, ವಸ್ತುತಃ ಯಾವುದರಲ್ಲಿ ಪೂರ್ವ ವೃತ್ತ ಅಂದರೆ ಪೂರ್ವದಲ್ಲಿ ನಡೆದಿರುವುದರ ಆವೃತ್ತಿಯಿದೆಯೋ ಅದನ್ನು ಬಿಟ್ಟು ಇನ್ನಾವುದಕ್ಕೂ ಇತಿಹಾಸವೆಂದು ಹೇಳಕೂಡದೆಂದೂ ಹೇಳಿದೆ.

**"॥ ಧರ್ಮಾರ್ಥ ಕಾಮಮೋಕ್ಷಾಣಾಮುಪದೇಶ ಸಮನ್ವಿತಂ ।**
**ಪೂರ್ವವೃತ್ತ ಕಥಾಯುಕ್ತಮಿತಿಹಾಸಂ ಪ್ರಚಕ್ಷತೆ ॥"**

"ಸ್ಪಷ್ಟವಾಗಿ ಅನೃತ, ಅಸಂಭವ, ಅನೈರಿಹಾಸಿಕವಾದ ಕಥೆಗಳು ವಿಸ್ತಾರವಾಗಿ ಮಹಾಭಾರತದಲ್ಲಿ ಇರುವುದೇನೋವುಂಟು."[೨೧] ಆದರೆ ಕಾವ್ಯದ ಶ್ರೇಷ್ಠ ಉಪಾದಾನವು ಮಾನವ ಚರಿತ್ರೆಯೇ. "ಇತಿಹಾಸವೇತ್ತನೂ ಕೂಡಾ ಮನುಷ್ಯ ಚರಿತ್ರೆಯನ್ನೇ ವರ್ಣನೆ ಮಾಡುವನು. ತನ್ನ ಕೆಲಸವನ್ನು ಚೆನ್ನಾಗಿ ನಡೆಸಲು ಶಕ್ತನಾದರೆ ಅವನ ಇತಿಹಾಸದಲ್ಲಿ ಕಾವ್ಯದ ಸೌಂದರ್ಯವು ತಾನಾಗಿಯೇ ಒಂದುಗೂಡುವುದು."[೨೨] ಎಂದು ಕಾವ್ಯಾಸ್ವಾದನೆ ಋಜುವಾತುಪಡಿಸುತ್ತದೆ.

'ಮಹಾಭಾರತ'ದ ಆಧುನಿಕ ಚಿಂತನೆಗೆ ಹಲವಾರು ಸಂದರ್ಭಗಳಿದ್ದರೂ 'ವಿಮರ್ಶಾತ್ಮಕ ನೆಲೆಯು ಹೆಚ್ಚು ವಿಧಾಯಕವಾಗಿ ಬೇರೂರುತ್ತಿರುವಾಗ ಆಧುನಿಕ ಕಾಲಘಟ್ಟದಲ್ಲಿ ವಿಮರ್ಶೆಯ ಪರಿಕಲ್ಪನೆಗಳಲ್ಲೂ ವಿವಿಧ ಆಯಾಮಗಳು ಗೋಚರಿಸುತ್ತವೆ. ಈ ದೃಷ್ಟಿಯಿಂದ 'ಮಹಾಭಾರತ'ದ ವೈಜ್ಞಾನಿಕ ಶೋಧನೆಗೆ ತೊಡಗಲು 'ಪಾಶ್ಚಾತ್ಯ ಸಾಹಿತ್ಯಾಧ್ಯಯನ'ದ ಫಲವಾಗಿ ಭಾರತೀಯ ಸಾಹಿತ್ಯ ಹೊಸ ಬಗೆಯ ಚಿಂತನಾಕ್ರಮಕ್ಕೆ ಹೊರಳಿದುದರ ಪರಿಣಾಮವಾಗಿ ಬದುಕಿನ ಆಪ್ತ ಮತ್ತು ಖಾಸಗೀ ನೆಲೆಗಳು ವಿಮರ್ಶೆಯ ಪರಿಭಾಷೆಯಲ್ಲಿ ಹರಳುಗಟ್ಟಿವೆ.

~~~***~~~

ಅಡಿಟಿಪ್ಪಣಿಗಳು :

೧. ಶೇಷನವರತ್ನ, "ಮಹಾಭಾರತದಲ್ಲಿ ಧರ್ಮ", ಪು. ೮.

೨.--ಅದೇ--, ಪು. ೯

೩.-- ಅದೇ --, ಪು. ೯

೪. ಡಾ॥ ಶಂ.ಬಾ. ಜೋಶಿ, ಅನು: ಗೌರೀಶಕಾಯ್ಕಿಣಿ, ಪು. ೬೧

೫. ಶೇಷನವರತ್ನ, "ಮಹಾಭಾರತದಲ್ಲಿ ಧರ್ಮ", ಪು.೧

೬. --ಅದೇ--, ಪು. ೨

೭. -- ಅದೇ --, ಪು. ೭

೮. ಡಾ॥ ಶಂ.ಬಾ.ಜೋಶಿ, ಪು. ೬೪.

೯. ಪ್ರೊ॥ ಎಸ್. ಕೆ. ನರಸಿಂಹಮೂರ್ತಿ, "ಭೀಷ್ಮ ಉವಾಚ", ಪು. ೩, ೭.

೧೦. ರೋಮಿಲಾ ಥಾಪರ್, ಅನು: ಡಾ॥ ಸೂರ್ಯನಾಥ ಕಾಮತ್, "ಗ್ರಹಕಾಲದ ಬಗ್ಗೆ ಪೂರ್ವಗ್ರಹ", ಪು.೪
~~~

೧೧. ಶ್ರೀಮನ್ಮಹಾಭಾರತ, ಭಾ.ದ.ಪ್ರ., ಭಾ-೧, ಪು.೧೧

೧೨. ವೈದ್ಯಗುರು ಎಂ.ಆರ್.ಭಟ್, "ಭಾರತ ಗಾಂಭೀರ್ಯ", ಪು. ೬೫.

೧೩. ಶ್ರೀಮನ್ಮಧ್ವಾಚಾರ್ಯರು, "ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ", ಪು. ೧೮೬.

೧೪. ಲೇ: ಜಿ.ಟಿ.ನಾರಾಯಣರಾವ್, "ವಜ್ರಪಥ", ಕರ್ನಾಟಕ ಸಂಘ ಪ್ರಕಟಣೆ, ಪು. ೧೯೧.

೧೫. "॥ ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತಸಂಹಿತಾಂ ।
ಉಪಾಖ್ಯಾನೈರ್ವಿನಾತಾದಾದ್ಮರತಂ ಪ್ರೋಚ್ಯತೇ ಬುಧೈಃ ॥" (ಶ್ರೀಮ.ಭಾ.ಭಾ-೧, ಅ-ಅನುಕ್ರಮಣಿಕಾಪರ್ವ)

೧೬. ಡಾ॥ ಶಂ.ಬಾ.ಜೋಶಿ, "ಸ್ಥಿತ್ಯಂತರ", ಪು. ೬೬

೧೭. ಬಸ್ತಿ ವೆಂಕಟೇಶ ಪುಂಡಲೀಕ ಶೈಣ್ಯೆ, "ಬ್ರಾ.ಲಿ.ಮ.ಸಂ"., ಪು.೪೪೩.

೧೮. -- ಅದೇ --, ಪು. ೪೫೩, ೪೫೫

೧೯. ಬಂಕಿಮಚಂದ್ರ ಛಟೋಪಾಧ್ಯಾಯ, "ಶ್ರೀಕೃಷ್ಣ ಚರಿತ್ರೆ", ಮುನ್ನುಡಿ, ಡಿ.ವಿ.ಜಿ., ಪು. ೧೩.

೨೦. -- ಅದೇ --, ಪು. ೧೧.

೨೧. ಡಾ॥ ಪ್ರಮೀಳಾ ಮಾಧವ್, "ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ", ಪು. ೧೨೮.

೨೨. -- ಅದೇ--, ಪು. ೧೨೮.

~~~\*\*\*~~~

### ೩. ಸತ್ಯವತಿ ಜನನ :

ಉಪರಿಚರ ರಾಜ ಅರಣ್ಯಕ್ಕೆ ಬೇಟೆಗೆಂದು ಹೋಗಿದ್ದ. ವಿಶ್ರಾಂತಿ ಸಮಯದಲ್ಲಿ ರಾಜನಿಗೆ ಪತ್ನಿಯ ನೆನಪಾಗಿ ವೀರ್ಯಸ್ಖಲನವಾಯಿತು. ವೀರ್ಯ ವ್ಯರ್ಥವಾಗುತ್ತದಲ್ಲಾ ಎನಿಸಿದ ರಾಜನು ಅದನ್ನೊಂದು ಎಲೆಯಲ್ಲಿಟ್ಟು ಕಟ್ಟಿ ಒಂದು ಗಿಳಿಗೆ ಕೊಟ್ಟು ತನ್ನ ಹೆಂಡತಿಗೆ ಕೊಡುವಂತೆ ಹೇಳಿ ಕಳುಹಿಸಿದ. ಗಿಳಿ ಹೋಗುತ್ತಿರುವಾಗ ಗಿಡುಗನೊಂದು ಗಿಳಿಯ ಮೇಲೆ ಎರಗಿದಾಗ ವೀರ್ಯವಿದ್ದ ಎಲೆ ನದಿಯಲ್ಲಿ ಬಿದ್ದು ಹೋಯಿತು. ಅದನ್ನು ಮೀನೊಂದು ನುಂಗಿತು. ಆ ಮೀನು ಸಾಮಾನ್ಯ ಮೀನಾಗಿರಲಿಲ್ಲ. ಗಿರಿಕಾ ಎಂಬ ಅಪ್ಸರೆಯಾಗಿತ್ತು. ಮೀನು ಬೆಸ್ತನೊಬ್ಬನ ಕೈಗೆ ಸಿಕ್ಕಿತು. ಗರ್ಭಿಣಿಯಾಗಿದ್ದ ಆ ಮೀನು ಎರಡು ಶಿಶುಗಳಿಗೆ ಜನ್ಮ ನೀಡಿತು. ಒಂದು ಗಂಡು ಮತ್ತೊಂದು ಹೆಣ್ಣು ಶಿಶು. ಬೆಸ್ತ ಆ ಶಿಶುಗಳನ್ನು ಉಪರಿಚರ ರಾಜನಿಗೆ ಒಪ್ಪಿಸಿದ. ರಾಜ ಗಂಡು ಶಿಶುವನ್ನು ತಾನೇ ಇಟ್ಟುಕೊಂಡು ಹೆಣ್ಣು ಶಿಶುವನ್ನು ಬೆಸ್ತನಿಗೇ ಕೊಟ್ಟು ಸಾಕಿಕೊಳ್ಳುವಂತೆ ಹೇಳಿದ. ಮೀನಿನ ಹೊಟ್ಟೆಯಲ್ಲಿ ಹುಟ್ಟಿದ ಶಿಶುವಿಗೆ ಬೆಸ್ತ 'ಮತ್ಸ್ಯ ಗಂಧಿ' ಎಂದು ನಾಮಕರಣ ಮಾಡಿದ. ಅದೇ ಮುಂದೆ **ಸತ್ಯವತಿ**ಯಾಗಿ ಬೆಳೆದದ್ದಾಯಿತು. ಇದಿಷ್ಟೂ **'ಸತ್ಯವತಿ'ಯ ಜನನದ ಬಗೆಗೆ 'ಮಹಾಭಾರತ'ದಲ್ಲಿರುವ ಕಥೆ.**

**ನೈಸರ್ಗಿಕ ವಸ್ತುನಿಷ್ಠ ಶೋಧ :**

ಮತ್ಸ್ಯಗಂಧಿ ಮೀನಿನ ಹೊಟ್ಟೆಯಲ್ಲಿ ಹುಟ್ಟಿದಳೆಂದು ಹೇಳಲಿಕ್ಕೂ ಕಾರಣವಿದೆ.

ಅಪ್ಸರೆಯರ ವಾಸಸ್ಥಳ ನೀರು. ಅಪ್ಸರೆಯರು, ನೀರಿನಲ್ಲಿರುವ ಒಂದು ಜಾತಿಯ ಪಕ್ಷಿಯ ರೂಪವನ್ನು ತಾಳಿದ್ದಾರೆ. ಇವರು ಅಪೂರ್ವ ಸುಂದರಿಯರು. ಇವರು ಗಂಧರ್ವರಿಗಷ್ಟೇ ಮೀಸಲಾಗದೆ ಮನುಷ್ಯರಿಗೂ ಸುಖವುಂಟು ಮಾಡುತ್ತಾರೆ. ಊರ್ವಶಿ, ಪೂರ್ವಚಿತ್ತಿ, ಸಹಜನ್ಯಾ, ಮೇನಕಾ, ವಿಶ್ವಾಚೀ ಮತ್ತು ಘೃತಾಚಿ- ಎಂಬ ಆರು ಮಂದಿ ಅಪ್ಸರೆಯರು. ಇವರು ಅಪ್ಸರೆಯರಲ್ಲೆಲ್ಲಾ ಅತೀ ಶ್ರೇಷ್ಠರೆಂದು ಪರಿಗಣಿತರಾಗಿದ್ದಾರೆ.
~~~

ಬ್ರಹ್ಮನ ಮಾನಸ ಪುತ್ರಿಯಾದ **ಮೇನಕೆಯು** ಪರಮಶ್ರೇಷ್ಠಳು. ವೇಶ್ಯೆಯರಾದ ಅಪ್ಸರೆಯರು ನಿರ್ದಯರಾಗಿ ತಮಗೆ ಹುಟ್ಟಿದ ಹಸುಗೂಸು ಮಗುವನ್ನು ಎಲ್ಲಂದರಲ್ಲಿ ವಿಸರ್ಜಿಸಿ ಹೋಗುವ ಕೆಟ್ಟ ಚಾಳಿಯವರಾಗಿದ್ದರು. ಈ ವಿಧವಾದ ಹಲವಾರು ಪ್ರಸಂಗಗಳು 'ಮಹಾಭಾರತ'ದಲ್ಲಿ ಘಟಿಸಿರುವುದನ್ನು ನಾವು ಕಾಣುತ್ತೇವೆ. (ಉದಾಹರಣೆಗೆ : ಶಕುಂತಲಾ, ದ್ರೋಣ, ಕೃಪ–ಕೃಪಿಯರ ಜನನ ಇತ್ಯಾದಿ.)

**ಮೇನಕೆಯು** ಸ್ಥೂಲಕೇಶರ ಆಶ್ರಮದ ಸಮೀಪದಲ್ಲಿ ಹರಿಯುತ್ತಿದ್ದ ನದಿಯ ಪಕ್ಕದ ಪೊದರಿನಲ್ಲಿ ಪ್ರಸವಿಸಿ ಅಲ್ಲಿಯೇ ಮಗುವನ್ನು ಮಲಗಿಸಿ ಹೊರಟು ಹೋದಳು. **ದೇವವೇಶ್ಯೆಯಾದ** ತನ್ನ ಧರ್ಮವೇ ಇದೆಂದು ಭಾವಿಸಿದ್ದಳಾಕೆ. "ಸ್ಥೂಲಕೇಶರು ಸಾಕಿದ ಆ ಹೆಣ್ಣು ಮಗುವೇ ಪ್ರಮದ್ವರಾ."[7] ಇದೇ ಮೇನಕೆಯನ್ನು ನೋಡಿಯೇ ವಿಶ್ವಾಮಿತ್ರ ಮಹರ್ಷಿ ಕಾಮಪರವಶರಾಗಿ ಅವಳೊಂದಿಗೆ ಸುಖದಿಂದ ಕಾಲ ಕಳೆದನು. ಮೇನಕೆ ಒಂದು ಹೆಣ್ಣು ಮಗುವಿಗೆ ಜನ್ಮವಿತ್ತು ಮಾಲಿನೀ ನದಿಯ ಸಮೀಪ ಇಟ್ಟು ಹೊರಟು ಹೋದಳು. ಆ ಹೆಣ್ಣು ಶಿಶುವೇ ಕಣ್ವ ಋಷಿಗಳು ಸಾಕಿದ ಶಕುಂತಲಾ.

**ಮತ್ಸ್ಯಗಂಧಿಯ ಅನೈಸರ್ಗಿಕ ಜನನ :**

ಉಪರಿಚರ–ವಸು ಮಹಾರಾಜ ಹೆಚ್ಚಿನ ಅನುರಕ್ತಿವುಳ್ಳ ತನ್ನ ಪತ್ನಿಯೊಂದಿಗೆ ಸರಸಸಲ್ಲಾಪಗಳೊಂದಿಗೆ ಕಾಲ ಕಳೆಯ ಬೇಕೆಂದಿದ್ದ. ಅವನ ಪತ್ನಿ ಗಿರಿಕೆ ಅಂದೇ ಋತುಸ್ನಾತೆಯಾಗಿ ನಾನಾ ವಿಧವಾದ ಆಭರಣಗಳನ್ನು ತೊಟ್ಟು ರತಿಯಂತೆ ಕಾಣುತ್ತಿದ್ದಳು. ಅದೇ ಸಮಯಕ್ಕೆ ಅರಮನೆಗೆ ಆಗಮಿಸಿದ. ಪಿತೃ ದೇವತೆಗಳಿಗೆ ಶ್ರಾದ್ಧ ಭೋಜನ ಮಾಡಿಸಲು ಜಿಂಕೆಯನ್ನು ತರಲೆಂದು ಬೇಟೆಗಾರರೊಂದಿಗೆ ಅರಣ್ಯಮಾರ್ಗ ಹಿಡಿದು ಹೊರಟ. ದಾರಿಯುದ್ದಕ್ಕೂ ಪತ್ನಿಯದೇ ಧ್ಯಾನ. ವಸಂತ ಕಾಲ ನಾನಾ ಪುಷ್ಪಗಳ ಸುಗಂಧದ ಮಧ್ಯೆ ಆಯಾಸವಾಗಿ ಅಶೋಕವೃಕ್ಷದಡಿಯಲ್ಲಿ ಪವಡಿಸಿದ. ನಿದ್ರೆ ಆವರಿಸಿ ಸ್ವಪ್ನದಲ್ಲಿ ಗಿರಿಕೆ ಸ್ಪರ್ಶವಾದಂತಾಯಿತು. ಎಚ್ಚರವಾಯಿತು. ರೇತಸ್ಖಲನವಾಗಿತ್ತು. ವೃಕ್ಷದ ಮೇಲೆ ಕುಳಿತಿದ್ದ ಗಿಣಿಯನ್ನು ಕರೆದು ಎಲೆಯಲ್ಲಿ ಹಾಕಿದ ರೇತಸ್ಸನ್ನು ತನ್ನ ಪತ್ನಿಗೆ ಕೊಡುವಂತೆ ಹೇಳಿ ಕಳುಹಿಸಿದ. ಮತ್ತೊಂದು ಪಕ್ಷಿ ಬಂದು ದಾಳಿ ಮಾಡಿದಾಗ ರೇತಸ್ಸು ಯಮುನೆಯಲ್ಲಿ ಬಿದ್ದು ಹೋಯಿತು. ಮೀನಿನ ರೂಪದಲ್ಲಿದ್ದ ಆದ್ರಿಕೆಯೆಂಬ ಅಪ್ಸರೆ ಅದನ್ನು ಧಾರಣೆ ಮಾಡಿದಳು. ಗರ್ಭಧರಿಸಿದಳು. ನವಮಾಸ ತುಂಬಿದ ಮೇಲೆ ಬೆಸ್ತರ ಬಲೆಗೆ ಸಿಕ್ಕಿ ಬೆಸ್ತರು ಅದರ ಹೊಟ್ಟೆಯನ್ನು ಸೀಳಿದಾಗ ಎರಡು ಶಿಶುಗಳು ಹೊರಬಂದವು. ಅಪ್ಸರೆ ನಿಜರೂಪ ಧರಿಸಿ ಸ್ವರ್ಗಕ್ಕೆ ಹೊರಟು ಹೋದಳು. ಬೆಸ್ತರು ಆ ಅಸಾಧಾರಣವಾದ ಮಕ್ಕಳನ್ನು ರಾಜನಿಗೆ ಒಪ್ಪಿಸಿದರು. ರಾಜ ಗಂಡು ಮಗುವನ್ನು ತಾನು ಇಟ್ಟುಕೊಂಡು ಹೆಣ್ಣು ಮಗುವನ್ನು ಸಾಕಿಕೊಳ್ಳುವಂತೆ ಹೇಳಿ ಬೆಸ್ತರಿಗೇ ಕೊಟ್ಟು ಬಿಟ್ಟನು.

ಬೆಸ್ತರ ನಾಯಕ ಸಾಕಿದ ಆ ಮಗುವಿಗೆ 'ಮತ್ಸ್ಯಗಂಧಾ' ಎಂದು ನಾಮಕರಣ ಮಾಡಿದ. ಅವಳನ್ನೇ 'ಸತ್ಯವತೀ' ಎಂದೂ ಕರೆಯುತ್ತಿದ್ದರು. ಸತ್ಯವತಿ ಯುಮುನಾ ನದಿಯಲ್ಲಿ ದೋಣಿ ನಡೆಸುತ್ತಿದ್ದಳು. ಪ್ರಯಾಣಿಕರನ್ನು ಈ ದಡದಿಂದ ಆ ದಡಕ್ಕೆ ಸೇರಿಸಿ ಅವರಿವರು ಕೊಟ್ಟ ನಾಲ್ಕಾರು ಕಾಸನ್ನು ಸಂಪಾದಿಸಿ ಬೆಸ್ತರವನಾದ ಸಾಕು ತಂದೆಯ ಕೈಗೆ ನೀಡುತ್ತಿದ್ದಳು.

**ವಾದ ರೂಪಣೆ :**

ವಿಭಂಡಕ ಋಷಿ ಮಹಾಭೂತವೆಂಬ ಸರೋವರದಲ್ಲಿ ಸ್ನಾನ ಮಾಡುತ್ತಿರುತ್ತಾನೆ; ಅಲ್ಲಿಗೆ ಬಂದ ಅಪ್ಸರೆ ಊರ್ವಶಿಯನ್ನು ಕಾಣುತ್ತಾನೆ. ಕಾಮೋದ್ರೇಕಿತನಾಗಿ ಒಡನೆಯೇ ರೇತಸ್ಸು ಸ್ಖಲನವಾಗುತ್ತದೆ. ಅದೇ ಸಮಯಕ್ಕೆ ಅಲ್ಲಿಗೆ ನೀರು ಕುಡಿಯಲು ಬಂದ ಹೆಣ್ಣು ಜಿಂಕೆಯೊಂದು ನೀರಿಗೆ ಬಿದ್ದ ಋಷಿಯ ರೇತಸ್ಸನ್ನು ಪಾನ ಮಾಡುತ್ತದೆ. ಜಿಂಕೆಗೆ ಗರ್ಭಧಾರಣೆ ಮಾಡಿ ಕಾಲಾನುಕ್ರಮದಲ್ಲಿ ತಲೆಯಲ್ಲಿ ಜಿಂಕೆಯಂತಹ ಕೊಂಬುಳ್ಳ ಮನುಷ್ಯಾಕಾರದ ಶಿಶುವನ್ನು ಪ್ರಸವಿಸುತ್ತದೆ. ಅದನ್ನು ನೋಡಿದ ವಿಭಂಡಕ ಋಷಿ ಆ ಶಿಶುವನ್ನು ತನ್ನ ಔರತ ಪುತ್ರನೆಂದು ಭಾವಿಸಿ ಶಿಶುವಿಗೆ 'ಋಷ್ಯಶೃಂಗ'ನೆಂದು ನಾಮಕರಣ ಮಾಡುತ್ತಾನೆ. ಅದನ್ನು ತಾನೇ ಆ ಮಗುವನ್ನು ಪೋಷಿಸುತ್ತಾನೆ."[8] ಇಲ್ಲಿ ವಿಭಾಂಡಕ ಋಷಿ ಮತ್ತು ಊರ್ವಶಿಯರ ಸಮಾಗಮವಾಗಿಯೇ ಋಷ್ಯಶೃಂಗನ ಜನನವಾಗುತ್ತದೆ.

ಉಪರಿಚರ ರಾಜನ ಕಥೆಯೂ ಹೀಗೇ ಇದೆ! ಅಪ್ಸರೆಯೊಬ್ಬಳ ಸಮಾಗಮದಿಂದಲೇ ಮತ್ಸ್ಯಗಂಧಿ-ದಾಶರಾಜರ ಜನನವಾಗುತ್ತದೆ. ಅಪ್ಸರೆ ತನಗಾದ ಅವಳಿ ಶಿಶುಗಳನ್ನು ಬಿಸಾಡಿ ಹೋಗಿರುತ್ತಾಳೆ. ಆ ಶಿಶುಗಳನ್ನು ನೋಡಿದ ಬೆಸ್ತರ ನಾಯಕನೊಬ್ಬನು ಶಿಶುಗಳನ್ನು ರಾಜನಿಗೆ ತಂದು ಒಪ್ಪಿಸುತ್ತಾನೆ. ಎರಡೂ ಕಡೆ ನಡೆದ ಸತ್ಯ ಘಟನೆಯನ್ನು ಮುಚ್ಚಿ ಹಾಕಿ ಪುರಾಣಿಕರು "ಜಿಂಕೆ, ಮೀನು" ಎಂಬ ಜನಪದದಂತಹ ಕಥೆಗಳನ್ನು ಕಟ್ಟಿದ್ದಾರೆ. ಇದು ಅನೈಸರ್ಗಿಕ ಮತ್ತು ಅವೈಜ್ಞಾನಿಕ.

**ಪಕ್ಷಿಯ ಮೂಲಕ ರೇತಸ್ಸಿನ ರವಾನೆ :**

**ಉಪರಿಚರ ರಾಜ :**

"ಒಂದು ಯುಗದ ಭಾಷಿಕ ಪ್ರತಿಮೆಯೇ ಅಂದಿನ ಮಾನವರ ಕಣ್ಣು."[೩] ಪುರಾಣ ಪುರುಷರನ್ನು ಕುರಿತ ಕಾವ್ಯದಲ್ಲಿ ಚರಿತ್ರಾಂಶವು ಮೂಲಭೂತವಾಗುತ್ತದೆ. ವಾಸ್ತವಾಂಶವಿಲ್ಲದೇ ಪುರಾಣ ಪುರುಷನಿಲ್ಲ. ಆದರೆ ವಾಸ್ತವಾಂಶದ ಜತೆ ಕಲ್ಪಿತಾಂಶವಿಲ್ಲದೆ ಹೋದರೆ ಅದು ಕಾವ್ಯವೇ ಅಲ್ಲ! ವಾಸ್ತವಿಕ -ಕಾಲ್ಪನಿಕ ಸಂಗತಿಗಳ ಉಭಯೈಕ್ಯ ಸಮ್ಮೇಳನಕ್ಕೆ ನಿದರ್ಶನ **ಮಹಾಭಾರತ**. ಆದಿಪರ್ವ ೩೪ನೆಯ ಅಧ್ಯಾಯದಲ್ಲಿ ಆಸ್ತೀಕಪರ್ವದಲ್ಲಿ ಬರುವ **"ಅಮೃತ ಮತ್ತು ಗರುಡ"ನ ಪ್ರಕರಣದಲ್ಲಿ**; ಗರುಡನ ತಾಯಿ-ವಿನತೆಯ ಆಶೀರ್ವಾದವನ್ನು ಪಡೆದು ಗರುಡ ಅಮೃತವನ್ನು ತರಲೆಂದು ಉತ್ಸಾಹ ಭರಿತನಾಗಿ ಹಾರಿ ಹೋಗುತ್ತಾನೆ. ದೇವತೆಗಳೊಡನೆ ಯುದ್ಧ ಮಾಡಿ, ದೇವತೆಗಳನ್ನೂ ಪರಾಜಿತಗೊಳಿಸಿ "ಅಮೃತ ಕಲಶ"ವನ್ನು ಎತ್ತಿಕೊಂಡು ಹಾರಿ ಹೋಗುತ್ತಾನೆ.

"ಮಧ್ಯೆ ಬಂದ ಇಂದ್ರ ಉಪಾಯದಿಂದ "ಅಮೃತಕಲಶ"ವನ್ನು ಅಪಹರಿಸಿಕೊಂಡು ಹೋಗುತ್ತಾನೆ."[೪] ಆದರೆ ಆದಿಪರ್ವ ೬೩ನೇ ಅಧ್ಯಾಯದಲ್ಲಿ 'ಅಂಶಾವತರಣ ಪರ್ವ'ದಲ್ಲಿ ಅರಣ್ಯಕ್ಕೆ ಬೇಟೆಗೆಂದು ಬಂದ ವಸು-ಉಪರಿಚರ ರಾಜನಿಗೆ ಸ್ವಪ್ನಾವಸ್ಥೆಯಲ್ಲಿ ಗಿರಿಕೆ-ಪತ್ನಿಯ ನೆನಪಾಗಿ ರೇತಸ್ಖಲನವಾಗುತ್ತದೆ. ರಾಜಾಜ್ಞೆಯನ್ನು ಪಶು-ಪಕ್ಷಿಗಳೂ ಸಹ ನಿಷ್ಠೆಯಿಂದ ಪರಿಪಾಲಿಸುತ್ತಿದ್ದ ಕಾಲವದು. ಒಂದು ಗಿಡುಗನನ್ನು ಕರೆದು ರೇತಸ್ಸನ್ನು ಪತ್ನಿಗೆ ಕೊಡುವಂತೆ ಹೇಳಿ ಕಳುಹಿಸುತ್ತಾನೆ. "ಮತ್ತೊಂದು ಗಿಡುಗವು ಹಾರಿ ಬಂದು ದಾಳಿ ನಡೆಸಿದಾಗ ರೇತಸ್ಸು ಯಮುನಾ ನದಿಯಲ್ಲಿ ಬಿದ್ದು ಹೋಗುತ್ತದೆ."[೫] ಗರುಡನಿಗೆ ಬದಲಾಗಿ ಇಲ್ಲಿ ಗಿಡುಗ ಹೊತ್ತು ತರುತ್ತಿದ್ದ ರೇತಸ್ಸನ್ನು ಅಲ್ಲಿ ಇಂದ್ರ ಬಂದು ಅಮೃತವನ್ನು ಅಪಹರಿಸಿದರೆ ಇಲ್ಲಿ ಮತ್ತೊಂದು ಗಿಡುಗನೇ ಬಂದು ರೇತಸ್ಸು ಕೆಳಗೆ ಬೀಳುವಂತೆ ಮಾಡುತ್ತದೆ. ಪ್ರಪಂಚದ ನಾನಾ ಜಾತಿ, ನಾನಾ ಅವಸ್ಥೆಗಳ ನಾನಾ ಸಂಸರ್ಗ ಪ್ರಕಾರಗಳ ಸ್ತ್ರೀ-ಪುರುಷ ವರ್ಗಗಳಲ್ಲಿ **ಕಾಮುಕರದೂ ಒಂದು ವಿಶೇಷ ಜಾತಿಯುಂಟು**."[೬] ತಮ್ಮ ಮೇಲಿನ ಅಪವಾದವನ್ನು ಪರಿಹರಿಸಿಕೊಳ್ಳಲು ಕಂಡುಕೊಂಡ ಬಳಸುಮಾರ್ಗ- ಪಕ್ಷಿಯ ನೆಪ.

**ವೀರ್ಯ ಸೇವಿಸಿದ ಮೀನು ಗರ್ಭ ಧರಿಸಿ ಮನುಷ್ಯ ಶಿಶುವಿಗೆ ಜನ್ಮನೀಡಲು ಸಾಧ್ಯವೇ?! :**

**ಮತ್ಸ್ಯಗಂಧಿ :**

ವೀರ್ಯ ಸೇವಿಸಿದ ಮೀನು ಗರ್ಭ ಧರಿಸುವುದು ಹೇಗೆ ಸಾಧ್ಯ? ವಾಸ್ತವಿಕ ಸತ್ಯವೇನು?

ಇದು ಪುರಾಣಿಕರ ಕಥೆ. ಮಾನವನ ಮನಸ್ಸು ತಪ್ಪು ಕಲ್ಪನೆ ಮಾಡಿದರೆ, ಪುರಾಣ ಕಥೆಗಳೂ ಹಾಗೇ ಸೃಷ್ಟಿಯಾಗುತ್ತವೆ ಎನ್ನುವುದಕ್ಕೆ ಇಂತಹ ಕಥೆಗಳೇ ಸಾಕ್ಷಾತ್ ದೃಷ್ಟಾಂತ. "ಒಂದು ಜಾರಿಯ ಸಸ್ತನಿ ಮೀನು ನೀರಿನ ಮೇಲೆ ಎದ್ದು ಜಿಗಿದಾಡುವ ದೃಶ್ಯ ಜಲಕನ್ಯೆಯರ ಭ್ರಮೆಯುಂಟಾಗುತ್ತದೆ."[೭] ರಾಜನಿಗೆ ಆದ್ರಿಕೆ ಎಂಬ ಅಪ್ಸರೆಯ ಸಂಪರ್ಕ ಉಂಟಾಗುತ್ತದೆ. ರಾಜ-ಆದ್ರಿಕೆಯರ ಸಮಾಗಮದಿಂದ ಆಕೆ ಗರ್ಭಧರಿಸಿ ನವಮಾಸಗಳು ತುಂಬಿದ ಮೇಲೆ ಎರಡು ಅವಳಿ ಮಕ್ಕಳಿಗೆ ಜನ್ಮ ಕೊಟ್ಟು ಮಕ್ಕಳನ್ನು ಬಿಸಾಡಿ ಹೊರಟು ಹೋಗುತ್ತಾಳೆ.

**ಅಪ್ಸರೆಯರು :**

ಇವರು ಯಾರಿಂದಲೂ ಪತ್ನಿಯರಾಗಿ ವರಿಸಲ್ಪಡುವವರಲ್ಲ. ಸದಾ ತಮ್ಮ ಇಚ್ಛೆಯಂತೆ ಯಾರನ್ನಾದರೂ ಪತಿಗಳನ್ನಾಗಿ ಸ್ವೀಕರಿಸುವವರು. ಅದರಿಂದ ಅವರು ನಿಯತಪತಿಗಳೊಂದಿಗೆ ಮುಕ್ತಿಯನ್ನು ಹೊಂದುವುದಿಲ್ಲ.

"॥ ಅನಾವೃತಾಹಿ ಸರ್ವೇಷಾಂ ವರ್ಣಾನಾ ಮಗನಾ ಭುವಿ ॥" (ಮ.ಭಾ. ಆ.ಪ. ೧೨೮-೪೦)

ಶ್ವೇತಕೇತುವಿಗೆ ತಂದೆ ಉದ್ದಾಲಕ ಹೇಳುವ ಮಾತು-ಸ್ತ್ರೀಯರು ಹಿಂದೆ ಪಶುಗಳಂತೆ ಎಲ್ಲಾ ಪುರುಷರಿಗೂ ತಮ್ಮನ್ನು ಅರ್ಪಿಸಿಕೊಳ್ಳುವವರಿದ್ದರು. ಮುಂದೆ ಕಟ್ಟುನಿಟ್ಟಾದ ಪಾತಿವ್ರತ್ಯನಿಯಮ ರೂಢಿಗೆ ಬಂದಿತು ಎಂದು ಹೇಳಿದಂತೆ ಕಾಣುತ್ತದೆ. ಇದು ವಸ್ತುತಃ ಎಲ್ಲಾ ಸ್ತ್ರೀಯರ ಬಗ್ಗೆ ಹೇಳಿದ ಮಾತಲ್ಲ. ಕೇವಲ ಅಪ್ಸರೆಯರ ಬಗ್ಗೆ ಹೇಳಿದುದೆಂದು ನಿರ್ಣಯ ಸಮಾಧಾನ ನೀಡುತ್ತದೆ. ಅಪ್ಸರೆಯರು ಅಪರೋಕ್ಷಿಗಳು ಬ್ರಹ್ಮವಾದಿನಿಯರು. ಮಹಾಯೋಗಿನಿಯರು. ಆದರೂ ಅವರಿಗೆ ಪಾರ್ವತೀ, ಶಚೀ ಮೊದಲಾದವರಂತೆ ನಿಯತ ಪತಿಗಳಿರಲಿಲ್ಲ. ಯಾರು ಯಾವಾಗ ಬಯಸಿ ಅವರ ಬಳಿಗೆ ಬರುವರೋ ಅವರು ಆವಾಗ ಪತಿಗಳು. ಅವರ ಸೇವೆ ಮಾಡುವ ಕಾಲದಲ್ಲಿ ಬೇರೆ ಯಾರೇ ಬಂದರೂ ಅವರಿಗೆ 'ಅನಾವೃತೆ'ಯರಾಗುವುದಿಲ್ಲ."[೮]

**ಹೀಗೆ 'ಮಹಾಭಾರತ'ದಲ್ಲಿ ಇನ್ನೂ ಅನೇಕ ಅನೈಸರ್ಗಿಕ ಪ್ರಸಂಗಗಳಿರುವುದನ್ನು ಕಾಣುತ್ತೇವೆ. :**

ಇಂತಹ ಹಲವಾರು ಪ್ರಸಂಗಗಳು ಇರುವುದನ್ನು ನಾವು ಕಾಣುತ್ತೇವೆ. ಮುಂದಿನ ಅಧ್ಯಾಯಗಳಲ್ಲಿ ಇವುಗಳಿಗೆ ಅರ್ಥವನ್ನೂ, ಕಾರಣವನ್ನೂ ಹುಡುಕುವ ಪ್ರಯತ್ನ ಈ ಅಧ್ಯಯನದಲ್ಲಿ ನಡೆಸಲಾಗಿದೆ.

೧. 'ಮಹಾಭಾರತ'ದಲ್ಲಿ ಸ್ತ್ರೀಯರು ಪ್ರಸವವಾದ ಕೂಡಲೇ ಕನ್ಯಾವಸ್ಥೆಗೆ ಮರಳುವುದು ಋಷಿಗಳ ಅನುಗ್ರಹದಿಂದ.

೨. ಸ್ತ್ರೀಯರ ಗರ್ಭಾಶಯದ ಆಧಾರವಿಲ್ಲದೆಯೇ ಮಕ್ಕಳ ಜನನವಾಗುವುದು.

೩. ಪುರುಷರ ರೇತಸ್ಸೊಂದರಿಂದಲೇ (ಸ್ತ್ರೀಯ ಅಂಡಾಣುವಿನ ಅವಶ್ಯಕತೆಯೇ ಇಲ್ಲದೆಯೇ) ಶಿಶು ಜನನವಾಗುವುದು.

೪. ನಿಯೋಗ ಪದ್ಧತಿಯಿಂದ ಶಿಶು ಜನಿಸುವುದು.

೫. ಜಲಚರಗಳು, ಪ್ರಾಣಿಗಳಿಂದ ಮಾನವ ಶಿಶುಗಳ ಜನನವಾಗುವುದು.

೬. ಪಕ್ಷಿಗಳು ಮಾತನಾಡುವುದು.

೭. ಯಜ್ಞಕುಂಡದಿಂದ ಮಕ್ಕಳ ಜನನವಾಗುವುದು.

೮. ಮಡಕೆ-ಕುಡಿಕೆಗಳು, ಅರಣಿ, ದೊನ್ನೆಯಲ್ಲಿ ಮಕ್ಕಳ ಜನನವಾಗುವುದು.

-ಇತ್ಯಾದಿ. ಇದಕ್ಕೆಲ್ಲ ಕಾರಣ ಪುರುಷರು ಪುರಾಣಿಕರೇ! ಏಕೆಂದರೆ, **'ಪುರಾಣಗಳು ಎಂದಿಗೂ ವಾಸ್ತವಿಕತೆಯನ್ನು ಪ್ರತಿಬಿಂಬಿಸಲು ಪ್ರಯತ್ನಿಸುವುದಿಲ್ಲ. ಹಾಗೆ ಪ್ರತಿಬಿಂಬಿಸಲು ಪ್ರಯತ್ನಪಟ್ಟಂತಹವುಗಳೂ ಅಲ್ಲ. ಆದ್ದರಿಂದ** ಸಗರರಾಜಿಗೆ ಅರವತ್ತು ಸಾವಿರ ಮಕ್ಕಳು ಎಂದು ಹೇಳಿದರೆ ಇದು ಸಾಧ್ಯವೇ ಎಂಬ ಪ್ರಶ್ನೆ ಏಳಬಾರದು. ರೂಪಾಂತರ, ವರ, ಶಾಪ, ಸಮಯ, ಮುಪ್ಪು, ಯೌವ್ವನಗಳ ವಿನಿಮಯ ಇವೇ ಮೊದಲಾದವುಗಳು ಉಪಯೋಗಿಸುವ ತಂತ್ರ ವಿಶೇಷಗಳಾಗಿವೆ. **ಕಿಂದಮ ಋಷಿ** ಮೃಗದಂತೆ ಆಚರಿಸುವುದಿಲ್ಲ. ಮೃಗವಾಗಿಯೇ ತಿರುಗುತ್ತಾನೆ. **ಕಾವ್ಯದಲ್ಲಿ ರೂಪಕವಾಗುವುದು ಪುರಾಣದಲ್ಲಿ ರೂಪಾಂತರವಾಗುತ್ತದೆ. ಪುರಾಣ ಸ್ವತಃ ತಾನೇ ಒಂದು ಭಾಷೆ ನಿಜ. ಆದರೆ ಅದು ಉಪಯೋಗಿಸುವ ವರ, ಶಾಪ, ಸಮಯ -ಇವು ಅದರದೇ ಉಪಭಾಷೆಗಳಾಗಿವೆ. "ಈ ಎಲ್ಲಾ ತಂತ್ರವಿಶೇಷತೆಗಳನ್ನೂ ಉಪಯೋಗಿಸಿಕೊಂಡು ಪುರಾಣ ಯಾವ ಅರ್ಥವನ್ನು ಕೊಡುತ್ತದೆನ್ನುವುದು ಬಹಳ ಮುಖ್ಯವಾಗುತ್ತದೆ."[೯]**

~~~***~~~
~~~

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಹಾಭಾರತ, ಭಾ–೨, ಪು. ೮೦೦

೨. ವಾಲ್ಮೀಕಿ ರಾಮಾಯಣ ಭಾ–೧, ಭಾ.ದ.ಪ್ರ. ಪು. ೧೦೬

೩. ಶಂ.ಬಾ. ಜೋಶಿ, ಋಗ್ವೇದಸಾರ, ಪ್ರಸ್ತಾವನೆ, ಪು. ೧೧೯

೪. ಶ್ರೀ.ಮ.ಭಾ. ಭಾ–೧, ಪು. ೨೪೭

೫. -- ಅದೇ--, ಪು. ೩೮೫.

೬. ಡಿ.ವಿ.ಜಿ., 'ಶ್ರೀಕೃಷ್ಣಚರಿತೆ', ಮುನ್ನುಡಿ, ಪು. ೧೭.

೭. ಡಾ॥ ಎಲ್.ಆರ್. ಹೆಗಡೆ, ಪುರಾಣ ಜಿಜ್ಞಾಸೆ, ಪು. ೬೯.

೮. ಶ್ರೀಮ.ಭಾ.ತಾ.ನಿ., ಭಾ–೨, ಪು.೧೫೪.

೯. ಕೀರ್ತಿನಾಥ ಕುರ್ತುಕೋಟಿ, "ಉರಿಯ ನಾಲಿಗೆ", ಪು. ೧೩೪.

~~~\*\*\*~~~

## 4. ಶಂತನು ಜನನ :

ಪ್ರತೀಪ ಮಹಾರಾಜನಿಗೆ ಇನ್ನೇನು ತನಗೆ ಸಂತಾನ ಪ್ರಾಪ್ತಿಯೇ ಇಲ್ಲವೇನೋ ಎಂದು ಪರಿತಪಿಸಿ ತಪಸ್ಸು ಮಾಡುತ್ತಿರುವಾಗ ಹುಟ್ಟಿದ ಮಗ ಶಂತನು. ಪ್ರತೀಪನ ವಂಶ ಕ್ಷಯಿಸುತ್ತಿರುವಾಗ ಅಂದರೆ ಶಾಂತವಾಗಿ ಹೋಗುತ್ತದೆಯೋ ಏನೋ ಎಂದು ಯೋಚಿಸುತ್ತಿರುವಾಗ ವಯೋವೃದ್ಧನಾಗುತ್ತಿದ್ದ ಪ್ರತೀಪನಿಗೆ ಮಗ ಹುಟ್ಟಿದ್ದ–ರಿಂದ ಅವನಿಗೆ 'ಶಾಂತನು' ಎಂದೇ ಪ್ರತೀಪ ನಾಮಕರಣ ಮಾಡಿದನು.

ಶಾಂತನು ಮಹಾರಾಜನೂ ತನ್ನ ತಂದೆಯಂತೆಯೇ ಮಹಾ ಪರಾಕ್ರಮಿ ಅರಸನೇ ಆಗಿದ್ದನು. ಬೇಟೆ ಆಡುವುದರಲ್ಲಿ ಸಿದ್ಧಹಸ್ತನು. ಒಮ್ಮೆ ಗಂಗಾನದಿ ತೀರದಲ್ಲಿ ಸಂಚರಿಸುವಾಗ ಅವನ ಕಣ್ಣಿಗೊಬ್ಬಳು ಸುಂದರ ಸ್ತ್ರೀ ಕಾಣಿಸಿದಳು. ಏಕಾಕಿನಿಯಾಗಿದ್ದವಳನ್ನು ಎಷ್ಟು ಹೊತ್ತು ನೋಡಿದರೂ ಇನ್ನೂ ನೋಡುತ್ತಲೇ ಇರಬೇಕೆಂಬ ಬಯಕೆ ಇಬ್ಬರಲ್ಲೂ ಹುಟ್ಟಿತು. ಇಬ್ಬರ ನೇತ್ರಭ್ರಮರಗಳೂ ಪರಸ್ಪರ ಮಾತಾಡಿಕೊಳ್ಳುತ್ತಿತ್ತು. ಮನ್ಮಥನ ಶರಾಘಾತಕ್ಕೊಳಗಾದ ಅವರಿಬ್ಬರೂ ಕಾಮಮೋಹಿತರಾಗಿದ್ದರು. ಸಮೀಪಕ್ಕೆ ಬಂದ ಅವರಲ್ಲಿ ಸುಮಧುರ ಸಂಭಾಷಣೆಯಾಗಿ ಪರಸ್ಪರ ಪರಿಚಯಿಸಿಕೊಂಡರು. 'ಮಹಾರಾಜಾ ನಾನು ನಿನ್ನ ಭಾರ್ಯೆಯಾಗುವ ಅಪೇಕ್ಷೆಪಡುತ್ತೇನೆ.' ಎಂದು ಮನಬಿಚ್ಚಿ ಹೇಳಿದಳು ಆ ಮನಮೋಹಿನಿ.

'ನೀನು ಯಾರು ನಿನ್ನ ಕುಲ ಗೋತ್ರಗಳೇನು?'

'ಅದೆಲ್ಲವನ್ನೂ ಮೀರಿದ್ದು ಪ್ರೇಮ, ನಾನು ಬೆಸ್ತರ ಕನ್ಯೆ. ಇಲ್ಲೇ ಸಮೀಪದಲ್ಲೇ ನಮ್ಮ ವಸತಿ.'

'ನೀನು ನನ್ನ ರಾಣಿಯಾಗಲು ನನಗಿಷ್ಟವಿದೆ. ಅರಮನೆಗೆ ಹೋಗೋಣ ಬಾ.'

'ಅದೊಂದು ಮಾತ್ರ ಹೇಳಬೇಡಿ. ನನಗೆ ಬೇಕಾದ್ದು ರಾಣೀವಾಸ, ಅರಮನೆಗಳಲ್ಲ. ನೀವು.. ನೀವು ಮಾತ್ರ. ನೀವು ಎಲ್ಲಿಯವರೆಗೆ ನನ್ನವರಾಗಿರುತ್ತೀರೋ ಅಲ್ಲಿಯವರೆಗೂ ನಾನು ಹೀಗೇ ಇಲ್ಲೇ ಇರಬಯಸುತ್ತೇನೆ.' ಎಂದು ಗಂಗಾ ಹೇಳಿದಳು.

ಆ ಕೂಡಲೇ ಶಾಂತನುವಿಗೆ ಸಾಯುವ ಮುನ್ನ ತನ್ನ ತಂದೆ ಪ್ರತೀಪ ಮಹಾರಾಜನು ಹೇಳಿದ ಮಾತು ನೆನಪಾಯಿತು.
~~~

'ಮಗ, ಶಾಂತನೂ, ನಿನ್ನ ಜಾತಕದಂತೆ ನಿನಗೊಬ್ಬ ಅನ್ಯಸ್ತ್ರೀ ಸಂಗವಾಗುತ್ತದೆ. ಇದು ಅನಿವಾರ್ಯ. ನೀನು ಆಕೆಯನ್ನು ತಿರಸ್ಕರಿಸುವಂತಿಲ್ಲ. ಪರಿಗ್ರಹಿಸು. ಆದರೆ ಮಾತ್ರ ಅವಳನ್ನು ಯಾವುದಕ್ಕೂ ಒತ್ತಾಯ ಮಾಡಬೇಡ. ಅವಳು ಬೇಕಾದಲ್ಲಿರಲಿ. ಬೇಕಾದ ಹಾಗೆ ಮಾಡಲಿ. ಅದನ್ನು ನೀನು ಅಡ್ಡಿಪಡಿಸಬೇಡ.' ಶಾಂತನು ಮುಂದೇನೂ ಪ್ರಶ್ನೆ ಮಾಡಲಿಲ್ಲ.

ಶಾಂತನು-ಗಂಗೆಯನ್ನು 'ಗಾಂಧರ್ವ ವಿವಾಹ' ಮಾಡಿಕೊಂಡನು. ಗಂಗಾ ತಟಾಕದಲ್ಲಿದ್ದ ವನದಲ್ಲೇ ಅವರ ಸಂಸಾರ ಸಾಗಿತು. ಗಂಗೆಯೊಂದಿಗೆ ರತಿಸುಖವನ್ನನುಭವಿಸುತ್ತಿದ್ದ ಶಂತನುವಿಗೆ ವರ್ಷಗಳು ಉರುಳಿದ್ದೇ ತಿಳಿಯಲಿಲ್ಲ.

ಗಂಗಾದೇವಿ ಏಳು ವರ್ಷಗಳಲ್ಲಿ ತನಗೆ ಹುಟ್ಟಿದ ಮಕ್ಕಳನ್ನೆಲ್ಲಾ ಗಂಗಾ ಪ್ರವಾಹದಲ್ಲಿ ಹಾಕಿಬಿಡುತ್ತಿದ್ದಳು. ತನ್ನ ಪ್ರೇಯಸಿಯ ಈ ಕಾರ್ಯ ಶಾಂತನುವಿಗೆ ಸರಿ ಬರುತ್ತಿರಲಿಲ್ಲ. ಹಾಗಂತ ಅಡ್ಡಿ ಪಡಿಸುವಂತೆಯೂ ಇರಲಿಲ್ಲ. ಆ ಕ್ಷಣ ತಂದೆ ಹೇಳಿದ ಮಾತು ಜ್ಞಾಪಕವಾಗುತ್ತಿತ್ತು. ಪ್ರಶ್ನಿಸಿದರೆ ಗಂಗಾದೇವಿ ಎಲ್ಲಿ ತನ್ನನ್ನು ಬಿಟ್ಟು ಹೊರಟು ಹೋಗುವಳೋ ಎಂದು ಶಾಂತನು ಗಂಗಾದೇವಿ ಏಳು ಮಕ್ಕಳನ್ನು ಕೊಲೆ ಮಾಡಿದ್ದನ್ನು ನೋಡಿಯೂ ತಾಳ್ಮೆಯಿಂದ ಸಹಿಸಿಕೊಂಡಿದ್ದ. ಇದು ಸ್ತ್ರೀ ವ್ಯಾಮೋಹಕ್ಕೆ ಬಿದ್ದವರ ಅಸಹಾಯಕತೆ ಎನ್ನೋಣವೇ?!

ತಾಳ್ಮೆಗೂ ಒಂದು ಮಿತಿಯುಂಟು. ಯಾವಾಗ ಗಂಗಾದೇವಿ ಹುಟ್ಟಿದ ತನ್ನ ಎಂಟನೆಯ ಮಗುವನ್ನೂ ನದಿಯಲ್ಲೆಸೆಯಲು ಪ್ರಯತ್ನಿಸಿದಳೋ ಆಗ ಇದನ್ನು ಸಹಿಸದ ಶಂತನು 'ಕೊಲೆಪಾತಕೀ ನಿಲ್ಲೂ.. ಈ ಮಗುವನ್ನೂ ಕೊಲ್ಲದಿರು. ನೀನು ಯಾರು? ಹುಟ್ಟಿದ ಮಕ್ಕಳನ್ನೆಲ್ಲಾ ಏಕೆ ಕೊಲ್ಲುತ್ತಿರುವೆ? ಎಂದು ಕಠೋರವಾಗಿಯೇ ಕೇಳಿದಾಗ,

"ಮಹಾರಾಜ, ನಾವು ನಿಮಗೆ ಸುಖಭೋಗಕ್ಕೆ ಮಾತ್ರ ಬೇಕು. ಎಷ್ಟಾದರೂ ನಾವು ಶೂದ್ರರು, ದಾಸಿಯರು. ನಮಗೆ ಹುಟ್ಟಿದ ಮಕ್ಕಳಿಗೆ ಯಾವ ಆಧಾರವಿದೆ? ನೆಲೆಯಿಲ್ಲ, ಬೆಲೆಯಿಲ್ಲ. ದಾಸೀ ಪುತ್ರರಾಗಿಯೇ ಅವರು ಇರಬೇಕಲ್ಲವೇ? ಇತರಾಳ ಕಥೆಯ ಹಾಗೇ ಇಂತಹ ಇನ್ನೂ ಎಷ್ಟೋ ಕಥೆಗಳಾಗಿ ಹೋಗಿದೆ. ಹೆತ್ತ ಕರುಳಿಗೆ ಆಗುವ ನೋವು, ದುಃಖ ಗಂಡಸರಾದ ನಿಮಗೆ ಹೇಗೆ ತಿಳಿಯುತ್ತದೆ? ತಗೋ ಈ ಮಗುವನ್ನು ನೀನೇ ಉಳಿಸಿದ್ದೀಯೇ.. ನೀನೇ ಸಾಕಿಕೋ. ನಿನಗೂ ಹೇಗೂ ಒಬ್ಬ ಪುತ್ರನ ಅವಶ್ಯಕತೆ ಇದೆ. ಅದಕ್ಕಾಗಿಯೇ ಅಲ್ಲವೇ ನೀನು ನನ್ನನ್ನು ಮೋಹಿಸಿದ್ದು." ಗಂಗಾದೇವಿ ಆಕ್ಷೇಪಿಸಿದಳು.

**"॥ ಮತ್ಪ್ರಸೂಲೆಂ ವಿಜಾನೀಹಿ ಗಂಗಾದತ್ತಮಿಮಂ ಸುತಮ್ ॥"**

ನನ್ನಿಂದ ಹುಟ್ಟಿದ ಈ ಮಗುವನ್ನು **ಗಂಗಾದತ್ತ**ನೆಂದು ತಿಳಿಯುವವನಾಗು. ಇವನಿಗೆ ಗಂಗಾಪುತ್ರನೆಂದೇ ನಾಮಕರಣ ಮಾಡು ಎಂದು ಗಂಗಾದೇವಿ ಹೇಳಿ,

"ಮಹಾರಾಜ, ನಾನಿನ್ನೂ ಹೋಗಿ ಬರುತ್ತೇನೆ." ಎಂದು ಹೇಳಿ ಗಂಗಾದೇವಿ ತನ್ನ ಸ್ವಸ್ಥಾನಕ್ಕೆ ಹೊರಟು ಹೋದಳು. ಶಂತನು ತನ್ನ ಮಗುವನ್ನು ಎತ್ತಿಕೊಂಡು ಅರಮನೆಯತ್ತ ಹೊರಟ.

ಶಂತನು ಭರತವಂಶ ರಕ್ಷಕನಾಗಿದ್ದಾನೆ. ಅವನ ವಂಶ ಬೆಳೆಯಲಿಕ್ಕೆ ಈಗೊಂದು ಆಧಾರ ಸಿಕ್ಕಿದೆ.

ಆಶ್ರಿತ ರಾಜರೆಲ್ಲಾ ಶಂತನುವಿಗೆ ಚಕ್ರವರ್ತಿ ಪಟ್ಟ ಕಟ್ಟಿದರು. ಕಾಮ ಮತ್ತು ಅರ್ಥಗಳಿಗಿಂತ ಧರ್ಮಶ್ರೇಷ್ಠ. ಆ ಧರ್ಮವನ್ನೀಗ ಶಂತನು ಚಕ್ರವರ್ತಿಯಾಗಿ ಉಳಿಸಬೇಕಾಗಿದೆ. ಏಕೆಂದರೆ "ಧರ್ಮ" ಎಂಬುದು ರಾಜರನ್ನು ನಿಯಂತ್ರಿಸುತ್ತಿತ್ತು. ವೇದಮೂಲವಾದ ಧರ್ಮವನ್ನಾಗಲೀ, ಋಷಿ ಪ್ರಣೀತ ಸ್ಮೃತಿಗಳನ್ನಾಗಲೀ ಪ್ರಶ್ನಿಸುವವರಿರಲಿಲ್ಲ.

ಧರ್ಮವನ್ನು ಸಂರಕ್ಷಿಸುವುದೇ ರಾಜಧರ್ಮ.

ಶಂತನು ತನ್ನ ಪುತ್ರ ಗಂಗಾದತ್ತನಿಗೆ ದೇವವ್ರತನೆಂದು ನಾಮಕರಣ ಮಾಡಿದನು. ಬಾಲಕನನ್ನು ಅಂತಃಪುರಸ್ತ್ರೀಯರು ಬೆಳೆಸಿದರು. ಶಂತನು ರಾಜ ಬಾಲಕ ದೇವವ್ರತನನ್ನು ವಸಿಷ್ಠರ ಆಶ್ರಮದಲ್ಲಿ ಬಿಟ್ಟಿದ್ದನು. ದೇವವ್ರತ ಶಸ್ತ್ರಾಸ್ತ್ರಗಳಲ್ಲಿ ನಿಷ್ಣಾತನಾಗಿದ್ದಲ್ಲದೆ ವೇದ-ವೇದಾಂಗಗಳನ್ನೂ ಅಧ್ಯಯನ ಮಾಡಿದ್ದವನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಿದನು.

ದೇವವ್ರತನಿಗೆ ಯುವರಾಜ ಪಟ್ಟಾಭಿಷೇಕ ಮಾಡಿದ ಪುರುವಂಶ ಪ್ರದೀಪ ಶಂತನು ಚಕ್ರವರ್ತಿಗೆ ಇನ್ನು ಯಾವ ಚಿಂತೆಯೂ ಇರಲಿಲ್ಲ. ನಾಲ್ಕು ವರ್ಷ ಕಳೆಯಿತು.

ಯುವರಾಜ ದೇವವ್ರತ ರಾಜ್ಯಭಾರ ನಡೆಸುತ್ತಿದ್ದ. ಗಾಂಗೇಯನ ರಾಜ್ಯಪಾಲನೆಯಲ್ಲಿ ಪ್ರಜೆಗಳು ಸಂತುಷ್ಟರಾಗಿದ್ದರು.

**ಶಂತನು-ಸತ್ಯವತಿಯರ ವಿವಾಹ ಪ್ರಸಂಗ :**

ಒಂದು ದಿನ ಶಂತನು ಯಮುನಾ ನದಿಯ ದಂಡೆಯ ಮೇಲೆ ವಿಹಾರಕ್ಕೆಂದು ಬಂದಾಗ, ಘಮಘಮಿಸುವ ಪರಿಮಳವೊಂದು ಗಾಳಿಯಲ್ಲಿ ತೇಲಿ ಬಂದು ಶಂತನುವಿನ ಮೂಗಿಗೆ ಬಡಿಯುತ್ತಿತ್ತು. ಆ ಸುವಾಸನೆಯನ್ನು ಆಘ್ರಾಣಿಸಿದ ಶಂತನುವಿಗೆ ಕುತೂಹಲ ಉಂಟಾಯಿತು. ಅದೇನು ನೋಡೋಣವೆಂದು ವಾಸನೆ ಬರುತ್ತಿದ್ದ ಹಾದಿಯನ್ನೇ ಹಿಡಿದು ಹೊರಟ.

ಪರಿಮಳ ದಡದಲ್ಲಿದ್ದ ದೋಣಿಯ ಕಡೆಯಿಂದ ಬರುತ್ತಿತ್ತು. ರಾಜ ದೋಣಿಯ ಕಡೆ ನೋಡಿದಾಗ ಅಲ್ಲೊಬ್ಬ ಅನುಪಮ ಸುಂದರಿ ದೋಣಿಯ ಹುಟ್ಟು ಹಿಡಿದು ನಿಂತಿದ್ದಳು. ರಾಜ ಆ ದೋಣಿಯ ಸಮೀಪಕ್ಕೆ ಬಂದ.

ಮೂವತ್ತಾರು ವರ್ಷಗಳ ಕಾಲ ಸ್ತ್ರೀಯರೊಡನೆ ಸಂಬಂಧವಿಲ್ಲದೇ ಇದ್ದ ಶಂತನು ಚಕ್ರವರ್ತಿ ಈಗ ಈ ಗಂಧವತಿಯ ಸೌಂದರ್ಯಕ್ಕೆ ಮಾರುಹೋದ. ತನ್ನ ಪರಿಚಯವನ್ನು ಹೇಳಿಕೊಂಡ. ಆ ಸುಂದರಿ ಬೆಸ್ತರ ರಾಜನ ಮಗಳಾಗಿದ್ದಳು. ಪ್ರಯಾಣಿಕರನ್ನು ಈ ದಡದಿಂದ ಆ ದಡಕ್ಕೆ ದೋಣಿಯಲ್ಲಿ ಕರೆದೊಯ್ಯುವ ಕಾಯಕ ಮಾಡುತ್ತಿದ್ದಳು.

ಶಂತನು ಆ ಗಂಧವತಿಯನ್ನು ಬಿಟ್ಟು ಒಂದು ಕ್ಷಣವೂ ಇರದಾದ. ಹೇಗಾದರೂ ಮಾಡಿ, ಕಡೆಗೆ ವಿವಾಹವಾಗಿಯಾದರೂ ಸರಿ ಆ ಬೆಸ್ತರ ಕನ್ಯೆಯನ್ನು ತಾನು ಪಡೆಯುವ ನಿರ್ಧಾರ ಮಾಡಿದ. ಮನಸ್ಸು ಮಾಡಿದ್ದರೆ ಆಗಿನ ಪದ್ಧತಿಯಂತೆ ಗಂಧವತಿಯನ್ನು ಶಂತನು ಅಪಹರಿಸಿಕೊಂಡು ಹೋಗಬಹುದಾಗಿತ್ತು. ಆದರೆ ಚಕ್ರವರ್ತಿ ಶಂತನು ಹಾಗೆ ಮಾಡದೆ ಬೆಸ್ತ ರಾಜನ ಮನೆಗೇ ಸಾಂಪ್ರದಾಯಿಕ ವಿಧಿಯನ್ನು ಅನುಸರಿಸಿ ಹೋಗಿ ವಿವಾಹದ ಪ್ರಸ್ತಾಪ ಮಾಡಿದ.

ಬೆಸ್ತ ರಾಜನು ತನ್ನ ಮಗಳ ಭವಿಷ್ಯದ ಭದ್ರತೆಗಾಗಿ ಕೆಲವು ನಿಬಂಧನೆಗಳನ್ನು ರಾಜನ ಮುಂದಿಟ್ಟ. ದಾಶರಾಜ ಹೀಗೆ ಹೇಳಲು ಕಾರಣವಿತ್ತು. ಇಂತದ್ದೇ ಕೆಲವು ಸಂದರ್ಭಗಳಲ್ಲಿ ಈ ಹಿಂದೆ ಶೂದ್ರ ಜಾತಿಯ ಕನ್ಯೆಯರಿಗಾದ ಶೋಷಣೆಯು ದಾಶರಾಜನು ಮರೆತಿರಲಿಲ್ಲ.

'ನನ್ನ ಮಗಳ ಮಗನೇ ಮುಂದೆ ಈ ರಾಜ್ಯದ ಚಕ್ರವರ್ತಿಯಾಗಬೇಕು.' ಎಂಬ ನಿಬಂಧನೆಯನ್ನು ಹಾಕಿದ.

ದಾಶರಾಜನ ಆಸೆಯನ್ನು ನೆರವೇರಿಸಲು ಶಂತನುವಿಗೆ ಮನಸ್ಸೊಪ್ಪಲಿಲ್ಲ. ಮಗ ದೇವವ್ರತನ ನೆನಪಾಗಿ ಹತಾಶನಾಗಿ ಭಾರವಾದ ಹೃದಯದಿಂದ ಹಸ್ತಿನಾವತಿಗೆ ಹಿಂತಿರುಗಿದನು.

**ಭೀಷಣವಾದ ಭೀಷ್ಮ ಪ್ರತಿಜ್ಞೆಗೆ ಕಾರಣವಾದ ಹಿನ್ನೆಲೆ :**

ಗಂಗಾ-ಶಂತನು ಮತ್ತು ಭೀಷ್ಮ- **ಈ ಕಥೆಯ ಮೂಲ ಆಕೃತಿಯು ಋಗ್ವೇದದಲ್ಲಿದೆ.** (೧೦-೭-೮೯.)

**ಗಂಗಾ ಶಂತನುವಿನ** ಏಳು **ಮಕ್ಕಳನ್ನು** ಗಂಗೆಗೆ ಎಸೆದದ್ದು ಏಕೆ? ವ್ಯಾಸ **ಋಷಿಗಳು ಈ** ರೀತಿ **ರಚಿಸಲು ಕಾರಣವೇನು?** ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ. ಇದಕ್ಕೆ ಹಿನ್ನೆಲೆಯಾಗಿ ಋಗ್ವೇದದಲ್ಲಿನ **ಅದಿತಿ ಪಾತ್ರವೇ ಆಗಿದೆ.**

ಈ ಅದಿತಿಗೆ ಪ್ರಪಂಚ ನಿಯಾಮಕ ಶಕ್ತಿ ಇದೆ. ಅನಂತತತ್ವವನ್ನು ಪ್ರತಿಬಿಂಬಿಸುವ ದೇವತಾವಿಶೇಷಳಾಗಿದ್ದಾಳೆ. ಈ ರೂಪದಲ್ಲಿಯೇ ಇವಳು ಪೂಜಿತಳಾಗಿದ್ದಾಳೆ. ಈಕೆ ಅಂತರಿಕ್ಷಸ್ಥರಾದ ದೇವತೆಗಳಿಗೆಲ್ಲಾ ಮುಖ್ಯಳು.

"॥ ಅಷ್ಟೌಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವಸ್ಪರಿ ।
ದೇವಾ ಉಪಪ್ರೈತ್ಸಪ್ತಭಿಃ ಪರಾ ಮಾರ್ತಂಡಮಾಸ್ಯತ್ ॥ (ಋಗ್ವೇದ-೧೦-೭೨-೮)

ಯಾವ ಮಿತ್ರಾದಿ ದೇವತೆಗಳು ಅದಿತಿಯ ದೇಹದಿಂದ ಉತ್ಪನ್ನರಾದರೋ ಅಂತಹ ಅದಿತಿ ಪುತ್ರರು ಎಂಟು ಮಂದಿ. ಅವರಲ್ಲಿ ಏಳು ಪುತ್ರರೊಂದಿಗೆ ಅದಿತಿ ದೇವತೆಗಳನ್ನು ಸಮೀಪಿಸುತ್ತಾಳೆ. ಎಂಟನೆಯ ಮಗುವಾದ ಮಾರ್ತಾಂಡ ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸುತ್ತಾಳೆ. ಇವರನ್ನು ಸಾಮೂಹಿಕವಾಗಿ ಆದಿತ್ಯರೆಂದು ಕರೆಯುವ ರೂಢಿಇದೆ.

**"ಮಹಾಭಾರತದ ಬೇರು-ಮೂಲಗಳು ಋಗ್ವೇದದಲ್ಲಿವೆ."**[೧] ವೇದದಲ್ಲಿಯ ಇಂದ್ರ-ವಿಷ್ಣು ಮಹಾಭಾರತದಲ್ಲಿಯ ಅರ್ಜುನ-ಕೃಷ್ಣರಾಗಿದ್ದಾರೆ.

ಹಾಗಾಗಿ ಅರ್ಜುನಲ್ಲಿಯ ಇಂದ್ರಾಂಶವೇ ಇಂದ್ರನ ಮಗನಾಗಲು ಕಾರಣವಾಗಿದೆ.

ಮಹಾಭಾರತದ ಪೂರ್ವ ಇತಿಹಾಸದ ಬಗ್ಗೆ ವೈಜ್ಞಾನಿಕ ಚಿಂತನೆ ಅಗತ್ಯ ಇದು ಯಾವ ಪೂರ್ವಗ್ರಹಗಳಿಗೂ ಒಳಗಾಗದೇ ಇರುವಾಗಲೇ ಸತ್ಯಾಂಶ ಹೊರಬೀಳುತ್ತದೆ.

'ಇತಿಹಾಸ ಎಂದು ನಾವು ಇಂದು ಕರೆಯುವುದರಲ್ಲಿಯೂ ಇತಿಹಾಸದ ಪರಂಪರಾಗತ ಬರವಣಿಗೆಯಲ್ಲಿಯೂ ಗುಣಾವಲಂಬಿಯಾದ ಬದಲಾವಣೆಗಳುಂಟು. ಸಾಕ್ಷ್ಯವನ್ನು ಬಳಸುವ ವಿಧಾನದಲ್ಲಿ ಇತಿಹಾಸದ ಈಗಿನ ಬರವಣಿಗೆಯು ಎರಡು ಸಂಗತಿಗಳಿಂದ ಪ್ರಭಾವಿತವಾಗಿದೆ.

**ವೈಜ್ಞಾನಿಕ ಕ್ರಾಂತಿಯು ಉಂಟು ಮಾಡಿದ ಬೌದ್ಧಿಕ ಪ್ರಭಾವ ಒಂದನೆಯದು;** ಇದರಿಂದ ಗತಕಾಲವನ್ನು ಕ್ರಮಬದ್ಧವಾಗಿ ಬೆಳಕಿಗೆ ತರುವ ಹಾಗೂ ಐತಿಹಾಸಿಕ ಸಂಗತಿಗಳ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚುವ ನಿಲುವಿಗೆ ಮಹತ್ವ ಬಂದಿದೆ. **ಒಂದು ಗುಂಪಿನ ಸಾಮಾನ್ಯ ಭಾಷೆ, ಸಂಸ್ಕೃತಿ ಹಾಗೂ ಇತಿಹಾಸಗಳಿಗೆ ಮಹತ್ವ ನೀಡುವ ಮನೋವೃತ್ತಿಯ ರಾಷ್ಟ್ರೀಯತೆಯೆಂಬ ಹೊಸ ಧ್ಯೇಯವು ಇತಿಹಾಸ ರಚನೆಯ ಮೇಲೆ ಬೀರುವ ಪ್ರಭಾವವು ಎರಡನೆಯದು.**"[೨] ಇದನ್ನು ಹೃದಯವೈಶಾಲ್ಯದಿಂದ ಎಲ್ಲರೂ ಮನಗಾಣಬೇಕು.

**ಅಡಿಟಿಪ್ಪಣಿಗಳು :**

೧. ಡಾ॥ ಶಂ.ಬಾ. ಜೋಶಿ, "ಸ್ಥಿತ್ಯಂತರ", ಪು. ೭೫.

೨. ರೋಮಿಲಾ ಥಾಪರ್, "ಗತಕಾಲದ ಬಗ್ಗೆ ಪೂರ್ವಗ್ರಹ", ನವದೆಹಲಿ, (೧೯೭೫), ಪು. ೪

~~~\*\*\*~~~

## 5. ವಂಶವೃದ್ಧಿಗೆ ಸತ್ಯವತಿಗೆ ಪ್ರೇರಣೆ :

ವ್ಯಾಸರಿಗೆ 'ಮಹಾಭಾರತ' ಕಥೆಯ ಬುನಾದಿಗೆ ಋಗ್ವೇದದ ಪ್ರಭಾವವನ್ನು ಕುರು-ಪಾಂಡವರ ಜನನದಿಂದಲೇ ಕಾಣಬಹುದು.

ಸತ್ಯವತಿಗೆ ವಿಚಿತ್ರವೀರ್ಯನು ಮರಣ ಹೊಂದಿದಾಗ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದ ಆಘಾತವಾಯಿತು. ಕುಲದ ಕೀರ್ತಿ, ಸಂತಾನ ಮತ್ತು ಅನುವೃತ್ತಿಯನ್ನು ಮುಂದುವರೆಸುವುದು ಹೇಗೆ? ಎಂದು ಯೋಚಿಸಿ ಭೀಷ್ಮನನ್ನು ಕುರಿತು ನಿನ್ನ ತಮ್ಮ ಸ್ವರ್ಗಸ್ಥನಾಗಿದ್ದಾನೆ. ಆತನ ಪತ್ನಿಯರಾದ ಕಾಶಿ ರಾಜನ ಮಕ್ಕಳಾದ ಇಬ್ಬರು ಮಹಿಷಿಯರು ರೂಪಸಂಪನ್ನರಾಗಿದ್ದಾರೆ. ಅವರಿಂದ ಸಂತಾನವಾಗಿ ಕುಲವೃದ್ಧಿಯಾಗಬೇಕಾಗಿದೆ. ನೀನು ಅವರಲ್ಲಿ ಸಂತಾನವನ್ನು ಪಡೆದು "ಭರತ ಕುಲ"ವನ್ನು ಬೆಳೆಸು ಎಂದು ಕೇಳಿದಳು. ರಾಜ್ಯದ ಸಲುವಾಗಿ ಪಟ್ಟಾಭಿಷೇಕ ಮಾಡಿಕೋ ಎಂದಳು. ತಾಯೇ! ನಿನ್ನ ಅಪೇಕ್ಷೆಯಂತೆ ನಿನ್ನ ವಿವಾಹದ ಸಮಯದಲ್ಲಿ ವ್ರತವನ್ನು ಹಿಡಿದು ಪ್ರತಿಜ್ಞೆ ಮಾಡಿದ್ದೇನೆ. ಏನು ಬೇಕಾದರೂ ಬಿಟ್ಟೇನು ಆದರೆ ಸತ್ಯವನ್ನು ಮಾತ್ರ ಬಿಡಲಾರೆ ಎಂದು ಸತ್ಯವತಿಯ ಅಪೇಕ್ಷೆಯನ್ನು ನಿರಾಕರಿಸುತ್ತಾನೆ. ಮತ್ತು ಬಲಿ ಎಂಬ ರಾಜನು ದೀರ್ಘತಮರೆಂಬ ಋಷಿಗಳಿಂದ
~~~

"ನಿಯೋಗ"ಪದ್ಧತಿಯಂತೆ ಮಕ್ಕಳನ್ನು ಪಡೆಯಬಹುದು. ಭರತವಂಶದ ಸಂತಾನಾಭಿವೃದ್ಧಿಗಾಗಿ ಧನವನ್ನು ಕೊಟ್ಟಾದರೂ ಒಬ್ಬ ಗುಣವಂತ ಬ್ರಾಹ್ಮಣನನ್ನು ಆಹ್ವಾನ ಮಾಡು ಎಂದು ಹೇಳಿದ. ಸತ್ಯವತಿ ಚಿಂತಿಸತೊಡಗಿದಳು.

ಸತ್ಯವತಿಯು ದೀರ್ಘಾಲೋಚನೆಯಲ್ಲಿ ಮುಳುಗಿರುವುದನ್ನು ಗಮನಿಸಿದ ಭೀಷ್ಮ; ಪ್ರತಿಯೊಂದು ಕುಲದಲ್ಲಿಯೂ ಸ್ತ್ರೀಯರು ಅನೇಕ ಪರಮ ರಹಸ್ಯಗಳನ್ನು ಭರಿಸಿರುತ್ತಾರೆ. ಪುರುಷರ ಜೊತೆಯಲ್ಲಿಯೂ ಸಹ ಅನೇಕ ಮಾಯೆಗಳಿಂದ ವ್ಯವಹರಿಸುತ್ತಾರೆ. ನಮ್ಮ ಕುಲವು ಹಾಳಾಗದಂತೆ ಏನು ಮಾಡಬೇಕೆಂದು ನೀನೇ ವಿಚಾರ ಮಾಡಿನೋಡು ಎಂದು ಹೇಳಿದಾಗ ಸತ್ಯವತಿಗೆ ಆಗಿನ ಕಾಲದಲ್ಲಿ "ಧರ್ಮಸಮ್ಮತ"ವಾದ ಪದ್ಧತಿಯೊಂದು ನೆನಪಿಗೆ ಬಂತು.

"ಪೂರ್ವ ಕಾಲದಲ್ಲಿ ಅಂದರೆ ವೇದಗಳ ಕಾಲದಲ್ಲಿ ಪತಿಯು ಪುತ್ರರಹಿತನಾಗಿ ಮೃತನಾದರೆ ಅವನ ಪತ್ನಿಯು ಪುತ್ರಾರ್ಥವಾಗಿ ದೇವರನಿಂದ ಎಂದರೆ ತನ್ನ ಪತಿಯ ಸಹೋದರನಿಂದ ಒಬ್ಬ ಪುತ್ರನನ್ನು ಮಾತ್ರ ಪಡೆಯುವಂತಹ ಪದ್ಧತಿ ಇತ್ತು."[1] ಇದು ಸತ್ಯವತಿಗೆ ನೆನಪಾಗಿ ವಿಚಿತ್ರವೀರ್ಯನ ಸೋದರನೇ ಇರುವಾಗ ಇನ್ನು ಯೋಚನೆ ಮಾಡುವುದೇನಿದೆ? ಎಂದು ತಾನು **ವಸು** ಎಂಬ ರಾಜನ ಮಗಳೆಂದೂ ಆದರೆ ದಾಶರಾಜನೆಂಬ ಬೆಸ್ತನು ತನ್ನನ್ನು ಮಗಳೆಂದು ಬೆಳೆಸಿದನೆಂದೂ, ಮಹರ್ಷಿ ಪರಾಶರ ಯಮುನಾ ನದಿಯನ್ನು ದಾಟಲು ಬಂದವನು ನನ್ನ ಸೌಂದರ್ಯಕ್ಕೆ ಮೋಹಪರವಶನಾಗಿ ಕಾಮಾರ್ತನಾಗಿ ತನ್ನನ್ನು ವಶಪಡಿಸಿಕೊಂಡೇ ಬಿಟ್ಟನು. ಅವನಿಂದ ಗರ್ಭವತಿಯಾದ ನನಗೆ ಕನ್ಯಾವಸ್ಥೆಯಲ್ಲಿಯೇ ಹುಟ್ಟಿದ ಒಬ್ಬ ಮಗನಿದ್ದಾನೆ. ಅವನ ಹೆಸರು ದ್ವೈಪಾಯನನೆಂದು. ಅವನನ್ನು ಇಲ್ಲಿಗೆ ಕರೆಯಿಸಿಕೊಂಡರೆ ತನ್ನ ತಮ್ಮನ ಕ್ಷೇತ್ರದಲ್ಲಿ ಪುತ್ರನನ್ನು ಪಡೆಯುತ್ತಾನೆ. ನಿನಗೆ ಸಮ್ಮತವಾದರೆ ಅವನನ್ನು ಕರೆಸು. ಮಹಾ ತಪಸ್ವಿಯಾದ ಆತ ವಿಚಿತ್ರವೀರ್ಯನ ಪತ್ನಿಯರಲ್ಲಿ ಪುತ್ರರನ್ನು ಪಡೆಯುವುದು ಧರ್ಮಸಮ್ಮತವೂ ಆಗುತ್ತದೆ ಎಂದಳು.

**ವ್ಯಾಸರ ನಿಯೋಗ ಪದ್ಧತಿಗೆ ಪ್ರೇರಣೆ :**

ದೀರ್ಘತಮಸ್ಸು ಎಂಬ ಋಷಿಗೆ ವಯಸ್ಸಾಗಿ ಮುಪ್ಪಿನಿಂದ ಶರೀರವು ಜೀರ್ಣವಾಗಿ ಕಣ್ಣೂ ಕಾಣಿಸದಾಗುತ್ತದೆ. ಋಷಿಯ ಈ ಸ್ಥಿತಿಯನ್ನು ಕಂಡ ಇವನ ಅನುಚರರು ಋಷಿಯ ಕೈ-ಕಾಲುಗಳನ್ನು ಹಗ್ಗದಿಂದ ಕಟ್ಟಿ ನದಿಯಲ್ಲಿ ಎಸೆದು ಬರುತ್ತಾರೆ. ಹರಿಯುತ್ತಿದ್ದ ನದಿಯ ಪ್ರವಾಹ ಋಷಿಯನ್ನು ಅಂಗದೇಶದ ಬಳಿ ತಂದು ಹಾಕುತ್ತದೆ. ಅಂಗರಾಜನಿಗೆ ಮಕ್ಕಳಿರಲಿಲ್ಲ. ಪ್ರವಾಹ ತಂದು ಹಾಕಿದ ಋಷಿಯ ವಿಚಾರವನ್ನು ಯಾರೋ ಅರಮನೆಗೆ ಮುಟ್ಟಿಸಿದರು. ಸುದ್ದಿ ತಿಳಿದ ರಾಜನಿಗೆ ಒಂದು ಯೋಚನೆ ಬಂತು. ಅರಮನೆಯಲ್ಲಿ **ಉಶಿಕ್** ಎಂಬ ದಾಸಿ ಇದ್ದಳು. "ನದಿಯ ಪ್ರವಾಹದಿಂದ ತಪ್ಪಿಸಿಕೊಂಡು ಬಂದ ಋಷಿಯನ್ನು ಅಂಗರಾಜ ಅರಮನೆಗೆ ಕರೆಸಿಕೊಂಡ. ಈ ಮಹರ್ಷಿಯಿಂದಲೇ ತಾನೇಕೆ ಮಕ್ಕಳನ್ನು ಪಡೆಯಬಾರದೆಂಬ ಯೋಚನೆ ಬಂದದ್ದೇ ತಡಾ ಈ ಉಶಿಕ್ ಎಂಬ ದಾಸಿಯನ್ನು ಋಷಿಯ ಸೇವೆಗೆ ನೇಮಿಸಿದನು. ಉಶಿಕ್ ದಾಸಿಯು ಭಕ್ತಿಭಾವದಿಂದ ಋಷಿಯ ಸೇವೆ ಮಾಡಿದಳು. ಮಹರ್ಷಿ ದಾಸಿಯ ಸೇವೆಗೆ ಮೆಚ್ಚಿ ಅವಳಲ್ಲಿ **ಕಕ್ಷಿವಾನ್** ಮುಂತಾದ ಅನೇಕ ಋಷಿಪುತ್ರರನ್ನು ಉತ್ಪಾದನೆ ಮಾಡಿದನು."[2]

**ವಿದುರನ ಜನನಕ್ಕೆ ಪ್ರೇರಣೆ :**

ಅಂಗದೇಶದ ರಾಜನು ಒಂದು ಸಾರಿ ಪತ್ನಿ, ದಾಸಿಯರೊಂದಿಗೆ ಜಲಕ್ರೀಡಾರ್ಥವಾಗಿ ಗಂಗಾನದಿಗೆ ಹೋಗಿದ್ದನು. ಆ ಸಮಯಕ್ಕೆ ಸರಿಯಾಗಿ ದೀರ್ಘತಮನೆಂಬ ಋಷಿಯು ಒಂದು ದೋಣಿಯಲ್ಲಿ ತೇಲಿಕೊಂಡು ಬಂದನು. ಆ ಋಷಿಯು ಅತಿ ದುರ್ಬಲನಾಗಿದ್ದುದರಿಂದ ಹಾಗೂ ಅಕಸ್ಮಾತ್ತಾಗಿ ತಾನಿದ್ದ ಸ್ಥಳಕ್ಕೆ ತೇಲಿಕೊಂಡು

ಬಂದ ದೋಣಿಯಲ್ಲಿದ್ದ ಋಷಿಯನ್ನು ನೋಡಿ, ಅತ್ಯಂತ ಸಂತೋಷದಿಂದ ಬಳಿ ಸಾರಿ ವಂದಿಸಿ ಋಷಿಯನ್ನು ದೋಣಿಯಿಂದಿಳಿಸಿ, ಪೂಜಿಸಿ, 'ಸ್ವಾಮಿ ನನಗೆ ಬಹುಕಾಲದಿಂದ ಮಕ್ಕಳಿರಲಿಲ್ಲ. ಇದೋ ನನ್ನ ಪತ್ನಿಯು ಇಲ್ಲಿಯೇ ಇರುವಳು. ಇವಳಲ್ಲಿ **ಒಬ್ಬ ಪುತ್ರನನ್ನು ಉತ್ಪಾದನೆ ಮಾಡಿ.'**[3] ಎಂದು ಪ್ರಾರ್ಥಿಸಿದನು. ಆಗ ರಾಣಿಯು ಅತ್ಯಂತ ವೃದ್ಧನಾದ ಈ ಋಷಿಯನ್ನು ನೋಡಿ ಅವನೊಡನೆ ಕೂಡಲು ಇಷ್ಟಪಡದೆ **ಉಶಿಕ್** ಎಂಬ ಹೆಸರಿನ ತನ್ನ ದಾಸಿಯೊಬ್ಬಳನ್ನು ಕಳುಹಿಸಿಕೊಟ್ಟಳು. **ಸರ್ವಜ್ಞನಾದ ಆ ಋಷಿಯು ಆಕೆಯ ಮೇಲೆ ಮಂತ್ರಪೂತವಾದ ಜಲವನ್ನು ಪ್ರೋಕ್ಷಿಸಿ ಆ ದಾಸಿಯನ್ನು ಋಷಿಪತ್ನಿಯಂತೆ ಕಂಗೊಳಿಸಿದನು. ಆಕೆಯಲ್ಲಿ ಜನಿಸಿದ ಮಗನೇ ಕಕ್ಷಿವಾನ್** ಎಂಬ **ಋಷಿಯು.**

**ನಿಯೋಗ ವಿಧಾನ :**

'ಮಹಾಭಾರತ'ದಲ್ಲಿ ಈ 'ನಿಯೋಗ ಪದ್ಧತಿ'ಯಿಂದಲೇ "ಕುರು ವಂಶ" ಅಭಿವೃದ್ಧಿಯಾಗಿ ಮುಂದುವರಿಯಲು ಕಾರಣವಾಯಿತು. ಇದು ಗಮನಾರ್ಹವಾದ ಅಂಶ. ಮತ್ತು ನೆನಪಿನಲ್ಲಿಡಲೇ ಬೇಕಾದ ಅಂಶ.

'ಮಹಾಭಾರತ' ಕಥಾನಕದಲ್ಲಿ ವ್ಯಾಸರೂ ಒಬ್ಬ ಪಾತ್ರಧಾರಿಯಾಗಿರುವುದರಿಂದ, ಹಲವಾರು ಋಗ್ವೇದ ಪಾತ್ರಗಳ ಸ್ಫೂರ್ತಿ, ಪ್ರಭಾವಗಳಿಂದ ಮಹಾಭಾರತ ಮಹಾಕಾವ್ಯಕ್ಕೆ ಪುನರ್ ರಚಿಸುವ ಸ್ನನಿವೇಶಗಳ ಕಥಾವಸ್ತುವಿನ ಬೆಳವಣಿಗೆಗೆ ಕಾರಣರಾಗಿದ್ದಾರೆ. ಹಾಗೂ ಪುರಾಣಿಕರ **'ಪುರಾಣೇತಿಹಾಸ'ದ ಅಭಿದಾನ ಪಡೆದು ಬೃಹತ್ ಕಾವ್ಯ ನಿರ್ಮಾಣಕ್ಕೆ ಪ್ರೇರಣೆ ನೀಡಿದೆ.**

ಆದಿತ್ಯ ರೂಪನಾದ **ವಿವಸ್ವಂತ** ಮಾನವ ಇವನ ಪತ್ನಿ **ಸರಣ್ಯೂ** ತ್ವಷ್ಟೃವಿನ ಪುತ್ರಿ. ಈಕೆ ದಿವ್ಯಸ್ತ್ರೀ. ಈಕೆಗೆ ವಿವಸ್ವಂತನನ್ನು ವಿವಾಹವಾಗುವುದು ಇಷ್ಟವಿರುವುದಿಲ್ಲ. ಬಲಾತ್ಕಾರದ ಮದುವೆಯಾಗಿರುತ್ತದೆ. ಈಕೆ ತನ್ನ ಪತಿ ಇಲ್ಲದಿರುವ ವೇಳೆ ತನ್ನನ್ನೇ ಹೋಲುವ ಮತ್ತೊಬ್ಬ ಸ್ತ್ರೀಯನ್ನು ತನ್ನ ಜಾಗದಲ್ಲಿ ಮಲಗಿಸಿ ಹೊರಟು ಹೋಗಿರುತ್ತಾಳೆ. ವಿವಸ್ವಂತ ಆ ಸ್ತ್ರೀಯನ್ನೇ ತನ್ನ ಪತ್ನಿ ಎಂದು ತಿಳಿದು ಸಮಾಗಮ ಹೊಂದುತ್ತಾನೆ. ಇದರ ಫಲವಾಗಿ **ಮನು** ಜನಿಸುತ್ತಾನೆ. (ಋ.ಸಂ. ೧೦-೧೭-೧)

ಭರತವಂಶದ ಸಂತಾನಾಭಿವೃದ್ಧಿ ಆಗಬೇಕಾಗಿರುತ್ತದೆ. ಶ್ರೋತ್ರಿಯನಾದ, ಧರ್ಮನಿಷ್ಠನಾದ, ಬ್ರಾಹ್ಮಣನೊಬ್ಬನನ್ನು ಕರೆದು ಅವನಿಗೆ ಯಥೇಚ್ಛವಾಗಿ ಧನವನ್ನು ಕೊಟ್ಟು ಭಾರ್ಯೆಯರಲ್ಲಿ ಸಂತಾನ ಪಡೆಯಬಹುದೆಂದು ಭೀಷ್ಮನ ಮೂಲಕ ವ್ಯಾಸರೇ ಹೇಳಿದ್ದಾರೆ.

**ಈ 'ನಿಯೋಗ ಪದ್ಧತಿ' ಕುರಿತಂತೆ ಆಧುನಿಕ ಚಿಂತನೆ :**

ಮನುಷ್ಯ ಇಂದಿನ ಆಧುನಿಕ ಕಾಲದಲ್ಲಿ ಯಾವುದೇ ಒಂದು ಪ್ರಾಚೀನ ವಸ್ತುವನ್ನು ಅಥವಾ ವಿಷಯವನ್ನು ಕುರಿತು ವಿಚಾರ ಮಾಡಿದಾಗ ಹೊಳೆಯುವ, ಮಿಂಚುವಂತಹ ಸುದ್ದಿಯ ಪ್ರಕ್ರಿಯೆ ಒಂದು ಹೊಸದಾದ, ನೂತನ ದೃಷ್ಟಿಕೋನಕ್ಕೆ ಅರ್ವಾಚೀನ ಭೂತಕನ್ನಡಿ ಅವಕಾಶ ಮಾಡಿಕೊಡುತ್ತದೆ. "ಮನುಷ್ಯನ ಚಿಂತನೆಯು ಮೊಳಕೆಯೊಡೆದ ಮೇಲೆ ಚಿಂತನ ಪ್ರವಾಹವು ಕಾಲ ಪ್ರವಾಹದಂತೆ ತಡೆಯಿಲ್ಲದೆ ಸಾಗುತ್ತಿದೆ, ಮುಂದೆಯೂ ಸಾಗುವುದು."[4] ಅವುಗಳ ಮೂಲ ರೂಪ ಈಗ ಜೀವಂತವಾಗಿ ಉಳಿದಿರುವುದಿಲ್ಲ. ಆದರೆ ಅದರ ಕುರುಹಾಗಿ ಅದರ ಪಳಯುಳಿಕೆಗಳು ಹೊಸದಾಗಿ ರೂಪಗೊಂಡಿದ್ದರೂ ಅದರ ಒರಿಜಿನಾಲಿಟಿಗೆ ಯಾವ ಕುಂದೂ ಬಂದಿರುವುದಿಲ್ಲ.

ಉದಾಹರಣೆಗೆ : 'ನಿಯೋಗ ಪದ್ಧತಿ'ಯಿಂದ ಬದಲಾದ ಕೃತಕ ಗರ್ಭಧಾರಣೆ.

ಬಾಡಿಗೆ ಗರ್ಭಧರಿಸುವ 'ಬಾಡಿಗೆ ತಾಯಂದಿರು' ಅಥವಾ 'ಪ್ರನಾಳ ಶಿಶು ಜನನ' ಇತ್ಯಾದಿ.

ಹಳೆಯದನ್ನು ನಾಶಗೊಳಿಸಿ ಒಂದು ಹೊಸ ಚಿಂತನಾ ಕ್ರಮ ಅಥವಾ ಪ್ರಕಾರವು ಮತ್ತೊಂದು ಹೊಸ ದೃಷ್ಟಿಗೆ ಎಡೆ ಮಾಡಿಕೊಡುವುದೇ ಆಧುನಿಕ ಚಿಂತನೆಯ ಮೂಲ ಉದ್ದೇಶ.

**ಮಹಾಭಾರತದ ಬೆಳವಣಿಗೆಯ ಹಲವಾರು ವಿಚಾರಗಳು ಇಂದಿನ ಪ್ರಬುದ್ಧಮಾನವನ್ನು ಕಾಡುತ್ತಲೇ ಇದೆ.** ಆಧುನಿಕ ಚಿಂತನೆಯ ಮೂಲಕ ಹಲವಾರು ಜಿಜ್ಞಾಸೆಗಳಿಗೆ ಉತ್ತರಗಳನ್ನು ಹುಡುಕುವ ಸಮೀಚೀನ ಪ್ರಯತ್ನಗಳೂ ನಡೆದೇ ಇದೆ. ಅಂದಿನ ಜೀವನ ಮೌಲ್ಯಗಳು ಇಂದಿಗೂ ಎಷ್ಟು ಪ್ರಸ್ತುತ? ಎಂದು ನಿರ್ಧರಿಸಲು ಕವಿಕಲ್ಪಿತ ಕಾವ್ಯ ಭಾಗವೆಷ್ಟು? ಸತ್ಯಸಂಗತಿಯ ಚರಿತ್ರೆಯ ಭಾಗವೆಷ್ಟು ಎಂದು ಗುರುತಿಸಬೇಕಾಗಿದೆ.

'ವನವಾಸ ಸಮಯದಲ್ಲಿ ಸೀತಾ, ರಾಮ, ಲಕ್ಷ್ಮಣರು ವಾಲ್ಮೀಕಿ ಋಷಿಗಳ ಆಶ್ರಮಕ್ಕೆ ಹೋಗಿದ್ದಾರೆ. ರಾಮಾಯಣವನ್ನು ರಚಿಸಿದಂತಹ ಇವರೇ ಸೀತಾಪುತ್ರರಾದ ಲವಕುಶರಿಗೆ ಕಲಿಸಿದರು. ಪರಿತ್ಯಜಿತ ಸೀತೆಯನ್ನು ತಮ್ಮ ಆಶ್ರಮಕ್ಕೆ ಕರೆದೊಯ್ಯುವವರು ವಾಲ್ಮೀಕಿ ಋಷಿಗಳೇ. ಶ್ರೀರಾಮನೆದುರಿಗೆ ಕುಶಲವರಿಂದ ರಾಮಾಯಣವನ್ನು ಹಾಡಿಸಿದವರು ವಾಲ್ಮೀಕಿ ಮುನಿಗಳೇ!

'ಮಹಾಭಾರತ'ಕ್ಕೆ ಕಾರಣ ಪುರುಷರು ವ್ಯಾಸ ಋಷಿಗಳು, ಕಥೆ ನಡೆಯುವಾಗ ಹಲವಾರು ಬಾರಿ ವ್ಯಾಸರು ಬಂದು ಹೋಗುತ್ತಾರೆ. ಇಲ್ಲಿಯ ಸಮಸ್ತ ಪಾತ್ರಗಳ ಸೃಷ್ಟಿಕರ್ತರೂ ಅವರೇ.

**"ಭಾರತದಲ್ಲಿ ಪ್ರತಿಪಾದಿತ ಜೀವನ ಮೌಲ್ಯಗಳು ಸಾರ್ವಕಾಲಿಕ.** ಸಾಹಿತ್ಯ ವಿಮರ್ಶಕರು, ಕುರುಕ್ಷೇತ್ರದಲ್ಲಿಯ ಸಂಘರ್ಷವೇ ಕಥಾಕೇಂದ್ರವೆಂದೂ ಕುಟುಂಬ ಕಲಹದ ದುರಂತ ಚಿತ್ರವೇ ಇದರ ವಸ್ತುವಿನ್ಯಾಸವೆಂದೂ ಅಭಿಪ್ರಾಯಪಟ್ಟಿದ್ದಾರೆ."[೫] ಆದರೆ ಈ ಕುಟುಂಬ ಕಲಹಕ್ಕೆ ಕಾರಣ "ಅಕ್ಷದ್ಯೂತ". ಈ ದ್ಯೂತದಲ್ಲಿ ದ್ರೌಪದಿಗಾದ ಅಪಮಾನ. "ಇನ್ನೂ ಹಲವಾರು ಪ್ರಸಂಗಗಳು ಅಸ್ಪಷ್ಟವಾಗಿರುವ ಅಜ್ಞಾತವಾಗಿರುವ ಸಂಗತಿ, ವಿಚಾರ, ವಿದ್ಯಮಾನಗಳ ಮೇಲೆ ಬೆಳಕು ಚೆಲ್ಲಿ ಹೆಚ್ಚು ಸ್ಪಷ್ಟಗೊಳಿಸುವುದು."[೬] ಇದೇ ಮಹಾಪ್ರಬಂಧದ ರಚನೆಯ ಅಥವಾ ಈ ಮಹಾಕಾವ್ಯದ ಅಧ್ಯಯನದ ಉದ್ದೇಶ. ಆನ್ವಯಿಕ ಸಂಶೋಧನೆಯಾದ ಈ ಅಧ್ಯಯನದಲ್ಲಿ; ವ್ಯಾಸರು ರಚಿಸಿರುವ ಈ ಮೂಲಾರ್ಥ ಗ್ರಹಣಕ್ಕೆ ನಂತರ ಕಥಾಬೆಳವಣಿಗೆಗೆ ಕೈಹಾಕಿದ ಪೌರಾಣಿಕರು ಸಾಂಪ್ರದಾಯಿಕ ಧರ್ಮಬೋಧನ ಪ್ರಧಾನವಾದ ವ್ಯಾಖ್ಯಾನಗಳಿಗೆ ವಿಶೇಷ ಮಹತ್ವ ಕೊಡುತ್ತ ಬಂದದ್ದರಿಂದ ಗ್ರಂಥಬಾಹುಳ್ಯ ದೊಡ್ಡದಾಯಿತೇ ಹೊರತು ವ್ಯಾಸರ ಮೂಲೋದ್ದೇಶ ಮರೆಯಾಯಿತು. ಎಷ್ಟೋ ಆನುಷಂಗಿಕ ವಿಷಯಗಳು, ಉಪಾಖ್ಯಾನಗಳೂ ಸೇರ್ಪಡೆಯಾದವು. ಕಥನಗಾರರಿಗೆಲ್ಲ 'ವ್ಯಾಸ'ರೆಂಬ ಪದವಿ, ಗೌರ ಶ್ರೀರಕ್ಷೆಯಾಯಿತು. 'ಮಹಾಭಾರತ' ವ್ಯಾಸಕೃತವೆಂದೇ ಜನಜನಿತವಾಯಿತು! ಇದನ್ನೆಲ್ಲಾ ಮರೆಮಾಚಲಿಕ್ಕಾಗಿಯೇ ಗಣೇಶ ಲಿಪಿಕಾರನಾದ.

~~~***~~~

**ಅಡಿಟಿಪ್ಪಣಿಗಳು :**

೪. ಕೌಲಗಿ ಶೇಷಾಚಾರ್, "ಭಾರತ ಚಕ್ರತೀರ್ಥ", ಪು. ೧೫೭.

೫. ಡಾ॥ ಕೆ.ಎಲ್. ಗೋಪಾಲಕೃಷ್ಣಯ್ಯ, "ಕನ್ನಡ ಸಾಹಿತ್ಯದಲ್ಲಿ ಪುರಾಣಪ್ರಜ್ಞೆ", ಪು. ೧೨೨.

೬. ಮಹಾಬಲೇಶ್ವರ ರಾವ್, "ಸಂಶೋಧನಾಮಾರ್ಗ", ಪು. ೯

~~~~***~~~

## 5. ಕುಂತಿಯಿಂದ ಕರ್ಣನ ಜನನ :

ಕುಂತಿ ಭೋಜನ ಆಸ್ಥಾನಕ್ಕೆ ಮಹಾ ತೇಜಸ್ವಿಯಾದ ಬ್ರಾಹ್ಮಣನೊಬ್ಬನು ಬರುತ್ತಾನೆ. ಅವನೇ ದೂರ್ವಾಸ ಮುನಿ. ನೋಡಲು ಬಹುಲಕ್ಷಣವಾಗಿ ಸರ್ವಾಂಗ ಸುಂದರನಾಗಿರುತ್ತಾನೆ. ಸುಮಧುರ ಮಾತುಗಾರ. ವೇದಾಧ್ಯಯನ ಮಾಡಿದ ಮಹಾತಪಸ್ವಿ, ಅವನು ಕುಂತಿಭೋಜನ ಅರಮನೆಯಲ್ಲಿ ಕೆಲವು ದಿನ ಇರಲು ಇಚ್ಛಿಸುತ್ತಾನೆ. ನಾನು ನನ್ನ ಇಚ್ಛೆ ಬಂದ ಹಾಗೆ ಇರುತ್ತೇನೆ. ಯಾರಿಂದಲೂ ಪ್ರತಿಬಂಧ ಆಗಕೂಡದು. ಮಹಾತಪಸ್ವಿಯೊಬ್ಬ ತನ್ನ ಅರಮನೆಯಲ್ಲಿರುವುದು ಮಹಾಪ್ರಸಾದವೆಂದು ರಾಜ ಭಾವಿಸಿದ. ತಪಸ್ವಿಯನ್ನು ಉಪಚರಿಸುವ ಅವಕಾಶವು ತನಗೆ ದೈವದತ್ತವಾದುದೆಂದು ತಿಳಿದ ಕುಂತಿಭೋಜ ಪೃಥಾ ಎಂಬ ತನ್ನ ಮಗಳನ್ನು

ಮಹರ್ಷಿಯ ಸೇವೆಗಾಗಿ ನೇಮಿಸಿದ. "ಮಗಳೇ! ಕ್ಷಮಾಗುಣದಲ್ಲಿ ಭೂದೇವಿಗೆ ಸಮಾನಳಾದ ನೀನು ಮಹರ್ಷಿ ಏನು ಕೇಳಿದರೂ ಸ್ವಲ್ಪವಾದರೂ ಬೇಸರ ಮಾಡಿಕೊಳ್ಳದೆ ನೋಡಿಕೊಳ್ಳಬೇಕು. ನಾನು ಮಹರ್ಷಿಗೆ ಕೊಟ್ಟಿರುವ ಅಭಿವಚನವು ಸುಳ್ಳಾಗದಂತೆ ಜಾಗ್ರತೆಯಿಂದ ನಡೆದುಕೊಳ್ಳುವುದು ನಿನ್ನ ಕರ್ತವ್ಯವಾಗಿದೆ. ನೀನು ಅನನ್ಯಚಿತ್ತಳಾಗಿ ಆ ಮಹಾಮಹಿಮರ ಶುಶ್ರೂಷೆಯನ್ನು ಮಾಡಬೇಕು. ಅತಿಥಿಗಳನ್ನು ಆದರದಿಂದ ಸತ್ಕರಿಸಬೇಕು. ವೃಷ್ಣಿಕುಲದಲ್ಲಿ ಹುಟ್ಟಿದ ನಿನ್ನನ್ನು ನಾನು ಶೂರ ರಾಜನಿಂದ ದತ್ತಕಳಾಗಿ ತೆಗೆದುಕೊಂಡಿದ್ದೇನೆ. ನೀನು ಪರಮಶ್ರೇಷ್ಠ ಕುಲದಲ್ಲಿ ಹುಟ್ಟಿದ್ದೀಯೆ. ನೀನು ನನ್ನ ಮಗಳು. ನಿನ್ನನ್ನೀಗ ನಾನು ಮಹಾತಪಸ್ವಿಯೂ ಮಹಾಕೋಪಿಷ್ಠನೂ ಆದ ಬ್ರಾಹ್ಮಣನ ಸೇವೆಗೆ ನಿಯಮಿಸಿದ್ದೇನೆ. ಅವರು ಕುಪಿತರಾದರೆ ನಮ್ಮ ಕುಲವನ್ನೇ ಭಸ್ಮ ಮಾಡಿಬಿಡುತ್ತಾರೆ. ನಿನ್ನ ಶುಶ್ರೂಷೆಯಿಂದ ತೃಪ್ತಿಪಡಿಸಿದರೆ ಅವರು ನಿನಗೆ ಬೇಕಾದ ವರವನ್ನು ಕೊಡುತ್ತಾರೆ."[1] ಎಂದು ಹೇಳಿ ಒಪ್ಪಿಸಿದ.

ಕುಂತಿಗೆ ಅದು ಪರೀಕ್ಷಾ ಸಮಯವಾಯಿತು. ಆಕೆ ತಂದೆಗೆ, "ಮಹಾರಾಜಾ! ಮಹಾಭಾಗರಾದ ಬ್ರಾಹ್ಮಣರು ನಾವು ಮಾಡುವ ಶುಶ್ರೂಶೆಯಿಂದ ಸುಪ್ರೀತರಾಗಿ ನಮ್ಮನ್ನು ಅನೇಕ ವಿಪತ್ತುಗಳಿಂದ ಪಾರು ಮಾಡಲು ಅಥವಾ ದುಃಖಮಯ ಸಂಸಾರದಿಂದ ನಮ್ಮನ್ನು ಉದ್ಧರಿಸಲು ಸಮರ್ಥರಾಗಿರುತ್ತಾರೆ. ಅದಕ್ಕೆ ಪ್ರತಿಯಾಗಿ ನಾವು ಅವರ ವಿಷಯದಲ್ಲಿ ತೋರುವ ಔದಾಸೀನ್ಯದಿಂದ ಅವರು ಕುಪಿತರಾದರೆಂದರೆ ನಮ್ಮನ್ನು ವಧಿಸಲು ಅಥವಾ ನಮ್ಮ ವಂಶವನ್ನೇ ನಿರ್ಮೂಲ ಮಾಡಲು ಸಹ ಅವರು ಸಮರ್ಥರು." ಎಂಬ ಅಂಶವನ್ನು,

"॥ ಬ್ರಾಹ್ಮಣಾಹಿ ಮಹಾಭಾಗಾಃ ಪೂಜಿತಾಃ ಪೃಥವೀಪತೇ ॥
ತಾರಣಾಯ ಸಮರ್ಥಾಸ್ಸುರ್ವಿಪರೀತೇ ವಧಾಯಚ ॥"[2]

–ಈ ಪದ್ಯದಲ್ಲಿ ಉಲ್ಲೇಖಿಸಿರುವುದು ಸ್ಪಷ್ಟಪಡಿಸುತ್ತದೆ. ಹಾಗಾಗಿ ಈ ರಹಸ್ಯವನ್ನು ತಿಳಿದಿದ್ದ ಕುಂತಿಯು ತನ್ನ ಸೇವೆಯಿಂದ ಭಕ್ತಿ ಶ್ರದ್ಧೆಗಳಿಂದಲೂ ಅವರನ್ನು ಸುಪ್ರೀತರನ್ನಾಗಿ ಮಾಡಿದಳು. ಹರೆಯದ ಪ್ರಾಯದ ಕುಂತಿ ತನ್ನ ಅಭಿಮಾನ ಆಲಸಿಕೆಗಳನ್ನು ಬದಿಗಿಟ್ಟು ಮಹರ್ಷಿಗಳ ಸಮೀಪದಲ್ಲಿಯೇ ಇದ್ದು ಅವರನ್ನು ಉಪಚರಿಸಿದಳು. ಬ್ರಾಹ್ಮಣ ಪರಿಚರ್ಯೆಯೇ ಮಹಾ ತಪಸ್ಸೆಂದು ಭಾವಿಸಿದ ಕುಂತಿ ಮಹರ್ಷಿ ಎಷ್ಟು ಹೊತ್ತಿಗೆ ಬದರೆ ಅಷ್ಟು ಹೊತ್ತಿಗೆ ಕೆಲವೊಮ್ಮೆ ಅರ್ಧರಾತ್ರಿಯಾದರೂ ಅನ್ನ–ಪಾನಾದಿಗಳಿಂದ ಶಯ್ಯಾಸನಗಳಿಂದ ಉಪಚರಿಸಿ ಸುಸಂಸ್ಕೃತನನ್ನಾಗಿಸುತ್ತಿದ್ದಳು. ಈ ಪಂಚರ್ಯೆಯಿಂದ ಸುಪ್ರೀತನಾದ ದೂರ್ವಾಸ ಕುಂತಿಗೆ ವರಗಳನ್ನು ಕೇಳಲು ಹೇಳುತ್ತಾನೆ. ತನಗೆ ಇಚ್ಛೆಯಿಲ್ಲವೆನ್ನುತ್ತಾಳೆ. ಆಗ ಮಹರ್ಷಿ ಮಹಾಮಂತ್ರವನ್ನು ಉಪದೇಶಿಸಿ ಇದರ ಪುನಶ್ಚರಣೆಯಿಂದ ನೀನು ದೇವಲೋಕದ ಯಾವ ದೇವತೆಯನ್ನಾದರೂ ಆಹ್ವಾನಿಸಿದರೆ ಅವರು ಬಂದು ಸ್ವಲ್ಪ ಕಾಲ ನಿನ್ನ ಅಧೀನದಲ್ಲಿರುತ್ತಾರೆ ಎಂದು ಹೇಳುತ್ತಾನೆ. ದೂರ್ವಾಸನ ಕೋಪಕ್ಕೆ ಭಯಪಟ್ಟು ಸಮ್ಮತಿ ಸೂಚಿಸುತ್ತಾಳೆ. ತಾನು ಅಲ್ಲಿಗೆ ಬಂದು ಒಂದು ವರ್ಷವಾದುದರಿಂದ ಮಹರ್ಷಿ ಕುಂತಿಭೋಜನಿಗೆ ಹೇಳಿ ಹೊರಡುತ್ತಾನೆ.

ಕುಂತಿಗೆ ಮಹರ್ಷಿ ಉಪದೇಶಿಸಿದ ಮಂತ್ರದ ಬಲವೇನೆಂದು ಪರೀಕ್ಷಿಸುವ ಚಾಪಲ್ಯ ಬಾಧಿಸತೊಡಗುತ್ತದೆ. ಮಂತ್ರವು ಪುನಶ್ಚರಣೆ ಮಾಡಿ ಸೂರ್ಯನನ್ನು ಆಹ್ವಾನಿಸುತ್ತಾಳೆ. ಕೂಡಲೇ ಸೂರ್ಯ ಅವಳ ಬಳಿಗೆ ಬರುತ್ತಾನೆ. ನಾನು ಕುತೂಹಲಕ್ಕಾಗಿ ಆಹ್ವಾನಿಸಿದೆ. ನೀನು ಹೊರಟು ಹೋಗು ಎನ್ನುತ್ತಾಳೆ. ಅದಕ್ಕೊಪ್ಪದ ಸೂರ್ಯ ನೀನು ನನ್ನೊಡನೆ ರಮಿಸು ನನ್ನಿಂದ ಪುತ್ರನೊಬ್ಬನನ್ನು ಪಡೆಯುವಂತವಳಾಗು ಎಂದು ಹೇಳುತ್ತಾನೆ. ಒಂದು ವೇಳೆ ನೀನು ನನ್ನ ಇಚ್ಛೆಯನ್ನು ಪೂರ್ಣಗೊಳಿಸದಿದ್ದರೆ ನಿನ್ನ ತಂದೆ, ದೂರ್ವಾಸ ಮುನಿ ಎಲ್ಲರನ್ನೂ ಭಸ್ಮ ಮಾಡಿ ಬಿಡುತ್ತೇನೆಂದು ಹೆದರಿಸುತ್ತಾನೆ. ತಂದೆ–ತಾಯಿ ಬಂಧುಬಳಗ ಎಲ್ಲರೂ ಇರುವಾಗ ನಾನು ನಿನ್ನೊಡನೆ ನಿಷೇಧಿತವಾದ ಸಮಾಗಮವನ್ನು ಮಾಡಿದರೆ ಕುಲಕ್ಕೇ ಅಪಕೀರ್ತಿವುಂಟಾಗುತ್ತದೆ. ಇದು ಧರ್ಮವಿರೋಧವಲ್ಲವೇ? ನಿನ್ನ ಸಮಾಗಮದ ನಂತರವೂ ನಾನು ಕನ್ಯೆಯಗಿಯೇ ಉಳಿಯುವುದಾದರೆ ಮಾತ್ರ ನಾನು ಈ ಸಮಾಗಮಕ್ಕೆ ಒಪ್ಪುತ್ತೇನೆ. ಎನ್ನುತ್ತಾಳೆ ಕುಂತಿ.

"ಮಂಗಳಾಂಗಿ ! ನಿನ್ನ ತಂದೆ–ತಾಯಿ, ಬಂಧು–ಬಳಗ ಯಾರಿಗೂ ನಿನ್ನನ್ನು ನನ್ನೊಡನೆ ಸಮಾಗಮದಿಂದ ತಡೆಯಲು ಸಮರ್ಥರಲ್ಲ. ಸಮಾಗಮದ ನಂತರವೂ ನೀನು ಕನ್ಯೆಯಾಗಿಯೇ ಉಳಿಯುವೆ, ಮಹಾಬಾಹುವಾದ ಮಗುವನ್ನೂ ಪಡೆಯುವೆ."[3] ಎಂದು ನಂಬಿಸಿದ. ನಂತರ ಕುಂತಿಯೊಂದಿಗೆ ಸಮಾಗಮ ಮಾಡಿ ಸೂರ್ಯ ಹೊರಟು ಹೋದನು.

## ಈ ಘಟನೆಯ ಕುರಿತಾಗಿ ಆಧುನಿಕ ಚಿಂತನೆಯ ವೈಜ್ಞಾನಿಕ ವಿಶ್ಲೇಷಣೆ :

ಕುಂತಿಭೋಜ ದೂರ್ವಾಸ ಮುನಿಯ ಸೇವೆಗೆ ನೇಮಿಸಿದ ಅವನ ಮಗಳು ಕುಂತಿ. ಹರೆಯದ ಪ್ರಾಯ ಅರಳುತ್ತಿರುವ ಸೌಂದರ್ಯದ ಖನಿಯಾಗಿದ್ದಳು. ಕನ್ಯಾರತ್ನ ಕುಂತಿಯ ಪರಿಚರ್ಯೆ ದೂರ್ವಾಸನನ್ನು ತೃಪ್ತಿಪಡಿಸಿತು. ಅವಳ ಸೌಶೀಲ್ಯ, ಸದ್ವೃತ್ತಿಗಳಿಂದ ಸಂತುಷ್ಟನಾದ. ಏಕಾಗ್ರಚಿತ್ತದಿಂದ ತನ್ನನ್ನು ಉಪಚರಿಸಿದ ಕುಂತಿ-ರಾಜಕುಮಾರಿಗೆ ಶ್ರೇಯಸ್ಸನ್ನುಂಟು ಮಾಡಲು ನಿಶ್ಚಯಿಸಿದ. ಅವಳ ಚೆಲುವು ಅವನನ್ನು ಕಾಮಮೋಹಿತನನ್ನಾಗಿ ಮಾಡಿತು. ಮಹರ್ಷಿ ಕುಂತಿಯ ಸಮಾಗಮ ಬಯಸಿದ. ಮಹರ್ಷಿಯ ಈ ಅಪೇಕ್ಷೆಯನ್ನು ಕೇಳಿದ ಕೂಡಲೇ "ಕುಮಾರಿಯಾಗಿದ್ದ ಕುಂತಿಯ ಮನಸ್ಸಿನಲ್ಲಿ ಮಹರ್ಷಿಹ ಆಶಯವು ಅಂಕುರಿಸಿದೊಡನೆಯೇ ಅವಳು ರಜಸ್ವಲೆಯಾದಳು. ತಂದೆ-ತಾಯಿಗಳು ಮತ್ತು ಇತರ ಗುರುಜನರು ಮಾತ್ರವೇ ಈ ಶರೀರವನ್ನು - ಕನ್ಯೆಯನ್ನು ಯೋಗ್ಯನಾದ ವರನಿಗೆ ದಾನ ಕೊಡಲು ಅಧಿಕಾರ ಹೊಂದಿರುತ್ತಾರೆ. ಕನ್ಯಾಪ್ರದಾನಕ್ಕೆ ಮೊದಲು ಯಾರೊಬ್ಬರ ಸಂಸ್ಪರ್ಶವೂ ಇಲ್ಲದಂತೆ ದೇಹವನ್ನು ರಕ್ಷಿಸಿಕೊಳ್ಳುವುದೇ ಸ್ತ್ರೀಯರ ಪರಮೋಚ್ಚ ಧರ್ಮವಾಗಿದೆ." ಹೀಗೆಂದು ಹೇಳಿ ಪ್ರಾರಂಭದಲ್ಲಿ ಕುಂತಿ ವಿರೋಧಿಸಿದಳು.

ಆದರೆ ಕುಂತಿಗೆ ಇನ್ನೊಂದು ಯೋಚನೆಯೂ ಬಂದಿತು. ಸಾಕುತಂದೆ ಕುಂತಿಭೋಜನ ಆಸ್ಥಾನಕ್ಕೆ ಆಗಮಿಸಿದ ಮಹಾತೇಜಸ್ವಿಯಾದ ಬ್ರಾಹ್ಮಣ ಸರ್ವಾಂಗ ಸುಂದರನೂ ಆಗಿದ್ದ. ತೇಜಃಪುಂಜನಾಗಿದ್ದ. ಸುಮಧುರ ಮಾತುಗಾರ, ತಪಸ್ವಿ, ತನ್ನಿಚ್ಛೆ ಬಂದ ಹಾಗಿರಲು ತಂದೆಯ ಅನುಮತಿಯನ್ನೂ ಪಡೆದಿದ್ದ. ಕಾರಣ ಬ್ರಾಹ್ಮಣ ತನ್ನರಮನೆಯಲ್ಲಿರುವುದೇ ಕುಂತಿಭೋಜನಿಗೆ ಮಹಾಪ್ರಸಾದವಾಗಿತ್ತು. ದೇಹಾಭಿಮಾನವನ್ನೂ ತೊರೆದ ತಪಸ್ವಿಗಳು ಒಬ್ಬನ ಮನೆಯಲ್ಲಿ ಸ್ವೇಚ್ಛೆಯಿಂದಲೇ ಬಂದು ಸ್ವಲ್ಪಕಾಲ ಇರಲಿಚ್ಛಿಸಿದರೆ ಅಂತಹ ತಪಸ್ವಿಗಳನ್ನು ಉಪಚರಿಸುವ ಅವಕಾಶವು **ದೈವದತ್ತವಾದುದು** ಎಂದು ಯಾವುದೋ ಒಂದು ಮಹಾಫಲದ ಪ್ರಾಪ್ತಿಗಾಗಿಯೇ ಮಹರ್ಷಿಗಳ ಆಗಮನವಾಗಿದೆಯೆಂದೂ ಅಂದಿನ ರಾಜರು ಭಾವಿಸುತ್ತಿದ್ದರು.'[೪] ಎಂಬುದೂ ಕುಂತಿಗೆ ನೆನಪಾಯಿತು. ಬ್ರಾಹ್ಮಣರ ನಿಬಂಧನೆಗಳಿಗೆಲ್ಲ ಕುಂತಿಭೋಜ ಒಪ್ಪಿದ್ದ. ಬ್ರಾಹ್ಮಣರ ಪೂಜೆಯನ್ನು ಜಾಗರೂಕತೆಯಿಂದ ನಡೆದುಕೊಳ್ಳಲು ಹೇಳಿದ್ದ ತಂದೆ. ಬ್ರಾಹ್ಮಣ ಮಹಾ ಕೋಪಿಷ್ಠ. ಶಾಪಕ್ಕೆ ಗುರಿಯಾಗಬಾರದು. ಅನುಗ್ರಹ ಪಡೆಯಬೇಕು. ನಿನ್ನ ಶುಶ್ರೂಶೆಯಿಂದ ಅತೃಪ್ತರಾದರೆ ನಮ್ಮ ಕುಲವೇ ಭಸ್ಮೀಭೂತವಾಗಿ ಹೋಗುವುದು ಎಂದಿದ್ದ. ಕುಂತಿ ಭಯ-ಭೀತಿಗಳಿಂದ ತತ್ತರಿಸಿ ಹೋಗಿದ್ದಳು.

"ಪರಶುರಾಮ ಭೂಮಿಯ ಮೇಲಿದ್ದ ದುಷ್ಟರಾದ ಮದಾಂಧರಾದ ಕ್ಷತ್ರಿಯರನ್ನೆಲ್ಲ ಇಪ್ಪತ್ತೊಂದು ಬಾರಿ ಸಂಹರಿಸಿದ್ದ. ಇದರಿಂದ ಭೂಮಿ ಕ್ಷತ್ರಿಯ ರಹಿತವಾಗಿ ಹೋಗಿತ್ತು. ಕ್ಷತ್ರಿಯವಂಶವೇ ಅಳಿದು ಹೋಗುವ ಪರಿಸ್ಥಿತಿ ಎದುರಾದಾಗ, ಆಪದ್ಧರ್ಮವನ್ನನುಸರಿಸಿ ಕ್ಷತ್ರಿಯ ಸ್ತ್ರೀಯರು ಬ್ರಾಹ್ಮಣರ ಬಳಿ ಪುತ್ರಾರ್ಥಿಗಳಾಗಿ ಹೋಗಬೇಕಾಗಿ ಬಂತು. ಬ್ರಾಹ್ಮಣರು ಕ್ಷತ್ರಿಯ ಸಂಗವನ್ನು ಅವರು ಋತುಸ್ನಾತೆಯರಾದ ಕಾಲದಲ್ಲಿ ಮಾತ್ರವೇ ಮಾಡಬೇಕಾಗಿತ್ತು. ಈ ವಿಧದಲ್ಲಿ ಅನೇಕ ಕ್ಷತ್ರಿಯ ಸ್ತ್ರೀಯರು ಗರ್ಭವತಿಯರಾಗಿ ವೀರ್ಯವಂತರಾದ ಮತ್ತು ರೂಪವಂತರಾದ ಸಾವಿರಾರು ರಾಜಕುಮಾರರನ್ನೂ ಕುಮಾರಿಯರನ್ನೂ ಕ್ಷತ್ರಿಯ ಕುಲದ ಅಭಿವೃದ್ಧಿಗಾಗಿ ಪ್ರಸವಿಸಿದರು."[೫] ಇದು ಧರ್ಮಾಚರಣೆಯೂ ಆಗಿತ್ತು. ಇದೆಲ್ಲ ಕುಂತಿಭೋಜನಿಗೆ ತಿಳಿಯದ್ದೇನೂ ಅಲ್ಲ. ಅದೂ ಅಲ್ಲದೆ ಶಾಸನಗಳನ್ನು ಮಾಡುವವರು, ಮಾರ್ಪಾಡು ಮಾಡುವವರೂ ಸರ್ವಜ್ಞರಾಗಿದ್ದ ಮಹರ್ಷಿಗಳಿಗೆ ಸಾಧ್ಯವಿತ್ತೇ ಹೊರತು ರಾಜ-ಮಹಾರಾಜರು ಶಾಸನಗಳನ್ನು ಮಾರ್ಪಾಡು ಮಾಡುವಂತಿರಲಿಲ್ಲ. ಸ್ತ್ರೀಸ್ವಾತಂತ್ರ್ಯಕ್ಕೆ ಧರ್ಮಜ್ಞರಾದ ಮಹರ್ಷಿಗಳ ಪುರಸ್ಕಾರವೂ ಇತ್ತು. ಒಂದು ಕಡೆ ತಂದೆಯ ಭಯ. ಮತ್ತೊಂದು ಕಡೆ ದೂರ್ವಾಸ ಮುನಿಯ ಬಲಾತ್ಕಾರ. ಕುಂತಿ ಸಮಾಗಮಕ್ಕೆ ಒಪ್ಪದೆ ವಿಧಿಯಿರಲಿಲ್ಲ.

## ಅವೈಜ್ಞಾನಿಕ ಬೆಳವಣಿಗೆ -ಆಧುನಿಕ ಚಿಂತನೆ :

೧. ಸೂರ್ಯ ರೂಪ ಬದಲಾಯಿಸಿಕೊಂಡು ಒಬ್ಬ ಬ್ರಾಹ್ಮಣ ರೂಪದಲ್ಲಿ ಬೆಳಗಿನ ಜಾವದ ಸ್ವಪ್ನದಲ್ಲಿ ಕರ್ಣನಿಗೆ ಕಾಣಿಸಿಕೊಳ್ಳುತ್ತಾನೆ.

೨. ಪಾಂಡವರಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಕಪಟ ವೇಷ ಧರಿಸಿ ಇಂದ್ರನು ನಿನ್ನಲ್ಲಿಗೆ ಕರ್ಣಕುಂಡಲ ಬೇಡಲು ಬರುತ್ತಾನೆ. ನಿನ್ನ ಶರೀರದೊಂದಿಗೇ ಕೂಡಿಕೊಂಡಿರುವ ಶರೀರ ಸಹಜವಾಗಿರುವ

ಕರ್ಣಕುಂಡಲಗಳನ್ನು ಕಿತ್ತರೆ ರಕ್ತ ಸುರಿದು ಆಯಷ್ಯ ಕ್ಷೀಣವಾಗಿ ನೀನು ಕೂಡಲೇ ಮೃತ್ಯುವಶನಾಗುವೆ. ನೀನು ಕವಚಕುಂಡಲ ಹೊಂದಿರುವ ಯಾರೂ ನಿನ್ನನ್ನು ವಧೆ ಮಾಡಲಾರರು. ಇದು ನಿನ್ನ ಪ್ರಾಣಕ್ಕೆ ಸಮಾನ.

೩. ಕುಂತಿಭೋಜನ ಅರಮನೆಯಲ್ಲಿ ಕೆಲವು ದಿನಗಳವರೆಗೆ ಇರಲು ಬಂದ ಮಹರ್ಷಿಗೆ ಕುಂತಿಭೋಜ ತನ್ನ ಮಗಳು ಪೃಥಾಳನ್ನೇ ಯಾಕೆ ದೂರ್ವಾಸನ ಪರಿಚಾರಿಕೆಗೆ ನೇಮಿಸಬೇಕಾಗಿತ್ತು? ಅರಮನೆಯಲ್ಲಿ ನೂರಾರು ಜನ ಸೇವಕರಿರುವುದಿಲ್ಲವೇ? ಸ್ವಾಧ್ಯಾಯನಿಷ್ಠನಾದ, ವೇದಾಧ್ಯಾಯನಿರತನಾದ ಬ್ರಾಹ್ಮಣನು ಮಾಡುವ ನಮಸ್ಕಾರಗಳಿಂದಲೂ ತ್ರಿಕಾಲ ಸಂಧ್ಯಾವಂದನೆಗಳಿಂದಲೂ **ಸೂರ್ಯದೇವನು** ರಾಜರು ಬ್ರಾಹ್ಮಣರ ಶಾಪಕ್ಕೆ ಗು-ರಿಯಾಗಿ ವಿನಾಶ ಹೊಂದಿರುವರು.

ಅತಿಥಿಗಳನ್ನು ಆದರದಿಂದ ಸತ್ಕರಿಸುವುದೇ ನಿನ್ನ ದೈನಂದಿನ ಕಾರ್ಯ. ಕುಂತಿಗದು ಪರಿಕ್ಷಾ ಸಮಯ ಮಹರ್ಷಿ ಸುಪ್ರೀತನಾದರೆ ಮಹತ್ವದ ವರವು ಪ್ರಾಪ್ತವಾಗುತ್ತದೆ ಎನ್ನುವುದು ಕುಂತಿಭೋಜನ ಯೋಚನೆ.

ತಂದೆಯೇ! ಅವರು ನಿಮ್ಮ ಅರಮನೆಯಲ್ಲಿರುವ ಪರ್ಯಂತವಾಗಿ ಅವರಿಗೆ ಸ್ವಲ್ಪವಾದರೂ ಅಸಮಾಧಾನವಾಗದ ರೀತಿಯಲ್ಲಿ ನಾನು ನಡೆದುಕೊಳ್ಳುತ್ತೇನೆ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ. ಬಂದಿರುವ ಬ್ರಾಹ್ಮಣರಿಗೆ ಪ್ರಿಯವಾಗುವಂತೆ ಮಾಡಲು ಮತ್ತು ನಿನಗೆ ಹಿತವಾಗುವಂತೆ ಮಾಡಲು ನಾನು ಸತತವಾಗಿ ಪ್ರಯತ್ನಿಸುತ್ತೇನೆ ಎಂದು ತಂದೆಗೆ ಹೇಳುತ್ತಾಳೆ. ಎಲ್ಲಾ ವಿಧವಾದ ಪರಿಚರ್ಯೆಯಿಂದ ಸೌಂದರ್ಯವತಿಯಾದ ಹರೆಯದ ಹೆಣ್ಣು – ಕುಂತಿಯನ್ನು ಕಂಡ ದೂರ್ವಾಸನು ತೃಪ್ತನಾದನು.

ಕುಂತಿಯ ಯೌವ್ವನವನ್ನು *ಕಂಡು ಚಿತ್ತ ಚಂಚಲನಾಗಿ ಅವಳಲ್ಲಿ* ಕಾಮಮೋಹಿತನಾಗಿ ಆಕೆಯನ್ನು ಕೂಡಿದನು. *"ಯಾವುದೇ ಊರ್ಜಿತವಾದ, ಶ್ರೇಯೋ ರೂಪ ಸೃಷ್ಟಿಕಾರ್ಯದಲ್ಲಿ ಮನಸ್ಸು ತೊಡಗುವಾಗಲೂ, ಅದರಲ್ಲಿ ಒಂದು ದೈವೀ ಉಲ್ಲಾಸವು ಪ್ರವೇಶಿಸುವುದು ಅಗತ್ಯವಾಗುತ್ತದೆ."*[1] ಮಹಾಭಾರತದಲ್ಲೇ *ಹೇಳಿರುವ ಒಂದು ಶ್ಲೋಕವನ್ನು ನಾವು ಗಮನಿಸಿದಾಗ;*

*"॥ ಸ ಏವ ಧರ್ಮ ಸೋಧರ್ಮೋ ದೇಶಕಾಲೇ ಪ್ರತಿಷ್ಠಿತಃ ॥" (ಮ.ಭಾ. ೧೨-೩೬. ೨೧) ಎಂದಿದೆ.*

*–ಅಂದರೆ ಯಾವುದು ಒಂದು ಕಾಲದಲ್ಲಿ ಧರ್ಮವೋ ಅದುವೇ ಮತ್ತೊಂದು ಕಾಲದಲ್ಲಿ ಅಧರ್ಮವೆನಿಸುತ್ತದೆ. ಇದು ದೇಶ-ಕಾಲಗಳಲ್ಲಿ ನೆಲೆಹೊಂದಿರುವಂತಹದ್ದು. ಪ್ರೊ॥ ಕೆ.ಎಸ್. ಕಣ್ಣನ್ ಅವರೂ ತಮ್ಮ ಕೃತಿ "ಇತಿಹಾಸ, ಪುರಾಣ (೨೦೦೨), ಪು. ೮೦ ರಲ್ಲಿ ಈ ಅಭಿಪ್ರಾಯವನ್ನು ನಿರೂಪಿಸುತ್ತಾ ಉಲ್ಲೇಖಿಸಿದ್ದಾರೆ.*

"ಪೃಥೆ ಶೀಘ್ರಕೋಪಿಯಾದ ಮುನಿಗೆ **ಶರೀರ, ಮಾತು,** ಮನಸ್ಸುಗಳಲ್ಲಿ ಅನುವರ್ತಿಯಾಗಿ ಬೇರೆಯವರಿಂದ ಮಾಡಲು ಶಕ್ಯವಾಗದಂತಹ ರೀತಿಯಲ್ಲಿ ಸೇವೆ ಮಾಡಿದಳು."[2] ಎಂದರೆ ಏನರ್ಥ? ಇಲ್ಲಿ 'ಶರೀರ' ಮತ್ತು 'ಯಾರಿಂದಲೂ ಮಾಡಲು ಶಕ್ಯವಾದ' ಪದಗಳ ಧ್ವನಿಯನ್ನು ಗಮನಿಸಿದಾಗ; ದೂರ್ವಾಸನು ಹೊಸದಾಗಿ ಪ್ರಾಪ್ತೆಯಾದ ಬಾಲಕಿ ಕುಂತಿಯನ್ನು ದೈಹಿಕವಾಗಿ ಬಯಸಿದನು ಎಂದು ಅರ್ಥವಾಗುತ್ತದೆ.

'ನಮ್ಮ ಸಮಾಗಮವನ್ನು ತಡೆಯಲು ಯಾರೂ ಸಮರ್ಥರಲ್ಲ' ಎಂದು ಸೂರ್ಯ ಹೇಳಿದ್ದಾನೆಂದಿದೆ. ಆದರೆ ಇದು ದೂರ್ವಾಸ ಮುನಿಯೇ ಹೇಳಿರುವ ಮಾತು. ನಿನ್ನ ಭಯವನ್ನು ದೂರ ಮಾಡಿ ನನ್ನೊಡನೆ ಕ್ಷಣ ಕಾಲ **ರತಿ ಸುಖವನ್ನನುಭವಿಸು** ಎಂದು ಸೂರ್ಯ ಹೆಳಿರುವ ಮಾತೂ ದೂರ್ವಾಸನದೇ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ಏಕೆಂದರೆ ಮೊದಲೇ ದೂರ್ವಾಸ ಮುನಿ ಕೋಪಕ್ಕೆ ಪ್ರಸಿದ್ಧಿ. ಇಂತಹ ಮುನಿ ಕುಂತಿಯ ಸಮಾಗಮದಿಂದ ಕರ್ಣ ಹುಟ್ಟಿದ ಸತ್ಯ ತಿಳಿದಿದ್ದರೂ ಸತ್ಯ ಮರೆಮಾಚಲು ಕಾರಣ ಕೋಪಿಷ್ಠ ಮುನಿಯ ಶಾಪಕ್ಕೆ ಹೆದರಿ ಸತ್ಯ ಮರೆಮಾಚಿರುವುದರಲ್ಲಿ ಸಂಶಯವಿಲ್ಲ. ಆನಂತರ ಬಂದ ಪುರಾಣಿಕರು 'ಪುರಾಣ ಕಲ್ಪಿತ ಕಥೆ ಸೇರಿಸಲು 'ಮಂತ್ರೋಪದೇಶ'ದ ನೆಪ ಒಡ್ಡಿದ್ದಾರೆ.

ದೂರ್ವಾಸ ಮುನಿ ಕುಂತಿಗೆ ಉಪದೇಶಿಸಿದ ಮಂತ್ರದ ಪುನಶ್ಚರಣೆಯಿಂದ ಮಗು ಹುಟ್ಟಿತು ಎನ್ನುವುದು ಅವೈಚಾರಿಕತೆಯ ಪ್ರತಿರೂಪ. ನಿಸರ್ಗದ ಆಧಾರದ ಮೇರೆಗೆ ಶ್ರುತಿ-ಸ್ಮೃತಿಗಳೂ; ಕಾರ್ಯ ಕಾರಣ ಸಂಬಂಧವನ್ನು ಕೇವಲ ಈ ರೀತಿಯ ಮಂತ್ರ ಪುನಶ್ಚರಣೆಯಿಂದ 'ಶಿಶು ಜನನ'ವನ್ನು ಉಲ್ಲಂಘಿಸುತ್ತದೆ.

"ಮಾನವನ ವರ್ತನೆಯ ಮೂಲ ಪ್ರಕ್ರಿಯೆ ಮನಸ್ಸು. ಈ ಮನಸ್ಸು ಮಾನಸಿಕ ಶಕ್ತಿ ಹಾಗೂ ಅಂಶಗಳು ವ್ಯಕ್ತಿಗಳ ವರ್ತನೆಯ ಮೇಲೆ ಹೇಗೆ ಪ್ರಭಾವ ಬೀರುತ್ತದೆ ಎಂಬ ಅರಿವು ಬಹಳ ಮುಖ್ಯ."[೮] ಇಂತಹ ಅರಿವು ವುಂಟಾಗಲು ಮಹಾಭಾರತದ ಹಲವಾರು ಸಂತಾನ- ಧೃತರಾಷ್ಟ್ರ, ಪಾಂಡು, ಕುಂತಿಯರ ಮೇಲೆ ಉಂಟುಮಾಡಿದ ಪ್ರಭಾವವೇ ಸಾಕ್ಷೀಭೂತವಾಗಿದೆ.

ಕರ್ಣನು ತೊಟ್ಟಿದ್ದಂತಹ ಕರ್ಣಕುಮಡಲ ಮತ್ತು ಕವಚಗಳೆಲ್ಲಾ ಪುರಾಣಿಕರ ಕಲ್ಪನೆಯ ಕೈಗೂಸು ಎನ್ನುವಲ್ಲಿ ಯಾವ ಸಂಶಯವೂ ಇಲ್ಲ. ಏಕೆಂದರೆ, "ಗತಕಾಲದ ದೃಶ್ಯಗಳನ್ನು ಸಮಗ್ರವಾಗಿ ಪುನಃ ಅನುಭವಿಸುವುದು ಗತಕಾಲದ ಘಟನೆಗಳು ಹೇಗೆ ಸಂಭವಿಸಿದ್ದವೋ ಹಾಗೆಯೇ ಅವುಗಳನ್ನು ಸಾಧ್ಯವಾಗುವುದಕ್ಕಾಗಿ, ಅಲ್ಲಿಯವರೆಗೆ ಪ್ರಚಲಿತವಾಗಿದ್ದ ತಪ್ಪು ಅಭಿಪ್ರಾಯಗಳನ್ನು ಸರಿಪಡಿಸುವುದಕ್ಕಾಗಿ ಜ್ಞಾನದ ಬೆಳಕಿನಲ್ಲಿ ಭಾವನೆಗಳನ್ನು **ವಿಶದೀಕರಿಸಿ, ವಿಶ್ಲೇಷಿಸಿ, ಸಂಯೋಜಿಸಿ, ದಾರ್ಶನಿಕವಾಗಿ** ವಿವರಿಸುವುದಕ್ಕಾಗಿಯೇ ಗತಕಾಲದ ಒಳಹೊಕ್ಕು ವಿಷಯಗಳನ್ನು ಕೆದಕಿ ಅನ್ವೇಷಿಸಿ ಸಂಶೋಧಿಸಲಾಗಿದೆ."[೯] **ಕರ್ಣನನ್ನು ಒಬ್ಬ ಮಹಾದಾನಿ-ದಾನಶೀಲನೆಂದು ತೋರಿಸುವ ಪುರಾಣಿಕರ ಹುನ್ನಾರ. ಅದಕ್ಕಾಗಿಯೇ ಕರ್ಣಕುಂಡಲ, ಕವಚಗಳ ತ್ಯಾಗವನ್ನು ಮಾಡಿದನೆಂದು ಎಲ್ಲರ ಗಮನ ಸೆಳೆಯಲು** ಪ್ರಯತ್ನಿಸಿದ್ದಾರೆ.

**ಕರ್ಣ ಸೂರ್ಯನ 'ಪರಮಭಕ್ತ.'ನಾಗಲು ಅವನ ಹೆತ್ತ ತಾಯಿ – ಕುಂತಿಯೇ ಕಾರಣ. ಕರ್ಣ ಸೂರ್ಯೋಪಾಸನೆಯು ಅಸದೃಶವಾದುದು.**

ಕುಂತಿಭೋಜನು **ಸೂರ್ಯನಂತೆ ಪ್ರಕಾಶಮಾನವಾದ** ಆಸನವೊಂದನ್ನು ನಿರ್ಮಿಸಿದ್ದನು.

ರಾಜಕುಮಾರಿ ಕುಂತಿ ಅಭಿಮಾನವನ್ನು ಬದಿಗಿಟ್ಟು **ಸೂರ್ಯನಂತೆ ಪ್ರಕಾಶಮಾನವಾದ ಆ ಆಸನದ ಮೇಲೆಯೇ** ಮಹರ್ಷಿಗಳ ಆರಾಧನೆಯಲ್ಲಿ ಕಟಿಬದ್ಧಳಾಗಿ ಸಮಾಗಮದಲ್ಲಿ ಉಪಚರಿಸುತ್ತಿದ್ದಳು.

**ನನ್ನೊಡನೆ ನೀನು ಸಮಾಗಮ ಮಾಡಿದ ನಂತರ ಪುನಃ ಕನ್ಯಾವಸ್ಥೆಯನ್ನೇ ಪಡೆಯುವೆ** ಎಂದು ಹೇಳುವ ಮಾತೂ ಸೂರ್ಯನದಲ್ಲ. ದೂರ್ವಾಸನದೇ ಎನ್ನುವುದರಲ್ಲಿ ಸಂಶಯವೇ ಇಲ್ಲ.

ಆ ಪ್ರಾಚೀನ ದಿನಗಳಂದು ಚಿಂತನಶೀಲರು (ಇಲ್ಲಿ ಪುರಾಣಿಕರು) ನೀಡಿದ ಪ್ರತಿಯೊಂದು ವಿವರಣೆಯೂ **ಧಾರ್ಮಿಕ, ಪೌರಾಣಿಕ, ಮಾಂತ್ರಿಕ ರೂಪಕ ಪೋಷಾಕುಗಳನ್ನು ಪಡೆದದ್ದು ಸಹಜವೇ!**. ಇಲ್ಲಿ **ಕಾರ್ಯ-ಕಾರಣ ಸಂಬಂಧದ** ಈ ಕಾರ್ಯದ ಕಾರಣ ಇದು ಎಂಬ ಖಚಿತ ಸಂಬಂಧ ಗುರುತಿಸುವ ತಾರ್ಕಿಕ ವಿಧಾನ ಇಲ್ಲ. ಆದ್ದರಿಂದ ಇಂಥ ತಿಳುವಳಿಕೆಯಲ್ಲಿ ಸಾಕಷ್ಟು **"ಕುರುಡುನಂಬಿಕೆ"**ಗೂ ಅವಕಾಶ ದೊರೆಯಿತು.

ಸತ್ಯವತಿ ದೋಣಿಯಲ್ಲಿ ಪ್ರಯಾಣಿಕರನ್ನು ಯಮುನಾ ನದಿಯ ಒಂದು ದಡದಿಂದ ಮತ್ತೊಂದು ದಡಕ್ಕೆ ತಂದು ಬಿಡುತ್ತಿದ್ದಳು. ಆಕೆ ಮೊದಲ ಬಾರಿಗೆ ಋತುಮತಿಯಾದಾಗ ಒಂದು ದಿನ ಪರಾಶರ ಋಷಿ ನದೀ ದಾಟಲು ದೋಣಿಯನ್ನು ಹತ್ತಿದಾಗ ದೋಣಿ ನದಿಯ ಮಧ್ಯಭಾಗಕ್ಕೆ ಬರುವ ಸಮಯಕ್ಕೆ ಸರಿಯಾಗಿ ಸತ್ಯವತಿಯ ಕಡೆ ಹರಿದ ಋಷಿಯ ಮನಸ್ಸು ಆಕೆಯೊಡನೆ ಸಮಾಗಮವನ್ನು ಇಚ್ಛಿಸಿತು. ತನ್ನ ಮನೋಗತವನ್ನು ಆಕೆಗೆ ವ್ಯಕ್ತಪಡಿಸಿದನು! ಸತ್ಯವತಿಯು ಮಹರ್ಷಿಯ ಇಚ್ಛೆಯಂತೆ ನಡೆದುಕೊಳ್ಳಲು ಭಯಪಟ್ಟಾಗ ಆತನು ಶಾಪ ಕೊಡಬಹುದೆಂಬ ಭೀತಿಯೂ ಆಕೆಯನ್ನು ಆವರಿಸಿತು. ಬಲವಂತವಾಗಿ ಋಷಿಯು ಸತ್ಯವತಿಯನ್ನು ತಮ್ಮ ವಶಳನ್ನಾಗಿ ಮಾಡಿಕೊಂಡು ತಮ್ಮ ಆಸೆಯನ್ನು ಪೂರೈಸಿಯೇಕೊಂಡರು. ಆಗ ಹುಟ್ಟಿದ ಮಗುವೇ **ವ್ಯಾಸ ಋಷಿ.** ಈ ಪ್ರಕರಣದಲ್ಲೂ ಪರಾಶರ ಋಷಿ "ಸತ್ಯವತಿಯು ಪುತ್ರವತಿಯಾದ ಮೇಲೂ ಆಕೆಯ ಕನ್ಯಾವಸ್ಥೆಗೆ ಕಳಂಕ ಉಂಟಾಗದಂತೆ ಅನುಗ್ರಹಿಸಿದನು."[೧೦] ಈ ಪ್ರಕರಣದಲ್ಲಿ **ವ್ಯಾಸ ಋಷಿಯ ಜನನಕ್ಕೆ ಸಂಬಂಧಿಸಿದಂತೆ ಪರಾಶರ ಋಷಿಯು ಸತ್ಯವತಿಗೆ ಮಂತ್ರೋಪದೇಶವನ್ನೇ ಮಾಡಬಹುದಿತ್ತು! ಆಕೆಯೊಂದಿಗೆ ದೈಹಿಕವಾಗಿ ಏಕೆ ಸಮಾಗಮವನ್ನು ಬಯಸಬೇಕಿತ್ತು?! ಇಲ್ಲಿ ಅಬರಿಬ್ಬರ ಸಮಾಗಮ ನೈಸರ್ಗಿಕವಾಗಿದೆ.**

ಪುತ್ರ ಅಥವಾ ಪುತ್ರಿಯನ್ನು ಕನ್ಯಾವಸ್ಥೆಯಲ್ಲಿ ಪಡೆಯುವ ಹೆಣ್ಣು ಮತ್ತೊಮ್ಮೆ ವಿವಾಹವಾಗುವುದಕ್ಕೆ ಅನುಮತಿಸುವ; ಪ್ರಸಕ್ತ ಶಿಶುವನ್ನು ಪಡೆಯಲು ಕಾರಣನಾದ ಗಂಡಿನಿಂದ ಯಾವುದೇ ರೀತಿಯ ನಿರ್ಬಂಧವಾಗಲೀ, ಅಭ್ಯಂತರವಾಗಲೀ ಇಲ್ಲವೆನ್ನುವುದರ ರಹಸ್ಯ ಬಹುಶಃ 'ಆಕೆಯ ಕನ್ಯಾವಸ್ಥೆಯನ್ನು ಹಿಂತಿರುಗಿಸುವುದು.' ಎನ್ನುವುದರ ದ್ಯೋತಕವಾಗಿರಲೂ ಬಹುದು.

~~~***~~~

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಾಹಾಭಾರತ, ಭಾಗ–೮, ಪು. ೩೯೮೦, ೮೧.

೨. –– ಅದೇ ––, ವನಪರ್ವ, ಭಾಗ – ೪, ಅಧ್ಯಾಯ – ೭, ಪು. ೩೯೮೪.

೩. –– ಅದೇ ––, ಭಾಗ–೪, ಪು. ೪೦೦೨.

೪. –– ಅದೇ ––, ಪು. ೩೯೮೦.

೫. –– ಅದೇ ––, ಪು. ೩೯೫.

೬. ಪ್ರೊ॥ ಕೆ.ಎಸ್. ನಾರಾಯಣಾಚಾರ್ಯ, ಶ್ರೀವ್ಯಾಸ ಸೂಕ್ತಿ ಸುಧಾ, (೧೯೮೪), ಪು. ೧೫.

೭. ಶ್ರೀಮಧ್ವಾಚಾರ್ಯರು, "ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ", ಭಾ–೨, ಪು. ೧೦೫.

೮. ಡಾ॥ ಎ.ವಿ. ವೆಂಕಟರತ್ನಂ "ಇತಿಹಾಸ ಸಂಶೋಧನೆಯ ಮಾರ್ಗ", ಪಯ. ೭೬.

೯. ಡಾ॥ ಎ.ವಿ. ವೆಂಕಟರತ್ನಂ, ಇತಿಹಾಸ ಸಂಶೋಧನಾ ಮಾರ್ಗ, ಪು. ೧೭೧.

೧೦. ಶ್ರೀಮನ್ಮಹಾಭಾರತ, ಭಾ–೨, ಪು. ೭೨೧.

~~~***~~~

## 6. ಗಾಂಧಾರಿ :

ದೇಶಪರ್ಯಟನೆ ಮಾಡಿ ಹಸ್ತಿನಾವತಿಗೆ ಬಂದ ವ್ಯಾಸರನ್ನು ಸೊಸೆ ಗಾಂಧಾರಿ ಯಥೋಚಿತವಾಗಿ ಉಪಚರಿಸಿದಳು. ಆ ವೇಳೆಗಾಗಲೇ ಕುಂತಿ ಗಂಡು ಮಗುವೊಂದನ್ನು ಹಡೆದ ವಾರ್ತೆ ಗಾಂಧಾರಿಗೆ ತಿಳಿದಿತ್ತು.

ಗಾಂಧಾರಿ ತನ್ನ ಪತಿ ಧೃತರಾಷ್ಟ್ರನೊಂದಿಗೆ ಹೊಂದಿದ ಸಂಯೋಗದಿಂದ ಗರ್ಭವತಿಯೇನೋ ಆದಳು. ಆದರೆ ಎರಡು ವರ್ಷವಾದರೂ ಪ್ರಸವಿಸಲೇ ಇಲ್ಲ. ಗರ್ಭಪಾತ ಮಾಡಿಸಿಕೊಂಡಳು. ಮಕ್ಕಳಾಗುವ ಆಸೆ ಕಮರಿಹೋಯಿತು ಅವಳಿಗೆ. ವ್ಯಾಸರೊಂದಿಗೆ ತನ್ನ ಅಳಲನ್ನು ತೋಡಿಕೊಂಡಳು. ಧೃತರಾಷ್ಟ್ರನಂತೇ ಸಮಾನಬಲವುಳ್ಳವರಾದ ನೂರು ಮಕ್ಕಳ ತಾಯಿಯಾಗುವಂತೆ ಕೇಳಿಕೊಂಡಳು.

'ಆದಿಪರ್ವ'ದ 'ಸಂಭವಪರ್ವ'–೧೧೫ನೇ ಅಧ್ಯಾಯದಲ್ಲಿ ಹೇಳಿರುವಂತೆ ಕುಂತಿಗೆ ಮಗುವಾಗಿ ತನಗಾಗಲಿಲ್ಲವಲ್ಲಾ ಎಂಬ ಸ್ತ್ರೀಸಹಜ ಮಾತ್ಸರ್ಯದಿಂದ ತನ್ನ ಎರಡು ವರ್ಷವಾದರೂ ಪ್ರಸವವಾಗದ ಸುದೀರ್ಘ ಗರ್ಭವನ್ನು ಘಾತಮಾಡಿಕೊಂಡಾಗ ಹೊರಬಿದ್ದ ಮಾಂಸದ ಮುದ್ದೆಯಂತಿದ್ದ ಭ್ರೂಣ ಪಿಂಡದ ಆಕಾರದಲ್ಲಿತ್ತು. ಅದನ್ನು ವ್ಯಾಸರು ನೂರು ಮಡಿಕೆಗಳನ್ನು ತರಿಸಿ ತುಪ್ಪದಿಂದ ತುಂಬಿಸಿ ಅವುಗಳಿಗೆಲ್ಲಾ ಶೀತೋದಕವನ್ನು ಪ್ರೋಕ್ಷಿಸಿ, ಈ ಮಾಂಸದ ಮುದ್ದೆಯಂತಿದ್ದ ಪಿಂಡವನ್ನು ನೂರು ಚೂರುಗಳಾಗಿ ಮಾಡಿ ಪ್ರತಿಯೊಂದಕ್ಕೂ ಹಾಕಿದರು. ಕೊನೆಯಲ್ಲಿ ಸ್ವಲ್ಪ ಉಳಿದಿದ್ದನ್ನೂ ಮತ್ತೊಂದು ಮಡಕೆಗೆ ಹಾಕಿದರು. ಎರಡು ವರ್ಷಗಳ ನಂತರ ಅದನ್ನು ತೆಗೆಯಬೇಕೆಂದು ಹೇಳಿ ಹೊರಟರು. ಮೊದಲ ಮಡಕೆಯಲ್ಲಿ ಹುಟ್ಟಿದವನೇ ದುರ್ಯೋಧನ ಮತ್ತು ನೂರೊಂದನೆಯ ಮಡಿಕೆಯಲ್ಲಿ ಹಾಕಿದ್ದೇ ಹೆಣ್ಣುಮಗುವೆಂದು ಮಹಾಭಾರತದಲ್ಲಿ ವಿವರಣೆಯಿದೆ.

'ಕಾರ್ಯ-ಕಾರಣ' ಸಂಬಂಧವೇ ಇಲ್ಲದಂತಹ ಇಂತಹ ಪದ್ಧತಿ ತೀರಾ ಅವೈಜ್ಞಾನಿಕವಾದುದು. ಪ್ರಜಾಸೃಷ್ಟಿಗೆ ಪೂರ್ವಭಾವಿಯಾದ 'ಸ್ತ್ರೀಪುಂಶಕ್ತಿ'ಗಳ ಸಂಯೋಗವನ್ನು ತಿಳಿಸುವ ಸನ್ನಿವೇಶಗಳಲ್ಲೆಲ್ಲಾ ಇಂತಹ ವರ್ಣನೆಗಳಿರುವುದು **ಶ್ರುತಿಪ್ರಸಿದ್ಧವಾಗಿದೆ. ಅಶ್ವ-ಅಶ್ವಿನೀ, ಮೃಗ-ಮೃಗೀ** ಎಂಬ ರೂಪಾಂತರಗಳು ಕೂಡಾ ಸಾಂಪ್ರದಾಯಿಕವಾದ ಸನ್ನಿವೇಶಗಳಲ್ಲೇ ವರ್ಣಿತವಾಗಿವೆ. ಸೃಷ್ಟಿಸಂಕಲ್ಪವಾದಾಗ ನಡೆಯುವ ಪ್ರಯತ್ನಗಳಲ್ಲಿ ಇಂತಹ ರೂಪಾಂತರಗಳು ಸಹಜವಾಗಿವೆ. ಸೃಷ್ಟಿಗೆ ಪೂರ್ವಭಾವಿಯಾದ **ಈ ಸ್ತ್ರೀಪುರುಷರ ಸಂಬಂಧ** ಇಲ್ಲವೆಂದು ಹೇಳುವುದು ನೀತಿಬಾಹಿರನೆನಿಸುತ್ತದೆ.

"ಕುಂತಿ ಶಿಶುವನ್ನು ಹಡೆದಳೆಂದು ಕೇಳಿದೊಡನೆಯೇ ಬಹಳ ಸಂಕಟದಿಂದ ನಾನು ಗರ್ಭಪಾತವನ್ನು ಮಾಡಿಸಿಕೊಂಡೆ."[೧] ಎಂದೂ ಹೇಳುತ್ತಾಳೆ. ಅಂದರೆ ಇಲ್ಲಿ ಗಾಂಧಾರಿಗೆ ಮಕ್ಕಳಾಗುವ ಸಂದರ್ಭ ಇನ್ನೆಂದೂ ಇಲ್ಲವೆಂಬ ಧ್ವನಿಯೂ ಇದೆ. ಅವಳು ಬಂಜೆಯಾಗಿರುತ್ತಾಳೆ.

ಈ ಸಂದರ್ಭದಲ್ಲಿ ವ್ಯಾಸರು **'ಘೃತಕುಂಭಗಳ ನಿರ್ದೇಶನ ಮಾಡಲು ಕಾರಣವೇನು**? ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ.

**ಘೃತ** ದೇವತೆಗಳಿಗೆ ಅತಿಪ್ರಿಯವಾದ ವಸ್ತು. ಗಟ್ಟಿಯಾಗಿರುವ ಘನೀಭೂತವಾದುದು. "ಗರ್ಭಸ್ಥ ಶಿಶುವಿಗೂ ನವನೀತಕ್ಕೂ ಸಂಬಂಧವಿದೆ."[೨] ನವನೀತವನ್ನು ಕಾಯಿಸುವುದರಿಂದ ತುಪ್ಪವಾಗುವುದು. ಇದರಿಂದ ಈ ಪರಿಕಲ್ಪನೆ ವ್ಯಾಸರ ಮೇಲೆ ಪ್ರಭಾವ ಬೀರಿದೆ. "ಪುರಾತನ ಸಂಸ್ಕೃತಿಗಳನ್ನು ಗ್ರಹಿಸಿಕೊಳ್ಳುವಾಗ ಕಾಲದ ಹಾಗೂ ಪರಿಸ್ಥಿತಿಯ ಈ ಅಂತರವನ್ನು ಗಮನದಲ್ಲಿಟ್ಟುಕೊಳ್ಳುವುದು ಅವಶ್ಯವಿದೆ."[೩]

**ಮತ್ತೊಂದು ಪ್ರಕರಣದ ಹಿನ್ನೆಲೆಯೂ ಇದೆ :**

ಹಿಂದೆ "ಅಗಸ್ತ್ಯ ಋಷಿಗಳು ಖೇಲವನೆಂಬ ರಾಜನ ಪುರೋಹಿತನಾಗಿರುತ್ತಾನೆ."[೪] "ಅಗಸ್ತ್ಯನು ಗಡಿಗೆಯಿಂದ ಉತ್ಪನ್ನನಾಗಿದ್ದಾನೆ."[೫] "ಮಿತ್ರಾವರುಣನಿಗೆ ಊರ್ವಶಿ ಎಂಬ ಅಪ್ಸರ ಸ್ತ್ರೀಯ ದರ್ಶನದಿಂದ ವೀರ್ಯವು ಭೂಮಿಯಲ್ಲಿಯೂ ನೀರಿನಲ್ಲಿಯೂ ಬಿದ್ದಾಗ, ಭೂಮಿಯಲ್ಲಿದ್ದ ವೀರ್ಯದಿಂದ ಅಗಸ್ತ್ಯನೂ, ನೀರಿನಲ್ಲಿ ಬಿದ್ದ ವೀರ್ಯದಿಂದ ವಸಿಷ್ಠ ಋಷಿಯೂ ಉತ್ಪನ್ನರಾಗಿರುವರು."[೬]

**ಗಾಂಧಾರಿಯ ನೂರು ಮಕ್ಕಳ ಹಿನ್ನೆಲೆ :**

**ವ್ಯಾಸ ಋಷಿಗಳು ಈ ಘಟನೆಯನ್ನು ರಚಿಸಲು ಅವರಿಗೆ ಪ್ರೇರಣೆ ಋಗ್ವೇದದಿಂದ ದೊರೆತಿದೆ.** (ಋ. ಭಾ-೩೧, ಪು. ೧೦೦೪ಜನ್ನು ನೋಡಬಹುದು. ಈ ಪ್ರಕರಣದ ಕುರಿತಾಗಿ ಇಲ್ಲಿ ಮಾಹಿತಿ ಲಭ್ಯವಿದೆ.)

ಜಿಂಕೆಯ ರೂಪದಲ್ಲಿದ್ದ ಪ್ರಜಾಪತಿ ತನ್ನ ಜಿಂಕೆರೂಪದಲ್ಲಿದ್ದ ಪುತ್ರಿಯೊಂದಿಗೆ ಮಿಥುನಾಸಕ್ತನಾಗಿದ್ದಾಗ ದೇವತೆಗಳೆಲ್ಲಾ ಈ ನಿಷಿದ್ಧ ಕಾರ್ಯಾಚರಣೆಯನ್ನು ನೋಡಿ ಬೇಸರಗೊಂಡು ರುದ್ರಭೂತಪತಿಯನ್ನು ಸೃಷ್ಟಿಸಿ ಪ್ರಜಾಪತಿಯನ್ನು ಸಂಹರಿಸಲು ಕಳುಹಿಸುತ್ತಾರೆ. ರುದ್ರನ ಬಾಣ ಬಿಟ್ಟು ಜಿಂಕೆಯ ರೂಪದ ಪ್ರಜಾಪತಿಯನ್ನು ಹೊಡೆದಾಗ ಅವನು ಅಂತರಿಕ್ಷಕಕೆ ನೆಗೆದು ನಕ್ಷತ್ರವಾಗುತ್ತಾನೆ.

ಪ್ರಜಾಪತಿಯ ರೇತಸ್ಸಿನ ಉಳಿದ ಭಾಗ ಭೂಮಿಯಲ್ಲಿ ಪ್ರವಾಹರೂಪದಿಂದ ನದಿಯಾಗಿ ಹರಿಯತೊಡಗುತ್ತದೆ. ಒಂದು ತಗ್ಗಿನ ಸ್ಥಳದಲ್ಲಿ ಸರೋವರವಾಗಿ ನಿಲ್ಲುತ್ತದೆ. ಅದನ್ನು ನೋಡಿದ ಜನ ಅದನ್ನು ಮುಟ್ಟಬಾರದೆಂದು ಅದು ಕೆಟ್ಟದ್ದೆಂದೂ ಭಾವಿಸದಿರಲೆಂದು ಯೋಚಿಸಿದ ದೇವತೆಗಳು ಆ ರೇತೋರೂಪವಾದ ಸರೋವರಕ್ಕೆ **ಮಾದುಷತ್** ಎಂದೇ ಕರೆಯುತ್ತಾರೆ. ನಂತರ ಜನ ಈ ಶಬ್ದದ ಮಧ್ಯೆ ಇರುವ 'ದು'ಕಾರವನ್ನು ತೆಗೆದು 'ನ' ಕಾರವನ್ನು ಹಾಕಿ 'ಮಾನುಷ' ಎಂದು ಕರೆಯತೊಡಗುತ್ತಾರೆ.

ದೇವತೆಗಳು ಸರೋವರದ ರೇತಸ್ಸನ್ನು ದ್ರವರಹಿತವಾಗಿ ಮಾಡುವ ಯೋಚನೆ ಮಾಡುತ್ತಾರೆ. ಅದರ ಸುತ್ತಲೂ ಅಗ್ನಿಯನ್ನು ಉರಿಸತೊಡಗಿದರು. ರೇತಸ್ಸು ಶಾಖದಿಂದ ಪಿಂಡಾಕಾರಕ್ಕೆ ಮಾಡಲು; ವಾಯು ಸಹಾಯದಿಂದ ವೈಶ್ವಾನರಾಗ್ನಿಯನ್ನು ಕರೆಸಿ ಪಿಂಡಾಕಾರ ಘನಪದಾರ್ಥವಾಗಿ ಪರಿವರ್ತಿಸುವಂತೆ ಮಾಡುತ್ತಾರೆ. ಇದು ಅನೇಕ

ಪಿಂಡಗಳಾಗಿ ಪ್ರಕಾಶಿಸುತ್ತದೆ. ನಂತರ ಇವು ಒಂದೊಂದೇ ಆದಿತ್ಯರು, ಭೃಗುಋಷಿ, ನಂತರ ಉರಿದ ಕೆಂಡಗಳಾದ ಕೆಲವು ಪಿಂಡಗಳು ಆಂಗಿರಾ ಋಷಿ ಮತ್ತು ಬೃಹಸ್ಪತಿಗಳು ಉತ್ಪನ್ನರಾಗುತ್ತಾರೆ. (ಋಗ್ವೇದ- ಐತರೇಯ ಬ್ರಾಹ್ಮಣ, ಅ-೧೩, ಖಂಡ-೧೦)

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಹಾಭಾರತ, ಭಾ-೨ ಪು. ೭೬೩.

೨. ಐತರೇಯ ಬ್ರಾಹ್ಮಣ, ಅ-೧, ಖಂಡ-೩, ಪು. ೧೫೨

೩. ಡಾ॥ ಶಂ.ಬಾ. ಜೋಶಿ, "ಋಗ್ವೇದ ಸಾರ", ಪು. ೯೬

೪. ಋ.ಸಂ.ಭಾ-೯, ಪು. ೨೬೨

೫. —ಅದೇ —, ಪು. ೩೫೬

೬. (— ಅದೇ —)

~~~\*\*\*~~~

### 7. "ಪಾಂಡುವಿನ ಪುತ್ರಾಪೇಕ್ಷೆ" -ಒಂದು ಸೈದ್ಧಾಂತಿಕ ವೈಜ್ಞಾನಿಕ ವಿಶ್ಲೇಷಣೆ :

ಭೀಷ್ಮ ಶಲ್ಯನ ಪುತ್ರಿ ಮಾದ್ರಿಯೊಂದಿಗೆ ಪಾಂಡುವಿನ ವಿವಾಹ ಮಾಡಿದ. ಪ್ರತ್ಯೇಕವಾದ ಅರಮನೆಯಲ್ಲಿ ಪಾಂಡು ಕುಂತಿ-ಮಾದ್ರಿಯನ್ನಿರಿಸಿ ಕಾಲಯಾಪನೆ ಮಾಡುತ್ತಿದ್ದ. ಪಾಂಡು ವಿಜಯಯಾತ್ರೆಯಲ್ಲಿ ಸೋತ ರಾಜರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಂಡ. ಇದರಿಂದ ಕುರುವಂಶದ ಕೀರ್ತಿಯೂ ಬೆಳೆಯಿತು. ಕುರುವಂಶದ ಪುನರುಜ್ಜೀವನವೂ ಆಯಿತು. ಹೇರಳವಾದ ಸಂಪತ್ತೂ ರಾಜಭಂಡಾರಕ್ಕೆ ಸೇರಿತು.

ಪಾಂಡು ಒಮ್ಮೆ ಕುಂತಿ-ಮಾದ್ರಿಯರೊಂದಿಗೆ ವನವಿಹಾರಕ್ಕೆಂದು ಹೊರಟ. ಅದು ಹಿಮವತ್ಪರ್ವತದ ದಕ್ಷಿಣಭಾಗ. ನಿಬಿಡವಾಗಿ ಬೆಳೆದ ಶಾಲಾವೃಕ್ಷಗಳ ದಟ್ಟ ಅರಣ್ಯ. ಅಲ್ಲೇ ಒಂದು ಕಡೆ ಪರ್ಣಶಾಲೆಯಲ್ಲಿ ವಾಸ್ತವ್ಯ ಹೂಡಿದರು. ಪಾಂಡು ದಿನವೂ ಬೇಟೆಯಾಡಿ ಬರುತ್ತಿದ್ದ.

ಹೀಗೆ ಒಂದು ದಿನ ಪಾಂಡು ಅರಣ್ಯದಲ್ಲಿ ಬೇಟೆಗೆ ಹೋದಾಗ ದೂರದಲ್ಲಿ ಸುರತಿ ಕ್ರೀಡೆಯಲ್ಲಿ ತೊಡಗಿದ್ದ ಗಂಡು-ಹೆಣ್ಣು ಜಿಂಕೆಗಳತ್ತ ಗುರಿಯಿಟ್ಟು ಬಾಣ ಬಿಟ್ಟನು. ಅದು ಗಂಡು ಜಿಂಕೆಗೆ ತಾಗಿ ಕೂಡಲೇ ಅಸುನೀಗಿತು. ಇದರಿಂದ ನೊಂದ ಹೆಣ್ಣುಜಿಂಕೆಗೆ ಅತೀವ ವೇದನೆಯಾಯಿತು. ಮಾತು ಬರದ ಪ್ರಾಣಿಯದು ಮೂಕ ವೇದನೆ. ಒಳ್ಳೆಯ ಬೇಟೆ ದೊರೆಯಿತೆಂದು ಪಾಂಡು ಸಂತಸಭರಿತನಾಗಿ ಜಿಂಕೆಗಳ ಸಮೀಪಕ್ಕೆ ಬಂದು ನೋಡಿದಾಗಲೇ ಆತನಿಗೆ ತಿಳಿದದ್ದು ತಾನು ಸುರತಾಸಕ್ತ ಜಿಂಕೆಯ ಯುಗ್ಮಕ್ಕೆ ಬತ್ತಳಿಕೆಯಿಂದ ಬಾಣ ತೆಗೆದು ಬಿಲ್ಲಿನ ಹೆದೆಯೇರಿಸಿ ಗುರಿಯಿಟ್ಟು ಹೊಡೆದ ಬಾಣ ಗಂಡು ಜಿಂಕೆಯನ್ನು ಕೊಂದಿರುವ ವಾಸ್ತವ ಸಂಗತಿ ತಿಳಿದು ತನ್ನ ಕುಕೃತ್ಯಕ್ಕಾಗಿ ಮರುಗಿ ಅಲ್ಲೇ ಕುಸಿದು ಬಿದ್ದುಬಿಟ್ಟನು.

ಅವು ನಿಜವಾದ ಜಿಂಕೆಗಳಾಗಿರದೆ ಮಹಾತಪಸ್ವಿಯಾದ ಋಷಿಕುಮಾರ ದಂಪತಿಗಲಾಗಿದ್ದು, ಸುರತಿಕ್ರಿಯೆಯಲ್ಲಿದ್ದ ಜಿಂಕೆಯು ಮಾನುಷ ಧ್ವನಿಯಲ್ಲಿ ಆರ್ತನಾದ ಮಾಡುತ್ತಾ ಕೆಳಗುರುಳಿತು. ಅದರ ಸಮೀಪಕ್ಕೆ ಓಡಿ ಬಂದ ಪಾಂಡುವಿಗೆ, "ನಿನಗೂ ಸಹಇಂತಹ ಸಂದರ್ಭದಲ್ಲಿಯೇ ಮೃತ್ಯುವು ಪ್ರಾಪ್ತವಾಗುತ್ತದೆ. ನೀನು ನಿನ್ನ ಪತ್ನಿಯೊಡನೆ ನಿನ್ನನ್ನು ಮೃತ್ಯುವು ಅಪಹರಿಸುತ್ತದೆ"[೧] ಎಂದು ಶಾಪ ಕೊಟ್ಟನು.

-ಇದು ಜನಪದ ಕಥೆಯಂತಿದೆ. ವ್ಯಾಸರಿಗೆ ಈ ಘಟನೆ ಋಗ್ವೇದದಿಂದ ಪ್ರೇರಣೆಗೊಂಡಿದೆ. (ಪ್ರಜಾಪತಿಯು ಋಶ್ಯನೆಂಬ ಚಿಕ್ಕೆಗಳುಳ್ಳ ಒಂದು ವಿಧವಾದ ಜಿಂಕೆಯ ರೂಪವನ್ನು ಧರಿಸಿದನು. ಪುತ್ರಿಯು ಕೆಂಪು ಬಣ್ಣವುಳ್ಳ
~~~

ಹೆಣ್ಣು ಜಿಂಕೆಯ ರೂಪವನ್ನು ತಾಳಿದಳು. ಅನಂತರ ಪ್ರಜಾಪತಿಯು ಅವಳಲ್ಲಿ ಸುರತಿಕ್ರಿಯೆಯಿಂದ ಕ್ರೀಡಿಸಿದನು. (ಋಗ್ವೇದ ಸಂಹಿತಾ, ಬಾ-೨೭, ಪು. ೩೬೩) ಆದರೆ ಈ ಪುತ್ರಿಯು ಯಾರು ಎಂಬುದರಲ್ಲಿ ಮತಭೇದವಿದೆ.)

ಆದರೆ 'ದೇವೀ! ನಾನು ಕ್ರೂರಕರ್ಮಿ. ತತ್ಫಲವಾಗಿಯೇ ಸುರತಿಕ್ರಿಯೆಯಲ್ಲಿ ನಿರತವಾಗಿದ್ದ ಜಿಂಕೆಯನ್ನು ಕೊಂದು ಮೃಗರೂಪವಾಗಿದ್ದ ಮಹರ್ಷಿಯ ಶಾಪಕ್ಕೊಳಗಾಗಿ, ಪ್ರಜನಶಕ್ತಿಯನ್ನೇ ಕಳೆದುಕೊಂಡು ಬಿಟ್ಟೆನು.'[೨] ಎನ್ನುತ್ತಾನೆ ಪಾಂಡು.

೧. ಇಲ್ಲಿ ಋಷಿಗಳು ಜಿಂಕೆಯ ರೂಪ ತಾಳಿ ಸುರತಿ ಕ್ರಿಯೆಯಲ್ಲಿ ತೊಡಗಲು ಸಾಧ್ಯವೇ? ತಾತ್ವಿಕವಾಗಿ ಇದನ್ನು ನಂಬುವಂತಿಲ್ಲ. ಬಹುಶಃ **'ಇಂತಹ ನೀತಿಬಾಹಿರ ಕಾರ್ಯಗಳನ್ನು ಮಾಡಬಾರದು ಅದು ಅಮಾನುಷ ಕೃತ್ಯ.'** ಎನ್ನುವ ನೀತಿಬೋಧೆಯನ್ನು ತಿಳಿಸುವುದೇ ಉದ್ದೇಶವಾಗಿದ್ದು; ಆಗಿನ ಕಾಲದಲ್ಲಿ ಶಾಪಕೊಡುವ ಶಕ್ತಿ-ಸಾಮರ್ಥ್ಯಗಳನ್ನು ಹೊಂದಿದವರು ಋಷಿಗಳೇ ಆಗಿದ್ದುದರಿಂದ 'ಜಿಂಕೆಯ ರೂಪದಲ್ಲಿ ಋಷಿಗಳಿದ್ದರು ಎಂದೋ ಅಥವಾ ಋಷಿಗಳು ಜಿಂಕೆಯ ರೂಪದಲ್ಲಿದ್ದರು' ಎಂದು ಮುಂದೆ ಯಾರೂ ಇಂತಹ ದುಷ್ಕೃತ್ಯಗಳನ್ನೆಸಗಬಾರದೆಂಬ ಜನಗಳಿಗೆ ಎಚ್ಚರಿಕೆ ನೀಡುವುದಕ್ಕಾಗಿ 'ಋಷಿ ಜಿಂಕೆಯ ರೂಪ ತಾಳಿದ್ದರು' ಎಂದು ಸಾರಿರುವುದರ ಉದ್ದೇಶವಾಗಿರಬಹುದು. ಮೇಲಾಗಿ ಇಲ್ಲಿ ಋಷಿಗಳು ರಾಜಾರೋಷವಾಗಿ ಸ್ತ್ರೀಯರನ್ನು ತಮ್ಮ ಕಾಮೋಪಭೋಗವಸ್ತುವಾಗಿ ಬಳಸಿಕೊಳ್ಳುತ್ತಿದ್ದಾಗ ಜಿಂಕೆಯ ರೂಪ ಧರಿಸಿ ಸುರತಿಕ್ರಿಯೆಯಲ್ಲಿ ತೊಡಗುವ ಅವಶ್ಯಕತೆಯೂ ಇರಲಿಲ್ಲ.

ಇಂತಹ ಘಟನೆಯನ್ನು ರಚಿಸಲು ವ್ಯಾಸ ಋಷಿಗಳಿಗೆ ಬಹುಶಃ ಋಗ್ವೇದ ಸಂಹಿತೆ ೧೦-೧೭ನೇ ಸೂಕ್ತದ **ಸರಣ್ಯೂ ಮತ್ತು ವಿವಸ್ವಾನ್** ಇಬ್ಬರ ವಿಚಾರ ಆಧಾರವಾಗಿರಬೇಕು. ವಿವಸ್ವಂತನು ಅಶ್ವರೂಪ ಧರಿಸಿ ತನ್ನಂತೆಯೇ ಅಶ್ವರೂಪಿಣಿಯಾಗಿದ್ದ ಸರಣ್ಯೂವಿನ ಸಮೀಪಕ್ಕೆ ಹೋಗುತ್ತಾನೆ. ಅಲ್ಲಿ ಆಗ ಅಶ್ವರೂಪಿಗಳಾಗಿದ್ದ ಇವರಿಬ್ಬರೂ ರತಿಕ್ರೀಡೆಯಲ್ಲಿ ಆಸಕ್ತರಾಗುತ್ತಾರೆ.'[೩]

**ವೈಜ್ಞಾನಿಕ ವಿಶ್ಲೇಷಣೆ :**

ಇಂತಹ ದೃಶ್ಯವನ್ನು ಕಂಡ ಪಾಂಡು ಹಲವಾರು ಕ್ಷಣಗಳು ಚಿತ್ರಾರ್ಪಿತ ಬೊಂಬೆಯಂತೆ ಸ್ತಂಭೀಭೂತನಾಗಿಯೇ ಇದ್ದುಬಿಟ್ಟ. ನಿಜಸಂಗತಿ ಮೊದಲೇ ತಿಳಿದಿದ್ದರೆ ತಾನು ಜಿಂಕೆಯನ್ನು ಕೊಲ್ಲುತ್ತಿರಲಿಲ್ಲ ಎಂದುಕೊಂಡನು. ಪೊದೆಯ ಸಂದಿಗೊಂದಿನಲ್ಲಿ ಕಂಡ ಅಸ್ಪಷ್ಟ ದೃಶ್ಯ ಅವನಿಂದ ಈ ಅನರ್ಥ ಕಾರ್ಯವನ್ನು ಮಾಡಿಸಿತ್ತು. ತನ್ನಿಂದ ಎಂತಹ ಘೋರ ಕೃತ್ಯ ನಡೆದು ಹೋಯಿತಲ್ಲಾ! ಎಂದು ಕೊರಗುತ್ತಾನೆ. ಕುರುಕುಲದಲ್ಲಿ ಹುಟ್ಟಿದ ತಾನು ಇದೂವರೆಗೂ ಬಹಳ 'ಸುಚರಿತ್ರ'ನೆನೆಸಿದವನು ಈಗ ಇಂತಹ ಕ್ರೂರ ಕರ್ಮವು ಸುರ್ವಥಾ ಯೋಗ್ಯವಲ್ಲ. ನನ್ನೀ ಕೃತ್ಯವು ಪ್ರಪಂಚದಲ್ಲಿ ಅತ್ಯಂತ ಕ್ರೂರವೆಂದೂ, ಹೀನವೆಂದು ಪಾಪಭೂಯಿಷ್ಠವೆಂದೂ ಅಧರ್ಮಯುಕ್ತವೆಂದೂ ಪರಿಗಣಿಸಲ್ಪಡಲಿದೆ. ಸುರತಿಕ್ರಿಯೆಯಲ್ಲಿ ತೊಡಗಿದ್ದ ಜೀವಗಳ ಸಂತೋಷ ಎಷ್ಟೆಂದು ತಿಳಿದಿರುವ ತಾನೇ ಇಂತಹ ವಿವೇಚನಾತಹಿತವಾದ ಅನರ್ಥಕಾರ್ಯ ಎಸಗಿರುವುದರಿಂದ ನಿಶ್ಚಯವಾಗಿಯೂ ಈ ಪಾಪ ತನ್ನ ಬೆಂಬಿಡದು. ತಾನೀಗ ಏನೂ ಮಾಡುವಂತಿಲ್ಲ. ಕಾರ್ಯ ಮಿಂಚಿ ಹೋಗಿದೆ. ತನ್ನ ಸಂಗಾತಿಯನ್ನು ಕಳೆದುಕೊಂಡ ಹೆಣ್ಣು ಜಿಂಕೆಯ ದಾರುಣ ಹಿಂಸೆಗೆ ಗುರಿಯಾಗದೇ ವಿಧಿಯಿಲ್ಲ. ಅನುಭವಿಸಲೇಬೇಕು.

ಗಂಡು ಜಿಂಕೆ ತನ್ನ ಪತ್ನಿಯೊಂದಿಗೆ ಸಮಾಗಮದ ಸಂತೋಷದ ತುಟ್ಟತುದಿಯಲ್ಲಿ ವಿಹರಿಸುತ್ತಿರುವಾಗ ವಿನಾಕಾರಣ ತಾನು ಆ ಮೂಕಜೀವಿಗೆ ಪ್ರಾಣ ತೆಗೆದು ಹಾನಿಯನ್ನುಂಟುಮಾಡಿದೆ. ತನ್ನ ಈ ಘೋರ ಪಾಪ ನನ್ನನ್ನು ಬಿಟ್ಟೀತೇ?.. ಹೀಗೆ ಪಾಂಡುವನ್ನು ನಾನಾ ಯೋಚನೆಗಳು ರಣಹದ್ದುಗಳಂತೆ ಕುಕ್ಕ ತೊಡಗಿದವು. ಮನಸ್ಸಿಗೆ ಆಘಾತವನ್ನುಂಟುಮಾಡಿತು. ಇದೇನಾದರೂ ತಾನೂ ಕೂಡಾ ಇಂತಹದೇ ಸಂದರ್ಭದಲ್ಲಿರುವಾಗ ಮೃತ್ಯು ಪ್ರಾಪ್ತವಾಗುವ ಪೂರ್ವಭಾವೀ ಸೂಚನೆಯಾಕಾಗಿರಬಾರದು?! ಜಿಂಕೆ ಸಾಯುವಾಗ ಅನುಭವಿಸಿದ ಸಂಕಟವೇ ತನಗೂ ಪ್ರಾಪ್ತವಾಗದಿರುತ್ತದೆಯೇ? ಎನ್ನುವ ಮನೋವ್ಯಥೆ ಕಾಡತೊಡಗಿತು. ತಾನು ಜಾಗೃತನಾಗಬೇಕು. ಕಾಮಪರವಶತೆಯಿಂದ ಮೋಹಿತನಾಗಿ ಇನ್ನೆಂದಿಗೂ ತನ್ನ ಪತ್ನಿಯರೊಂದಿಗೆ

ಸಮಾಗಮವನ್ನಾಶಿಸುವಂತಿಲ್ಲ. ತಾನೇನಾದರೂ ಸ್ತ್ರೀಸುಖವನ್ನನುಭವಿಸಲು ಯತ್ನಿಸಿದರೆ ತನಗೂ ಅದೇ ದಾರುಣವಾದ ಮರಣವು ಸಂಭವಿಸುವುದು ಶತಃಸಿದ್ಧವೆಂದು ಪಾಂಡು ದೃಢವಾಗಿ ನಿರ್ಧರಿಸಿದ.

ಮೂಕರೋಧನದ ಆರ್ತನಾದ ಮಾಡುತ್ತ ಸತ್ತು ಬಿದ್ದಿದ್ದ ಗಂಡು ಜಿಂಕೆಯು ತನ್ನ ಪ್ರಿಯಕರನ ಬಿಟ್ಟು ಹೋಗಲಾರದ ಹೆಣ್ಣು ಜಿಂಕೆಯ ಅಸಹಾಯಕ ಸ್ಥಿತಿಯನ್ನು ಮನಗಂಡು ಚಿಂತಿತನಾಗಿ ಭಾರವಾದ ಹೃದಯದೊಂದಿಗೆ ತನ್ನ ಪರ್ಣಕುಟಿಯ ಹಾದಿ ಹಿಡಿದ. ಹೀಗೆ ಶೋಕತಪ್ತನಾಗಿಯೇ ಬಂದ ಪಾಂಡುಗೆ ಅರಣ್ಯದಲ್ಲಿ ನಡೆದ ಘಟನೆಯನ್ನು ಮರೆಯಲಿಕ್ಕೆ ಸಾಧ್ಯವಾಗಲೇ ಇಲ್ಲ. ಇದಕ್ಕಾಗಿ ತನ್ನನ್ನೇ ತಾನು ಹಳಿದುಕೊಳ್ಳುತ್ತಲೇ ಇದ್ದ.

ಶಾಂತನುವಿನ ಮಗನಾದ ವಿಚಿತ್ರವೀರ್ಯ ತನ್ನ ತಂದೆಯೆಂದು ನೆಪಮಾತ್ರಕ್ಕೆ ಹೇಳಿದರೂ; ತನ್ನ ತಂದೆ ಸದಾಕಾಲ ಕಾಮಪರವಶನಾಗಿದ್ದರುದರಿಂದ ಕ್ಷಯರೋಗಕ್ಕೆ ಪೀಡಿತನಾಗಿ ಅಸುನೀಗಿದ. ಕೃಷ್ಣದ್ವೈಪಾಯನರ ಔರಸ ಪುತ್ರನೇ ಆದರೂ ತನ್ನ ತಂದೆಯ ಕ್ಷೇತ್ರದಲ್ಲಿ ಹುಟ್ಟಿದ್ದರಿಂದ ಹೊರನೋಟಕ್ಕೆ ವಿಚಿತ್ರವೀರ್ಯನೇ ಪಾಂಡುಗೆ ತಂದೆಯಾಗಿದ್ದ. ತನ್ನ ತಂದೆಯ ಕ್ಷೇತ್ರದಲ್ಲೆ ತಾನೂ ಹುಟ್ಟಿರುವುದರಿಂದ ಕಾಮಮೋಹಿತನಾಗಿ ಈ ಬೇಟೆಯಾಡುವ ದುರ್ಗುಣ ವಂಶಪಾರಂಪರ್ಯದ ಶಾಪವಾಗಿ ತನಗೂ ಅಂಟಿಕೊಂಡಿರಬಹುದೇ? ತಾನು ಮೃತ್ಯುವಿನಿಂದ ದೂರ ಇರಬೇಕಾದರೆ ಇನ್ನು ಮುಂದಾದರೂ ತಾನು ತನ್ನ ಪಂಚೇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ತನ್ನ ಪತ್ನಿಯರಿಂದ ದೂರ ಉಳಿಯಬೇಕು. ಅದು ತಾನು ಈಗಿರುವ ಸ್ಥಿತಿಯಲ್ಲಿ ಸಾಧ್ಯವಿಲ್ಲ. ತಪಶ್ಚರ್ಯದಲ್ಲಿ ತೊಡಗಿದರೆ ಮಾತ್ರ ಸಾಧ್ಯ. 'ಸನ್ಯಾಸ' ಸ್ವೀಕರಿಸುವ ತನ್ನ ಈ ನಿರ್ಧಾರವನ್ನು ಭೀಷ್ಮಾದಿಯಾಗಿ ಎಲ್ಲರಿಗೂ ತಿಳಿಸಿದ. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದ. ತನ್ನೊಂದಿಗೆ ಅರಣ್ಯಕ್ಕೆ ಬಂದಿದ್ದ ಋಷಿಗಳು, ಸೇವಕರು, ಪರಿಚಾರಕರನ್ನೆಲ್ಲಾ ರಾಜಧಾನಿ ಹಸ್ತಿನಾಪುರಕ್ಕೆ ಕಳುಹಿಸಿದ.

ಪಾಂಡು ತನ್ನ ಇಬ್ಬರು ಪತ್ನಿಯರೊಂದಿಗೆ 'ನಾಗಶತಪರ್ವತ'ವನ್ನು ಸೇರಿದ. ನಂತರ ಅಲ್ಲಿಂದ 'ಶತಶೃಂಗಪರ್ವತ'ದ ತಪ್ಪಲಿಗೆ ಬಂದ. ಮತ್ತೆ ಸಂನ್ಯಾಸ ಜೀವನ ತೊರೆದು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದ. ಪತ್ನಿಯರೊಂದಿಗೆ ಜೀವನ ಸಾಗಿಸಿದ.

ಅಪುತ್ರವಂತನಾಗಿ ಪ್ರಾಣತ್ಯಾಗ ಮಾಡಿದರೆ ಪಿತೃದೇವತೆಗಳು ನಾಶ ಹೊಂದುವರು. ತನಗೂ ಸ್ವರ್ಗಪ್ರಾಪ್ತಿ ಸಿಗುವುದಿಲ್ಲ. ಒಬ್ಬ ಮಹರ್ಷಿ ವ್ಯಾಸರಂತಹವರ ಹೊಟ್ಟೆಯಲ್ಲಿ ಹುಟ್ಟಿದ ತಾನು **ಪಿತೃಋಣ, ದೇವಋಣ, ಋಷಿಋಣ ಹಾಗೂ ಮಾನವ ಋಣಗಳನ್ನು ತೀರಿಸಬೇಡವೇ**? ಇದರಲ್ಲಿ ಮೂರು ಋಷಗಳನ್ನಂತೂ ತೀರಿಸಿಯಾಗಿದೆ. ಉಳಿದಿರುವುದೊಂದೆ 'ಪಿತೃಋಣ.' ಪಾಂಡು ಚಿಂತಿಸತೊಡಗಿದ.

ಒಂದು ದಿನ ಅಮಾವಾಸ್ಯೆಯ ದಿನ ಆಶ್ರಮದಲ್ಲಿನ ಋಷಿಗಳೆಲ್ಲ ಉತ್ತರಾಭಿಮುಖವಾಗಿ ಪ್ರಯಾಣ ಹೊರಟಿದ್ದರು. ಆ ಋಷಿಸ್ತೋಮದಲ್ಲಿದ್ದ ಋಷಿಗಳಲ್ಲೊಬ್ಬರು 'ನೀನು ಪುತ್ರವಂತನಾಗುವುದರಲ್ಲಿ ಸಂಶಯವಿಲ್ಲ.' ಎಂದು ಪಾಂಡವುನ್ನು ಹರಿಸಿದ್ದು ಪಾಂಡುವಿಗೆ ನೆನಪಾಯಿತು. ಈ ಸಮಸ್ಯೆ ಅವನನ್ನು ಹಗಲೂ ರಾತ್ರಿ ಕಾಡತೊಡಗಿತು.

ಒಂದು ದಿನ ಪಾಂಡು ಪತ್ನಿ ಕುಂತಿಯನ್ನು ಕುರಿತು; 'ಆಪತ್ಕಾಲದಲ್ಲಿ ಮಕ್ಕಳನ್ನು ಪಡೆಯಲು ಆಪದ್ಧರ್ಮವಾದ ಯಾವುದಾದರೊಂದು ಮಾರ್ಗವನ್ನು ಹೇಳು' ಎಂದ. 'ಸ್ವಾಮೀ ಈಗ ಆ ಮಾತು ಯಾಕೆ?' ಎಂದಳು. 'ಪುತ್ರನಿಲ್ಲದೆ ಯಾವ ಕಾರ್ಯವನ್ನೂ ಮಾಡುವಂತಿಲ್ಲ ಒಳ್ಳೆಯ ಲೋಕವೂ ಸಿಗುವುದಿಲ್ಲ.' ಪಾಂಡು ಹೇಳಿದ. ತಾನು ಅರಣ್ಯದಲ್ಲಿ ಸುರತಿಕ್ರಿಯೆಯಲ್ಲಿ ತೊಡಗಿದ್ದ ಜಿಂಕೆಯನ್ನು ಕೊಂದುದರಿಂದ **ಗರ್ಭೋತ್ಪತ್ತಿಯನ್ನುಂಟು ಮಾಡುವ ಪ್ರಜನಶಕ್ತಿಯನ್ನು ಕಳೆದುಕೊಂಡಿದ್ದ**. ಈ ವಿಷಯವನ್ನು ಹೆಂಡತಿಯರಿಗೆ ಹೇಳದೇ ಮರೆಮಾಚಿದ. 'ನನ್ನಿಂದ ನೀನು ಮಕ್ಕಳನ್ನು ಅಪೇಕ್ಷಿಸುವಂತಿಲ್ಲ.. ಮಕ್ಕಳಿಲ್ಲದವರು ಮಕ್ಕಳನ್ನು ಪಡೆಯುವ ಕುರಿತು ಶ್ರುತಿ, ಸ್ಮೃತಿಗಳಲ್ಲಿ ಹೇಳಿರುವುದನ್ನು ಹೇಳುವೆನು. ಅದರಲ್ಲಿ ನಿನಗೆ ವಿಹಿತವಾದುದನ್ನು ಮಾಡು' ಎಂದು ಕುಂತಿಗೆ ಆಜ್ಞಾಪಿಸಿದ.

ಪುತ್ರನಿಲ್ಲದ ಒಬ್ಬ ಮನುಷ್ಯ ಹನ್ನೆರಡು ರೀತಿಯಲ್ಲಿ ಮಕ್ಕಳನ್ನು ಪಡೆಯುವ ವಿಧಾನಗಳಿರುವ ಅವಕಾಶಗಳನ್ನು ಪಂಡು ಹೇಳಿದ್ದನ್ನು ಕುಂತಿ ಮೆಲುಕು ಹಾಕಿದಳು. (ಈ ಬಗೆಯ ಹೆಚ್ಚಿನ ವಿವರಣೆಯನ್ನು ಪ್ರತ್ಯೇಕ ಅಧ್ಯಾಯದಲ್ಲಿ ವಿವರಿಸಲಾಗಿದೆ.) ಪಾಂಡು ಈ ಸಂದರ್ಭದಲ್ಲಿ **ಶರದಂಡಯಾನಿಯು ಮಕ್ಕಳನ್ನು ಪಡೆಯುವ ಕಥೆ**ಯನ್ನೂ ಹೇಳಿದ. 'ಆಕೆ ಪತಿಯ ಆಜ್ಞಾಧಾರಕಳಾಗಿ ಮಹಾತಪಸ್ವಿಯೊಬ್ಬನ ಸಂಯೋಗದಿಂದ ಮೂರು ಮಕ್ಕಳನ್ನು ಪಡೆದಳು. ನೀನೂ ನನ್ನ ಸಲಹೆಯಂತೆ ಯೋಗ್ಯಪುರುಷನೊಬ್ಬನನ್ನು ಆಶ್ರಯಿಸಿ ಮಕ್ಕಳನ್ನು ಪಡೆ' ಎಂದು ಹೇಳಿ ಒಪ್ಪಿಸಿದ. ಕುಂತಿಯು ತಾನು ಕನ್ಯೆಯಾಗಿದ್ದಾಗ ದೂರ್ವಾಸ ಋಷಿಯು ನೀಡಿದ್ದ ವರವನ್ನು ನೆನಪಿಸಿಕೊಂಡು ಈ ಸಂದರ್ಭದಲ್ಲಿ ಮತ್ತೆ ಪಡೆಯುವ ಮೂಲಕ ಯುಧಿಷ್ಠಿರ, ಭೀಮ, ಅರ್ಜುನರನ್ನು ಮಕ್ಕಳಾಗಿ ಪಡೆದುಕೊಂಡಳು.

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಹಾಭಾರತ, ಭಾ-೨, ಪು. ೭೪೯. ೨. ಋ.ಸಂ. ಭಾ-೨೭, ಪು. ೫೪೫.
೨. ಶ್ರೀಮನ್ಮಹಾಭಾರತ, ಭಾ-೨, ಪು. ೭೭೭

~~~***~~~

## 8. ಕುಂತಿಗೆ ಪಾಂಡುವಿನ ಉಪದೇಶ :

"ಧರ್ಮಚಾರಿಗಳು ತನಗೆ ತನ್ನ **ಧರ್ಮಪತ್ನಿ**ಯಲ್ಲಿ ಪುತ್ರರಿಲ್ಲದಾಗ, ಉತ್ತಮರಿಂದ ಪಡೆಯುವ ಕ್ಷೇತ್ರೀಕ ಪುತ್ರರನ್ನು ಬಯಸುತ್ತಾರೆ."[೧] ಆಪತ್ತಿನಲ್ಲಿ ಹೀಗೆ ಮಕ್ಕಳನ್ನು ಪಡೆಯಬೇಕೆಂದು **ಸ್ವಾಯಂಭು ಮನುವು** ಹೇಳಿದ್ದಾನೆ.

ಮಕ್ಕಳನ್ನು ಪಡೆಯಲು ಅಸಮರ್ಥನಾದ ನಾನು ನಿನ್ನನ್ನು ಆ ಕಾರಣದಿಂದ ಇನ್ನೊಬ್ಬರ ಬಳಿಗೆ ಕಳುಹಿಸುತ್ತಿದ್ದೇನೆ. "ಎಲೈ ಕುಂತಿಯೇ ಶರದಂಡನ ಮಗನಾದ ಕೇಕೆಯ ರಾಜನ ಪತ್ನಿ **ಶ್ರುತಸೇನೆಯು** ಮಕ್ಕಳನ್ನು ಪಡೆಯಲೆಂದು ಚತುಷ್ಪಥ ರಸ್ತೆಯಲ್ಲಿ ರಾತ್ರಿವೇಳೆಯಲ್ಲಿ ಬರುತ್ತಿದ್ದ ಬ್ರಾಹ್ಮಣನೊಬ್ಬನ ಸಮಾಗಮದಿಂದ ಮೂರು ಮಕ್ಕಳನ್ನು ಪಡೆದಳು."[೨] ಆದ್ದರಿಂದ ಎಲೈ ಕಲ್ಯಾಣಿಯೇ ನೀನು ಸಹ ನನ್ನ ಆದೇಶದಂತೆ ತಪಸ್ಸಿನಿಂದ ಶ್ರೇಷ್ಠನಾಗಿರುವ ಒಬ್ಬ ಬ್ರಾಹ್ಮಣನಿಂದ ಪುತ್ರರನ್ನು ಪಡೆಯುವ ಪ್ರಯತ್ನ ಮಾಡು. ಆಗ ಕುಂತಿ ನಾನು ನಿನ್ನಲ್ಲೇ ಹೆಚ್ಚು ಆಸಕ್ತಳಾಗಿರುವ ನಿನ್ನ ಧರ್ಮಪತ್ನಿಯಲ್ಲವೇ? ನೀನು ಎಂದೂ ಹೀಗೆ ಮಾತನಾಡಬಾರದು. ನೀನೇ ನನ್ನ ಸಮಾಗಮವನ್ನು ಮಾಡು ನಾವು ಮನಸ್ಸಿನಲ್ಲಿಯು ಸಹ ಪರಮಪುರುಷರ ಸಂಗದ ಯೋಚನೆಯನ್ನು ಮಾಡುವುದಿಲ್ಲ. ಎಂದು ಹೇಳಿ ಹಿಂದೆ ವ್ಯುಷಿತಾಶ್ವನೆಂಬ ರಾಜನಿದ್ದನು. ಭದ್ರಾ ಎಂಬುವಳು ಅವನ ಪತ್ನಿ. ರಾಜ ಕ್ಷಯ ರೋಗ ಬಂದು ಸಾಯುತ್ತಾನೆ. ಪುತ್ರನಿಲ್ಲದ ಭದ್ರೆ ದುಃಖಾರ್ತಳಾಗಿ ಭೂಮಿಯ ಮೇಲೆ ದರ್ಭೆಗಳನ್ನು ಹರಡಿ ಅದರ ಮೇಲೆ ಮಲಗಿ ಕೊಂಡು ಪತಿಯ ನಿರೀಕ್ಷೆ ಮಾಡುತ್ತಾಳೆ. "ಶವ ಶರೀರದಿಂದ ನೀನು ಎದ್ದು ಹೋಗು. ಋತುಸ್ನಾತಳಾದ ನೀನು ನನ್ನ ಸಮಾಗಮ ಹೊಂದುತ್ತೀಯೆ ಎಂಬ ವಾಣಿ ಕೇಳಿಸುತ್ತದೆ. ಆ ಶವ ಶರೀರದಿಂದಲೇ ಭದ್ರ ಏಳು ಜನ ಪುತ್ರರನ್ನು ಪಡೆಯುತ್ತಾಳೆ."[೩]

ಹಿಂದೆ ಸ್ತ್ರೀಯರು ಅನಾವೃತರಾಗಿದ್ದರು. (ಅವರಿಗೆ ಪುರುಷರ ಸಂಪರ್ಕಕ್ಕೆ ನಿಷೇಧವಿರಲಿಲ್ಲ.) ತಮ್ಮ ಮನಸ್ಸಿಗೆ ಬಂದಂತೆ ಸಂಚರಿಸಲು ಸ್ವತಂತ್ರರಾಗಿರುತ್ತಿದ್ದರು. ಇದು ಸನಾತನ ಧರ್ಮವೂ ಆಗಿತ್ತು. ಉದ್ದಾಲಕನೆಂಬ ಋಷಿಯ ಪುತ್ರನಾದ ಶ್ವೇತಕೇತುವು ತನ್ನ ತಾಯಿಯನ್ನು ಬಲಾತ್ಕಾರ ಮಾಡುವ ಬ್ರಾಹ್ಮಣನೊಬ್ಬನ ಕೃತ್ಯವನ್ನು ಕಂಡು ಕ್ರೋಧಗೊಂಡು ತನ್ನ ಪತಿಯನ್ನು ಮೀರಿ ಪರಪುರುಷರ ಸಂಗ ಮಾಡಬಾರದೆಂಬ ಮರ್ಯಾದೆಯನ್ನು ಸ್ಥಾಪಿಸಿದನು. ಭಾರ್ಯೆಯಾದವಳು ಪುತ್ರನ ಸಲುವಾಗಿ ಪತಿಯಿಂದ ನಿಯುಕ್ತಳಾಗಿ ಹಾಗೆ ಮಾಡದಿದ್ದರೆ ಅವಳಿಗೂ ಭ್ರೂಣಹತ್ಯಾ ಪಾತಕವುಂಟಾಗುವುದು. **"ಪುರಾಣದೃಷ್ಟವಾದ ಈ ಧರ್ಮವು ಮಹರ್ಷಿಗಳಿಂದಲೂ ಪೂಜ್ಯವಾಗಿದೆ."**[೪]

**ಅಡಿಟಿಪ್ಪಣಿಗಳು :**

೨. ಅದೇ. ೩೫, ೩೬,೩೭
೩. ಅದೇ-೭೨
೪. **ಅದೇ-೪೨,೪೩.**

~~~***~~~

## 9. ಕೇವಲ ಅಭಿಚಾರ ಕ್ರಮದಿಂದ ಸಂತಾನ ಪ್ರಾಪ್ತಿ :

### ಕರ್ಣ ಮತ್ತು ಪಾಂಡವರು.

'ಮಂತ್ರಕ್ಕೆ ಮಾವಿನ ಕಾಯಿ ಉದುರೀತೇ?!' ಎನ್ನುವ ಗಾದೆಯೇ ಇದೆ. ಹಾಗೆ ಸ್ತ್ರೀ-ಪುರುಷರ ಸಂಗಮವಿಲ್ಲದೆ ಸಂತಾನಪ್ರಾಪ್ತಿಯೂ ಹೇಗೆ ಸಾಧ್ಯ? ಹೀಗೆಂದು ವೈದ್ಯಕೀಯ ವಿಜ್ಞಾನವೂ ಹೇಳುತ್ತದೆ. ಸ್ತ್ರೀ ಪುರುಷರ ಸಂಗಮವಿಲ್ಲದೆ ಸಂತಾನೋತ್ಪತ್ತಿ ಸಾಧ್ಯವಿಲ್ಲವೆಂದು ಶಾಸ್ತ್ರಸಿದ್ಧಾಂತವೂ ಇದೆ.

ದೂರ್ವಾಸ ಮುನಿಯ ಅಭಿಚಾರ ಪ್ರಕ್ರಿಯೆಯಿಂದ ಕುಂತಿ-ದೂರ್ವಾಸರ ದೈಹಿಕ ಸಂಬಂಧವಾಗುವ ಮುನ್ನ ಕುಂತಿಯು,

'ಎಲೈ ವಾಯುದೇವನೇ (ಎಂದಿದೆ ಇಲ್ಲಿ ಕುಂತಿ ವಾಯುದೇವನಿಗೆ ಬದಲಾಗಿ ಎಲೈ ಸೂರ್ಯದೇವನೇ) ನನ್ನ ಕಾಮವು ಅಂದರೆ ಪುತ್ರನಾಗಬೇಕೆಂಬ ಬಯಕೆಯು ಸಮೃದ್ಧವಾಗಲಿ ಅಥವಾ ಈಡೇರಲಿ. ಈ ಬಯಕೆಯು ಅಥವಾ ಕಾಮವು ಯಾರಿಂದಲೂ ಭಾದಿಸಲ್ಪಪಡದಿರಲಿ. ಎಲೈ ವಾಯುದೇವನೇ (ಎಲೇ ಸೂರ್ಯದೇವನೇ) ನನಗೆ ಪುತ್ರನಾಗಬೇಕೆಂಬ ಯಾವ ಬಯಕೆ ಇರುವುದೋ ಆ ಬಯಕೆಯು ಪೂರ್ಣವಾಗುವಂತೆ ಅನುಗ್ರಹಿಸು."[೧] ಎಂದು ಗರ್ಭದಾನ ಕಾಲದಲ್ಲಿ ಕುಂತಿ ಸೂರ್ಯದೇವನನ್ನು ಕುರಿತು ಪ್ರಾರ್ಥಿಸುತ್ತಾಳೆ.

ಋಗ್ವೇದ ಸಂಹಿತೆಯ ೧೦ನೇ ಮಂಡಲದಲ್ಲಿ **ಪರಿಶಿಷ್ಟಮಂತ್ರದಲ್ಲಿ** ಹೀಗೆ ಹೇಳಿದೆ.

ಗರ್ಭದಾನ ಕಾಲದಲ್ಲಿ ವರನು ವಧುವನ್ನು ಸಂಬೋಧಿಸಿ ಹೇಳುವ ಮಂತ್ರ :

"ಎಲೈ ಸ್ತ್ರೀಯೆ, ಪುತ್ರ ಸಂತಾನವಾಗುವುದಕ್ಕಾಗಿ ಬತ್ತಳಿಕೆಯಿಂದ ಬಾಣವು ಯಾವ ರೀತಿ ನೇರವಾಗಿ ಮತ್ತು ವೇಗವಾಗಿ ನಿರ್ದಿಷ್ಟಸ್ಥಾನವನ್ನು ಸೇರುವುದೋ ಅದರಂತೆ ಪುರುಷ ರೇತಸ್ಸು ನಿನ್ನ ಯೋನಿಗೆ ಸೇರಿ ಗರ್ಭವನ್ನುಂಟು ಮಾಡಲಿ. ಮತ್ತು ಹತ್ತು ತಿಂಗಳವರೆಗೂ ಗರ್ಭದಲ್ಲಿದ್ದ ನಂತರ ವೀರನಾದ ಪುತ್ರನು ಜನಿಸಲಿ."[೨] (ಆತೇಗರ್ಭೋ ಯೋನಿಮೈತು ಪ್ರಮಾನ್ಬಾಣ ಇವೇ ಷುಧಿಂ । ಆವೀರೋಜಾಯತಾಂ ಪುತ್ರಸ್ತೇ ದಶಮಾಸ್ಯಃ ॥ ಋ.ಸಂ. ಭಾ-೨೦, ಪು. ೨೬೪.) ಎಂದು ಹೇಳಿರುವ ನೈಸರ್ಗಿಕ ವಿಧಾನವನ್ನೇ ಇಂದಿನ ವೈಜ್ಞಾನಿಕ ವೈದ್ಯಕೀಯ ವಿಧಾನವೂ ಸಮರ್ಥಿಸುತ್ತದೆ. 'ಮಹಾಭಾರತ'ದ ಹಲವಾರು ಪ್ರಸಂಗಗಳಲ್ಲಿ ಪುರುಷ-ರೇತಸ್ಸು ಮತ್ತು ಸ್ತ್ರೀ ಅಂಡಾಣುಗಳಿಲ್ಲದೇ ಗರ್ಭಧಾರಣೆಯ ಆಧಾರವಿಲ್ಲದೇ ಶಿಶುಗಳು ಜನಿಸುವ ವಿಧಾನ ಖಂಡಿತವಾಗಿಯೂ ಒಪ್ಪುವಂತಹದ್ದಲ್ಲ. ಇದು ನಿಸರ್ಗ ನಿಯಮಕ್ಕೇ ವಿರುದ್ಧವಾದದ್ದು.

### ಮಹಾಭಾರತದಲ್ಲಿ ಹೆಣ್ಣಿನ ಸ್ಥಾನ-ಮಾನ :

ತೀರಾ ಚಿಂತಾಜನಕವಾಗಿತ್ತು. ಅದಕ್ಕೂ ಹಿಂದಿನ ಕಾಲದಲ್ಲಿ ಸ್ತ್ರೀಗೆ ಮತ್ತಷ್ಟು ಪೂರ್ಣ ಸ್ವಾತಂತ್ರ್ಯಕೊಟ್ಟಿದ್ದರಿಂದ ಹೀನಾಯವಾಗಿತ್ತೆಂದು ಮಹಭಾರತದಿಂದಲೇ ತಿಳಿದುಬರುತ್ತದೆ.

ಕುಂತಿಭೋಜನಿಗೆ ಮಕ್ಕಳಿರಲಿಲ್ಲ. ಕುಂತಿಭೋಜನ ಸೋದರತ್ತೆಯ ಮಗ. ಶೂರಸೇನನು ಮಾತಿಗೆ ಮಾತು ಬಂದು ತನಗೆ ಹುಟ್ಟುವ ಮೊದಲನೆಯ ಮಗವುನ್ನು ಕುಂತಿಭೋಜನಿಗೆ ಕೊಡುವುದಾಗಿ ಮಾತುಕೊಟ್ಟಿದ್ದ. ಶೂರಸೇನನಿಗೆ ಹುಟ್ಟಿದ್ದು ಮೊದಲನೆಯ ಮಗು ಹೆಣ್ಣು. ಪೃಥೆಯೇ ಮಗಳಾದ್ದರಿಂದ ಅವಳ ಹೆಸರು ಪೃಥಾ ಎಂದೂ ಇಟ್ಟನು. ಆಕೆಯನ್ನು ಕುಂತಿಭೋಜನಿಗೇ ಕೊಟ್ಟುಬಿಟ್ಟನು.

### ಕುಂತಿಭೋಜನ ಆಸ್ಥಾನಕ್ಕೆ ದೂರ್ವಾಸ ಋಷಿಯ ಆಗಮನ :

ದೂರ್ವಾಸ ಮುನಿ ಕುಂತಿಭೋಜನ ಬಳಿ ಭಿಕ್ಷೆಗಾಗಿ ಬಂದ. ದೂರ್ವಾಸ ಮಹಾಕೋಪಿಷ್ಠ ಮುನಿ ಎಂದು ತಿಳಿದ ಕುಂತಿಭೋಜ ಅವನಿಗೆ ಎಲ್ಲಾ ಅನುಕೂಲಗಳನ್ನೂ ಮಾಡಿಕೊಟ್ಟ. ಜೊತೆಗೆ ತನ್ನ ಮಗಳ ಭವಿಷ್ಯ ಶ್ರೇಯಪ್ರೇಯಗಳಿಂದ ಕೂಡಿರಬೇಕೆಂದು ಇಚ್ಛಿಸಿದ ಭೋಜರಾಜ ತನ್ನ ಮಗಳನ್ನೂ ದೂರ್ವಾಸ ಮುನಿಯ ಅತಿಥಿ ಸತ್ಕಾರಕ್ಕೆ ನೇಮಿಸಿದಾಗ ಕುಂತಿ ತನ್ನ ಆದರಾಭಿಮಾನದ, ವಿನಯ, ವಿಧೇಯತೆಯ ಸೇವೆಗಳಿಂದ ಮುನಿಯ

ಅನುಗ್ರಹಕ್ಕೆ ಪಾತ್ರಳಾದಳು. ಕುಂತಿ ಆಗ ಹದಿಮೂರರ ಹರೆಯದ ಬಾಲೆ. ಸೌಂದರ್ಯ ಜಿನುಗುವ ವಯಸ್ಸು. ದೂರ್ವಾಸನ ದೃಷ್ಟಿ ಕುಂತಿಯ ಮೇಲೇ ಬಿತ್ತು. ಸಮಾಗಮವೂ ಆಯಿತು. ಕುಂತಿ ಗರ್ಭಿಣಿಯಾದಳು. ಗಂಡು ಶಿಶುವಿಗೆ ಜನ್ಮವಿತ್ತಳು. ತನಗೆ ವಿವಾಹವಾಗದೆ, ಕನ್ಯಾವಸ್ಥೆಯಲ್ಲಿಯೇ ಶಿಶು ಜನನವಾಗಿದೆ. ತಾನು ಮಾಡಿದ ಪಾಪದಿಂದ ಕೂಡಿದ ಈ ಅಪಚಾರಕ್ಕೆ ಭಯಪಟ್ಟು ಸಾಕ್ಷಿಯನ್ನು ವಿಸರ್ಜಿಸುವ ನಿರ್ಧಾರಕ್ಕೆ ಬಂದಳು. ಮಗುವನ್ನು ಒಂದು ಮರದ ಪೆಟ್ಟಿಗೆಯಲ್ಲಿ ಮಲಗಿಸಿ ಅದು ರಾಜವಂಶದ ಶಿಶುವೆಂದು ಗುರುತಿಸಲು ಕರ್ಣಾಭರಣ, ಕವಚ ಇತ್ಯಾದಿ ಒಡವೆಗಳನ್ನು ಅದರ ಪಕ್ಕದಲ್ಲೇ ಇಟ್ಟು ನದಿಯಲ್ಲಿ ತೇಲಿಬಿಟ್ಟ ಮಗುವೇ ಕರ್ಣ.

ದೂರ್ವಾಸ ಮುನಿ ಕುಂತಿಗೆ ಪುತ್ರಪ್ರಾಪ್ತಿಯ ಮಂತ್ರವನ್ನು ಹೇಳಿ ಕೊಟ್ಟ ಈ ಮಂತ್ರಗಳಿಗೆ **ಅಭಿಚಾರ ಮಂತ್ರ**ವೆಂಬ ವಿಶೇಷಣವಿದೆ. ಇದರಿಂದ ಯಾವ ದೇವತೆಯನ್ನಾದರೂ ವಶೀಕರಣ ಮಾಡಿಕೊಳ್ಳಬಹುದೆಂಬಂತೆ ದೂರ್ವಾಸ ಮುನಿ ಹೇಳುತ್ತಾನೆ.

ಹಾಗಾದರೆ ಅಂಬಿಕೆ, ಅಂಬಾಲಿಕೆಯರಿಗೆ ಸಂತಾನಕ್ಕಾಗಿ ಭೀಷ್ಮ, ಸತ್ಯವತಿಯರಂತಹ ಕುಲ ಹಿರಿಯರು ವೇದವ್ಯಾಸ ಋಷಿಗಳನ್ನು ಕರೆಸಿ **ಅಭಿಚಾರಕ್ರಿಯೆಯಿಂದಲೇ ಪುತ್ರಪ್ರಾಪ್ತಿಯನ್ನು ಪಡೆಯಲಿಲ್ಲವೇಕೇ?!** ಎನ್ನುವಂತಹ ಪ್ರಸ್ನೆ ಸಹಜವಾಗಿಯೇ ನಮ್ಮನ್ನು ಕಾಡುತ್ತದೆ.

ಕ್ಷತ್ರಿಯರು ಬ್ರಾಹ್ಮಣರ ಪರಿಚರ್ಯೆ ಮಾಡುವುದು ಹಾಗೂ ಬ್ರಾಹ್ಮಣರು ಕ್ಷತ್ರಿಯರ ಸಂತಾನದ ವಿಷಯದಲ್ಲಿ ವಿಶೇಷ ಆಸಕ್ತರಾಗಿರುತ್ತಿದ್ದುದು ಅಂದಿನ ಕಾಲದ **ಯುಗಧರ್ಮ**ವಾಗಿತ್ತು.

ಕುಂತಿಭೋಜನಿಗೆ ತನ್ನ ಮಗಳು ಗರ್ಭವತಿಯೆಂದು ತಿಳಿದಿರಲಿಲ್ಲವೇ? ಅಥವಾ ತನ್ನ ಮಗಳು ಒಂದು ಶಿಶುವಿಗೆ ಜನ್ಮವಿತ್ತ ವಿಷಯವು ತಿಳಿದಿರಲಿಲ್ಲವೇ? ಖಂಡಿತವಾಗಿಯೂ ತಿಳಿದಿತ್ತು. ಆದರೆ ಅದು ಅಪರಾಧವಾಗಿರಲಿಲ್ಲ. ಅನೈತಿಕತೆಯೂ ಆಗಿಠಲಿಲ್ಲ. ಅಧರ್ಮವೂ ಆಗಿರಲಿಲ್ಲವಷ್ಟೇ!

ರಾಜ-ಮಹಾರಾಜರುಗಳು ಶಾಸನಗಳನ್ನು ಮಾಡುವಂತಿರಲಿಲ್ಲ. ಏಕೆಂದರೆ; **"ಅಂದಿನ ಶಾಸನಗಳನ್ನು ಮಾಡಲು ಮಾಡಿದ ಶಾಸನಗಳನ್ನು ಮಾರ್ಪಾಡು ಮಾಡಲು ಸರ್ವಜ್ಞರಾದ ಮಹರ್ಷಿಗಳಿಗೆ ಮಾತ್ರ ಸಾಧ್ಯವಿತ್ತು."**[೩]

ಪರಾಶರರು ಬೆಸ್ತರ ಕನ್ಯೆ ಸತ್ಯವತಿಯನ್ನು ತಮ್ಮ ತೋಳಿನೊಳಗೆ ಆಲಂಗಿಸಿಕೊಂಡಂತೆ, ಇಲ್ಲಿ ದೂರ್ವಾಸರೂ ಕುಂತಿಯ ಸಮಾಗಮದಿಂದಲೇ ಹುಟ್ಟಿದ ಶಿಶು ಕರ್ಣನನ್ನು ಪುರಾಣಿಕರು ಸತ್ಯವನ್ನು ಮರೆಮಾಚಲು ಪೌರಾಣಿಕರ ತೆರೆ ಎಳೆದಿದ್ದಾರೆ ಎನ್ನುವುದು ಸಿದ್ಧಾಂತವಾಗುತ್ತದೆ.

ಸತ್ಯವತಿಯ ಸಮಾಗಮದ ನಂತರ ಪರಾಶರರು; "ನಿನ್ನ ಕನ್ಯಾವಸ್ಥೆ ಕೆಡುವುದಿಲ್ಲ. ಸಾಮಾನ್ಯ ಮಾನವಿಯಂತೆ ನೀನು ನವಮಾಸಗಳ ಗರ್ಭಧಾರಣೆಯನ್ನೂ ಮಾಡಬೇಕಾಗಿಲ್ಲ. ಮಗನನ್ನು ಪಡೆದ ಒಡನೆಯೇ ನಿನಗೆ ಪುನಃ ಕನ್ಯಾವಸ್ಥೆಯೂ ಪ್ರಾಪ್ರವಾಗುವುದು." ಎಂದು ಹೇಳಿದಂತೆಯೇ; ಕುಂತಿಯೂ-ದೂರ್ವಾಸ ಮುನಿಯ ಸಮಾಗಮದ ನಂತರ ಅವಿವಾಹಿತೆಯಾಗಿದ್ದ ಆಕೆ ಲೋಕಕ್ಕೆ ಅಂಜಿದಾಗ ಅವಳಿಗೂ ಕನ್ಯಾವಸ್ಥೆಯೇ ಪ್ರಾಪ್ತವಾಗುತ್ತದೆ. ಇದು ಅನೈಸರ್ಗಿಕ.

೧. "ಹಿಂದೆ ಪ್ರಜಾಪತಿಯು ತನ್ನ ಪುತ್ರಿ (ಎಂದು ಹೇಳಲಾದ)ಯಲ್ಲಿಯೇ ಅನುರಕ್ತನಾಗಿ ಲೋಕವಿರುದ್ಧವಾದ ಅಕಾರ್ಯಾಚರಣೆಯನ್ನು ಮಾಡಿರುವನು." ಸೃಷ್ಟಿಕರ್ತನಾದ ಈ ಪ್ರಜಾಪತಿಯೇ ಇಂತಹ ಸರ್ವರಿಂದಲೂ ನಿಷಿದ್ಧವಾದ ಅಕೃತ್ಯವನ್ನು ಮಾಡಿರುವಾಗ (ಋ.ಸಂ.೧೦.೧೦.೩) ಇನ್ನು ದೂರ್ವಾಸರು ಕುಂತಿಯೊಂದಿಗೆ ದೈಹಿಕ ಸಂಪರ್ಕ ಹೊಂದುವಂತಹ ಕೃತ್ಯವನ್ನು ಮಾಡಲು ಯಾಕೆ ಹಿಂಜರಿಯುತ್ತಾರೇ?! **'ಅಭಿಚಾರ'** ಇತ್ಯಾದಿ ಹಲವಾರು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ, ಹಿಂದಿನವರ ಪುರಾಣಿಕರು ಮಾಡಿರುವ ಬದಲಾವಣೆ ಹಾಗೂ ವಾದಗಳನ್ನು ನಿರಾಧಾರವಾಗಿಸಲು ಋಗ್ವೇದದಲ್ಲಿನ ಪ್ರಕರಣಗಳು ಆಧಾರವನ್ನು ಒದಗಿಸುತ್ತವೆ.

೨. ಯಮಿಯು ತನ್ನ ಅಣ್ಣನಾದ ಯಮನಿಗೆ ಹೇಳುತ್ತಾಳೆ. ಎಲೈ ಯಮನೇ, ಪ್ರಸಿದ್ಧರಾದ ದೇವತೆಗಳೂ ಕೂಡ ಇಂತಹ ತ್ಯಾಜ್ಯವಾದ ಭಗಿನ್ಯಾದಿ ಸಂಬಂಧವನ್ನು ಅಪೇಕ್ಷಿಸುತ್ತಾರೆ. ವಿಶ್ವಕ್ಕೆಲ್ಲ ಪ್ರಭುವಾದ ಪ್ರಜಾಪತಿಯ

ವಿಷಯದಲ್ಲೂ ಇಂತಹ ಸಂಬಂಧವು ಪ್ರಸಿದ್ಧವಿದೆ. ನಿನ್ನ ಮನಸ್ಸು ನನ್ನ ಮನಸ್ಸಿನೊಡನೆ ಒಂದಾಗಲಿ. ಸರ್ವ ಜನಕನಾದ ಪ್ರಜಾಪತಿಯು ತನ್ನ ದುಹಿತೃವಿಗೆ ಪತಿಯಾಗಿ ಅವಳ ಶರೀರಕ್ಕೆ ಯಾವರೀತಿ ಸೌಖ್ಯವನ್ನುಂಟು ಮಾಡಿದನೋ ಅದರಂತೆ ನನ್ನ ಶರೀರವನ್ನು ಪ್ರವೇಶಿಸಿ ಅದನ್ನು ಸುಖಯುಕ್ತವನ್ನಾಗಿ ಮಾಡು ಎನ್ನುತ್ತಾಳೆ.

ಇಡೀ ಮಹಾಭಾರತದಲ್ಲಿ ಯಾವ ಶಿಶು ಜನನಕ್ಕೂ ಇಲ್ಲದ ಈ **ಅಭಿಚಾರಕ್ರಿಯೆ** ಕುಂತಿಗಷ್ಟೇ ಏಕೆ ಸೀಮಿತವಾಗಿದೆ?! ಇತರ ಯಾವ ಪ್ರಸಂಗದಲ್ಲೂ ಪುತ್ರಪ್ರಾಪ್ತಿಗಾಗಿ ಮಂತ್ರ ಉಚ್ಚರಿಸುವ ಸಂದರ್ಭ ಬರುವುದೇ ಇಲ್ಲ. 'ಸಮಕಾಲೀನ ಸಾಹಿತ್ಯವು ಹೇಗೆ ನಮ್ಮ ಕಾಲದ ಜನಜೀವನವನ್ನು ವಿಸ್ತರಿಸುವುದೋ ಅದೇರೀತಿ ಮಹಾಭಾರತವು ಆ ಕಾಲದ ಜನ ಜೀವನವನ್ನು ಚಿತ್ರಿಸುತ್ತಿರಬೇಕು." ಎಂದು ಅರ್ಥವಾಗುತ್ತದೆ.

**ಶಿಶು ವಿಸರ್ಜನೆಗೆ ಕಾರಣ ಮತ್ತು ಪ್ರೇರಣೆ :**

ಕುಂತಿ–ದೂರ್ವಾಸರ ಅಭಿಚಾರಕ್ರಿಯಾ ಮಂತ್ರ ಉಚ್ಚರಿಸಿದ ಕೂಡಲೇ ಬಂದ ಸೂರ್ಯ ಅವಳ ದೈಹಿಕ ಸಂಪರ್ಕ ಪಡೆದು ಒಂದು ಶಿಶುವನ್ನು ಕೊಟ್ಟು ಹೋದ. ಕನ್ಯಾವಸ್ಥೆಯಲ್ಲಿದ್ದ ಕುಂತಿ ತಾನು ಪಡೆದ ಶಿಶುವನ್ನು ನದಿಯಲ್ಲಿ ವಿಸರ್ಜಿಸುತ್ತಾಳೆ. **ರಹಸೂಃ ಇವ** – ಅಂದರೆ ರಹಸ್ಯವಾಗಿ ಪ್ರಸವಿಸುವ ಮಕ್ಕಳನ್ನು ಸ್ತ್ರೀಯರು ಅಪ್ಸರೆಯರು ಯಾರಿಗೂ ಕಾಣದಂತೆ ಪೊದೆಗಳಲ್ಲಿ ಎಸೆದು ಹೋಗುತ್ತಿದ್ದರು. ಈ ಪದ್ಧತಿ ಋಗ್ವೇದ ಕಾಲದಲ್ಲೂ ಆಚರಣೆಯಲ್ಲಿದ್ದು ಮಹಾಭಾರತ ಕಾಲದಲ್ಲೂ ಅಸ್ತಿತ್ವದಲ್ಲಿತ್ತು.

**"॥ ರಹಸೂಃ ಇವ – ರಹಸಿ ಅನ್ಯೈರಜ್ಞಾತೇ ಪ್ರದೇಶೇ ಸೂಯತ ಇತಿ ರಹಸೂಃ ವ್ಯಭಿಚಾರಿಣೀ ।**
**ಸಾಯಥಾಗರ್ಭಂ ಪಾತಯಿತ್ವಾ ದೂರದೇಶೇ ಪರಿತ್ಯ ಜತಿ ತದ್ವತ್ ॥"**

"ಸ್ತ್ರೀಯು ತಾನು ಪ್ರಸವಿಸಿದ ಮಗುವನ್ನು ಯಾರಿಗೂ ತಿಳಿಯದಂತೆ, ಜನರ ಸಂಚಾರವು ಇಲ್ಲದಿರುವ ಪ್ರದೇಶದಲ್ಲಿ ಹಾಕುವವಳಾದುದರಿಂದ **ವ್ಯಭಿಚಾರ** ಮಾಡುವ ಸ್ತ್ರೀಯು ಇಲ್ಲಿ **ರಹಸೂಃ** ಎಂಬ ಪದದಿಂದ ವ್ಯಪದಿಷ್ಟಳಾಗಿದ್ದಾಳೆ."[೨]

ಇದರ ಪ್ರೇರಣೆಯಿಂದಲೇ ವ್ಯಾಸರು ಮಹಾಭಾರತದಲ್ಲಿ ಮೇನಕಾ ಎಂಬ ಅಪ್ಸರೆಯು ವಿಶ್ವಾ ವಸು ಎಂಬ ಗಂಧರ್ವರಾಜನಿಂದ ಗರ್ಭವತಿಯಾದಳು. ಸ್ಥೂಲಕೇಶ ಎಂಬ ಋಷಿಗಳ ಆಶ್ರಮದ ಸಮೀಪದಲ್ಲಿ ನದಿಯ ಪಕ್ಕದ ಪೊದರಿನಲ್ಲಿ ತಾನು ಪ್ರಸವಿಸಿದ ಮಗುವನ್ನು ಮಲಗಿಸಿ ಬಿಟ್ಟು ಹೋಗುವೆನಲ್ಲಾ ಎಂಬ ಯೋಚನೆಯೂ ಇಲ್ಲದ ದಯಾರಹಿತಳೂ ಆದ ಆ **'ದೇವವೇಶ್ಯೆ'** ತನ್ನ ಧರ್ಮವೇ ಇದೆಂದು ಹೊರಟು ಹೋದಳು."[೩]

ಇಂತಹದೇ ಹಲವಾರು ಪ್ರಸಂಗಗಳನ್ನು ನಾವು ಮಹಾಭಾರತದಲ್ಲೂ ಕಾಣುತ್ತೇವೆ. ಸ್ತ್ರೀಸ್ವಾತಂತ್ರ್ಯಕ್ಕೆ ಸ್ವೇಚ್ಛಾಚಾರಕ್ಕೆ ನಿಯಂತ್ರಣವಿಲ್ಲದ ಕಾಲದಲ್ಲಿ ಸ್ತ್ರೀ ತನಗೆ ಇಚ್ಛೆ ಬಂದಂತೆ ಸ್ವೇಚ್ಛಾಚಾರಿಣಿಯಾಗಿ ವರ್ತಿಸುತ್ತಿದ್ದಳು. ಶ್ವೇತಕೇತು ಎಂಬ ಮಹಾತಪಸ್ವಿ ಸ್ತ್ರೀಸ್ವಾತಂತ್ರ್ಯವನ್ನು ಕಟ್ಟುನಿಟ್ಟಾಗಿ ನಿಯಂತ್ರಿಸುವ ಶಾಸನ ಮಾರ್ಪಾಡು ಮಾಡುವವರೆಗೆ ಸ್ತ್ರೀ ತನ್ನ ಅನಧಿಕೃತ ಗರ್ಭಶಿಶುವನ್ನು ನೋಡಿಕೊಳ್ಳುವವರಿಲ್ಲದೆ ಬಿಸಾಡಿ ಹೋಗುತ್ತಿದ್ದಳು.

~~~***~~~

**ಅಡಿಟಿಪ್ಪಣಿಗಳು :**

೧. ಯಾನಿ ಭದ್ರಾಣಿ ಬೀಜಾವೃಷಬಾಜನಯಂತಿ ನೌ ।
ತೈಸ್ತ್ವಂ ಪುತ್ರಾನ್ ವಿಂದಸ್ವಸಾ ಪ್ರಸೂರ್ಧೇನುಕಾಭವ ॥

–ಋ.ಸಂ. ಭಾ–೨೦, ಪು. ೨೬೪.

೨. ಮ.ಭಾ. ಭಾ.ದ.ಪ್ರ. ಭಾ–೨, ಪು. ೮೦೦.

೩. –– " –– ಅದೇ, ಭಾ– ೧, ಪು. ೩೮೮.
~~~

೪. ಎಂ.ಆರ್. ಭಟ್ಟ, 'ಭಾರತ ಗಾಂಭೀರ್ಯ', ಪೀಠಿಕೆ, ಪು. ೭.

೫. ಋ.ಸಂ. ಭಾ– ೨೭, ಪು. ೩೬೧, ೩೬೨.

೬. -- "-- ಅದೇ--, ಭಾ– ೧೫, ಪು. ೧೨೭.

೭. ಶ್ರೀಮನ್ಮಹಾಭಾರತ, ಭಾ–೧, ಪು. ೧೫೧.

೮. -- ಅದೇ -- , ಭಾ–೭, ಪು. ೮೦೦.

~~~***~~~

## 10. ಪಾಂಡವರ ಜನನ :

### ಗಂಡು–ಹೆಣ್ಣಿನ ಸಂಯೋಗವಿಲ್ಲದೇ ಕೇವಲ ವರದಾನದಿಂದ ಸಂತತಿ ಸಾಧ್ಯವೆ?!

ದೂರ್ವಾಸರ ಬಳಿ ಪುತ್ರ ಸಂತತಿಯ ಅಪೇಕ್ಷಿತಳಾಗಿ ಬಂದ ಕುಂತಿಗೆ ಆ ಋಷಿಯು, "ಎಲೈ ಸ್ತ್ರೀಯೇ.. ಪ್ರಜಾಪತಿ ಕರ್ಮವೆಂದು ಹೇಳಲ್ಪಡುವ ರೇತಸ್ಸಿಂಚನವನ್ನು ನಿನ್ನ ಯೋನಿಯಲ್ಲಿ ವಿಸರ್ಜಿಸುವೆನು. ಅದರಿಂದ ನಿನಗೆ ಗರ್ಭೋತ್ಪತ್ತಿಯಾಗಿ ಹತ್ತು ತಿಂಗಳು ಕಳೆದ ನಂತರ ಅವಯವಗಳಲ್ಲಿ ನ್ಯೂನ್ಯತೆ ಇಲ್ಲದ, ಚೆನ್ನಾಗಿ ಬೆಳೆದಿರುವ, ಕುರುಡೂ, ಕಿವುಡೂ ಅಲ್ಲದ ಮತ್ತು ಪಿಶಾಚಾದಿ ಗ್ರಹ ಪೀಡಿತವಲ್ಲದ ಶಿಶು ಉತ್ಪನ್ನವಾಗಲೀ.."[೧] ಎಂದು ಕುಂತಿಯನ್ನು ಸೇರುತ್ತಾನೆ.

ಕುಂತಿಯು, 'ಎಲೈ ಧರ್ಮದೇವನೇ ಪುತ್ರಂ ದೇಹೀ.. ನನಗೆ ಪುತ್ರನನ್ನು ದಯಪಾಲಿಸು..' ಎಂದು ಕೇಳಿ ದೂರ್ವಾಸನೊಡನೆ ಸಮಾಗಮವನ್ನು ಪಡೆದಳು. ಆ ಮಗುವಿಗೆ 'ಯುಧಿಷ್ಟೀರ'ನೆಂದು ನಾಮಕರಣ ಮಾಡಿದರು.

ನಂತರ ಕುಂತಿಯು ವಾಯುದೇವನನ್ನು ಕುರಿತು ಪ್ರಾರ್ಥಿಸಿ ದೂರ್ವಾಸನ ಸಮಾಗಮ ಮಾಡಿದಳು. ಆಗ ಹುಟ್ಟಿದ ಮಗುವಿಗೇ 'ಭೀಮಸೇನ'ನೆಂದು ಹೆಸರಿಟ್ಟರು.

ನಂತರ ಕೆಲವು ಕಾಲಾ ನಂತರದಲ್ಲಿ ಕುಂತಿಯು ಇಂದ್ರನ ಅನುಗ್ರಹ ಬೇಡಿ ದೂರ್ವಾಸನ ಸಮಾಗಮ ಮಾಡಿದಳು. ಫಾಲ್ಗುಣ ಮಾಸದಲ್ಲಿ ಮತ್ತು ಫಾಲ್ಗುಣೀ ನಕ್ಷತ್ರದಲ್ಲಿ ಹುಟ್ಟಿದ ಮಗುವಿಗೆ 'ಫಾಲ್ಗುಣ'ನೆಂದು ಹೆಸರಿಟ್ಟರು. ಅವನೇ ಅರ್ಜುನ.

### ಸಾಮಾನ್ಯ ನಿರೂಪಣೆ :

ದೂರ್ವಾಸ ಋಷಿ ಉಪದೇಶಿಸಿದ– ಕುಂತಿಗೆ ಮಂತ್ರದ ಪುನಶ್ಚರಣೆಯಿಂದ ಮಕ್ಕಳಾಗುತ್ತವೆ. ಗಾಂಧಾರಿಗೆ ಮಕ್ಕಳಾಯಿತು ತನಗಾಗಲಿಲ್ಲವಲ್ಲಾ ಎನ್ನುವುದು ಮಾದ್ರಿಯ ಚಿಂತೆ. "ಮಹಾರಾಜಾ! ಸಂತಾನೋತ್ಪಾದಕ ಶಕ್ತಿ ನಿನ್ನಲ್ಲಿಲ್ಲದಿರುವುದಕ್ಕೂ ನಾನು ದುಃಖಿಸುವುದಿಲ್ಲ. ಗಾಂಧಾರಿಗೆ ನೂರೊಂದು ಮಕ್ಕಳಾಗಿರುವುದಕ್ಕು ನನಗೆ ಮತ್ಸರವಿಲ್ಲ. ಆದರೆ ನನಗೆ ಸಮಾನ ಸ್ಥಾನದಲ್ಲಿರುವ ಕುಂತಿಯೂ ಪುತ್ರವತಿಯಾಗಿರುವಾಗ ನಾನು ಮಾತ್ರ ಅಪುತ್ರವತಿಯಾಗಿಯೇ ಇದ್ದೇನೆ. ಕುಂತಿ ಮಕ್ಕಳನ್ನು ಮಹಾಮಂತ್ರದ ಪುನಶ್ಚರಣೆ ಮಾಡಿ ಪಡೆದಂತೆ ನಾನೂ ಆ ಮಹಾಮಂತ್ರದಿಂದಲೇ ಪುತ್ರವತಿಯಾಗಬೇಕು. ನಾನೇ ಅವಳನ್ನು ಕೇಳಲು ಸ್ವಾಭಿಮಾನ ಅಡ್ಡ ಬರುವುದು.. ಆದ್ದರಿಂದ ನೀನೇ ಅವಳನ್ನು ಒಪ್ಪಿಸಿ ನನ್ನ ಈ ಇಚ್ಛೆಯನ್ನು ನೆರವೇರಿಸು." ಎಂದು ಮಾದ್ರಿ ತನ್ನ ಪತಿಯನ್ನು ಕೇಳಿಕೊಳ್ಳುತ್ತಾಳೆ. ಪಾಂಡು, "ಈ ವಿಷಯವು ನನ್ನ ಮನಸ್ಸಿನಲ್ಲಿಯೂ ಇದೆ. ನಿನ್ನ ಅಭಿಲಾಷೆಯನ್ನು ಪೂರ್ಣ ಮಾಡಲು ಪ್ರಯತ್ನಿಸುತ್ತೇನೆ." ಎಂದು ಹೇಳುತ್ತಾನೆ.
~~~

ಪಾಂಡು ಏಕಾಂತದಲ್ಲಿ ಕುಂತಿಯನ್ನು ಕರೆದು, "ಕಲ್ಯಾಣೀ.. ಮಾದ್ರಿಗೂ ಮಕ್ಕಳಾಗುವಂತೆ ಅನುಗ್ರಹ ಮಾಡು.. ನನ್ನ ಇಷ್ಟ ಪ್ರಾಪ್ತಿಯಾಗಿ ನನಗೂ ಸಂತೋಷವಾಗುತ್ತದೆ." ಎಂದನು. ಪತಿಯ ಮಾತುಗಳನ್ನು ಕೇಳಿದ ಕುಂತಿಯು ಮಾದ್ರಿಗೆ ಮಂತ್ರವನ್ನು ಹೇಳಿ, ಒಂದು ಸಲ ಮಾತ್ರ ಚಿಂತನೆಯನ್ನು ಮಾಡೆಂದು ಹೇಳುತ್ತಾಳೆ.

ಮಾದ್ರಿ ಮನಸ್ಸಿನಲ್ಲಿ ಅಶ್ವಿನೀ ದೇವತೆಗಳನ್ನು ಸ್ಮರಣೆ ಮಾಡುತ್ತಾಳೆ. ಅವಳಿಗೆ ಇಬ್ಬರು ಗಂಡು ಮಕ್ಕಳು ಹುಟ್ಟುತ್ತಾರೆ. ಅವರೇ ನಕುಲ-ಸಹದೇವರು. ಅವರೆಲ್ಲ ಹಿಮಾಲಯದಲ್ಲಿ ಬೆಳೆಯುತ್ತಿದ್ದರು.

**ಅಗಸ್ತ್ಯ ಮತ್ತು ವಶಿಷ್ಠರ ಜನನ :**

"ಮಿತ್ರಾವರುಣರಿಗೆ ಊರ್ವಶಿಯ ದರ್ಶನವಾದೊಡನೆ ರೇತಃ ಪ್ರಭಾವದಿಂದ ಅವಳ ಸಂಕಲ್ಪಾನುಸಾರ - ಊರ್ವಶಿಯ ಉದರದಲ್ಲಿ ಪೃಥ್ವಿಯ ಮೇಲೆ ಜನಿಸುತ್ತಾರೆ."[೨] ಎಂದೇ ಸ್ಪಷ್ಟವಾಗಿ ಹೇಳಿದೆ. ಹಾಗಾಗಿ ಅಗಸ್ತ್ಯ ವಸಿಷ್ಠಾದಿ ಋಷಿಗಳು ಊರ್ವಶಿ ಎಂಬ ಅಪ್ಸರೆಯ ಮಕ್ಕಳೆನ್ನುವುದು ಸಿದ್ಧವಾಗುತ್ತದೆ. ಮಹರ್ಷಿಗಳೂ ಕೂಡಾ ಕಾಮವನ್ನು ಜಯಿಸಲಾಗಲಿಲ್ಲವೆಂದೂ ಯಾವ ರೀತಿ ಅದು ಮಾನವನಿಗೆ ಸಹಜವಾದ ಇಚ್ಛೆಯೆಂತಲೂ ಅದನ್ನು ತೃಪ್ತಿಪಡಿಸಲೆಬೇಕೆಂದೂ ಅಗಸ್ತ್ಯನ ಪತ್ನಿ ಲೋಪಾಮುದ್ರೆ ಹೇಳುತ್ತಾಳೆ.

ಅಗಸ್ತ್ಯ ಋಷಿ ತನ್ನ ಸಂತತಿಯ ವಿಸ್ತಾರಕ್ಕಾಗಿ, ಪಿತಾಮಹ, ಪ್ರತಿಮಹರ ಉದ್ಧಾರಕ್ಕಾಗಿ ತನ್ನನ್ನು 'ಪುತ್' ನರಕದಿಂದ ಪಾರು ಮಾಡಲಿಕ್ಕಾಗಿ ಒಬ್ಬ ಮಗನನ್ನು ಪಡೆಯುವ ಸಲುವಾಗಿ ಚಿಂತಿಸಿದ. ಅನುರೂಪಳಾದ ಕನ್ಯೆ ದೊರೆಯಲಿಲ್ಲ. ಪ್ರಾಣಿಗಳ ಅವಯವಗಳಿಂದ ಒಬ್ಬ ವನಿತೆಯನ್ನು ನಿರ್ಮಾಣ ಮಾಡಿದ. ಪುತ್ರಕಾಮನಾಗಿ ಬಳಲುತ್ತಿದ್ದ ವಿದರ್ಭ ರಾಜನಿಗೆ ಆ ವನಿತೆಯನ್ನು ಕೊಟ್ಟ. ಆಕೆ ಸುಂದರವಾಗಿ ಬೆಳೆದು ಯೌವನಾವಸ್ಥೆಗೆ ಬಂದಳು. ವಿದರ್ಭ ರಾಜ ಸಾಕುಮಗಳಿಗೆ ಲೋಪಾಮುದ್ರೆಯೆಂದು ನಾಮಕರಣ ಮಾಡಿದ್ದ. ರಾಜನ ಬಳಿಗೆ ಬಂದ ಅಗಸ್ತ್ಯ ಲೋಪಾಮುದ್ರೆಯನ್ನು ತನಗೆ ಕೊಡುವಂತೆ ಕೇಳಿದ. ಮನಸ್ಸಿಲ್ಲದ ರಾಜ, ಮಹರ್ಷಿ ಕೋಪಗೊಂಡು ಶಾಪಾಗ್ನಿಯಿಂದ ತಮ್ಮನ್ನು ಸುಡಬಹುದು ಎಂದು ಹೆದರಿರುವಾಗ ಲೋಪಾಮುದ್ರೆಯೇ ತನ್ನನ್ನು ಅಗಸ್ತ್ಯನಿಗೆ ದಾನ ಮಾಡೆಂದು ಕೇಳಿಕೊಂಡಳು. ರಾಜನು ತನ್ನ ಮಗಳನ್ನು ವಿಧಿಪೂರ್ವಕವಾಗಿ ಅಗಸ್ತ್ಯ ಋಷಿಗೆ ದಾನ ಮಾಡಿದ. ಅಗಸ್ತ್ಯರು ಲೋಪಾಮುದ್ರೆಯ ಸಮಾಗಮವನ್ನು ಮಾಡಿ 'ದೃಢಸ್ಯು' ಎಂಬ ಪುತ್ರನನ್ನು ಪಡೆದಳು.

**'ಕುಂಭ' ಸಂಭವರಾದ ಅಗಸ್ತ್ಯರ ಹುಟ್ಟು ವ್ಯಾಸರ ಮೇಲೆ ಪ್ರಭಾವ ಬೀರಿದೆ.**

**ಶೂರಸೇನನೆಂಬ** ರಾಜ ತನ್ನ ಮಗಳು **ಪೃಥಾಳನ್ನು** ಮಕ್ಕಳಿಲ್ಲದ ಕುಂತಿಬೋಜನಿಗೆ ಕೊಡುತ್ತಾನೆ. ಕುಂತಿಭೋಜನು ಹರೆಯಕ್ಕೆ ಬಂದ ಕುಂತಿಯನ್ನು ದೂರ್ವಾಸನ ಸೇವೆ, ಅತಿಥಿ ಸತ್ಕಾರಕ್ಕಾಗಿ ನೇಮಿಸುತ್ತಾನೆ.

**ಲೋಪಾಮುದ್ರೆಯ ಉಪದೇಶ** ಮಹರ್ಷಿಗಳೂ ಕೂಡ ಕಾಮವನ್ನು ಜಯಿಸಲಾಗಲಿಲ್ಲವೆಂದೂ ಯಾವ ರೀತಿ ಅದು ಮಾನವನಿಗೆ ಹಜವಾದ ಇಚ್ಛೆಯೆಂತಲೂ ಅದನ್ನು ತೃಪ್ತಿಪಡಿಸಲೇಬೇಕೆಂದೂ ಅಗಸ್ತ್ಯನಿಗೆ ತಿಳಿಸುತ್ತಾಳೆ. ಪುರಾತನ ಋಷಿಗಳು ಸಹ ತಮ್ಮ ಕಾಮ ಸಂತೃಪ್ತಿಗಾಗಿ ಪತ್ನಿಯರೊಡನೆ ಕೂಡುತ್ತಿದ್ದರು. ದೇವ ಮಾನವಾದಿಗಳೆಲ್ಲರೂ ಸಹ ಈ ಸತ್ಯದ ಪಥವನ್ನೇ ಅರ್ಥಮಾಡಿಕೊಂಡು ಅದರ ನಿಯಮವನ್ನೇ ಪಾಲಿಸಬೇಕೆಂಬುದು ವೈದಿಕ ಮತದ ಸಾರಾಂಶ. "ಇಂತಹ ತತ್ವಜ್ಞರೂ, ನಿಯಮಪಾಲಕರೂ ಆದ ಋಷಿಗಳೂ ಸಹ ತಮ್ಮ **ಕಾಮತೃಪ್ತಿಯನ್ನು** ಪಡೆದರೆಂಬುದೇ ಲೋಪಾಮುದ್ರೆಯ ವಾದ."[೩]

**"॥ ಋಷತಿ ಜ್ಞಾನೇನ ಸಂಸಾರಪಾರಂ ॥"**

ಸಂಸಾರವನ್ನು ಜ್ಞಾನದ ಮೂಲಕ ದಾಟುವುದರಿಂದ **'ಋಷ್'** ಧಾತುವಿನಿಂದ ನಿಷ್ಪನ್ನವಾದ 'ಋಷಿ' ಶಬ್ದಕ್ಕೆ ಜ್ಞಾನಿಗಳೆಂದು ಅರ್ಥವಾಗುತ್ತದೆ.

**'ಉಭೌ ವರ್ಣೌ ಪುಪೋಷ ।'**

"ಎಂಬಲ್ಲಿ ಕಾಮ ಸಂತೃಪ್ತಿಯನ್ನು ಪಡೆದುದರಿಂದ **ಸೃಷ್ಟಿ ಸಾಮರ್ಥ್ಯವು**, ಆಧ್ಯಾತ್ಮಿಕವಾದ ಜ್ಞಾನವನ್ನು ಪಡೆದುದರಿಂದ ಸಂಸಾರ ನಿವೃತ್ತಿಗೆ ಸಾಧನವಾದ ಶಕ್ತಿಯೂ ವರ್ಣಿತವಾಗಿದೆ."[೪]

'ಎಲೈ ಅಗಸ್ತ್ಯನೇ! ಯಜ್ಞಾದಿಗಳನ್ನು ಆಚರಿಸುವವರೂ, ದೇವತೆಗಳೊಡನೆ ತತ್ವವಿಚಾರಗಳನ್ನು ಚರ್ಚಿಸುತ್ತಿದ್ದವರೂ ಆದ ಪುರಾತನ ಋಷಿಗಳೂ ಕೂಡಾ ಪ್ರಜೋತ್ಪಾದನೆಗಾಗಿ 'ಸಂಯೋಗ' ಮಾಡುತ್ತಿದ್ದರು. ಅದರಿಂದ ಅವರ ಬ್ರಹ್ಮಚರ್ಯವೇನೂ ಹೋಗಲಿಲ್ಲ.

ಈ ಮೇಲಿನ ಲೋಪಾಮುದ್ರೆಯ ಮಾತುಗಳಿಂದ; **ವ್ಯಾಸರಿಂದ ಕೌರವರೂ ಹಾಗೂ ದೂರ್ವಾಸರಿಂದ ಪಾಂಡವರೂ** ಜನಿಸಿದ್ದಾರೆಂದೂ ಸಿದ್ಧಾಂತವಾಗುತ್ತದೆ.

ಹಾಗಾದರೆ ಮಹಾಭಾರತದಲ್ಲಿ ಬಂದಿರುವ ನಿಸರ್ಗನಿಯಮವನ್ನು ಮೀರಿದ ಅವೈಜ್ಞಾನಿಕ ಪ್ರಕ್ರಿಯೆಗಳಿಗೆ ಕಾರಣವೇನು? ಎಂದರೆ; ಅದೇ ಕವಿಸಮಯ!

**ಅಡಿಟಿಪ್ಪಣಿಗಳು :**

೧. "॥ ಕರೋಮಿ ತೇ ಪ್ರಜಾಪತ್ಯಮಾ ಗರ್ಭೋ ಯೋನಿಮೆ ತುತೇ ।
ಅನೂನಃ ಪೂರ್ಣೋಜಾಯತಾಮ ಶ್ಲೋಣೋ ಪಶಾಚ ಧೀತಃ ॥

–ಋ.ಸಂ. ಭಾ–೨೦, ಪು. ೨೬೪."

೨. ಋ.ಸಂ. ಭಾ–೨೧, ಪು. ೫೯೭.

೩. ಋ.ಸಂ. ಭಾ–೧೨, ಪು. ೪೭೩.

೪. ಋ.ಸಂ. ಭಾ–೧೩, ಪು. ೪೯೪.

## 11. ಕೌರವರಾದ ನೂರು ಮಕ್ಕಳ ಜನನ :

### ಮಡಿಕೆ-ಕುಡಿಕೆಗಳಲ್ಲಿ ಮಕ್ಕಳು ಉದ್ಭವ :

೧. ಗಾಂಧಾರಿ ಧೃತರಾಷ್ಟ್ರನಿಂದ ಗರ್ಭವನ್ನು ಧರಿಸುತ್ತಾಳೆ. "**ಎರಡು ವರ್ಷ** ತುಂಬಿದರೂ ಅವಳಿಗೆ ಪ್ರಸವವಾಗಲಿಲ್ಲ. ಕುಂತಿಯ ಸುತನು ಜನಿಸಿರುವುದನ್ನು ಕೇಳಿ ತನ್ನ ಉದರದ ಸ್ಥಿರತ್ವವನ್ನು ನಿಂದಿಸಿ ಧೃತರಾಷ್ಟ್ರನಿಗೆ ತಿಳಿಯದಂತೆ ಪರಮ ದುಃಖದಿಂದ ಕೂಡಿದವಳಾದ ಕಾರಣ **ತನ್ನ ಉದರವನ್ನು ತಾನೇ ಕುಟ್ಟಿಕೊಂಡಳು.**" ಆಗ ಜರಾಯುವಿನಿಂದ ಸಹಿತವಾದ ಒಂದು ಮಾಂಸದ ಮುದ್ದೆಯು ಹೊರಗೆ ಬಂದಿತು. ಆಗ ಅಲ್ಲಿಗೆ ಬಂದ ವ್ಯಾಸ ಋಷಿಗಳು ಘೃತದಿಂದ ತುಂಬಿದ ನೂರು ಕುಂಡಗಳನ್ನು ತರಿಸಿ, ಮಾಂಸದ ಮುದ್ದೆಯ ಮೇಲೆ ನೀರು ಚಿಮುಕಿಸಿದಾಗ ಅದು ನೂರೊಂದು ಭಾಗಗಳಾಗಿ ಒಡೆದವು. ಒಂದೊಂದೇ ಭಾಗವನ್ನು ತೆಗೆದು ಕುಂಡಗಳಲ್ಲಿ ಇಟ್ಟರು. ಸುರಕ್ಷಿತ ಸ್ಥಳಗಳಲ್ಲಿ ಇರಿಸಿದರು. ಕಾಲಕ್ರಮದಲ್ಲಿ ಆ ಕುಂಡಗಳಿಂದ ಒಂದು ದಿನಕ್ಕೆ ಒಬ್ಬರಂತೆ ನೂರು ಮಕ್ಕಳು ಹೊರ ಬಂದರು.

೨. ಗಾಂಧಾರಿ ಗರ್ಭವನ್ನು ಧರಿಸಿ ಉದರದ ವೃದ್ಧಿಯಿಂದ ಕ್ಲೇಶ ಪಡುತ್ತಿರುವಾಗ ವೈಶ್ಯ ಕನ್ಯೆಯು ಧೃತರಾಷ್ಟ್ರನನ್ನು ಉಪಚರಿಸುತ್ತಿದ್ದಳು. "ಧೃತರಾಷ್ಟ್ರನು ಅವಳ ಸಮಾಗಮವನ್ನು ಮಾಡಿದನು. ವೈಶ್ಯ ಕನ್ಯೆಯಲ್ಲಿ ಅವನಿಗೆ 'ಯುಯುತ್ಸು' ಎಂಬ ಪುತ್ರನು ಜನಿಸಿದನು."

ಸ್ತ್ರೀಗರ್ಭಾಶಯವಿಲ್ಲದೇ ಮಡಿಕೆಗಳಲ್ಲಿ ಮಕ್ಕಳ ಜನನ ಅನೈಸರ್ಗಿಕ ಮತ್ತು ಅವೈಜ್ಞಾನಿಕ. ಇದು ಯಾವುದೋ ಸತ್ಯ ಸಂಗತಿಯನ್ನು ಮರೆಮಾಚುವಂತಿದೆ.

ಗಾಂಧಾರಿಗೆ ನೂರೊಂದು ಮಕ್ಕಳಾದ ವೈಜ್ಞಾನಿಕ ವಿಧಾನವನ್ನು ಈ ಮೊದಲೇ ಪ್ರಮಾಣಸಹಿತವಾಗಿ ವಿಶದೀಕರಿಸಲಾಗಿದೆ.

**ಗಾಂಧಾರಿ ಅಂಧನನ್ನು ವಿವಾಹವಾಗಿದ್ದೇಕೆ?! :**

ಗಾಂಧಾರಿಗೆ ಹತ್ತು ಜನ ಸಹೋದರಿಯರಿದ್ದರು. ಅವರಲ್ಲೆಲ್ಲಾ ಗಾಂಧಾರಿಯೇ ಹಿರಿಯವಳು. ಆಕೆಗೆ ವಿವಾಹವಾಗದೇ ಸಹೋದರಿಯರಿಗೆ ವಿವಾಹವಾಗುವಂತಿಲ್ಲ. ಅವರೆಲ್ಲರ ಒಳಿತಿಗಾಗಿ ಧೃತರಾಷ್ಟ್ರನನ್ನು ವಿವಾಹವಾಗಲು ಒಪ್ಪುತ್ತಾಳೆ. ಆಕೆ ಈ ವಿವಾಹಕ್ಕೆ ಮನಃಪೂರ್ವಕವಾಗಿ ಒಪ್ಪದಿರಲು ಆ ಬೇಸರದಲ್ಲಿಯೇ ಜಿಗುಪ್ಸೆಗೊಂಡು ಅಂಧ ಪತಿಯೊಂದಿಗೆ ಬಾಳ್ವೆ ನಡೆಸಲು ತಾನೂ ಕೂಡಾ ಕಣ್ಣಿಗೆ ಕಪ್ಪು ಬಟ್ಟೆಕಟ್ಟಿಕೊಂಡು ಸಿದ್ಧಳಾದಳು. ಗಾಂಧಾರಿಯ ಹತ್ತೂ ಮಂದಿ ಸಹೋದರಿಯರನ್ನೂ ಧೃತರಾಷ್ಟ್ರನು ತಾನೇ ವಿವಾಹವಾದನು.

ಗಾಂಧಾರ ದೇಶದ ರಾಜ ಸುಬಲನ ಪುತ್ರ ಶಕುನಿ. ಅವನ ಹಿರಿಯ ಸಹೋದರಿಯೇ **ಗಾಂಧಾರಿ**. ಭೀಷ್ಮ ಸುಬಲನ ಪುತ್ರಿ ಗಾಂಧಾರಿಯನ್ನು ಧೃತರಾಷ್ಟ್ರನಿಗೆ **ಪಟ್ಟದ ರಾಣಿ**ಯಾಗಿ ಮಾಡಿಕೊಳ್ಳುವ ಇಚ್ಛೆ ವ್ಯಕ್ತಪಡಿಸಿದ. ಸುಬಲ ಅಂಧ ಧೃತರಾಷ್ಟ್ರನ ಕುಲವನ್ನೂ ಖ್ಯಾತಿಯನ್ನೂ ನೋಡಿ ಮಗಳನ್ನು ಕೊಡಲು ಒಪ್ಪಿದ. ಶಕುನಿ ತಂಗಿಯನ್ನು ಧೃತರಾಷ್ಟ್ರನಿಗೆ ಮದುವೆ ಮಾಡಿಸಿದ. ಜೊತೆಗೆ ಅವಳ ಹತ್ತು ಮಂದಿ ಸಹೋದರಿಯರನ್ನೂ ಮದುವೆ ಮಾಡಿ ಕೊಟ್ಟನು. ಈ ಹತ್ತು ಮಂದಿ ಸೋದರಿಯರು;

| | |
|---|---|
| ೧. ಸತ್ಯವ್ರತೆ | ೬. ಸುಶ್ರವೆ |
| ೨. ಸತ್ಯಸೇನೆ | ೭. ನಿಕೃತಿ |
| ೩. ಸುದೇಷ್ಣೆ | ೮. ಶುಭೆ |
| ೪. ಸಂಹಿತೆ | ೯. ಶಂಬ್ವರೆ |
| ೫. ತೇಜಃಶ್ರವೆ | ೧೦. ದಶಾರ್ಣೆ |

"ಇವರೆಲ್ಲರೂ ಗಾಂಧಾರಿಯೊಂದಿಗೆ **ಹಸ್ತಿನಾವತಿಗೆ** ಬಂದ ಮೇಲೆ ಶಕುನಿಯೂ ಬರುತ್ತಾನೆ."[೨]

**"॥ ತತಃ ಶಾಂತನವೋ ಭೀಷ್ಮೋ ಧನುಃಕ್ರಿತಾಸ್ತತಸ್ತತಃ ।**
**ಆ ಹರದ್ ಧೃತರಾಷ್ಟ್ರಾಯ ರಾಜಪುತ್ರೀಸ್ತತಃ ಶತಮ್ ॥"**

ಗಾಂಧಾರಿಯೊಡನೆ ಆ ಹತ್ತೂ ಕನ್ಯೆಯರನ್ನು ಧೃತರಾಷ್ಟ್ರನು ಒಂದೇ ದಿವಸ ಮದುವೆಯಾದನು. ಆನಂತರ ಶಂತನುವಿನ ಮಗನಾದ ಭೀಷ್ಮನು ಧನುಸ್ಸಿನ ಬಲದಿಂದ ಗೆದ್ದು ಬೇರೆ ಬೇರೆ ನೂರು ರಾಜಪುತ್ರಿಯರನ್ನೂ ತಂದು ಧೃತರಾಷ್ಟ್ರನಿಗೆ ವಿವಾಹವನ್ನು ಮಾಡಿದನು."[೩]

**ನೂರಾರು ಜನ ಮಕ್ಕಳನ್ನು ಒಬ್ಬ ಸ್ತ್ರೀಯು ಹಡೆಯಲು ಸಾಧ್ಯವೇ?! :**

ಒಬ್ಬ ಸ್ತ್ರೀಯು ನೂರು ಮಕ್ಕಳನ್ನು ಹಡೆಯಲು ಸಾಧ್ಯವೇ?! ಈ ಅಂಶವನ್ನು ನಿಜವಾಗಲೂ ವೈಜ್ಞಾನಿಕ ದೃಷ್ಟಿಯಿಂದಲೇ ಚಿಂತಿಸಬೇಕಾಗಿದೆ.

ವೇದಮಂತ್ರಗಳನ್ನು ಬಲ್ಲಂತಹ ಶ್ರೋತ್ರೀಯ ಬ್ರಾಹ್ಮಣರು ಮುತ್ತೈದೆಯರನ್ನು ಈ ಮಂತ್ರ ಹೇಳಿ ಹರಸುವ ಪದ್ಧತಿ ಹಿಂದೆ ರೂಢಿಯಲ್ಲಿತ್ತು.

**ದಶಾಸ್ಯಾಂ ಪುತ್ರಾನಾ ಧೇಹಿ ಪತಿಮೇಕಾದಶಂ ಕೃಧಿ ।**

–ಎನ್ನುವಂತೆ; 'ಅಷ್ಟಪುತ್ರವತೀ ಭವ । ಎನ್ನುವ ಬದಲು ವ್ಯಾಸರು ಇಲ್ಲಿ ಗಾಂಧಾರಿಗೆ **'ದಶಪುತ್ರವತೀ ಭವ ।'** ಎಂದು ಹರಸಿದ್ದಾರೆ. ಅಷ್ಟಕ್ಕೇ ಗಾಂಧಾರಿ ತನಗೆ ನೂರು ಮಕ್ಕಳಾಗಲೆಂದು ಹಟ ಹಿಡಿದಿದ್ದಾಳೆ.

ಗಾಂಧಾರಿ ಪತಿ ಧೃತರಾಷ್ಟ್ರನೊಡನೆ ಮಾಡಿದ ಸಮಾಗಮದಿಂದ ಗರ್ಭವತಿ ಏನೋ ಆದಳು. ಆದರೆ ಸಾಮಾನ್ಯ ಸ್ತ್ರೀಯಂತೆ ಗಾಂಧಾರಿಯು ನವಮಾಸಗಳಲ್ಲಿ ಮಕ್ಕಳನ್ನು ಹಡೆಯಲಿಲ್ಲ. ಎರಡು ವರ್ಷವಾದರೂ ಗಾಂಧಾರಿಗೆ ಪ್ರಸವಿಸಲಿಲ್ಲ. ಕುಂತಿಗೆ ಮಗುವಾದುದನ್ನು ಕೇಳಿ ಮಾತ್ಸರ್ಯದಿಂದ ಗರ್ಭಪಾತ ಮಾಡಿಕೊಂಡಳು. ಹೊರಬಂದ ಗರ್ಭಪಿಂಡ ಒಂದು ಮಾಂಸದ ಮುದ್ದೆಯಂತಿತ್ತು. ಆಕಾರವೂ ಇರಲಿಲ್ಲ. ಅಷ್ಟು ಹೊತ್ತಿಗೆ ಅಲ್ಲಿಗೆ

ಬಂದ ವ್ಯಾಸರನ್ನು ಕಂಡು, "ಮಹರ್ಷೇ! ನೂರು ಮಕ್ಕಳ ತಾಯಿ ಆಗುವ ನಿಮ್ಮ ಆಶೀರ್ವಾದ ಏನಾಯಿತು?" ಎಂದಾಗ; ವ್ಯಾಸರು ತುಪ್ಪದಿಂದ ತುಂಬಿದ ನೂರು ಮಡಿಕೆಗಳನ್ನು ತರಿಸಿ, ಅದರಿಂದ ನೂರು ಮಕ್ಕಳು ಹುಟ್ಟುವಂತೆ ಮಾಡುತ್ತಾರೆಂದು ಆದಿಪರ್ವ ೧೧೫ನೇ ಅಧ್ಯಾಯದಲ್ಲಿ ಹೇಳಿದೆ.

ಇದು ಅನೈಸರ್ಗಿಕ ಹಾಗೂ ಅವೈಜ್ಞಾನಿಕ ವಿಧಾನವೆನ್ನುವುದರಲ್ಲಿ ಯಾವುದೇ ಸಂಶಯವೂ ಇಲ್ಲ.

**ಈ ಘಟನೆ ರಚಿಸಲು ವ್ಯಾಸರಿಗೆ ಪ್ರೇರಣೆಯಾದ ಹಿನ್ನೆಲೆ ಋಗ್ವೇದ :**

ಅದಿತಿಗೆ ಅಷ್ಟಪುತ್ರರು. ಏಳು ಜನರೂ ಹೋಗಿ ದೇವತೆಗಳನ್ನು ಸೇರುತ್ತಾರೆ. ಎಂಟನೇ ಮಗುವೇ ಮಾರ್ತಾಂಡ! ಈತನಿಗೆ ಪೂರ್ಣವಾದ ಮನುಷ್ಯ ರೂಪ ಇರಲಿಲ್ಲ. ಒಂದು ಎತ್ತರವಾದ ಸ್ಥೂಲವಾದ ದೇಹದ ಮುದ್ದೆಯಾಗಿತ್ತು. ದೇವತಾರೂಪ ಹೊಂದಿದ ಏಳು ಪುತ್ರರೂ ಆ ಪಿಂಡವು ವ್ಯರ್ಥವಾಗ ಬಾರದೆಂದು ಪುರುಷ ರೂಪಕ್ಕೆ ತರಲು ಅನವಶ್ಯಕವಾಗಿದ್ದ ಅವಯವ ನಿರ್ಮಾಣಕ್ಕೆ ಬೇಡವಾದ ಪಿಂಡದ ಭಾಗಗಳನ್ನೂ ಕತ್ತರಿಸಿ ಹಾಕುತ್ತಾರೆ. "ಪುರುಷ ರೂಪ ಪಡೆದ ಆ ಮನುಷ್ಯನೇ **ವಿವಸ್ವಂತ.**"[೧] ಈ ಪ್ರಕರಣದ ನಂತರ ವ್ಯಾಸರು ಗಾಂಧಾರಿಯ ಎರಡು ವರ್ಷ ನಂತರ ದೊರೆತ ಪಿಂಡವನ್ನು ಚೂರು ಚೂರು ಮಾಡಿ ಮಡಿಕೆಗಳಲ್ಲಿ ಹಾಕಿ ಮಕ್ಕಳನ್ನು ಮಾಡಲು ಪ್ರೇರಣೆಯಾಗಿದೆ.

**ಸಿದ್ಧಾಂತ ನಿರೂಪಣೆ :**

ಮಹಾಭಾರತದಲ್ಲಿ **'ಸಂತಾನ'** ಪ್ರಾಪ್ತಿಯ ಅಂದಿನ ವಿವಿಧ ವಿಧಾನಗಳನ್ನು ಇಂದು ನೋಡಿದರೆ ಅವೆಲ್ಲವೂ ಅನೈಸರ್ಗಿಕವಾದುದು, ಅಪ್ರಾಕೃತವೆಂದೂ ಧಾರಾಳವಾಗಿ ಹೇಳಬಹುದು. ಹಾಗಾದರೆ ಇಂತಹ ವಿಚಿತ್ರ ಶಿಶುಜನನಕ್ಕೆ ಕಾರಣವೇನು? ಇಲ್ಲಿ ಏನನ್ನೋ ಮುಚ್ಚಿಡುವ ಹುನ್ನಾರ ಖಂಡಿತವಾಗಿಯೂ, ಸ್ಪಷ್ಟವಾಗಿಯೂ ಇರುವುದು ಎದ್ದು ಕಾಣುತ್ತದೆ. ಈ 'ಸತ್ಯ'ವನ್ನು ಮುಚ್ಚಿಡುವ ಧಾರ್ಷ್ಟ್ಯ ಯಾರಿಗಿದೆ? ಅಂದಿನ ಋಷಿಗಳಿಗೆ, ಪುರಾಣಿಕರಿಗೆ ಮಾತ್ರ ಇದು ಸಾಧ್ಯವಾಗಿದ್ದುದು.

ಮಹಾಭಾರತದಲ್ಲಿ ನಡೆದಿರುವ ಹಲವಾರು ಕೃತಕ, ಅನೈಸರ್ಗಿಕ, ಅವೈಜ್ಞಾನಿಕ ಘಟನೆಗಳನ್ನು ನೈಜಘಟನೆಗಳೆಂಬಂತೆ ಹೇಳುವ ಕಲೆ ಸಿದ್ಧಿಸಿದ್ದು ಅಂದಿನ ಕವಿ–ಪುರಾಣಿಕರಿಗೆ ಮಾತ್ರ. ಯಾವುದು ಶಾಸ್ತ್ರಸಿದ್ಧವಲ್ಲದಿದ್ದರೂ, ಲೋಕ ಸಿದ್ಧವಲ್ಲದಿದ್ದರೂ ಪರಂಪರೆಯ ಮೂಲಕ ಕವಿಗಳಿಂದ ಪ್ರಯುಕ್ತವಾಗುತ್ತಿರುವುದೋ ಅದೇ **"ಕವಿಸಮಯ"**. "ಕವಿಗೆ ಇರುವ ಮುಖ್ಯ ಗಮನವೆಲ್ಲಾ ವಸ್ತುಸತ್ಯದ ಕಡೆಗಲ್ಲ; **ಪ್ರಾತಿಭ ಸತ್ಯದ ಕಡೆಗೆ.** ಪ್ರತಿಭಾ ಸೌಂದರ್ಯವೇ ಸೌಂದರ್ಯ. ವಸ್ತು ಸತ್ಯದ ದೃಷ್ಟಿಯಿಂದ ಯಾವುದು ತಪ್ಪೋ ಅದೇ ಸೌಂದರ್ಯದ ದೃಷ್ಟಿಯಿಂದ **'ಸರಿ'** ಎನಿಸಿ ಪ್ರತಿಭಾಸೌಂದರ್ಯವನ್ನು ತಳೆಯಬಹುದು. ಹೀಗೆ ಕವಿ ಸಮಯಗಳಿಗೆ ತಮ್ಮದೇ ಆದ ಒಂದು ಕ್ಷೇತ್ರವುಂಟು."[೨] ಇದೇ ಕಾರಣವನ್ನು ನಾವು ಮಹಾಭಾರತದ ಹಲವಾರು ಶಿಶು ಜನನಗಳ ಪ್ರಯೋಗಗಳನ್ನು ಕವಿ–ಪುರಾಣಿಕರ ಪರಂಪರೆಯೇ ಅಸ್ತಿತ್ವಕ್ಕೆ ತಂದಿರುವುದನ್ನು ಕಾಣಬಹುದು.

**ಮಹಾಭಾರತದಲ್ಲಿ 'ಕವಿಸಮಯ'. :**

ಇದಕ್ಕೆ ಕಾರಣವನ್ನು ಪ್ರಾಚೀನ ಕಾವ್ಯಮೀಮಾಂಸಕ ರಾಜಶೇಖರ, "ವೇದಕಾಲವಾಗಲೀ, ಮಹಾಭಾರತ ಕಾಲವಾಗಲೀ, ಆ ಕಾಲದಲ್ಲಿದ್ದ ಮೊದಲಿನ ವಿದ್ವಾಂಸರು ತಾವು ಕಂಡ ವಿಷಯಗಳನ್ನು ತಾವು ಕಂಡಂತೆಯೇ ಬರೆದಿದ್ದರೂ ಕೂಡಾ ಕಾಲಾನಂತರ, ದೇಶಾನಂತರದ ಪ್ರಭಾವದಿಂದ ಈಗ ಅದು ಅನ್ಯಥಾ ತೋರಬಹುದು. ಕವಿಸಮಯದಲ್ಲಿ ಮುಖ್ಯವಾಗಿ ಮೂರು ಬಗೆಗಳು; **ಸ್ವರ್ಗ, ಭೌಮ ಮತ್ತು ಪಾತಲೀಯ :**

ಇಲ್ಲಿ **'ಭೌಮ್ಯ'** ಪ್ರಧಾನವಾದುದು. ಯಾಕೆಂದರೆ ಇದರ ವ್ಯಾಪ್ತಿ ಬಹಳ ವಿಶಾಲವಾದುದು.

೧. ಇಲ್ಲವಾದದ್ದನ್ನು ಇದೆಯೆಂದು ಸಾಧಿಸುವುದು.

೨. ಇರುವುದನ್ನು ವರ್ಣಿಸದೇ ಬಿಡುವುದು.

ಇಲ್ಲಿ ಒಂದನೆಯ ಅಂಶಕ್ಕೆ ದೃಷ್ಟಾಂತ **ಗಾಂಧಾರಿಯ ಗರ್ಭಧಾರಣೆ :**

**ಎರಡು ವರ್ಷವಾದರೂ ಗರ್ಭಧರಿಸುವುದು,** ನಂತರ ಬೇಸರಗೊಂಡು ಗರ್ಭವನ್ನು ತಾನೇ ಒಡೆದು ತೆಗೆಯುವುದು. ಒಂದೇ ಪಿಂಡವನ್ನು ನೂರು ಚೂರುಗಳಾಗಿ ಮಾಡಿ ತುಪ್ಪದ ಮಡಿಕೆಗಳಲ್ಲಿ ಹಾಕಿ ಇನ್ನೂ ಎರಡು ವರ್ಷಗಳ ನಂತರ ನೂರು ಮಕ್ಕಳನ್ನು ಪಡೆಯುವುದು.

ಇಲ್ಲಿ ಕಾರ್ಯ-ಕಾರಣ ಸಂಬಂಧಕ್ಕೆ ವಿರೋಧವಿದೆ. 'ಪವಾಡಗಳು' ಘಟಿಸುತ್ತವೆ. 'ಭವಿಷ್ಯ'ವನ್ನು 'ಖಣಿ' ನಡಿಯಬಹುದು, ಶೂನ್ಯದಿಂದ ವಸ್ತು ಸೃಷ್ಟಿ ಸಾಧ್ಯ, ವಾಯು ಲಗಿಮಾ ಸಾಧನೀಯ ಮುಂತಾದ ನಂಬಿಕೆಗಳು ಪೂರ್ತಿಯಾಗಿ **ಅವೈಚಾರಿಕ**. ಏಕೆಂದರೆ ನಿಸರ್ಗದ ಆಧಾರ ಶ್ರುತಿಯಾದ ಕಾರ್ಯ-ಕಾರಣ ಸಂಬಂಧವನ್ನು ಇವು ಉಲ್ಲಂಘಿಸುತ್ತವೆ. "ತಿಳಿಯದ ವಿದ್ಯಮಾನವನ್ನು ತಿಳಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುವುದು **ವೈಚಾರಿಕತೆಯ ಲಕ್ಷಣ. ಪವಾಡಕ್ಕೆ ತಳುಕು ಹಾಕುವುದು ಕುರುಡು ನಂಬಿಕೆಯ ಚಿಹ್ನೆ.**"[೩]

**ಎರಡನೆಯ ಅಂಶಕ್ಕೆ ಉದಾಹರಣೆ :**

ಕುಂತಿಗೆ ದೂರ್ವಾಸರ ಸಮಾಗಮವಾಗಿ ಒಂಭತ್ತು ತಿಂಗಳ ನಂತರ ಶಿಶು ಹುಟ್ಟಿದ್ದನ್ನು ಮಂತ್ರೋಪದೇಶದಿಂದ ಒಡನೆಯೇ ಹುಟ್ಟಿದ್ದೆಂದು ಹೇಳುವುದು. ಇದು ನಿಸರ್ಗವಿರೋಧವಾದದ್ದು. (ಹೆಚ್ಚಿನ ವಿವರಣೆಯನ್ನು 'ಕುಂತಿ-ಕರ್ಣ'ರ ಪ್ರಸಂಗದಲ್ಲಿ ನೀಡಲಾಗಿದೆ.)

ಭೂಲೋಕದ ಕವಿಸಮಯ ಸ್ವರ್ಗಲೋಕಕ್ಕೂ ಅನ್ವಯಿಸಿರುವುದನ್ನು ಮಹಾಭಾರತದ ಆದಿಪರ್ವದಲ್ಲಿ ನೋಡುತ್ತೇವೆ.

೧. ಮೀನಿನ ರೂಪ ಧರಿಸಿದ ಅಪ್ಸರೆ ಶಿಶುಗಳನ್ನು ಬಿಟ್ಟು ಸ್ವರ್ಗಾರೋಹಣ ಮಾಡುತ್ತಾಳೆ ಎನ್ನುವುದು.

೨. ರಾಜರ್ಷಿಯಾದ ಮಹಾಭಿಷ ಮತ್ತು ಗಂಗಾದೇವಿಯರು ಶಾಪಗ್ರಸ್ತರಾಗಿ ಭೂಲೋಕದಲ್ಲಿ ಜನಿಸುವುದು.

೩. ಸ್ವರ್ಗವಾಸಿಗಳಾದ ವಸುಗಳು ಭೂಲೋಕಕ್ಕೆ ಬರುವುದು ಇತ್ಯಾದಿ.

ಇಲ್ಲಿ ಗಾಂಧಾರಿಗೆ ನೂರು ಜನ ಮಕ್ಕಳಾದರು ಎಂದು ಹೇಳುತ್ತಾ ಸತ್ಯವನ್ನು ಮರೆ ಮಾಚಿರುವುದು ಮೇಲುನೋಟಕ್ಕೆ ವೇದ್ಯವಾಗುವುದು. ಒಬ್ಬ ಸ್ತ್ರೀಗೆ ನೂರು ಮಂದಿ ಮಕ್ಕಳು ಜನಿಸುವುದು ಸಾಧ್ಯವೆಂದು ನೂರು ಮಡಿಕೆಗಳ ಕಾರಣವನ್ನು ನೀಡಲಾಗಿದೆ. ಇದಕ್ಕೆ 'ಕುಂಭಸ್ತ್ರೀ ಗರ್ಭಾಶಯದ ಪ್ರತಿರೂಪ'ವಾಗಿರುವುದು.

**ಅನುಭಾವಿಗಳು** ಯಾವ ವಸ್ತುವನ್ನು **ಗುರು** ಮತ್ತು **ಶಿವ** ಎಂದು ಕಾಣುವರೋ ಅದನ್ನೇ **ವಿಜ್ಞಾನಿಗಳು ನಿಸರ್ಗ** ಮತ್ತು ನಿಸರ್ಗಾಂತರರ್ಗತ ಬಲ ಎಂದು ಗುರ್ತಿಸಿರುವರು. ವಸ್ತು ಒಂದೇ ದೃಷ್ಟಿ ಬೇರೆ. "**ವಿಶ್ವ ನಿಯಮಕ್ಕೆ ಯಾರೂ** ಎಂಥ ಅಧಿಕಾರರೂಢರೇ ಆಗಿರಲಿ **ದೇವಮಾನವರೇ** ಆಗಿರಲಿ ಅಪವಾದ ಅಲ್ಲ."[೪] ಎಂದಿರುವುದನ್ನು ಮಹಾಭಾರತ ಧೃಷ್ಟಾಂತ ದೃಢಪಡಿಸುತ್ತದೆ.

ಗಾಂಧಾರಿಯು ಗರ್ಭವನ್ನು ಧರಿಸಿ ಉದರದ ವೃದ್ಧಿಯಿಂದ ಕ್ಲೇಶ ಪಡುತ್ತಿರುವಾಗ "**ವೇಶ್ಯೆಕನ್ಯೆಯು** ಧೃತರಾಷ್ಟ್ರನ ಪರಿಚರಿಸುತ್ತಿದ್ದವಳು ಆತನ ಸಮಾಗಮದೊಂದಿಗೆ 'ಯುಯುತ್ಸು' ಎಂಬ ಪುತ್ರನನ್ನು ಪಡೆದಳು."[೫]

"॥ಗಾಂಧಾರ್ಯಾಂ ಕ್ಲಿಶ್ಯಮಾನಾಯಾಂ ವರ್ಧಮಾನೇ ತಥೋದರೇ ।
ವೈಶ್ಯಾ ಸಾತ್ವಂಬಕಾಪುತ್ರಂ ಕನ್ಯಾ ಪರಿಚರಾಹಯಾ ॥
ತಯಾ ಸಮಭವದ್ ರಾಜಾಧೃತರಾಷ್ಟ್ರೋ ಯದೃಚ್ಛ ।
ತಸ್ಯಾಯ ಜನಯತ್ ಪುತ್ರಂ ಯುಯುತ್ಸಂ ನಾಮ ಭಾರತ ॥"

ಗಾಂಧಾರಿ ಗರ್ಭಧಾರಣೆಯಾಗಿ ಎರಡು ವರ್ಷಗಳ ಕಾಲ ಇರುತ್ತಾಳೆ.

ಈ ಮಧ್ಯೆ ಧೃತರಾಷ್ಟ್ರನಿಗೆ ಗಾಂಧಾರಿಯೊಂದಿಗೆ ಅವಳ ಹತ್ತು ಜನ ತಂಗಿಯರೂ ಪಾಣಿಗ್ರಹಣವಾಗುತ್ತದೆ. ಅಷ್ಟೇ ಅಲ್ಲ; ಭೀಷ್ಮ ಧೃತರಾಷ್ಟ್ರನಿಗೆ ನೂರು ಮಂದಿ ಕನ್ಯೆಯರನ್ನು ತಂದು ವಿವಾಹ ಮಾಡುತ್ತಾನೆ.

ಆಧುನಿಕ ವೈದ್ಯಕೀಯ ವಿಜ್ಞಾನ ಮತ್ತು ತಂತ್ರಜ್ಞಾನಗಳ ಪ್ರಕಾರ ಸ್ತ್ರೀಯು ಗರ್ಭವನ್ನು ಧರಿಸಿದ ಒಂಭತ್ತು ತಿಂಗಳ ನಂತರ ಕೂಡಲೇ ಪ್ರಸವವಾಗಲೇ ಬೇಕು. ಹಾಗಾಗಲು ಒಂದುವೇಳೆ ಸಾಧ್ಯವಾಗದಿದ್ದಲ್ಲಿ ಪ್ರಸೂತಿ ವೈದ್ಯಕೀಯ ವಿಜ್ಞಾನ ಕ್ಷೇತ್ರದಲ್ಲಿ ನುರಿತ ವೈದ್ಯರು ಶಸ್ತ್ರಚಿಕಿತ್ಸೆಯ ಮೂಲಕ ಗರ್ಭದಿಂದ ಶಿಶುವನ್ನು ಹೊರತೆಗೆಯುತ್ತಾರೆ.

"ಎರಡು ವರ್ಷವಾದರೂ ಪ್ರಸವವಾಗದ ಗಾಂಧಾರಿಯು ತನ್ನ ಗರ್ಭವನ್ನು ತಾನೇ ಕುಟ್ಟಿಕೊಳ್ಳುತ್ತಾಳೆ."[೬] ಅಂದ ಮೇಲೆ ಆಕೆಯ ಗರ್ಭಕೋಶ ಸಂಪೂರ್ಣ ಹಾಳಾಗಿ ಆಕೆ ಮುಂದೆಂದಿಗೂ ಗರ್ಭವತಿಯಾಗುವಂತಹ ಅವಕಾಶವಿಲ್ಲದೇ 'ಬಂಜೆ'ಯಾಗಿಯೇ ಉಳಿಯುತ್ತಾಳೆ ಎನ್ನುವುದೊಂದು ಅತೀ ಗಮನಿಸಲೇ ಬೇಕಾದಂತಹ ಗಮನಾರ್ಹವಾದ ಅಂಶ.

ಅತೀ ಸುಂದರಿಯೂ ಹಾಗೂ ಸುಶೀಲೆಯಾದ ಗಾಂಧಾರಿ ತನ್ನ ಪತಿಯು ಪ್ರಜ್ಞಾ ನೇತ್ರವಾಗಿರುವವನು ಎಂದು ತಿಳಿದ ಗಾಂಧಾರಿಯು ಯಾವ ವಿಷಯದಲ್ಲಿಯೂ ಅವನನ್ನು ಅತಿಕ್ರಮಿಸುವುದಕ್ಕೆ ಹೆದರಿ ಮನಸ್ಸಿನಲ್ಲೇ ಚಿಂತಿಸಿ ತನ್ನ ದೃಷ್ಟಿಯನ್ನೂ ವಸ್ತ್ರದಿಂದ ಆಚ್ಛಾದನೆ ಮಾಡಿ ತನ್ನ ಪತಿಗೆ ಸಮಾನಳಾದಳು. ಗಾಂಧಾರಿಯು ಅತ್ಯಂತ ಸೂಕ್ಷ್ಮವಾದ ವಿಷಯದಲ್ಲಿಯೂ ಎಂದೂ ತನ್ನ ಪತಿಯನ್ನು ಮೀರಿರಲಿಲ್ಲ. ಪತಿವ್ರತಾ ಪರಾಯಣೆಯಾದ ಅವಳು ತನ್ನ ಬಾಯಿಯಿಂದಲೂ ಸಹ ಪರಪುರುಷರ ಹೆಸರನ್ನು ಹೇಳುತ್ತಿರಲಿಲ್ಲ. "ಭೀಷ್ಮರು ಗಾಂಧಾರಿಯ ತಂಗಿಯರಾದ ಕನ್ಯೆಯರನ್ನು ಧೃತರಾಷ್ಟ್ರನಿಗೆ ವಿವಾಹ ಮಾಡಿದ್ದಲ್ಲದೇ, ತನ್ನ ಧನುಸ್ಸಿನ ಬಲದಿಂದ ಗೆದ್ದು ಬೇರೆ ಬೇರೆ ನೂರು ರಾಜಪುತ್ರಿಯರನ್ನು ತಂದು ವಿವಾಹ ಮಾಡಿದ್ದನು."[೭] ಈ ನೂರ ಹತ್ತು ಮಂದಿ ಪತ್ನಿಯರಲ್ಲಿ ಧೃತರಾಷ್ಟ್ರನಿಗೆ ನೂರ ಎರಡು ಜನ ಮಕ್ಕಳಾಗಿದ್ದಾರೆ. ಅಂತೂ ಗಾಂಧಾರಿಗೆ ವ್ಯಾಸರು ಆಶೀರ್ವದಿಸಿದ ನೂರು ಪುತ್ರರು ಜನಿಸಿದ್ದಾರೆಂಬ ಬಯಕೆ ಫಲಿಸಿದೆ. ತನ್ನ ಪತಿಗೆ ವೇಶ್ಯೆ ಪರಿಚಾರಿಕೆಯಲ್ಲಿ ಯುಯುತ್ಸು ಹುಟ್ಟಿದ್ದನ್ನು ಒಪ್ಪಿದವಳು, ತನಗಿಲ್ಲದ ಭಾಗ್ಯವನ್ನು ನೂರು ಜನ ಪತ್ನಿಯರು ಮಕ್ಕಳನ್ನು ಪ್ರಸವಿಸಿದ್ದಾರೆಂದು ತಿಳಿದರೂ ಆಕೆಗೆ ತನ್ನ ಪತಿಯಲ್ಲೇನೂ ತಪ್ಪು ಕಾಣುವುದಿಲ್ಲ.

**ವಿಶ್ಲೇಷಣೆ :**

ವ್ಯಾಸ ಋಷಿಗಳು ಗಾಂಧಾರಿಯ ಗರ್ಭಪಿಂಡಕ್ಕೆ ಶೀತೋದಕವನ್ನು ಸಂಪ್ರೋಕ್ಷಿಸಿದಾಗಲೂ ಸಹ ಅದು ನೂರು ವಿಭಾಗಗಳಾಗಿ ಒಡೆಯಿತೆಂದೂ ಹೇಳಿದಿರಿ. **"ಗರ್ಭಪಾತದ ನಂತರ ಗಾಂಧಾರಿಯು ಪುನಃ ಗರ್ಭಿಣಿಯೂ ಆಗಲಿಲ್ಲ ಹೆಣ್ಣು ಮಗುವನ್ನು ಪ್ರಸವಿಸಲಿಲ್ಲ. ಇಂತಹ ಸಂದರ್ಭದಲ್ಲಿ ದುಃಶಲೆಯು ಹೇಗೆ ತಾನೇ ಹುಟ್ಟಿದಳು?"**[೮] ಎನ್ನುವ ಸಮಸ್ಯೆ ಎದ್ದಿದೆ.

'ಮಹಾಭಾರತ'ದಲ್ಲೇ ಉಲ್ಲೇಖಿಸಿರುವ ಈ ಮಾತು ಮೇಲೆ ನಾನೀಗಾಗಲೇ ಹೇಳಿರುವಂತೆ ಗಾಂಧಾರಿ ಮತ್ತೆ ಗರ್ಭಿಣಿ ಆಗುವುದಿಲ್ಲವೆಂದು ಹೇಳಿರುವುದನ್ನೇ ಪುಷ್ಟೀಕರಿಸುತ್ತದೆ.

ವೈಶ್ಯೆ ಅಥವಾ ದಾಸೀ ಎಂದು ಕರೆಯಬಹುದಾದ ಸ್ತ್ರೀಯಲ್ಲಿ ಯುಯುತ್ಸು ಹುಟ್ಟುತ್ತಾನೆ.

ದುಃಶಲೆ ಗಾಂಧಾರಿ ತಂಗಿಯರಲ್ಲಿ ಯಾರೋ ಒಬ್ಬಳಿಗೆ ಹುಟ್ಟುತ್ತಾಳೆ. ಅದೇರೀತಿ ದುರ್ಯೋಧನನೂ ಕೂಡಾ ನೂರು ಪತ್ನಿಯರಲ್ಲಿ ಯಾರಾದರೊಬ್ಬ ತಂಗಿಗೆ ಹುಟ್ಟಿದ ಮಗನಾಗಿರುತ್ತಾನೆ. ಅದರ ವಿವರಗಳಿಲ್ಲ.

ನೂರೆರಡು ಕೌರವರು ಸ್ವತಃ ತಾನು ಬಂಜೆಯಾದ ಗಾಂಧಾರಿಯ ಹತ್ತು ಜನ ತಂಗಿಯರು ಮತ್ತು ಭೀಷ್ಮ ಗೆದ್ದು ತಂದು ಧೃತರಾಷ್ಟ್ರನಿಗೆ ವಿವಾಹ ಮಾಡಿಸಿದ ನೂರು ಪತ್ನಿಯರ ಪುತ್ರರೆನ್ನುವುದು ನನ್ನ ಈ ಅಧ್ಯಯನದಿಂದ ರೂಪಿತವಾಗಿರುವ ಸಿದ್ಧಾಂತ.

**ಅಡಿಟಿಪ್ಪಣಿಗಳು :**

೧. ಋ.ಸಂ. ಭಾ–೨೭, ಪು. ೫೩೬

೨. ಡಾ॥. ಕೆ. ಕೃಷ್ಣಮೂರ್ತಿ, ಕನ್ನಡ ಕಾವ್ಯಮೀಮಾಂಸೆ, ಪು. ೧೬೯.

೩. ಜಿ.ಟಿ. ನಾರಾಯಣ, 'ವಿಜ್ಞಾನ ವರ್ತಮಾನ, ಪು. ೭೮.

೪. –– ಅದೇ ––, ಪು. ೮೦.

೫. ಮ.ಭಾ. ತತ್ವ ಸಂಶೋಧನ ಸಂಸತ್, ಪು. ೫೮೮

೬. ಶ್ರೀಮ.ಭಾ.ಭಾ–೨, ಪು. ೫೭೭

೭. ––ಅದೇ––, ಪು. ೪೮೪, ೪೮೫.

೮. ಶ್ರೀಮ.ಭಾ.ಭಾ–೨, ಪು. ೭೬೮.

~~~\*\*\*~~~

## 12. ಪ್ರಸವವಾದ ಕೂಡಲೇ ಕನ್ಯಾವಸ್ಥೆಯು ಪ್ರಾಪ್ತಿಯಾಗುವುದು! :

### ಸತ್ಯವತಿ ಮತ್ತು ಕುಂತಿಯ ಉದಾಹರಣೆಗಳು:

ಶಿಶು ಜನನವಾದೊಡನೆ ಸ್ತ್ರೀ ಮರುಕ್ಷಣವೇ 'ಕನ್ಯಾವಸ್ಥೆ'ಗೆ ಬರುವುದು ನೈಸರ್ಗಿಕವಾಗಿಯಾಗಲೀ, ವೈಜ್ಞಾನಿಕವಾಗಿಯಾಗಲೀ ಸಾಧ್ಯವಿಲ್ಲ. ಇದು ವೈದ್ಯಕೀಯ ತಂತ್ರಜ್ಞಾನದಿಂದಲೂ ಸಾಧ್ಯವಿಲ್ಲದ ಮಾತು.

೧. ಪರಾಶರರು–ಸತ್ಯವತಿಯ ಸಮಾಗಮವನ್ನು ಬಯಸಿದಾಗ ಸತ್ಯವತಿಯು, 'ನಿಮ್ಮ ಸಮಾಗಮದಿಂದ ನನ್ನ ಕನ್ಯಾಭಾವವು ದೂಷಿತವಾಗುತ್ತದೆ.' ಎಂದಾಗ ಪರಾಶರರು, **"ಎಲೈ ಸುಂದರಿಯೇ ನನಗೆ ಪ್ರಿಯವನ್ನು ಉಂಟು ಮಾಡುವುದರಿಂದ ನೀನು ಪುನಃ ಕನ್ಯೆಯೇ ಆಗುತ್ತೀಯೆ."**[೧] ಎನ್ನುತ್ತಾರೆ.

೨. ಸೂರ್ಯನು ಕುಂತಿಯ ಸಮಾಗಮವನ್ನು ಬಯಸಿದಾಗ, ಕುಂತಿಯು, 'ನಾನು ಕನ್ಯಾಭಾವವನ್ನು ಕಳೆದುಕೊಂಡರೆ, ಅಪರಿಹಾರ್ಯವಾದ ದೋಷವಾಗುತ್ತದೆ.' ಎಂದಾಗ ಸೂರ್ಯನು ಮತ್ತೆ 'ನನ್ನ ಅನುಮತಿಯಿಂದ ನೀನು ಪುನಃ ಕನ್ಯೆಯೇ ಆಗುವಿ.'[೨] ಎನ್ನುತ್ತಾನೆ. ತಾನಿನ್ನು ನಿರಾಕರಿಸಿದರೆ ಎಲ್ಲಿ ಕ್ರೋಧಾವಿಷ್ಟನಾಗಿ ತಮ್ಮ ಕುಲವನ್ನೇ ಸುಟ್ಟು ಬಿಡುತ್ತಾನೋ ಎಂದು ಭಯಭೀತಳಾಗುತ್ತಾಳೆ.

"ಮಾನವನ ಇತಿಹಾಸ ಅರುಣೋದಯದಲ್ಲಿ ಜಗತ್ತಿನ ಮೂಲ ತತ್ವದ ತತ್ವ ಜಿಜ್ಞಾಸೆಯು ಒಂದೊಂದು ಸಲ ಜಗತ್ತಿನ ಸೃಷ್ಟಿ ಸ್ಥಿತಿಗಳು ಅನಾದಿಯಾದ **ಭೌತಶಕ್ತಿ**ಯ ಸ್ವಾಭಾವಿಕವಾದ ಪರಿಣಾಮಗಳೆಂದೂ, ಇನ್ನು ಕೆಲವು ಸಲ ಕೆಲವು ಅಸಾಧಾರಣವಾದ ಬುದ್ಧಿಗೆ **ಆಧ್ಯಾತ್ಮಿಕ ತತ್ವ**ವೆ ಜಗತ್ತಿನ ವ್ಯವಹಾರಗಳಿಗೆಲ್ಲಾ ಮೂಲವೆಮದು ಭಾಸವಾಗುತ್ತದೆ."[೩]

### ಶಿಶು ಜನನ :

"ಮಹಾಭಾರತ"ದಲ್ಲಿ ಹಲವಾರು ಅನೈತಿಕ, ಅನೈಸರ್ಗಿಕ "ಶಿಶು ಜನನ"ದ ಪ್ರಸಂಗಗಳಿವೆ. ನಿಯಮಬದ್ಧವಾದ ಪ್ರಕೃತಿಯ ವ್ಯವಹಾರಗಳಿಗೂ ಒಂದು ಚಿದಾತ್ಮಕವಾದ ತತ್ವದ ಸುಸಂಘಟಿತವಾದ ಸಂಕಲ್ಪವೂ, ನಿಯಮ ವ್ಯವಸ್ಥೆಯೂ ಇದ್ದೇ ತೀರಬೇಕು. "ನಿಯಮಬದ್ಧವಾದ ಜಗದ್ವ್ಯಹಾರಗಳಿಗೆ ಅಂಧರೂಪವೂ ಮೂಲವಾಗಿರಲು ಸಾಧ್ಯವಿಲ್ಲ."[೪] ಎಂದು ಧೃಷ್ಟಗಳಾದ ಋಷಿಗಳೇ ಹೇಳುತ್ತಾರೆ.
~~~

ಋಷಿಗಳು; ಆಯಾ ಋಷಿಗಳು ತಮ್ಮದೇ ಆದ ಸಾಂಪ್ರದಾಯಿಕವೂ ವೈಯಕ್ತಿಕವಾದ ಭಾವನೆಗಳನ್ನು ಪ್ರಕಾಶಪಡಿಸಿದ್ದಾರೆ. ಪ್ರಕೃತಿ ಸಂಪತ್ತಿನ ವೈವಿಧ್ಯದಿಂದ ಕೂಡಿದ ಸನ್ನಿವೇಶಗಳು ಈ ಋಷಿಗಳ ಮನಸ್ಸಿನಲ್ಲಿ ಬಾಹ್ಯ ಪ್ರಪಂಚದ ವೈವಿಧ್ಯದ ಸತ್ಯತೆಯನ್ನು ತೋರಿಸಲು ತಮ್ಮ ಪ್ರಭಾವವನ್ನು ಬೀರಿರಬೇಕು. ಋಷಿಗಳ ಕಲ್ಪನಾಶಕ್ತಿಗಳು ಒಂದೊಂದು ಅಂಶವನ್ನು ಒಂದೊಂದು ವಿಧವಾಗಿ ವರ್ಣಿಸತೊಡಗಿದವು. ಒಂದು ಕಡೆ **ನಕ್ಷತ್ರಭರಿತವಾದ ಅಂತರಿಕ್ಷ,** ಮತ್ತೊಂದು ಕಡೆ ಅಂತರಿಕ್ಷದಲ್ಲಿ ಸಂಚರಿಸತಕ್ಕ **ಆದಿತ್ಯ ಪರಿಭ್ರಮಣ,** ಇನ್ನೊಂದು ಕಡೆ ನಾನಾ ರೂಪವನ್ನು ಹೊಂದಿ ಪೃಥಿವ್ಯಂತರಿಕ್ಷಗಳ ನಡುವೆ ಸಂಚರಿಸತಕ್ಕಂತಹ **ಮೇಘಗಳು** ಮತ್ತು ಅವುಗಳಲ್ಲಿ ಉತ್ಪನ್ನವಾಗುವ **ವಿದ್ಯುತ್ ಪ್ರಕಾಶ ಮತ್ತು ಅದರ ಪ್ರಭಾವ** –ಹೀಗೆ ಒಂದೊಂದು ಸನ್ನಿವೇಶವೂ ಒಂದೊಂದು ವೈಶಿಷ್ಟ್ಯತೆಯನ್ನು ಪ್ರಕಾಶಪಡಿಸುವುದರ ಪರಿಣಾಮವಾಗಿ **ಋಷಿಗಳ ಭಾವಗಳು ಶ್ರದ್ಧಾಭಕ್ತಿಗಳಿಂದ ಕೂಡಿದ್ದು ಆಯಾ ಶಕ್ತಿಗಳನ್ನು ಆರಾಧಿಸತೊಡಗಿದವು.** ಆಯಾ ಶಕ್ತಿಗಳನ್ನು ಪ್ರತಿಬಿಂಬಿಸತಕ್ಕ **ದೇವತಾ ಕಲ್ಪನೆಗಳೂ** ಸಾಧ್ಯವಾದವು. "ಪ್ರತಿ ದೇವತೆಯನ್ನೂ ಒಬ್ಬೊಬ್ಬ ಋಷಿಯು ಒಂದೊಂದು ವಿಧವಾಗಿ ಸ್ತುತಿಸಿದ್ದಾರೆ. ಆದರೆ ದೇವತೆಗಳ ಮೂಲ ತತ್ವಗಳಲ್ಲಿ ಭಾವ–ಭೇದಗಳಿಲ್ಲ."[೫]

ದೂರ್ವಾಸ ಋಷಿಯು ಕುಂತಿಯ ಸಮಾಗಮದ ಸಂದರ್ಭದಲ್ಲಿ ಮಾಡಿದ ಮಂತ್ರೋಪದೇಶದ ಹಿನ್ನೆಲೆಯೂ ಇದೇ ಆಗಿದೆ.

ಪುರಾಣಿಕರು ಪುರಾಣಗಳನ್ನು ರಚಿಸಲು, ಸೃಷ್ಟಿಸಿದ 'ಪುರಾಣ ಪುರುಷನ ಒಡಲು ಅವನ ಸ್ಥೂಲಗಾತ್ರವು. ಚರಿತ್ರೆಯಿಂದ ಬಂದದ್ದಾಗಿರುತ್ತದೆ. "ಕವಿಯು ಒಬ್ಬ ಚಾರಿತ್ರಿಕ ವ್ಯಕ್ತಿಯನ್ನು ತನ್ನ ನಾಯಕನಾಗಿ ಆರಿಸಿಕೊಂಡರೆ ಅವನು ಉದ್ದೇಶಿಸಿರುವ ಕಾರ್ಯಕ್ಕೆ ತಕ್ಕ ಪೂರ್ವ ಸಿದ್ಧತೆ ಅದರಿಂದ ಒದಗುತ್ತದೆ."[೬]

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಹಾಭಾರತ ಭಾ–೧, ಪು.೫೩೮

೨. --ಅದೇ--, ಪು. ೪೯೪.

೩. ಋ.ಸಂ.ಭಾ–೧೮, ಪು. ೧೩.

೪. --ಅದೇ--

೫. ಋ.ಸಂ. ಭಾ–೧೮, ಪು. ೧೪

೬. ಶ್ರೀಬಂಕಿಮಚಂದ್ರ ಛಟೋಪಾಧ್ಯಾಯ, "ಶ್ರೀಕೃಷ್ಣ ಚರಿತೆ" ಮುನ್ನುಡಿ, ಡಿ.ವಿ.ಜಿ. ಪು. ೧೫.

~~~\*\*\*~~~

## 13. ಯಜ್ಞಕುಂಡದಿಂದ ಮಕ್ಕಳ ಜನನ :

## ದ್ರೌಪದಿ ಧೃಷ್ಟದ್ಯುಮ್ನ

ದಶರಥ ಪುತ್ರಸಂತಾನಕ್ಕಾಗಿ ಹಂಬಲಿಸುತ್ತಿದ್ದ. ವಂಶದ ಅಭಿವೃದ್ಧಿಗಾಗಿ ಒಬ್ಬ ಮಗನಾದರೂ ಹುಟ್ಟಲಿಲ್ಲ. ಆ ಚಿಂತೆಯಲ್ಲಿರುವಾಗಲೇ ದಶರಥನಿಗೆ; ದೈವಾನುಗ್ರಹದಿಂದಲಾದರೂ ಮಕ್ಕಳನ್ನು ಪಡೆಯುವ ಪ್ರಯತ್ನವನ್ನು ಮಾಡಬಾರದ್ಯಾಕೆ? ಎನಿಸಿ 'ಅಶ್ವಮೇಧ' ಯಾಗವನ್ನಾದರೂ ಮಾಡಿ ಪುತ್ರರನ್ನು ಪಡೆಯುತ್ತೇನೆಂದು ನಿಶ್ಚಯಸಿದ.

**ದೇವರನ್ನು ಯಜ್ಞ–ಯಾಗಾದಿಗಳಲ್ಲಿ ಕಾಣುವ ಕಾಲವದು.**

**ಅಶ್ವಮೇಧವು** ಸಕಲ ಪಾಪಹರವಾದ ಯಜ್ಞ
~~~

**ಸರ್ವಂ ಪಾಪ್ಮಾನಂತರತಿತರತಿ । ಬ್ರಹ್ಮಹತ್ಯಾಂಯೋ~ಶ್ವಮೇಧೇನ ಯಜತೇ ॥**

**–ತೈತ್ತರೀಯ ಸಂಹಿತಾ.**

**ರಾಜಾಸಾರ್ವಭೌಮೋಶ್ವಮೇಧೇನಮಯಜತೆ ।**

**–ಸ್ಮೃತಿ.**

ಈ ರೀತಿಯಲ್ಲಿ ಶ್ರುತಿ–ಸ್ಮೃತಿಗಳಿಗೆ ಅನುಸಾರವಾಗಿ ದಶರಥರಾಜನು ಸರ್ವಪಾಪಗಳ ನಿವಾರಣೆಗಾಗಿ ಅಶ್ವಮೇಧ ಯಾಗವನ್ನು ಮಾಡಲು ನಿಶ್ಚಯಿಸಿದನು.

ಋಷ್ಯಶೃಂಗನ ಪ್ರಧಾನ ಋತ್ವಿಜನಾಗಿ ವಿಧಿವತ್ತಾಗಿ ಹೋಮ ಮಾಡಿದರು. ನಂತರ ಪುತ್ರರನ್ನು ಪಡೆಯುವ ಸಲುವಾಗಿ ಪುತ್ರಪ್ರಾಪ್ತಿಗೆ ಕಾರಣಭೂತವಾದ 'ಪುತ್ರಕಾಮೇಷ್ಟಿ' ಯಾಗವನ್ನು ಋಷ್ಯಶೃಂಗನು ದಶರಥ ಮಹಾರಾಜನಿಗೆ ಮಕ್ಕಳಾಗುವ ಸಲುವಾಗಿ ಹೋಮ ಮಾಡಿಸಿದನು.

ಯಜ್ಞಕುಂಡದ ಮಧ್ಯಭಾಗದಿಂದ ಪ್ರಾದುರ್ಭವಿಸಿದ ದಿವ್ಯಪುರುಷ–ಪ್ರಜಾಪತಿಯು ಪಾಯಸವನ್ನು ಕೊಟ್ಟು 'ಇದನ್ನು ನಿನ್ನ ಪತ್ನಿಯರಿಗೆ ಕೊಡು' ಇದನ್ನು ನಿನ್ನ ಪತ್ನಿಯರಿಗೆ ಕೊಡು ಅವರು ಪುತ್ರೋತ್ಪತ್ತಿಯರಾಗುತ್ತಾರೆಂದು ಹೇಳುತ್ತಾನೆ.

**ಪಾಯಸ ಪುತ್ರೋತ್ಪತ್ತಿಗೆ ಕಾರಣವಾಗುತ್ತದೆ.**

### ಮಹಾಭಾರತದಲ್ಲಿ ಯಜ್ಞಕುಂಡದಿಂದ ಮಕ್ಕಳ ಜನನ :

**'ನ ಪುತ್ರಸ್ಯ ಗತಿರ್ನಾಸ್ತಿ'** ಎಂಬ ಲೋಕೋಕ್ತಿಯಂತೆ ಪ್ರಾಚೀನ ಕಾಲದಲ್ಲಿ ರಾಜ–ಮಹಾರಾಜರು ಸಂತಾನಕ್ಕಾಗಿ ಹಂಬಲಿಸುವ ವಿಚಾರ ವೇದಕಾಲದಿಂದ ನಡಕೊಂಡು ಬಂದಿದೆ.

ರಾಮಾಯಣದಲ್ಲಿ ದಶರಥ ಮಹಾರಾಜನೂ ಪುತ್ರ ಸಂತಾನಕ್ಕಾಗಿ ಪರಿತಪಿಸುತ್ತಾನೆ. ರಾಜ್ಯಭಾರ ನಡೆಸಲು ವಂಶಾಭಿವೃದ್ಧಿ ಆಗಲೇ ಬೇಕಾಗಿತ್ತು. ಅದೇ ದಶರಥನಿಗೆ ಮನೋವ್ಯಥೆಯಾಗಿ ಹೋಗಿತ್ತು.

೧. ದೈವಾನುಗ್ರಹದಿಂದ ಮಕ್ಕಳನ್ನು ಪಡೆಯಲು ಯಾಕೆ ಪ್ರಯತ್ನಪಡಬಾರದು?

೨. ಪುತ್ರಕಾಮೇಷ್ಠಿ ಯಾಗವನ್ನು ಯಾಕೆ ಮಾಡಬಾರದು?

–ಎಂಬ ಯೋಚನೆ ದಶರಥನ ಮನಸ್ಸಿಗೆ ಬಂತು. "ಈ 'ಅಶ್ವಮೇಧ'ವು ಸಕಲ ಪಾಪಹರವಾದ ಯಜ್ಞ."[೧] ಈ ರೀತಿಯಲ್ಲಿ ಶ್ರುತಿ–ಸ್ಮೃತಿಗಳಿಗೆ ಅನುಸಾರವಾಗಿ ದಶರಥ ಮಹಾರಾಜನು ಸರ್ವಪಾಪ ನಿವಾರಣೆಗಾಗಿ ತೊಡಗಿದನು. "ಆಗ 'ಅಶ್ವಮೇಧ ಯಾಗ' ಮಾಡಲು ನಿಶ್ಚಯಿಸಿದನು."[೨] ದೇವತೆಗಳನ್ನು ಯಾಗರೂಪದಲ್ಲಿ ಕಾಣುವ ಕಾಲವದು. ದಶರಥ ಯಾಗ ಮಾಡಿದ. ಪ್ರಜಾಪತ್ಯ ಪುರುಷನು ಕೊಟ್ಟ ಪುತ್ರೋತ್ಪತ್ತಿಗೆ ಕಾರಣವಾದ **'ದಿವ್ಯ ಪಾಯಸ'**ವನ್ನು ಪತ್ನಿಯರಾದ ಕೌಸಲ್ಯ, ಸುಮಿತ್ರ, ಕೈಕೇಯರಿಗೆ ಪ್ರಾಶನ ಮಾಡಿಸಿದನು. ಪತ್ನಿಯರು ಪುತ್ರವತಿಯರಾದರು. ಆದರೆ **ಯಜ್ಞಕುಂಡ**ದಿಂದ ಯಾರೂ ಎದ್ದು ಬರಲಿಲ್ಲ.

### ಯಜ್ಞವೇದಿಯಲ್ಲಿ ಪುತ್ರ–ಪುತ್ರಿಯರ ಪ್ರಾಪ್ತಿ :

### ಸಾಮಾನ್ಯ ನಿರೂಪಣೆ :

ದ್ರೋಣನಿಗೆ ಪ್ರತೀಕಾರ ಮಾಡುವ ಛಲವು ದ್ರುಪದನನ್ನು ಕಾಡುತ್ತಿತ್ತು. ಈ ಪ್ರತೀಕಾರವು ಯುದ್ಧದಿಂದ ಸಾಧ್ಯವಿಲ್ಲವೆಂದು ತಿಳಿದ ದ್ರುಪದ ರಾಜನು ಯಜ್ಞ–ಯಾಗಾದಿಗಳನ್ನು ಮಾಡಿಯಾದರೂ ಒಬ್ಬ ಮಗನನ್ನು ಪಡೆಯಲೇಬೇಕೆಂದು ನಿರ್ಧರಿಸಿದನು.

ಈ ಯಜ್ಞ-ಯಾಗಗಳನ್ನು ಮಾಡಿಸಲು 'ಅಥರ್ವ ಪ್ರಕ್ರಿಯೆ'ಯಲ್ಲಿ ನಿಷ್ಣಾತರಾದ ಬ್ರಹ್ಮರ್ಷಿಗಳ ಅವಶ್ಯಕತೆ ಇತ್ತು. ಇಂತಹವರನ್ನು ಹುಡುಕಿಕೊಂಡು ಹೋದಾಗ ಗಂಗಾ-ಯಮುನಾ ನದಿ ಪ್ರದೇಶದಲ್ಲಿ ವಾಸವಾಗಿದ್ದ ಯಾಜ-ಯಪಯಾಜರೆಂಬ ಬ್ರಹ್ಮತೇಜಸ್ಸಿನ ಬ್ರಾಹ್ಮಣೋತಮರನ್ನು ಕಂಡನು. ಉಪಯಾಜನನ್ನು ಕುರಿತು,

'ಬ್ರಾಹ್ಮಣೋತ್ತಮ! ನೀನು ನನ್ನಿಂದ ಒಂದು ಯಾಗವನ್ನು ಮಾಡಿಸಬೇಕು. ಆ **'ಯಾಗದ ಫಲದಿಂದ'** ನನಗೊಬ್ಬ ಮಗನು ಹುಟ್ಟಬೇಕು. ಆ ಮಗನು ನನ್ನ ಶತ್ರುವಾದ ದ್ರೋಣನನ್ನು ಕೊಲ್ಲುವ ಸಾಮರ್ಥ್ಯವುಳ್ಳವನಾಗಿರಬೇಕು.' ಎಂದು ದ್ರುಪದ ಹೇಳಿದಾಗ ಉಪಯೋಜನು, "ಅಂತಹ ಯಾಗಗಳನ್ನು ಮಾಡಿಸಲು ನಮ್ಮಣ್ಣನೇ ಸರಿ. ಉಚ್ಛಿಷ್ಟಾನ್ನ ಪ್ರಿಯನಾದ ನಮ್ಮಣ್ಣ **ಪ್ರಾಪಂಚಿಕ ಸುಖದಲ್ಲಿ ಮತ್ತು ಭೋಗ್ಯ ವಸ್ತುಗಳಲ್ಲಿ ಹೆಚ್ಚು ಆಸೆಯುಳ್ಳವನಾಗಿರುವನು."**[೩] ಆದುದರಿಂದ 'ನೀನು ಅವನ ಬಳಿಗೇ ಹೋಗಿ ಕೇಳು. ನಿನ್ನ ಇಷ್ಟಾರ್ಥ ನೆರವೇರುವುದು.' ಎಂದು ಉಪದೇಶಿಸಿದನು.

ದ್ರುಪದನು ಯಾಜನ ಬಳಿಗೆ ಹೋದನು. ಆಚಾರ್ಯ ನೀನು ನನ್ನಿಂದ ಒಂದು ಯಾಗವನ್ನು ಮಾಡಿಸಬೇಕು. ಅದು ಬ್ರಹ್ಮತೇಜಸ್ಸು-ಕ್ಷಾತ್ರ ತೇಜಸ್ಸು ಎರಡೂ ಕೂಡಿದ ಕುರುವಂಶದ ಆಚಾರ್ಯನಾದ ದ್ರೋಣನನ್ನು ಕೊಲ್ಲುವ ಸಮರ್ಥನಾದ ಒಬ್ಬ ಪುತ್ರನನ್ನು ದಯಪಾಲಿಸೆಂದು ಕೇಳಿದನು. ಯಾಜನು ಆಗಲೆಂದು ಆಶ್ವಾಸನೆಯನ್ನಿತ್ತನು.

ಉಪಯಾಜನು ಬಹು ತೊಡಕಾಗಿದ್ದ ವೈತಾನವೆಂಬ ಯಾಗ ಪ್ರಕ್ರಿಯೆಗೆ ಬೇಕಾದ ಸಿದ್ಧತೆಗಳನ್ನೆಲ್ಲವನ್ನೂ ಮಾಡಿದನು.

ಯಾಗವು ನಿರ್ವಿಘ್ನವಾಗಿ ನಡೆಯಿತು.

ಯಾಜನು ದ್ರುಪದನ ಪತ್ನಿಯನ್ನು ಕುರಿತು, 'ಮಹಾರಾಣಿ! ಇತ್ತಲಾಗಿ ಬಾ. ಒಬ್ಬ ಮಗನೂ ಒಬ್ಬ ಮಗಳೂ ನಿನಗೆ ಹುಟ್ಟುತ್ತಾರೆ. ಈ ಹವಿಸ್ಸನ್ನು ಕೂಡಲೇ ಸ್ವೀಕರಿಸು' ಎನ್ನುತ್ತಾನೆ. ಆಗ ದ್ರುಪದನ ಪತ್ನಿಯು, 'ಮಹರ್ಷೇ! ನನ್ನ ಮುಖವೂ ಮತ್ತು ಶರೀರವೂ ಸಹ ಕೇಸರೀ-ಗಂಧಾದಿ ಸುಗಂಧ ದ್ರವ್ಯಗಳಿಂದ ಲೇಪಿತವಾಗಿದೆ. ಆದುದರಿಂದ ಈ ಸಮಯದಲ್ಲಿ ನಾನು ಹವಿಸ್ಸನ್ನು ಮುಟ್ಟಲು ಯೋಗ್ಯಳಲ್ಲ. ನನಗೆ ಒಳ್ಳೆಯದನ್ನು ಮಾಡಲು ನೀನು ಸ್ವಲ್ಪ ಕಾಲ ತಡೆಯಬೇಕಾಗುತ್ತದೆ.' ಎನ್ನುತ್ತಾಳೆ.

ಯಾಜನು ಕಾಲಾವಕಾಶಕ್ಕೆ ಒಪ್ಪಲಿಲ್ಲ. ರಾಣಿಯು ಸಕಾಲದಲ್ಲಿ ಬರಲಿಲ್ಲ. ರಾಣಿಗಾಗಿ ಸಿದ್ಧಪಡಿಸಿದ್ದ ಹವಿಸ್ಸನ್ನು ಯಜ್ಞೇಶ್ವರನಿಗೆ ಅರ್ಪಿಸಿ ಬಿಡುತ್ತಾನೆ. ಮರುಕ್ಷಣದಲ್ಲೇ ಅಗ್ನಿಕುಂಡದಿಂದ ಒಬ್ಬ ಕುಮಾರನೂ ಪಾಂಚಾಲ ರಾಜಕುಮಾರಿಯೂ ಹೊರಕ್ಕೆ ಬರುತ್ತಾರೆ. ದ್ರುಪದನ ಪತ್ನಿ ಯಾಜನ ಬಳಿಗೆ ಬಂದು; 'ಮಹರ್ಷೇ! ಈ ಬಾಲಕ-ಬಾಲಕಿಯರು ನನ್ನನ್ನು ಬಿಟ್ಟು ಮತ್ತಾರನ್ನೂ ಸಹ **ತಾಯಿಯೆಂದು** ಭಾವಿಸದಿರಲಿ ಎಂದು ಪ್ರಾರ್ಥಿಸಿದಳು. ಬ್ರಾಹ್ಮಣರು ಬಾಲಕ-ಬಾಲಕಿಯರಿಗೆ **ಧೃಷ್ಟದ್ಯುಮ್ನನೆಂದೂ** ಬಾಲಕಿಗೆ; **ಕೃಷ್ಣೆಯಂತಲೂ** ನಾಮಕರಣ ಮಾಡಿದರು.

**ಮಾಹಿತಿ ಸಂಗ್ರಹಣೆ :**

೧. ದ್ರುಪದನ ಪತ್ನಿಯಾದ ರಾಣಿಯೇ, "ಬೇಗ ನನ್ನ ಬಳಿಗೆ ಬಾ. ಪತಿವಂಶದ ಅಭಿವೃದ್ಧಿಗಾಗಿ ಅವಳಿ ಮಕ್ಕಳಾದ ಒಬ್ಬ ಪುತ್ರನೂ ಮತ್ತು ಪುತ್ರಿಯೂ ನಿನ್ನನ್ನು ಎದುರು ನೋಡುತ್ತಿದ್ದಾರೆ."[೪]

೨. "ನನ್ನ ಮುಖಕ್ಕೆ ಇನ್ನೂ ಲೇಪನವನ್ನು ಮಾಡಿಕೊಂಡಿಲ್ಲ. ಸುಗಂಧದ್ರವ್ಯಗಳನ್ನು ಹಾಕಿಕೊಂಡಿಲ್ಲ. ಪ್ರಸವದ ಸಲುವಾಗಿ ಬಾ ಎಂದು ಕರೆಯಲು ನಾನು ನಿನ್ನ ಪತ್ನಿಯಲ್ಲ. ಯಾಜನೇ, ಸ್ವಲ್ಪ ಸಮಯ ತಡೆದು ನನ್ನ ಪ್ರಿಯವನ್ನು ಸಾಧಿಸು."[೫].
-(ಆ.ಪ. ಅ-೧೬, ೮.೭೯)

೩. ದ್ರುಪದನ ರಾಣಿ ಹೀಗೆ ಹೇಳಿ ಸಕಾಲ ಬಾರದಿದ್ದುದರಿಂದ ಯಾಜ ಹವಿಸ್ಸನ್ನು ಅಗ್ನಿಯಲ್ಲಿ ಹೋಮ ಮಾಡಿಬಿಟ್ಟ.

೪. ಕಿರೀಟ ಧರಿಸಿ ಕೈಯಲ್ಲಿ ಖಡ್ಗ ಹಿಡಿದು, ಧನಸ್ಸು ಶರಗಳೊಂದಿಗೆ ರಥವನ್ನೇರಿ ಧೃಷ್ಟದ್ಯುಮ್ನ ಹೋಮದ ಅಗ್ನಿಯಿಂದ ಎದ್ದು ಬರುತ್ತಾನೆ.

೫. "ಕುಮಾರಿ ಪಾಂಚಾಲಿಯೂ ಅದೇ ಹೋಮ ವೇದಿ ಮಧ್ಯದಿಂದ ಮೇಲೆದ್ದು ಬರುತ್ತಾಳೆ. ಅವಳೇ ದ್ರೌಪದಿ."[೬].

೬. ಮಹಾರಾಣಿ ಕರೆದ ಕೂಡಲೇ ಬಾರದಿದ್ದುದರಿಂದ ಕಾಲಾವಕಾಶಕ್ಕೆ ಒಪ್ಪದ ಯಾಜನು "ಮಹಾರಾಣಿ! ಹವಿಸ್ಸನ್ನು ತೆಗೆದುಕೊಳ್ಳುವ ಇಚ್ಛೆ ಇದ್ದರೆ ಈಗಲೇ ಆಗಮಿಸಿ ಸ್ವೀಕರಿಸು. ಇಲ್ಲದಿದ್ದರೆ ಈಗಲೇ ಆಗಮಿಸಿ ಸ್ವೀಕರಿಸು. ಇಲ್ಲದಿದ್ದರೆ ನಿನ್ನ **ಸಬಂಧವಿಲ್ಲದೆಯೇ ಇಷ್ಟಾರ್ಥವನ್ನು ಪಡೆಯುವ ಸಾಮರ್ಥ್ಯವು ನಮಗಿರುವುದು.** ಇಷ್ಟಾರ್ಥಸಿದ್ಧಿಯ ವಿಷಯದಲ್ಲಿ ನನಗೆ ಯಾವ ಸಂಶಯವೂ ಇಲ್ಲ."[೭] ಎನ್ನುತ್ತಾನೆ.

೭. ಸುಂದರವಾದ ಬಾಲಕ-ಬಾಲಕಿಯರನ್ನು ಕಂಡು ದ್ರುಪದನ ಪತ್ನಿ ಮಹಾರಾಣಿ ಯಾಜರ ಬಳಿ ಬಂದು ಕೈಮುಗಿದು "ಮಹರ್ಷೇ! ಈ ಬಾಲಕ-ಬಾಲಕಿಯರು ನನ್ನನ್ನು ಬಿಟ್ಟು ಮಾತ್ತಾರನ್ನೂ **ತಾಯಿಯೆಂದು** ಭಾವಿಸದಿರಲಿ."[೮] ಎಂದು ಪ್ರಾರ್ಥಿಸುತ್ತಾಳೆ. ಯಾಜ ಮಹರ್ಷಿಗಳೂ ಹಾಗೆಯೇ ಆಗಲೆಂದು ಅನುಗ್ರಹಿಸುತ್ತಾರೆ.

**ವಾದ ನಿರೂಪಣೆ :**

ಋಷಿಯಾದವನು ಅರಣ್ಯದಲ್ಲಿ ವಾಸ ಮಾಡುತ್ತಾ ಗೆಡ್ಡೆ ಗೆಣಸುಗಳನ್ನು ಭುಂಜಿಸುತ್ತ ಯಾವ ವಿಧವಾದ ಪಾಪ ಕಾರ್ಯವನ್ನೂ ಮಾಡದೇ ಸ್ವಶಕ್ತಿಯಿಂದ ಆಹಾರ ಸಂಪಾದಿಸಿಕೊಳ್ಳಬೇಕು. ಹೆಚ್ಚು ಕಾಲ ಧ್ಯಾನದಲ್ಲಿ ಕಳೆಯುವವನೇ ಮುನಿ ಎನಿಸುತ್ತಾನೆಂಬ ನಿಯಮವಿದೆ. ಆದರೆ ಯಾಜ ಮಹರ್ಷಿ ಇಲ್ಲಿ ತದ್‌ವಿರುದ್ಧವಾಗಿದ್ದಾನೆ. ಪ್ರಾಪಂಚಿಕ ಸುಖ ಮತ್ತು ಭೋಗ ವಸ್ತುಗಳಲ್ಲಿ ಹೆಚ್ಚು ಆಸಕ್ತನಾಗಿದ್ದಾನೆ.

೧. ದ್ರುಪದನ ಮಹಾರಾಣಿಯನ್ನು ತನ್ನ ಬಳಿ ಬೇಗ ಬಾ ಎಂದು ಕರೆಯುತ್ತಾನೆ. ಇಬ್ಬರು ಮಕ್ಕಳನ್ನು ಕರುಣಿಸುವುದಾಗಿಯೂ ಆಶ್ವಾಸನೆ ಕೊಡುತ್ತಾನೆ. ಹೋಮ-ಹವನಾದಿಗಳಿಗೆ ಪತಿ-ಪತ್ನಿಯರು ಇರಲೇಬೇಕು. ದ್ರುಪದನ ಪತ್ನಿಯಿಲ್ಲದೆ ಅವರಿಗಾಗಿಯೇ ನಡೆಸುವ **ಪುತ್ರಕಾಮೇಷ್ಟಿಯಾಗ** ನಡೆದದ್ದಾದರೂ ಹೇಗೆ?

೨. ರಾಣಿ ಪ್ರಸವದ ಸಲುವಾಗಿ 'ಬಾ' ಎಂದು ಕರೆಯಲು ನಾನು ನಿನ್ನ ಪತ್ನಿಯಲ್ಲ ಎಂದು ನಿರಾಕರಿಸುತ್ತಾಳೆ. ಮಹರ್ಷಿ ಹೋಮಕ್ಕೆ ಕರೆದಾಗ ರಾಣಿ ನಿರಾಕರಿಸಲು ಕಾರಣವೇನು? ಅದರಲ್ಲೂ **'ಪ್ರಸವದ ಸಲುವಾಗಿ'** ಎಂದೂ ಹೇಳುತ್ತಾಳೆ.

೩. ಯಾಜ ಹವಿಸ್ಸನ್ನು ಕೊಡುತ್ತೇನೆಂದು ಕರೆದಿದ್ದರೆ ರಾಣಿ ಬರುತ್ತಿದ್ದಳೋ ಏನೋ 'ಪ್ರಸವದ ಸಲುವಾಗಿ' ಎಂದಿದ್ದರಿಂದ ನಿರಾಕರಿಸುತ್ತಾಳೆ. ಯಾಜ ಹವಿಸ್ಸನ್ನು ಹೋಮಕುಂಡಕ್ಕೇ ಹಾಕುತ್ತಾನೆ.

೪. ಅಗ್ನಿ ಕುಂಡದಿಂದ ಎದ್ದು ಬರುವುದು ಶಿಶುವಲ್ಲ. ಬೆಳೆದ ರಾಜಕುಮಾರ ಅದೂ ಸರ್ವಾಂಗ ರಾಜೋಚಿತಭೂಷಿತನಾಗಿ.

೫. ಕುಮಾರಿ ಪಾಂಚಾಲಿಯೂ ಈಗ ಅಗ್ನಿಕುಂಡದಿಂದಲೇ ಉದ್ಭವಿಸುತ್ತಾಳೆ. ಕಪ್ಪಗಿರುವ ಕಾರಣ ಕೃಷ್ಣೆ ಎನಿಸುತ್ತಾಳೆ. ಹೀಗಿರುವಾಗ ಯಾಜರು ಈ ಯಜ್ಞಫಲದಿಂದ ನಿನಗೆ ಒಬ್ಬ ಮಗನೂ ಒಬ್ಬ ಮಗಳೂ ಹುಟ್ಟುತ್ತಾರೆಂದು ಯಾಕೆ ಹೇಳಿದ?

೬. ಮಹಾರಾಣಿ ಈಗಲೇ ಬಂದು ಈ ಹವಿಸ್ಸನ್ನು ಸ್ವೀಕರಿಸು ಇಲ್ಲದಿದ್ದಲ್ಲಿ ನಿನ್ನ ಸಂಬಂಧವಿಲ್ಲದೇಯೇ ಇಷ್ಟಾರ್ಥ ಪಡೆಯುವ ಸಾಮರ್ಥ್ಯ ನನಗಿದೆ ಅನ್ನುತ್ತಾನೆ. ಹೋಮಕುಂಡದಿಂದ ಮಕ್ಕಳು ಉದ್ಭವಿಸುವಾಗ 'ಮಹಾರಾಣಿಯ ಸಂಬಂಧವಿಲ್ಲದೆಯೇ ಯಾಜನ ಇಷ್ಟಾರ್ಥ ಸಿದ್ಧಿಸುವುದು ಹೇಗೆ? ಅಂದರೆ ಇಲ್ಲಿ ಶಿಶು ಜನನಕ್ಕೆ ಸ್ತ್ರೀ-ಪುರುಷರ ಸಮಾಗಮದ ಅವಶ್ಯಕತೆ ಇರುವುದನ್ನು ಯಾಜನ ಮಾತು ದೃಢಪಡಿಸುತ್ತದೆ.

೭. ಸುಂದರವಾದ ಬಾಲಕ ಬಾಲಕಿಯರನ್ನು ಕಂಡ ರಾಣಿ ಈ ಮಕ್ಕಳು ನನ್ನನ್ನು ಬಿಟ್ಟು ಬೇರೆ ಯಾರನ್ನೂ ತಾಯಿ ಎಂದು ಭಾವಿಸದಿರಲಿ ಎಂದು ರಾಣಿ ಯಾಜನಿಗೆ ಅಲವತ್ತುಕೊಳ್ಳುವ ಅವಶ್ಯಕತೆ ಏನು? ಅಂದರೆ ಈ ಪ್ರಕ್ರಿಯೆಗೆ ಕಾರಣರಾದ ತನಗಿಂತಲೂ ಬೇರೆ ಯಾರೋ ಒಬ್ಬರಿದ್ದಾರೆನ್ನುವ ಧ್ವನಿ ರಾಣಿಯ ಸಂದೇಹಕ್ಕೆ ಕಾರಣವಾಗಿರುವುದು ದೃಢಪಡುತ್ತದೆ.

**ಸಿದ್ಧಾಂತ ಮಂಡನೆ :**

ರಾಮಾಯಣದಲ್ಲಿ ದಶರಥ ಪುತ್ರಕಾಮೇಷ್ಠಿ ಯಾಗ ಮಾಡಿಸಿ ಪುರೋಹಿತರು ಕೊಟ್ಟ ಪ್ರಸಾದದ ಪಾಯಸವನ್ನು ತನ್ನ ಪತ್ನಿಯರಿಗೆ ಕೊಟ್ಟು ಪುತ್ರರನ್ನು ಪಡೆಯುತ್ತಾನೆ.

ಆಪತ್ಕಾಲದಲ್ಲಿ ವಂಶದ ಉದ್ಧಾರಕ್ಕಾಗಿ ಕ್ಷತ್ರಿಯರು ಆಪದ್ಧರ್ಮವನ್ನು ಅನುಸರಿಸುತ್ತಿದ್ದ ಕಾಲ ಮಹಾಭಾರತದ ಕಾಲ. ಒಂದು ದಿನ ಬಲಿರಾಜ ಸ್ನಾನ ಮಾಡಲೆಂದು ಗಂಗಾ ನದಿಗೆ ಬರುತ್ತಾನೆ. ಮೀಯಲೆಂದು ಇಳಿದಾಗ, ದೀರ್ಘ ತಮಸನಿಂದ ದೋಣಿಯು ಅವನ ಬಳಿ ತೇಲುತ್ತ ಬಂತು. ಒಡನೆಯೇ ಬಲಿರಾಜ ಮಹರ್ಷಿಗೆ ಕಟ್ಟಿದ್ದ ಕಟ್ಟುಗಳನ್ನೆಲ್ಲ ಬಿಚ್ಚಿ ಅರಮನೆಗೆ ಕರೆತಂದು ಸತ್ಕರಿಸಿ ಸಂತೈಸಿದನು. ರಾಜನಿಗೆ ಪುತ್ರಪ್ರಾಪ್ತಿಯ ಸಮಸ್ಯೆ ಇತ್ತು. ಅಂಜಲೀಬದ್ಧನಾಗಿ ನಿಂತು 'ಮಹರ್ಷೇ ನನ್ನ ಭಾರ್ಯೆಯಲ್ಲಿ ಮಕ್ಕಳು ಹುಟ್ಟುವಂತೆ ಅನುಗ್ರಹಿಸಿಸಬೇಕು.' ಎಂದು ಕೇಳಿಕೊಂಡನು. ಮಹರ್ಷಿ ರಾಜನ ಮಾತಿಗೆ ಒಪ್ಪಿದನು. ಬಲಿರಾಜ ತನ್ನ ಪತ್ನಿಯಾದ ಪಟ್ಟಮಹಿಷಿ ಸುದೇಷ್ಣೆಯನ್ನು ಜಾತ್ಯಂಧನಾದ ಮಹರ್ಷಿ ಸೇವೆಗೆಂದು ಕಳುಹಿಸಿದನು. ಸುದೇಷ್ಣೆ ಮುದುಕ ದೀರ್ಘ ತಮಸನ ಬಳಿ ಹೋಗಲು ಇಚ್ಛಿಸಲಿಲ್ಲ. ತನಗೆ ಬದಲಾಗಿ ತನ್ನ ಸೇವಕಿಯನ್ನು ಕಳುಹಿಸುತ್ತಾಳೆ. ಆ ಸೇವಕಿಗೇ ಹನ್ನೊಂದು ಮಕ್ಕಳು ಜನಿಸುತ್ತಾರೆ. ಅವರೆಲ್ಲಾ ಋಷಿ ಸಮಾನರೇ ಆಗುತ್ತಾರೆ.

**ದ್ರೌಪದಿ ಕೃಷ್ಣೆ ಆಗಲು ಕಾರಣವೇನು? :**

'ರಾಮಾಯಣ'ದ ಘಟನೆಗಳ ಪರಿಧಿಯ ಕೇಂದ್ರಬಿಂದುವು ಜನಕಾತ್ಮಜೆಯಾದ 'ಸೀತೆ'ಯಾದರೆ, ಮಹಾಭಾರತದ ವೃತ್ತದ ಮಧ್ಯಬಿಮದೂವಾಗಿ ದ್ರುಪದಾತ್ಮಜೆಯಾದ ಕೃಷ್ಣೆ (ದ್ರೌಪದಿ) ಇದ್ದಾಳೆ. **'ದ್ರೌಪದಿ'–ಕೃಷ್ಣೆ** ಅಂದರೆ ಕಪ್ಪಾಗಾಗಲಿಕ್ಕೆ ಕಾರಣವೇನು? ಇಲ್ಲಿ ಮಾನವಶಾಸ್ತ್ರ–ಮನಸ್‌ಶಾಸ್ತ್ರದ ಮರೆ ಹೋಗಬೇಕಾಗುತ್ತದೆ. ದ್ರೌಪದಿ ಬ್ರಹ್ಮಋಷಿ ಯಾಜರ್‌ನಿಂದ 'ನಿಯೋಗ ಪದ್ಧತಿ'ಯಿಂದ ಜನಿಸಿದ್ದಾಳೆ. ಉಪಯಾಜ–ಯಾಜನ ತಮ್ಮ. ಮಹಾರಾಜ ಉಪಯಾಜನನ್ನು ಯಾಗ ಮಾಡಿಸಲು ಕರೆದಾಗ ಆತ ನಿರಾಕರಿಸುತ್ತಾನೆ. ಮತ್ತು ತನ್ನ ಅಣ್ಣ ಯಾಜ. "ಯಾವ ವಸ್ತುವಿನಲ್ಲಿಯೂ ಸಹ ಪರಿಶುದ್ಧತೆ–ಅಪರಿಶುದ್ಧತೆಗಳನ್ನು ವಿವೇಚಿಸಲಾರನು. ನಾವು ಗುರುಕುಲದಲ್ಲಿ ಅಧ್ಯಯನ ಮಾಡುವಾಗ ಅನೇಕ ಶಿಷ್ಯರು ತಿಂದು ಬಿಸುಟ ಮಿಕ್ಕಿದ್ದ ಉಚ್ಛಿಷ್ಟಾನ್ನವನ್ನೇ ತಿನ್ನುತ್ತಿದ್ದ. ಅದನ್ನೇ ಲಜ್ಜೆಯಿಲ್ಲದೆ ಪ್ರಶಂಸೆ ಮಾಡುತ್ತಿದ್ದ. ಈ ಕಾರಣಗಳಿಂದ ನಮ್ಮಣ್ಣ **ಪ್ರಾಪಂಚಿಕ ಸುಖದಲ್ಲಿ ಮತ್ತು ಭೋಗ್ಯವಸ್ತುಗಳಲ್ಲಿ ಹೆಚ್ಚು ಆಸೆಯುಳ್ಳವನಾಗಿರುವನು. ಅವನು ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುತ್ತಾನೆ."**[೯] ಎಂದು ಉಪಯಾಜ ಹೇಳಿದಾಗ ದ್ರುಪದನಿಗೆ ಯಾಜನ ಬಳಿ ಹೋಗಲು ಇಷ್ಟವಿಲ್ಲದಿದ್ದರೂ ವಿಧಿಯಿಲ್ಲದೆ ಹೋಗುತ್ತಾನೆ.

ನಾವು "ಕುರುವಂಶ" ಅಭಿವೃದ್ಧಿ ಮಾಡಲು ಹಸ್ತಿನಾಪುರಕ್ಕೆ ಬಂದ ವ್ಯಾಸರ ಸ್ವರೂಪವನ್ನು ಅವರ ಬಾಯಿಂದಲೇ ಕೇಳಿದ್ದೇವೆ. ಅಮ್ಮಾ! **"ನನ್ನೀ ವಿರೂಪವು ಅವರಿಗೆ ಸಹ್ಯವಾಗಬೇಕು. ನನ್ನ ಶರೀರ ಕಟುವಾಸನೆ. ಅರಣ್ಯವಾಸಿಯ ವೇಷ–ಭೂಷಣ, ಕಪ್ಪಾದ ಮತ್ತು ಒರಟಾದ ಶರೀರ."**[೧೦] ಎಂದು ಹೇಳುತ್ತಾನೆ. ಇದೇ ಸ್ವರೂಪ ಯಾಜನದೂ ಆಗಿರುತ್ತದೆ. ಹಾಗಾಗಿಯೇ **ಕೃಷ್ಣೆ** ಕಪ್ಪು ಬಣ್ಣದವಳಾಗಿ ಜನಿಸುತ್ತಾಳೆ.

ಹೋಮರ್‌ನ ಮಹಾಕಾವ್ಯದ **'ಇಲಿಯಡ್'** ಕಥಾವಸ್ತುವೆಲ್ಲ **ಹೆಲನ್ ಆಫ್ ಟ್ರಾಯ್** ಸುತ್ತವೇ ಪರಿವರ್ತಿಸುತ್ತದೆ. ಅಷ್ಟೇ ಏಕೆ? ಮಿಲ್ಟನ್‌ನ **ಪ್ಯಾರಡೈಸ್ ಆಫ್ ಲಾಸ್ಟ್** ಮಹಾಕಾವ್ಯಕ್ಕೆ **ಈವ್‌**ಳ ಸುತ್ತಲೇ **ಸೂತ್ರಬದ್ಧವಾಗಿದೆ.** ಸೀತೆಯ ಅಪಹರಣವು 'ರಾಮಾಯಣ'ದಲ್ಲಿ, ದ್ರೌಪದಿಯ ಅಪಮಾನವು 'ಮಹಾಭಾರತ'ದಲ್ಲಿ ನಡೆದಿದೆ. "ಹೆಲನ್ ಮೇಲಣ ಪ್ರತ್ಯಾಶಯ ಹಾಗೂ ಜ್ಞಾನವೃಕ್ಷದ ಹಣ್ಣಿಗಾಗಿ ಬಯಸಿದ ಈವ್‌ಳ ಬಯಕೆಯು ಆಯಾ ಆಯಾ ಮಹಾಕಾವ್ಯಗಳ ಸಮಗ್ರ ಘಟನೆಗಳ ಕೇಂದ್ರ ಪ್ರೇರಣೆಯಾಗಿ ಕ್ರಿಯಾಶೀಲವಾಗಿದೆ."[೧೧]

ಮಹಾಭಾರತದ ದ್ರೌಪದಿ ಸ್ತ್ರೀತ್ವದ ಪ್ರತೀಕವಾಗಿ 'ದುಃಖೇನ ಸಾಧ್ವೀ ಲಭತೇ ಸುಖಾನಿ' ಎನ್ನುವಂತೆ ಸುಖದಿಂದ ಸುಖ ಸಿಗುವುದಿಲ್ಲ. ದುಃಖದಿಂದ ಸುಖವು ಸಿಗುತ್ತದೆ ಎನ್ನುವ ಪ್ರತೀಕವಾಗಿ ದ್ಯೂತದಲ್ಲಿ ಸೋತ ಜೂಜುಗಾರನ ಪ್ರಕ್ಷುಬ್ಧ ಬದುಕನ್ನು ತೋರಿಸುವ ಸ್ತ್ರೀಯಾಗಿ ಧರ್ಮದ ಸತ್ವದಿಂದ ಜೀವನವನ್ನು ಉದ್ಧರಿಸುವವಳಾದ್ದರಿಂದ ಆ ಪಾತ್ರಕ್ಕೆ ಆ ಪಾವಿತ್ರ್ಯ ಬರಬಾರದೆಂದು ಅದೊಂದು ದೈವೀಕ ಆದರ್ಶಪಾತ್ರವಾಗಿ ರೂಪಿಸಲು ಪುರಾಣಿಕರು ಮಾಡಿರುವ ತಂತ್ರವಾಗಿದೆ. ಯಾಕೆಂದರೆ ಇದು ವ್ಯಾಸರ ರಚನೆಯಲ್ಲ. ವ್ಯಾಸರು ಇಂತಹ ಅವೈಜ್ಞಾನಿಕ, ನಿಸರ್ಗ ವಿರೋಧ ರಚನೆ ಮಾಡಲಾರರು. 'ವ್ಯಾಸ ಮಹರ್ಷಿಯಂಥ ವಿಶಾಲ ಬುದ್ಧಿಯ ಸಾಗರ ಸದೃಶ ಪ್ರಜ್ಞೆಯ ಮಹಾವ್ಯಕ್ತಿಯು ಮಾತ್ರ ಮನುಷ್ಯನ ವ್ಯಕ್ತಿತ್ವಕ್ಕೊಂದು ಅರ್ಥನೀಡಿ, ಅವನ ಅನಂತ ಪ್ರಮಾಣಕ್ಕೊಂದು ಗುರಿ ನೀಡಿ ಬದುಕಿಗೆ ಭದ್ರತೆಯ ಆ ಸಾರವನ್ನು ಕಲ್ಪಿಸಲು ಸಾಧ್ಯ. ವ್ಯಾಸ ಮಹರ್ಷಿಯ ಧರ್ಮ ಚಿಂತನೆಯ ಹಿಂದೆ ಪರಿಸ್ಪಂದನಾತ್ಮಕ ಸಂಸ್ಫೂರ್ತಿ ತತ್ವವಾಗಿ ಅತ್ಯಂತ ಪ್ರಾಜ್ಞವೂ ಗಹನವೂ ಆದ ಮಾನವ ಚೈತನ್ಯದ ಆಂತರಿಕ ಲೋಕದ ಅನಾದಿಯಾದ ಸಮಸ್ಯೆಗಳ ಅಧ್ಯಯನ ಹಾಗೂ ಅನ್ವೇಷಣೆಗಳು ಕ್ರಿಯಾಶೀಲವಾಗಿವೆ. ಭೀಷ್ಮ ಹೇಳುತ್ತಾನೆ. 'ಶ್ರೋತ್ರೀಯನಾದ, ಧರ್ಮನಿಷ್ಠನಾದ ಬ್ರಾಹ್ಮಣನೊಬ್ಬನನ್ನು ಕರೆದು ಅವನ ಮೂಲಕ ಸಂತಾನವನ್ನು ಪಡೆಯಬಹುದು. ಇದು ಅಂದಿನ ಕಾಲದ ಧರ್ಮಸಮ್ಮತ **"ನಿಯೋಗ ಪದ್ಧತಿ"** ಮತ್ತು ಇದು ನೈಸರ್ಗಿಕವಾದದ್ದು ಎಂದು ವೇದ್ಯವಾಗುತ್ತದೆ.

**ವಿದುರನ ಜನನದ ಪರಿ :**

ಭೀಷ್ಮನು ವಂಶಾಭಿವೃದ್ಧಿಗಾಗಿ ಆಪತ್ಕಾಲದಲ್ಲಿ ಅನುಸರಿಸಬೇಕಾದ ಧರ್ಮದಂತೆ 'ನಿಯೋಗ' ಪದ್ಧತಿಯನ್ನು ಸತ್ಯವತಿಗೆ ಹೇಳಿದನು. ವ್ಯಾಸರಿಂದ ಅಂಬಿಕೆಗೆ ಕುರುಡು ಮಗು ಜನಿಸಿತು. ಅಂಬಾಲಿಕೆಗೆ ಶರೀರವೆಲ್ಲಾ ಬಿಳೀ ಛಾಯೆಯಿಂದ ಕೂಡಿದ ಮಗುವಾಯಿತು. ಮತ್ತೊಂದು ಶಿಶುವನ್ನು ಪಡೆಯಲು ಅಂಬಿಕೆಯನ್ನು ಒಪ್ಪಿಸಿದಳು. ಅಂಬಿಕೆಯ ಕಣ್ಣೆದುರು, ಜಟೆ, ವಲ್ಕಲ, ಕಪ್ಪಾದ ಶರೀರ, ಕೆಂಪಾದ ಕಣ್ಣುಗಳ, ಗಡ್ಡ ಮೀಸೆಯ ವಿಕಾರ ಮುಖ ಬಂದು ಹೃದಯವು ಕಂಪಿಸಿತು. ಆಕೆ ಒಡನೆಯೇ ತನ್ನ ಸಮೀಪವಿದ್ದ ಚೇಟಿಯನ್ನು ಸಿಂಗರಿಸಿ ಶಯನಮಂದಿರಕ್ಕೆ ಕಳುಹಿಸಿಬಿಟ್ಟಳು. ಆ ಚೇಟಿಯ ಮಗನೇ ವಿದುರ!

ದ್ರುಪದ ರಾಜನೂ ವಂಶಾಭಿವೃದ್ಧಿಗಾಗಿ ಹೋಮ ಮಾಡಲು ಯಾಜ ಮಹರ್ಷಿಯನ್ನು ಕರೆಸಿ ತನ್ನ ವಂಶವೃದ್ಧಿಯಾಗಲು ರಾಣಿಯನ್ನು ಯಾಜನ ಸಮಾಗಮಕ್ಕಾಗಿ ಕಳುಹಿಸಲು ಪ್ರಯತ್ನಿಸುತ್ತಾನೆ. ರಾಣಿ ಪರಪುರುಷನ ಸಂಪರ್ಕ ನಿರಾಕರಿಸಿ ತನ್ನ ಸೇವಕಿಯೊಬ್ಬಳನ್ನು ಕಳುಹಿಸುತ್ತಾಳೆ. ಆ ಸೇವಕಿಗೆ 'ಅವಳಿ' ಮಕ್ಕಳಾಗುತ್ತವೆ. ರಾಣಿ ಆ ಮಕ್ಕಳು ತನ್ನನ್ನೇ ತಾಯಿಯೆಂದು ಭಾವಿಸಲು ಯಾಜರ ಅನುಗ್ರಹ ಕೇಳುವ ಹಿಂದಿನ ರಹಸ್ಯವೇ ಇದು. ಇದೇ ಸಿದ್ಧಾಂತ. "ಮಹಾಭಾರತದ ಅದೆಷ್ಟೋ ಕಲ್ಪನೆಗಳನ್ನು ವಾಸ್ತವಿಕ ಘಟನೆ ಎಂದೇ ತಿಳಿಯುವುದು ಸಾಧ್ಯವೂ ಅಲ್ಲ. ಸಾಧುವೂ ಅಲ್ಲ."[೧೨]

~~~***~~~

**ಅಡಿಟಿಪ್ಪಣಿಗಳು :**

೧. ಶ್ರೀಮದ್ವಾಲ್ಮೀಕಿ ರಾಮಾಯಣ ಭಾ-೧, ಪು. ೧೪೨.

೨. ಸರ್ವಂ ಪಾಪ್ಮಾನಂ ತರತಿತರತಿ ಬ್ರಹ್ಮಹತ್ಯಾಂ । ಯೋಶ್ವಮೇಧೇನ ಯಜತೇ ॥ ತೈ.ಉ ॥

೩. ವಾಲ್ಮೀಕಿ ರಾಮಾಯಣ, ಭಾ-೧, ಪು. ೯೬.

೪. ಶ್ರೀಮನ್ಮಹಾಭಾರತ ಭಾ-೨, ಭಾ.ದ.ಪ್ರ., ಪು. ೧೦೭೭

೫. ಪ್ರೇಹಿಮಾಂ ರಾಜ್ಞೆಪೃಷತಿ ಮಿಥುನಂತ್ವಾಮುಪಸ್ಥಿತಮ್ । ಕುಮಾರಶ್ಚ ಕುಮಾರಿ । ಚಪತಿವಂಶವಿವೃದ್ಧಯೇ?

-- ಅದೇ-- ಭಾ-೩, ಪು. ೩೯೭.
~~~

೬. -- ಅದೇ --, ಭಾ-೩, ತ.ಸಂ.ಸಂ-ಪು. ೩೯೭.
"॥ ನಾಲಿಪ್ತಂವೈಮಮ ಮುಖಂ ಪುಣ್ಯಾನ್ ಗಂಧಾನ್ ಬಿಭರ್ಮಚ ।
ನ ಪತ್ನೀ ತೇಸ್ಮಿ ಸೂತ್ಯರ್ಥಂ ತಿಷ್ಠಯಜಮಮ ಪ್ರೆಯೆ ॥"

೭. -- ಅದೇ --, ಪು. ೩೯೭.

೮. -- ಅದೇ -- ಪು. ೩೯೯.

೯. -- ಅದೇ --, ಭ- ೨, ಪು. ೧೦೭೮.

೧೦. -- ಅದೇ --, ಪು. ೧೦೮೦.

೧೧. ಕೀರ್ತಿನಾಥ ಕುರ್ತುಕೋಟಿ, "ಉರಿಯನಾಲಿಗೆ", ಪು. ೧೩೮.

**೯. ಶ್ರೀಮನ್ಮಹಾಭಾರತ, ಭಾ-೨, ಪು. ೧೦೭೭**

೧೦. ಶ್ರೀಮ.ಭಾ. ಪು. ೧೭೨೬

೧೧. ಶೇಷನವರತ್ನ, "ಮಹಾಭಾರತದಲ್ಲಿ ಧರ್ಮ, ಪು. ೭೯

~~~***~~~

## 14. 'ಮಹಾಭಾರತ'ದಲ್ಲಿ ಸಾಮಾಜಿಕ, ರಾಜಕೀಯ, ಧಾರ್ಮಿಕತೆಯ ಸ್ಥಿತಿ-ಗತಿಗಳು ಮತ್ತು ನೈತಿಕತೆ :

**ಅ. ರಾಜಕೀಯ ಪರಿಸ್ಥಿತಿ :**

'ಮಹಾಭಾರತ' ಕಾಲದಲ್ಲಿ ದೇಶವನ್ನು ಆಳುತ್ತಿದ್ದಂತಹವರೇ ಕ್ಷತ್ರಿಯರು. ಹೀಗಾಗಿ ಕ್ಷತ್ರಿಯ ಧರ್ಮವೇ 'ರಾಜಧರ್ಮ'ವೂ ಆಗಿತ್ತೆಂದರೆ ಬಹುಶಃ ತಪ್ಪಾಗಲಾರದು. 'ಮಹಾಭಾರತ' ಮಹಾಕಾವ್ಯದಲ್ಲಿ ವ್ಯಾಸ ಋಷಿಗಳು ಕ್ಷಾತ್ರಧರ್ಮವೇ ಸರ್ವಧರ್ಮಗಳಲ್ಲೂ ಶ್ರೇಷ್ಠವೆಂದು ಹೇಳಿದ್ದಾರೆ. 'ಶಾಂತಿಪರ್ವ'ದಲ್ಲಿ ಪಿತಾಮಹ ಭಿಷ್ಮರು ಯುಧಿಷ್ಠಿರನಿಗೆ 'ಕ್ಷಾತ್ರಧರ್ಮ'ದ ಶ್ರೇಷ್ಠತೆಯನ್ನೂ, 'ರಾಜಧರ್ಮ'ದ ನೀತಿಯನ್ನೂ ಬೋಧಿಸಿದ್ದಾರೆ.

'ಮಹಾಭಾರತ' ಕಾಲದಲ್ಲಿ ಕ್ಷತ್ರಿಯವೀರರು ಮಾತ್ರ 'ರಾಜತ್ವ'ವನ್ನು ಪಡೆಯುತ್ತಿದ್ದರೆಂದು ಈ ಮೊದಲೇ ತಿಳಿಸಿದೆ. ಹೀಗಾಗಿ ಅವರಲ್ಲಿ ದೇಶ, ದೇಶಾಭಿಮಾನ, ದೇಶರಕ್ಷಣೆಯ ತೀವ್ರತಮ ಅಭಿಲಾಷೆಯು, ಪ್ರಜ್ಞೆಯು ಈ ಕಾವ್ಯದಲ್ಲಿ ಪೂರ್ಣಪ್ರಮಾಣದಲ್ಲಿ ಜಾಗೃತಗೊಂಡಿರುವುದು ನಮಗೆ ತಿಳಿದುಬರುತ್ತದೆ. ಇದನ್ನು 'ಕ್ಷಾತ್ರ ಮಹಾಕಾವ್ಯ'ವೆಂದೇ ಕರೆಯಲಾಗಿದೆ. ಏಕೆಂದರೆ, "ವ್ಯಾಸಮಹರ್ಷಿಯ ಅಭಿಪ್ರಾಯದಲ್ಲಿ ಅತ್ಯಂತ ಸಬಲವಾದ ಉದ್ಯಮಶೀಲತೆಯಿಂದ ಅಭಿಭೂತವಾದ ಉಜ್ವಲ ಕ್ಷಾತ್ರಧರ್ಮವೇ ಜಗತ್ತಿನಲ್ಲಿ ಹಿಂಸೆಯ ಅನಾಹುತವನ್ನೂ, ಅಧರ್ಮರ ಉಪಟಳವನ್ನೂ ತಡೆಗಟ್ಟಬಲ್ಲ ಸಕಾರಾತ್ಮಕ ವ್ಯವಸ್ಥೆಯಾಗಿದೆ. ಸಮಾಜದ ಸಮಷ್ಟಿಯ ಅಭಯಕ್ಕೆ ಉದಾತ್ತವಾದ ಕ್ಷಾತ್ರಶಕ್ತಿಯೊಂದೇ ತಾರಕವಾಗಬಲ್ಲದು. ಬರಿ ಆದರ್ಶದ ರುಚಿರವಚನಗಳ ಮಂತ್ರ ಸಂಹಿತೆಯು ಖಂಡಿತ ಯಶಸ್ವಿಯಾಗಲಾರದು."[೧] ಒಂದು ಸಾಮಾಜಿಕ ವ್ಯವಸ್ಥೆಯ ರಕ್ಷಣೆಯು ಕೇವಲ ಭಾವನಾತ್ಮಕ ಪ್ರತಿಕ್ರಿಯೆಗಳಿಂದ ಸಾಧ್ಯವಿಲ್ಲ. ಧರ್ಮರಕ್ಷಣೆಯು ಕೇವಲ ಮಾತುಗಳ ಮಂಟಪದಿಂದ ಸಾಧ್ಯವೂ ಇಲ್ಲ. ಅವುಗಳು ವಾಸ್ತವ ಜೀವನದ ಕಠೋರ ಸತ್ಯಗಳನ್ನು ನಿರ್ಲಕ್ಷಿಸಿ ಬದುಕಲು ಸಾಧ್ಯವಿಲ್ಲ. ಕ್ಷಾತ್ರಧರ್ಮವು ಒಂದು ಸಂಘಟನೆಯಾಗಿದೆ. ಬಲ ಸಂಚಯವಾಗಿದೆ. ರಕ್ಷಕ ತತ್ವವಾಗಿದೆ. ಒಂದು ರಾಷ್ಟ್ರದ ವೈಭವಯುತ ಸಂವರ್ಧನೆಗೆ ಕ್ಷಾತ್ರತೇಜಸ್ಸಿನ ಅಖಂಡ ಅನುಸರಣೆಯು ಅನಿವಾರ್ಯದ ಸಂಗತಿಯಾಗಿದೆ. 'ಮಹಾಭಾರತ'ವು ಈ ಸತ್ಯವನ್ನು ಅನನ್ಯವಾಗಿ ಸ್ವೀಕರಿಸಿದೆ. ಕ್ಷಾತ್ರಧರ್ಮದ ವಿಕಾಸಕ್ಕಾಗಿ ಸಾಧಿಸಿದ ಸಮಾಜದಲ್ಲಿನ ಹಲವಾರು ಸ್ತ್ರೀಯರನ್ನೂ ಉದಾಹರಣೆಗಳಾಗಿ ಕಾಣುತ್ತೇವೆ.
~~~

'ರಾಜಪ್ರಭುತ್ವ'ವು ಕ್ಷಾತ್ರ ತೇಜಸ್ಸಿನಿಂದ ಕೂಡಿದ್ದು; ರೋಚಕವೂ, ಅದ್ಭುತವೂ ಆಗಿದೆ. ಇದು ಮನುಷ್ಯನ ಸಾಹಸ ಪ್ರವೃತ್ತಿಯನ್ನು, ಶೌರ್ಯೋತ್ಕರ್ಷವನ್ನು ಸಾರ್ಥಕಗೊಳಿಸುತ್ತದೆ. ಹೀಗಾಗಿ 'ಮಹಾಭಾರತ'ವು ಕ್ಷಾತ್ರತೇಜಸ್ಸಿನ 'ಯಶೋಗೀತ'ವೇ ಆಗಿದೆ.

ದೇಶ, ಧರ್ಮ, ಸಮಾಜ, ರಕ್ಷಣೆ – ಇತ್ಯಾದಿಗಳಿಗೆ ಕ್ಷತ್ರಿಯ 'ರಾಜಧರ್ಮ'ವು ಸದಾ ಸಿದ್ಧವಾಗಿರುತ್ತಿತ್ತು. ಮಹಾ ಋಷಿಗಳ, ತಪಸ್ವಿಗಳ, ಬ್ರಾಹ್ಮಣರ ಮಾರ್ಗದರ್ಶನದಲ್ಲಿ ಇವರು ರಾಜ್ಯಭಾರವನ್ನು ಮಾಡುತ್ತಿದ್ದರು. ಏಕೆಂದರೆ ಅಂದಿನ ಕಾಲದ ರಾಜರುಗಳೆಲ್ಲರೂ ಧರ್ಮಮಾರ್ಗದಂತಹ ಸನ್ಮಾರ್ಗದಲ್ಲೇ ರಾಜ್ಯವನ್ನೂ, ರಾಜ್ಯದ ಜನತೆಯನ್ನೂ ನೆಮ್ಮದಿಯ ಬದುಕಿನತ್ತ ಕೊಂಡೊಯ್ಯಲು ಬಯಸುತ್ತಿದ್ದರು. ಇದಕ್ಕಾಗಿ ಅವರು ಸಂಪೂರ್ಣವಾಗಿ ಋಷಿಗಳು, ತಪಸ್ವಿಗಳನ್ನೇ ಅವಲಂಬಿಸಿದ್ದರು. ರಾಜನು ಅವರ ಆಜ್ಞಾನುವರ್ತಿಯಾಗಿ, ಅವರ ಆದೇಶದ ಮೇರೆಗೆ ಕಾಳಜಿಯಿಂದ ಪ್ರಜೆಗಳ ರಕ್ಷಣೆಯನ್ನು ಮಾಡುತ್ತ ಧರ್ಮದ ವಿಷಯದಲ್ಲಿ ಗೌರವವುಳ್ಳವನಾಗಿದ್ದನು. ಹೀಗೆ ಈ ರೀತಿಯಾಗಿ 'ಮಹಾಭಾರತ' ಕಾಲದಲ್ಲಿ 'ರಾಜಧರ್ಮ'ವು ಉತ್ಕಟವಾದ ಸಾಮಾಜಿಕ ಕಳಕಳಿಯಿಂದ ಉಪೇತವಾಗಿರುವುದನ್ನು ನಾವು ಕಾಣುತ್ತೇವೆ.

**ಆ. ಸಾಮಾಜಿಕ ಸ್ಥಿತಿಗತಿಗಳು :**

ಸನಾತನ ಹಿಂದೂ ಅಥವಾ ಆರ್ಯಧರ್ಮಕ್ಕೆ ಋಷಿಗಳೇ ಮೂಲ ಕಾರಣಪುರುಷರು. ಅವರೇ ಭಾರತೀಯ ಸಂಸ್ಕೃತಿಯ ನಿರ್ಮಾತೃಗಳು. 'ಮಹಾಭಾರತ'ದಲ್ಲಿ ಬರುವ ಋಗ್ವೇದದ ಋಷಿಗಳ ಕುರಿತಂತೆ; ಮುದ್ಗಲ, ಬಾಭ್ರವ್ಯ, ವ್ಯಾಸ, ಸುಮಂತ, ವರಾಹ, ತಿತ್ತಿರಿ, ಧನಂಜಯ, ಋಷಭ, ಸುಸಾಮಾ, ಬೋಧ್ಯ, ಶಂಖ, ಶಾಂಬವ್ಯ, ಉದ್ದಾಲಕ ಹಾಗೂ ಇನ್ನಿತರ ಋಷಿ–ಮುನಿಗಳನ್ನು ಕಾಣುವುದರ ಮೂಲಕ ಅವರ ಪ್ರಾಚೀನತೆ, ಧರ್ಮ ಮತ್ತು ಸಂಸ್ಕೃತಿ, ಸಮಾಜ, ರಾಜಕೀಯ ಸ್ಥಿತಿ–ಗತಿಗಳಿಗೆ ಅವರು ನೀಡಿದ್ದ ವಿಶಿಷ್ಟ ರೀತಿಯ ಕೊಡುಗೆಗಳನ್ನು ತಿಳಿಯುತ್ತೇವೆ.

ಋಗ್ವೇದ ಭಾಗ – ೧, ಪು. ೧೮೪, ೧೮೭ರಲ್ಲಿ ಉಲ್ಲೇಖಿಸಿರುವಂತೆ; 'ಧರ್ಮರಕ್ಷಕರೂ, ಧರ್ಮ ಪ್ರಚಾರಕರೂ ಜ್ಞಾನಿಗಳೂ ಆದ ಋಷಿಗಳು ಆರ್ಯಧರ್ಮಕ್ಕೂ ಸಂಸ್ಕೃತಿಗೂ ಪ್ರಾಣದಂತಿದ್ದರು.' ಎಂದು ತಿಳಿಸುತ್ತದೆ.

ಇಂತಹ ಋಷಿಗಳ ಇತಿಹಾಸದ ಆಧಾರದ ಮೇಲೆ ವೇದಗಳ ಕಾಲವನ್ನೂ, 'ಮಹಾಭಾರತ'ದ ಕಾಲವನ್ನೂ ನಿರ್ಣಯಿಸಬಹುದು. (ಮಹಾಭಾರತದ ಕಾಲವು ಸುಮಾರು ಕ್ರಿ.ಪೂ. ೩೧೩೯ ಎಂದು ನಿರ್ಣಿತವಾಗಿದೆ.)

ಭೃಗು, ಆಂಗೀರಸ ಮೊದಲಾದ ಋಷಿಗಳು ಮಂತ್ರದ್ರಷ್ಟಾರಗಳಾಗಿದ್ದು ಇವರು 'ಮಹಾಭಾರತ' ಕಾಲಕ್ಕಿಂತಲೂ ಸಾವಿರಾರು ವರ್ಷಗಳಷ್ಟು ಹಿಂದಿನವರೆಂದು ಋಗ್ವೇದವು ತಿಳಿಸುತ್ತದೆ.

'ಮಹಾಭಾರತ' ಕಾಲದ ಸಮಕಾಲೀನ ರಾಜ–ಮಹಾರಾಜರೂಗಳೂ ಕೂಡಾ ಈ ಋಷಿಗಳ ಮಾರ್ಗವನ್ನೇ ಅನುಸರಿಸುತ್ತಿದ್ದರು. ಇವರು ಧರ್ಮಾವಲಂಬಿಗಳಷ್ಟೇ ಆಗಿರದೆ ಯಥಾರ್ಥವಾದಿಗಳೂ, ಸತ್ಯವ್ರತರೂ ಆಗಿದ್ದರು. ಆದ್ದರಿಂದ ರಾಜರುಗಳು ಇವರಿಗೆ ಪೂಜ್ಯನೀಯ ಸ್ಥಾನವನ್ನೇ ಕೊಟ್ಟಿದ್ದರು. ಇವರಿಗೆ ಸಭೆ ಸಮಾರಂಭಗಳಲ್ಲಿ ಅಗ್ರಪೂಜೆ ಸಲ್ಲಿಸಲಾಗುತ್ತಿತ್ತು. ರಾಜ–ಮಹಾರಾಜರುಗಳು ತಮ್ಮ ಕನ್ಯೆಯರಾದ ಪುತ್ರಿಯರನ್ನೇ ಋಷಿಗಳ, ಬ್ರಾಹ್ಮಣರ, ತಪಸ್ವಿಗಳ ಸೇವೆಗಾಗಿ ನೇಮಿಸುತ್ತಿದ್ದರು. ಹೀಗೆ ಇಂತಹ ಋಷಿಗಳು ಇಂತಹ ಕನ್ಯೆಯರುಗಳಿಂದ ಸೇವೆ ಸ್ವೀಕರಿಸಿದರೆ ತಮ್ಮ ವಂಶ ಪಾವನವಾಯಿತೆಂದೇ ರಾಜರು ಭಾವಿಸುತ್ತಿದ್ದರು.

'ರಾಜತ್ವ'ವಿದ್ದ ಮಹಾಭಾರತ ಕಾಲದಲ್ಲಿ ರಾಜನೇ ಅಧಿಕಾರದ ಕೇಂದ್ರಬಿಂದುವಾಗಿದ್ದು; ಸರಕಾರ ನಡೆಸುವವನೂ ಆತನೇ ಆಗಿದ್ದನೆಂದ ಮಾತ್ರಕ್ಕೆ, ಅರಸೊತ್ತಿಗೆಯಲ್ಲಿ ಮೆರೆಯುವ ಅರಸನೆಂದೋ ಅಥವಾ ಸೀಮಿತವಾದ ರಾಜ್ಯವಿತ್ತು ಎಂದು ಅರ್ಥವಲ್ಲ. 'ಉದಾರಚರಿತಾನಾಂ ತು ವಸುಧೈವ ಕುಟುಂಬಕಮ್.' ಎನ್ನುವಂತೆ, ರಾಜನ ಮನಸ್ಸೂ ವಿಶಾಲ ಮನೋಭಾವನೆಯಿಂದ ಕೂಡಿದ್ದು ಇಡೀ ಜಗತ್ತೇ ಒಂದು ಮನೆಯಂತೆ ಇದ್ದಿತು. ಪ್ರಜೆಗಳ ರಕ್ಷಣೆಯನ್ನು ಧರ್ಮದಿಂದಲೇ ಮಾಡಲ್ಪಟ್ಟಿತ್ತು. ಪ್ರತಿಯೊಬ್ಬ ಮನುಷ್ಯನೂ ತನ್ನ ಇತಿ–ಮಿತಿಗಳನ್ನು ಅರಿತುಕೊಂಡು ನಡೆದುಕೊಳ್ಳುತ್ತಿದ್ದನು. 'ಧರ್ಮ' ಎನ್ನುವುದು ಅವರ 'ಕರ್ತವ್ಯಪ್ರಜ್ಞೆ'ಯಾಗಿತ್ತು.

ಹಾಗಾದರೆ ಆಡಳಿತ ನಡೆಸಲು ಒಬ್ಬ ರಾಜ ಮತ್ತು ಆತನು ಅನುಷ್ಠಾನಗೊಳಿಸುವ ಕಾನೂನು, ಸರಕಾರ ಈ ಎಲ್ಲದರ ಅವಶ್ಯಕತೆ ಏನಿತ್ತು? ಎಂಬ ಪ್ರಶ್ನೆಯೊಂದು ನಮ್ಮಲ್ಲಿ ಉದ್ಭವಿಸುವುದು ಒಂದು ಕುತೂಹಲವೇ ಆಗಿದೆ.

ವ್ಯಾಸರು ಮಹಾಭಾರತದ ಶಾಂತಿಪರ್ವದಲ್ಲಿ,

"॥ ನ ವೈ ರಾಜ್ಯಂ ನ ರಾಜಾಸೀತ್ । ನ ದಂಡೋ ನ ಚ ದಾಂಡಿಕಃ ।
ಧರ್ಮೇಣೈವ ಪ್ರಜಾಃ ಸರ್ವಾಃ । ರಕ್ಷನ್ತಿ ಸ್ಮ ಪರಸ್ಮರಮ್ ॥"

–(ಶಾಂ.ಪ. ೫೯ – ೧೪)

–ಎಂದು ಹೇಳಿದ್ದಾರೆ. ಅಂದರೆ, ರಾಜನಾಗಲೀ, ರಾಜ್ಯವಾಗಲೀ, ಶಿಕ್ಷೆಗಳಾಗಲೀ, ಶಿಕ್ಷಕನೇ ಆಗಲಿ ಈ ಯಾವುದೂ ಇರಲಿಲ್ಲ. ಬದಲಿಗೆ ಧರ್ಮದ ಸಹಾಯದಿಂದಲೇ ಸಮಾಜದಲ್ಲಿ ಜನರು ತಮ್ಮನ್ನು ತಾವು ರಕ್ಷಿಸಿ ಕೊಳ್ಳುತ್ತಿದ್ದರು.

ಆದರೆ ಕಾಲಕಳೆದಂತೆ ಜನರಲ್ಲಿ ಕರ್ತವ್ಯಪ್ರಜ್ಞೆ ಕುಸಿಯತೊಡಗಿತು. ಆಗ ಅವರಲ್ಲಿದ್ದ ಧಾರ್ಮಿಕತೆಯೂ ನಷ್ಟವಾದಾಗ, ಜನರು ಕಾಮಕ್ರೋಧಪರವಶರಾಗಿ ವಿವೇಚನಾರಹಿತರಾಗಿ ಧಾರ್ಮಿಕ ವಿರುದ್ಧ ಕಾರ್ಯಗಳಲ್ಲೇ ಪ್ರವೃತ್ತರಾಗಿ ಮೋಹಪರವಶರಾದರು. ಇದು ಮಹಾಭಾರತ ಕಾಲದಲ್ಲಿದ್ದಂತಹ ಸಮಕಾಲೀನ ಸಮಾಜದ ಸ್ಥಿತಿ–ಗತಿಯಾಗಿತ್ತು. ಜನರು ಹಿಂಸೆಗೆ ಇಳಿದಾಗ ಧರ್ಮವೂ ಕಣ್ಮರೆಯಾಗುತ್ತಾ ಬಂದಿತು.

ಅತಿಯಾದ ಕಾಮೋಪಭೋಗದಿಂದಾಗಿ ಅನೇಕ ಜನ ರಾಜ–ಮಹಾರಾಜರುಗಳೆಲ್ಲಾ ಯಕ್ಷ್ಮರೋಗಕ್ಕೆ ಗುರಿಯಾಗಿ ಕೆಲವೇ ದಿನಗಳಲ್ಲೇ ಸಂಜೆ ಕಾಲದ ಸೂರ್ಯ ಅಸ್ತಂಗತನಾಗುವಂತೆ ಪರಲೋಕವನ್ನು ತ್ಯಜಿಸಿದ ಉದಾಹರಣೆಗಳು ಬಹಳಷ್ಟಿವೆ. ಈ ರೀತಿ ಘಟನೆಗಳು ಸಂಭವಿಸಿದಾಗಲೆಲ್ಲಾ ರಾಜ್ಯಾಡಳಿತದಲ್ಲೂ ರಕ್ಷಣೆಯಿಲ್ಲದಂತಾಗಿ ಪ್ರಜೆಗಳ ಸ್ಥಿತಿ ಅಲ್ಲೋಲಕಲ್ಲೋಲವಾಗುವುದೂ ಸಾಮಾನ್ಯವಾಗಿತ್ತು.

ಆದ್ದರಿಂದ 'ರಾಜಧರ್ಮ'ವನ್ನು ಸ್ವೀಕರಿಸಿ ರಾಜನಾಗಲು ಬಯಸುವಂತಹ ವ್ಯಕ್ತಿಯು ತನ್ನ ವೈಯಕ್ತಿಕ ಸುಖ–ಭೋಗಗಳನ್ನೆಲ್ಲಾ ತ್ಯಾಗ ಮಾಡಿ ತ್ಯಾಗಜೀವಿಯಾಗಿ ಜೀವನ ನಡೆಸುವುದಕ್ಕೇ; ಅಂದಿನ ಕಾಲದ ಸಮಕಾಲೀನ ಸಮಾಜದಲ್ಲಿ ನಿಷ್ಠೆಯಿಂದ ಕೂಡಿದ ರಾಜರುಗಳಿಂದ ಸೃಷ್ಟಿಯಾದ ಶಬ್ದ; 'ರಾಜರ್ಷಿ' ಎನ್ನುವುದು. ಇದರಿಂದಾಗಿ ಸತ್ಯನಿಷ್ಠತೆ, ಸರಳತೆ, ಮೃದುತ್ವ, ಧರ್ಮಪರತೆ, ಜಿತೇಂದ್ರಿಯತೆ – ಈ ಎಲ್ಲವನ್ನೂ ಗಳಿಸಲು ಸಾಧ್ಯವಾಗಿತ್ತು!! 'ಮಹಾಭಾರತ'ದಲ್ಲಿ ವ್ಯಾಸರು ರಾಜನಿಗಿರಬೇಕಾದ ಎಲ್ಲಾ ಗುಣಗಳನ್ನೂ ಕೂಲಂಕಷವಾಗಿ ಹೇಳಿದ್ದಾರೆ.

ಪ್ಲೇಟೋ ತನ್ನ 'ರಿಪಬ್ಲಿಕ್' ಕೃತಿಯಲ್ಲಿ,

"Until philosophers are kings or the kings and princes of the world have the spirit and power of philosophy and political greatness and wisdom meet in one....... cities will never have rest from their evils."

–ಎಂದಿದ್ದಾನೆ. ಅಂದರೆ, "ರಾಜ್ಯಗಳು ತಮ್ಮ ಸರ್ವಾಂಗೀಣ ಸೌಖ್ಯವನ್ನು ಅನುಭವಿಸಬೇಕಾದರೆ, ತತ್ವಶಾಸ್ತ್ರವನ್ನು ಬಲ್ಲವರೇ ರಾಜಕೀಯ ಆಡಳಿತ ಸೂತ್ರವನ್ನು ಹಿಡಿಯಬೇಕು." –ಇದೇ ಮಾತನ್ನು ವೇದವ್ಯಾಸರು ನೂರಾರು ವರ್ಷಗಳ ಹಿಂದೆಯೇ ಹಾಗೂ ಇದಕ್ಕೂ ನೂರು ಪಟ್ಟು ಅಧಿಕವಾಗಿಯೇ ವಿವರಣೆಗಳನ್ನುಳ್ಳ 'ರಾಜಧರ್ಮ'ವನ್ನೇ ಜಗತ್ತಿನಲ್ಲಿರುವ ಜನರಿಗಾಗಿ ಮಹಾಭಾರತದಲ್ಲಿ ತುಂಬಿಟ್ಟಿದ್ದಾರೆ. ಅದು ಅಧ್ಯಯನಶೀಲವೂ ಆಗಿದೆ.

ರಾಜನಿಂದ ರಕ್ಷಿಸಲ್ಪಡುವ ರಾಜ್ಯದ ಪ್ರಜೆಗಳೊಂದಿಗೆ ರಾಜನು ಯಾವ ರೀತಿಯ ಸಂಬಂಧವನ್ನು ಹೊಂದಿರುತ್ತಾನೆ? ಎನ್ನುವ ಪ್ರಶ್ನೆಗೆ ಸಂಬಂಧಿಸಿದಂತೆ ವೇದವ್ಯಾಸರು ಬಹಳ ಹೃದಯಸ್ಪಂದಿಯಾಗುವಂತಹ ಮಾತುಗಳನ್ನೇ ಹೇಳಿದ್ದಾರೆ.

"॥ ಭವಿತವ್ಯಂ ಸದಾ ಪ್ರಜ್ಞಾ । ಗರ್ಭಿಣೀ ಸಹಧರ್ಮಿಣಾ ॥"

–(ಶಾಂ.ಪ. ೫೬–೪೪)

–ಅಂದರೆ, ರಾಜನು ಸದಾಕಾಲವೂ ರಾಜ್ಯದಲ್ಲಿ ತನ್ನ ಪ್ರಜೆಗಳೊಂದಿಗೆ ವ್ಯವಹರಿಸುವಾಗ ಒಬ್ಬ ಗರ್ಭಿಣೀ ಸ್ತ್ರೀಯಂತಿರಬೇಕು. ಅಂದರೆ ಗರ್ಭಿಣಿ ಹೆಂಗಸು ತನ್ನ ಶಿಶುವಿನ ಸಂರಕ್ಷಣೆಗಾಗಿ, ಕ್ಷೇಮಾಭ್ಯುದಯಕ್ಕಾಗಿ ವೈಯಕ್ತಿಕವಾದ ತನ್ನ ಸುಖಾಪಭೋಗಗಳನ್ನೆಲ್ಲಾ ತ್ಯಜಿಸುತ್ತಾಳೆ. ಅದರ ಹಿತವನ್ನೇ ಬಯಸುವ ತಾಯಿಯು ಸದಾಕಾಲವೂ ತಾನು ಗರ್ಭದಲ್ಲಿ ಹೊತ್ತಿರುವ ತನ್ನ ಶಿಶುವಿನ ಕಡೆಗೇ ಹೆಚ್ಚು ಒತ್ತು ನೀಡುತ್ತಾಳೆ. ಅದೇರೀತಿ ರಾಜನೂ ಕೂಡಾ ತನ್ನ ರಾಜ್ಯದ ಪ್ರಜೆಗಳನ್ನು ಭಾವಿಸುತ್ತ, 'ಪ್ರಜೆಗಳ ಹಿತ'ವೇ ಆತನ ಪ್ರಥಮ ಆದ್ಯತೆಯಾಗಿರಬೇಕು. ಪ್ರಜೆಗಳೆಲ್ಲರೂ ಆ ರಾಜ್ಯದಲ್ಲಿ ನಿರ್ಭಯವಾಗಿ ನೆಮ್ಮದಿಯಿಂದ ಜೀವನ ನಡೆಸುವಂತಿರಬೇಕು. ಎನ್ನುವಲ್ಲ ವ್ಯಾಸರು,

"॥ ಪುತ್ರಾ ಇವ ಪಿತಾರ್ಗೇಹೇ । ವಿಷಯೇ ಯಸ್ಯ ಮಾನವಾಃ ।

ನಿರ್ಭಯಾ ವಿಚರಿಷ್ಯನ್ತಿ । ಸ ರಾಜಾ ರಾಜಸತ್ತಮಃ ॥"

–(ಶಾಂ.ಪ. ೫೭ – ೩೩)

–ಎಂದು ಉಲ್ಲೇಖಿಸಿದ್ದಾರೆ.

–ಅಂದರೆ, ಈ ರೀತಿ ಪ್ರಜಾರಕ್ಷಣೆಯನ್ನು ಮಾಡುವುದೇ ರಾಜನ ಸ್ವ–ಧರ್ಮವಾಗಿರಬೇಕು. ಆಗ ಆತನು, "॥ ಆನೃಣ್ಯಂ ಯಾತಿ ಧರ್ಮಸ್ಯ । ಲೋಕೇನ ಚ ಸಮರ್ಚ್ಯತೇ ॥" (ಶಾಂ.ಪ. ೫೬– ೧೩) ಇದರಿಂದ ಧರ್ಮದೇವತೆಯ ಋಣವನ್ನು ತೀರಿಸಿದಂತಾಗಿ ರಾಜನು ಪ್ರಜೆಗಳ ಗೌರವಕ್ಕೆ ಪಾತ್ರನಾಗಿ ಲೋಕಪೂಜ್ಯನೇ ಆಗುತ್ತಾನೆ.

ಹಿಂದೆ ಕ್ಷತ್ರಿಯ ಕುಲವು ಕ್ಷೀಣಿಸುತ್ತಿದ್ದಂತಹ ಸಂದರ್ಭದಲ್ಲಿ ಕ್ಷತ್ರಿಯ ಸ್ತ್ರೀಯರು ತಮ್ಮ ಕ್ಷತ್ರಿಯ ಕುಲದ ಅಭಿವೃದ್ಧಿಗೋಸ್ಕರ ಬ್ರಾಹ್ಮಣರು, ಋಷಿಗಳ ಸಂಪರ್ಕದಿಂದ ಮಕ್ಕಳನ್ನು ಪಡೆಯುತ್ತಿದ್ದರು.

ಸ್ತ್ರೀತ್ವದ ದುರುಪಯೋಗದಿಂದ ಸಮಾಜದಲ್ಲುಂಟಾಗುವ ವಿಧ್ವಂಸದ ಕೃತ್ಯಗಳ ಪರಿಣಾಮಗಳನ್ನು ಕುರಿತು ವ್ಯಾಸ ಋಷಿಗಳು ಚಿಂತಿಸಿದ್ದಾರೆ. ಸಾಮಾನ್ಯವಾಗಿ ಭಾರತೀಯ ಸಮಸ್ತ ಪ್ರಾಚೀನ ಸಾಂಪ್ರದಾಯಿಕ ಜಗತ್ತು ವಿವಾಹದ ಛತ್ರಛಾಯೆಯಲ್ಲೇ ಸ್ತ್ರೀಯ ಬದುಕಿನ ಭೋಗ–ಭಾಗ್ಯಗಳ ಸಾರ್ಥಕತೆಯನ್ನು ಅಳವಡಿಸಿದೆ. ವಿವಾಹವು ಸ್ತ್ರೀತ್ವದ ಪೂರ್ಣ ಸಂಫುಲ್ಲತೆಗೆ, ಅರಳುವಿಕೆಗೆ ಆಧಾರವೇದಿಕೆಯಾಗಿದೆ.

**ಇ. "ಮಹಾಭಾರತ" ಕಾಲದಲ್ಲಿ ಜಾರಿಯಲ್ಲಿದ್ದಂತಹ "ಸಂತಾನ" ಪದ್ಧತಿಗಳು :**

ಮಕ್ಕಳಿಲ್ಲದವರು ಸಂತಾನರಹಿತರಾಗುತ್ತಿದ್ದಂತ ಆಪತ್ಕಾಲದಲ್ಲಿ ಹತ್ತು ವಿಧಗಳಲ್ಲಿ ಮಕ್ಕಳನ್ನು ಪಡೆಯಬಹುದೆಂದು 'ಮಹಾಭಾರತ' ಕಾಲದಲ್ಲಿ ಅಸ್ತಿತ್ವದಲ್ಲಿದ್ದಂತಹ ವಿಧಾನಗಳನ್ನೇ ಸ್ಮೃತಿಯಲ್ಲಿಯೂ ಗುರ್ತಿಸಿದ ಸ್ಮೃತಿಕಾರರು ಹೇಳಿದ್ದಾರೆ. ಹೀಗೆ ಧರ್ಮದ ಹಿನ್ನೆಲೆಯಲ್ಲೇ ಕ್ಷತ್ರಿಯ ಸ್ತ್ರೀಯರು ತಮ್ಮ ಕ್ಷತ್ರಿಯ ಕುಲದ ಅಭಿವೃದ್ಧಿಗಾಗಿ ತಪಸ್ವಿಗಳಾದ ಬ್ರಾಹ್ಮಣರಿಂದ, ಋಷಿಗಳಿಂದ ಗರ್ಭವತಿಯರಾಗಿ ಸಾವಿರಾರು ಸಂತಾನವನ್ನು ಪ್ರಸವಿಸಿದ ನಿದರ್ಶನಗಳು ಮಹಾಭಾರತದಲ್ಲಿ ಹೇರಳವಾಗಿ ಸಿಗುತ್ತವೆ.

ಶ್ರುತಿ, ಸ್ಮೃತಿಗಳಲ್ಲಿ ಉಲ್ಲೇಖಿಸಿರುವಂತೆ ಒಮ್ಮೆ ಮನುಷ್ಯನು ಸಂತಾನರಹಿತನಾದಾಗ ಹತ್ತು ವಿಧಗಳಲ್ಲಿ ಯಾವುದಾದರೊಂದನ್ನು ಅನುಸರಿಸಿ ಮಕ್ಕಳನ್ನು ಪಡೆಯಲು ಶಾಸ್ತ್ರ, ಧರ್ಮಗಳ ಅನುಮತಿಯನ್ನು ಹೊಂದಿದ್ದರು.

ಮೊದಲ ಐದು ವಿಧಗಳಲ್ಲಿ ಜನಿಸಿದ ಶಿಶುಗಳನ್ನು 'ಜ್ಞಾತಿ' ಎಂದು ಕರೆಯಲಾಗುತ್ತಿದ್ದು ಇವರು ಆಸ್ತಿಗೆ ಹಕ್ಕುದಾರರಾಗಿರುತ್ತಿದ್ದರು. ನಂತರದ ಐದು ವಿಧಗಳಲ್ಲಿ ಜನಿಸಿದ ಶಿಶುಗಳನ್ನು 'ಕೇವಲ ಜ್ಞಾತಿ' ಎಂದು ಕರೆಯಲಾಗುತ್ತಿದ್ದು; ಇವರಿಗೆ ವಂಶಪಾರಂಪರ್ಯದ ಯಾವ ಆಸ್ತಿಗೂ ಅಥವಾ ಯಾವುದೇ ವಿಧವಾದ ಸ್ಥಾನ-ಮಾನಗಳಿಗೂ ಇವರಿಗೆ ಹಕ್ಕಿರುತ್ತಿರಲಿಲ್ಲ.

೧. ಸ್ವಯಂ ಜಾತ ಶಿಶು : ಶಾಸ್ತ್ರೋಕ್ತವಾಗಿ ವಿವಾಹಿತಳಾದ ಧರ್ಮಪತ್ನಿಯಲ್ಲಿ ಜನಿಸಿದ ಶಿಶು. (ಔರಸ)

೨. ಪ್ರಣೀತ ಶಿಶು : ತನ್ನ ಭಾರ್ಯೆಯಲ್ಲಿ ಮಹಾಪುರುಷೊಬ್ಬನ ಅನುಗ್ರಹದಿಂದ ಮಕ್ಕಳನ್ನು ಪಡೆಯುವುದು. (ಕ್ಷೇತ್ರಜ).

೩. ಪರಿಕ್ರೀತ ಶಿಶು : ತಪೋನಿಷ್ಠನಿಗೆ ಹೇರಳವಾಗಿ ಹಣವನ್ನು ಕೊಟ್ಟು ಅವನ ಮೂಲಕ ತನ್ನ ಭಾರ್ಯೆಯಲ್ಲಿ ಮಕ್ಕಳನ್ನು ಪಡೆಯುವುದು.

೪. ಪೌನರ್ಭವ : ಎರಡನೇ ಹೆಂಡತಿಯ ಮಗ.

೫. ಕಾನೀನ ಶಿಶು : ವಿವಾಹವಾಗುವ ಮೊದಲು ಸ್ತ್ರೀ-ಪುರುಷರ ಸಮಾಗಮದಿಂದ ಹುಟ್ಟಿದ ಮಗನು ಅವರಿಬ್ಬರ ವಿವಾಹದ ಮೇಲೂ ಪುತ್ರನೆನಿಸುವನು.

೬. ಕುಂಡ ಶಿಶು : ಹೆಂಡತಿ ವ್ಯಭಿಚಾರಿಣಿಯಾಗಿದ್ದರೂ ನೀಚರಲ್ಲದವರ ಸಂಗಮದಿಂದ ಹುಟ್ಟಿದ ಶಿಶು. (ಗೂಢೋತ್ಪನ್ನ).

೭. ದತ್ತ ಶಿಶು : ತಂದೆ-ತಾಯಿಗಳಿಂದ ದಾನವಾಗಿ ಬಂದ ಶಿಶು.

೮. ಕ್ರೀತ ಶಿಶು : ಹಣವನ್ನು ಕೊಟ್ಟು ಕ್ರಯಕ್ಕೆ ತೆಗೆದುಕೊಂಡ ಶಿಶು.

೯. ಕೃತ್ರಿಮ : ಕುಲಗೋತ್ರಗಳು ತಿಳಿಯದೇ ಇರುವ ಮಗುವನ್ನು ಯಾವುದೋ ಕಾರಣಗಳಿಂದ ತೆಗೆದುಕೊಳ್ಳುವುದು.

೧೦. ಔತಕೀತಸ ಶಿಶು : ಕೀಳು ಜಾತಿಯ ಸ್ತ್ರೀಯರಲ್ಲಿ ಹುಟ್ಟಿದ ಮಗು. (ಜ್ಞಾತಿ ಕೀತಸ).

ಹೀಗೆ ಧಾರ್ಮಿಕ ಚೌಕಟ್ಟಿನೊಳಗೆ ವಂಶವು ಪುನಃ ಆವಿರ್ಭೂತವಾಗಿ ಕ್ಷತ್ರಿಯ ವಂಶವು ಅಭಿವೃದ್ಧಿ ಹೊಂದುತ್ತ ಸುದೀರ್ಘವಗಿ ಬೆಳೆದಿರುವುದಕ್ಕೆ ಮಹಾಭಾರತದಲ್ಲಿ ಉಲ್ಲೇಖವಿದೆ. ಈರೀತಿಯಾಗಿ ಧರ್ಮಾನುಸರಣೆಯಿಂದ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಧರ್ಮಿಷ್ಠರಾದ ಪ್ರಜೆಗಳು ಹುಟ್ಟಿದ್ದು; ಹೇಗೆ ಕ್ಷತ್ರಿಯ ಕುಲ ಮತ್ತೆ ಸ್ಥಾಪನೆಯಾಯಿತೆಂಬುದಾಗಿ ಧರ್ಮರಾಜ್ಯದ ವರ್ಣನೆಯನ್ನು 'ಅಂಶಾವತರಣ ಪರ್ವ'ದ ೬೪ನೇ ಅಧ್ಯಾಯದಲ್ಲಿ ವೇದವ್ಯಾಸರು ಉಲ್ಲೇಖಿಸಿದ್ದಾರೆ.

ಇಷ್ಟೊಂದು ವಿಧಗಳಲ್ಲಿ ಮಕ್ಕಳನ್ನು ಸ್ತ್ರೀಯರು ಪಡೆಯಬಹುದಾಗಿದ್ದು ಅಂದಿನ ಸಮಕಾಲೀನ ಸಮಾಜ ಅದನ್ನು ಪಾಪವೆಂದು ಪರಿಗಣಿಸುತ್ತಿರಲಿಲ್ಲ. ಬದಲಾಗಿ ಅದು ಅಂದಿನ ಕಾಲದ ಧಾರ್ಮಿಕ ನಿಯಮವಾಗಿತ್ತು. ಇದಕ್ಕೆ ಮೂಲ ಕಾರಣ ಋಷಿಗಳೇ ಆಗಿದ್ದರು!! ಧರ್ಮಜ್ಞರಾಗಿದ್ದ ಋಷಿಗಳು ಸ್ತ್ರೀಸ್ವಾತಂತ್ರ್ಯವನ್ನು ಯಥೇಚ್ಛವಾಗಿ ಕೊಟ್ಟಿದ್ದು ಅದು ಸ್ತ್ರೀ-ಸ್ವೇಚ್ಛಾರದ ಎಂಬ ಹೆಸರು ಮನ್ನಣೆಗಳನ್ನು ಪಡೆದಿತ್ತು.

ಮತ್ತೆ ಕೆಲವು ಪ್ರಕರಣಗಳಲ್ಲಿ, ಗಂಡನು ಮರಣ ಹೊಂದಿದ ವಿಧವೆಯು ತನ್ನ ಪತಿಯ ತಮ್ಮನಲ್ಲಿ ಮಗುವನ್ನು ಪಡೆಯುತ್ತಿದ್ದಳು. ಆದರೆ ಪತಿಯೊಬ್ಬನಲ್ಲಿಯೇ ಸ್ತ್ರೀಯು ಅನುರಕ್ತಳಾಗಿರಬೇಕೆಂಬುದು ಇತ್ತೀಚೆಗಿನ ಆಧನಿಕ ಯುಗದ ಶಿಷ್ಟಾಚಾರದ ಸಂಪ್ರದಾಯವಷ್ಟೇ! ಆದರೆ ಇಂದಿಗೂ ಕೆಲವು ಗುಡ್ಡಗಾಡು ಪ್ರದೇಶಗಳಲ್ಲಿ ಬಹುಪತ್ನಿತ್ವ, ಬಹುಪತಿತ್ವದಂತಹ ಸಂಪ್ರದಾಯಗಳು ಜೀವಂತವಾಗಿರುವುದನ್ನು ನಾವು ಕಾಣಬಹುದಾಗಿದೆ. ವಿಶೇಷ ಸಂಗತಿಯೆಂದರೆ, ಸ್ತ್ರೀಯರಿಗೆ ಇಂತಹ ಸಂಪೂರ್ಣ ಸ್ವಾತಂತ್ರ್ಯವನ್ನಿತ್ತಿರುವ ಇಂತಹ ಆಚರಣೆಯೇ ಸನಾತನ ಧರ್ಮವೆಂದು ಪರಿಗಣಿತವಾಗಿರುವುದು. (ಮ.ಭಾ.ಪು. ೭೯೮-ಸಂ-೨)

ಋಷಿಗಳು ಸ್ತ್ರೀಗೆ ಕೊಟ್ಟಂತಹ ಈ ರೀತಿಯ ಸಂಪೂರ್ಣ ಸ್ತ್ರೀಸ್ವಾತಂತ್ರ್ಯವು ಅವಳಿಗೆ ಸ್ವೇಚ್ಛಾಚಾರವೂ ಆಗಿತ್ತು. ಮತ್ತೊಂದು ದೃಷ್ಟಿಯಿಂದ ನೋಡಿದರೆ ಅವಳಿಗೆ ಸ್ವಲ್ಪವೂ ಸಮಾಜದಲ್ಲಿ ರಕ್ಷಣೆಯೇ ಇಲ್ಲದಂತೆಯೂ ಆಗಿತ್ತು!!

ಉದ್ದಾಲಕನೆಂಬ ಒಬ್ಬ ಮಹಾತಪಸ್ವಿ ಇದ್ದನು. ಒಂದು ದಿನ ಒಬ್ಬ ಬ್ರಾಹ್ಮಣನೊಬ್ಬನು ಮನೊಯೊಳಗೆ ಬಂದು ಇದ್ದಕ್ಕಿದ್ದಂತೆ ಆ ತಪಸ್ವಿಯ ಕಣ್ಣೆದುರಿನಲ್ಲೇ ಅವನ ಪತ್ನಿಯ ಹೆಂಡತಿಯನ್ನು ಕೈಹಿಡಿದೆಳೆದುಕೊಂಡು ಹೋಗಿಬಿಟ್ಟನು. ಬ್ರಾಹ್ಮಣನ ಈ ಕೃತ್ಯದಿಂದ ಉದ್ದಾಲಕನ ಮುಖದಲ್ಲಿ ಲವಲೇಶದಷ್ಟೂ ಕೋಪವೂ ಕಾಣಿಸಲೇ ಇಲ್ಲಾ. ಆದರೆ ಆತನ ಮಗನಾದ ಶ್ವೇತಕೇತುವಿಗೆ ಬಹಳ ಸಿಟ್ಟು ಬಂದುದನ್ನು ಕಂಡು ಮಗನಿಗೆ ತನ್ನ ತಂದೆಯೇ ಸಮಾಧಾನ ಮಾಡಿದನು.

"ಕೋಪವೇಕೆ ಶ್ವೇತಕೇತು. ಇದೇ ಸನಾತನ ಧರ್ಮ. ಶಿಷ್ಟಾಚಾರವೇ ಹೀಗಿರುವಾಗ ಕೋಪಿಸುವುದೇಕೆ? ಪ್ರಪಂಚದಲ್ಲಿ ಸ್ತ್ರೀಯರು ಯಾವ ನಿಬಂಧನೆಗೂ ಒಳಪಡುವುದಿಲ್ಲ. ಅವರು ಸರ್ವ ಸ್ವತಂತ್ರರು. ಪಶುಗಳು ಹೇಗೆ ವರ್ತಿಸುತ್ತವೆ? ಎಂಬುದನ್ನು ನೀನು ಕಾಣೆಯಾ? ಅದರಂತೆಯೇ ಮನುಷ್ಯರಲ್ಲಿ ಸಕಲ ವರ್ಣದವರೂ ವರ್ತಿಸುತ್ತಾರೆ." ಎಂದನು.

ಆದರೂ ತನ್ನ ತಂದೆಯ ಸಮಾಧಾನದ ಇಂತಹ ಮಾತುಗಳಿಂದ ಶ್ವೇತಕೇತುವಿಗೆ ಸ್ವಲ್ಪವೂ ಸಮಾಧಾನ ಸಿಗಲಿಲ್ಲ. ಋಷಿಗಳು ತಮ್ಮ ಸ್ವಾರ್ಥ ಸಾಧನೆಗಾಗಿ ಹಾಕಿಕೊಂಡ ಕಟ್ಟಳೆಗಳಿಂದ ಸ್ತ್ರೀಯರಿಗೆ ಸಮಾಜದಲ್ಲಿ ಸ್ವಲ್ಪವೂ ರಕ್ಷಣೆ ಇಲ್ಲ ಎಂಬುದು ಅವನಿಗೆ ಖಚಿತವಾಯಿತು.

ಅಂದಿನ ಕಾಲದ ಸಮಕಾಲೀನ ಸಮಾಜದಲ್ಲಿ ಸರ್ವಜ್ಞರಾದ ಋಷಿಗಳೇ ಕಾನೂನನ್ನು ನಿರ್ಮಿಸುತ್ತಿದ್ದರು. ಶಾಸನಗಳನ್ನೂ ಅವರೇ ಹೊರಡಿಸುತ್ತಿದ್ದರು. ಭಾರತೀಯರಿಗೆ ಸಂಬಂಧಿಸಿದ ಶಾಸನಗಳೆಲ್ಲವೂ ಕಾಲಜ್ಞಾನವನ್ನು ತಿಳಿದಿದ್ದ ಮಹರ್ಷಿಗಳಿಂದಲೇ ಪ್ರಣೀತವಾಗುತ್ತಿದ್ದವು. ಇವರು ಮಾಡಿದಂತಹ ಕಾನೂನು ಕಟ್ಟಳೆ, ನಿಯಮ–ಶಾಸನಗಳನ್ನು ಬದಲಿಸಲು, ತೆಗೆದುಹಾಕಲು, ತಿದ್ದುಪಡಿ ಮಾಡಲು ರಾಜರಿಗೂ ಅಧಿಕಾರವಿರುತ್ತಿರಲಿಲ್ಲ. ಏಕೆಂದರೆ ಋಷಿ–ಮುನಿಗಳ ಮಾರ್ಗದರ್ಶನದಲ್ಲೇ ರಾಜರುಗಳು ರಾಜ್ಯವನ್ನಾಳುತ್ತಿದ್ದರು. ಸಾಮಾನ್ಯವಾಗಿ ಒಬ್ಬರ ಸ್ವಾರ್ಥಕ್ಕಾಗಿ ಮಾಡುತ್ತಿರಲಿಲ್ಲವಾದರೂ ಇಂತಹ ಋಷಿಪ್ರಣೀತ ಶಾಸನಗಳಿಗೆ ಸುಧಾರಣೆ ರೂಪದಲ್ಲಿ ಮಾರ್ಪಾಡುಗಳನ್ನು ಋಷಿಗಳೇ ಮಾಡುತ್ತಿದ್ದರು.

ಆದರೆ ತನ್ನ ತಾಯಿಗೆ ಒದಗಿದ ಆಪತ್ತಿನಿಂದ ಬಹುವಾಗಿ ದುಃಖಿತಗೊಂಡ ಶ್ವೇತಕೇತು ಸ್ತ್ರೀಯರಿಗೆ ಇದ್ದ ಸ್ವಾತಂತ್ರ್ಯ ಒಳ್ಳೆಯದಲ್ಲ ಎಂದು ನಿರ್ಧರಿಸಿ ತಾನೂ ಕೂಡಾ ಒಬ್ಬ ಋಷಿಯೇ ಆಗಿದ್ದುದರಿಂದ, "ಸ್ತ್ರೀಯರೆಲ್ಲರೂ ಗಂಡನ ಆಜ್ಞೆಗೆ ಒಳಪಡಬೇಕು, ಇಲ್ಲದಿದ್ದರೆ ಅವರು ದುಃಖಕರವಾದ ಭ್ರೂಣಹತ್ಯಾದೋಷಕ್ಕೆ ಒಳಗಾಗುತ್ತಾರೆ." ಎಂದು ಸಾರುವ ಮೂಲಕ ಇದೂವರೆಗೂ ಜಾರಿಯಲ್ಲಿದ್ದಂತಹ ಕಾನೂನಿನಲ್ಲಿ ತಿದ್ದುಪಡಿ ಮಾಡಿ ಸುಧಾರಣೆಗೊಳಿಸಿ ಹೊಸ ಕಟ್ಟಳೆಯನ್ನು ಜಾರಿಗೆ ತಂದನು. ಇದರೊಂದಿಗೆ, "ಪುತ್ರಾರ್ಥಿಯಾದ ಪತಿಯ ಆಜ್ಞೆಯನ್ನು ಪರಿಪಾಲಿಸದ ಸ್ತ್ರೀಗೂ ಸಹ ಇದೇ ವಿಧವಾದ ಪಾಪ ಉಂಟಾಗುವುದು."[3] ಎಂದು ಹೇಳಿದನು. ಇದನ್ನು ವಿಶೇಷವಾಗಿ ಅಂದಿನ ಕಾಲದ ಸಮಾಜದಲ್ಲಿ 'ಸತಿ–ಪತಿ ಧರ್ಮ' ಎಂದೇ ಹೆಸರನ್ನು ಪಡೆದಿತ್ತು. ಇದಕ್ಕೆ ಮತ್ತೊಂದು ಉತ್ತಮ ನಿದರ್ಶನವೆಂದರೆ; ಸೌದಾಸ ಪತ್ನಿಯಾದ ಮದಯಂತಿಯೂ ಸಹ ತನ್ನ ಪತಿಯ ಆಜ್ಞೆಯಂತೆ ವಸಿಷ್ಠರಲ್ಲಿಗೆ ಹೋಗಿ ಆಶ್ಮಕನೆಂಬ ಪುತ್ರನನ್ನು ಪಡೆದಳು.

ಇದಕ್ಕಿಂತಲೂ ಮತ್ತೂ ಉತ್ತಮ ನಿದರ್ಶನವೆಂದರೆ;

ಕುರುವಂಶವೇ ನಂದಿಹೋಗುತ್ತಿದ್ದಂತಹ ಸಂದರ್ಭದಲ್ಲಿ ಸತ್ಯವತಿಯು ಭರತ ವಂಶದ ಉದ್ಧಾರಕ್ಕಾಗಿ ತನ್ನ ಸೊಸೆಯರಾದ ಅಂಬಿಕೆ, ಅಂಬಾಲಿಕೆಯರಲ್ಲಿ ತಮ್ಮ ಮಗನಾದ ಕೃಷ್ಣದ್ವೈಪಾಯನರಿಂದ ಧೃತರಾಷ್ಟ್ರ ಮತ್ತು ಪಾಂಡುರಾಜನನ್ನು ಪಡೆದಳು. ಇದೇ ಸಂದರ್ಭದಲ್ಲಿ ಭೀಷ್ಮನಿಗೆ ತಾನು ಪರಾಶರರಿಂದ ವ್ಯಾಸರನ್ನು ಪಡೆದ ವಿಚಾರವನ್ನು ತಿಳಿಸುತ್ತಾಳೆ.

"ಒಂದು ದಿನ ನಾನು ದೋಣಿಯನ್ನು ನಡೆಸಲು ಹತ್ತಿದಾಗ ಮಹರ್ಷಿಗಳಾದ ಪರಾಶರರು ಯಮುನೆಯನ್ನು ದಾಟಲು ದೋಣಿ ಹತ್ತಿದರು. ಆಗ ಮಹರ್ಷಿಗಳ ಮನಸ್ಸು ನನ್ನೆಡೆಗೆ ಪ್ರವಹಿಸಿತು. ಪ್ರಿಯವಾಕ್ಯಗಳಿಂದ ನನ್ನೊಡನೆ ಸಮಾಗಮದ ಇಚ್ಛೆಯನ್ನು ವ್ಯಕ್ತಪಡಿಸಿದಾಗ ನನಗೆ ಭಯವಾಯಿತು. ಆದರೂ ಅವರಿಗೆ ವಿರೋಧವಾಗಿ ನಡೆಯಲೂ ಭಯವಾಯಿತು. ಏಕೆಂದರೆ ಶಾಪಕೊಟ್ಟುಬಿಡಬಹುದೆಂಬ ಹೆದರಿಕೆಯಿಂದ. ಅವರು ತಮ್ಮ ಆಸೆಯನ್ನು ಪೂರೈಸಿಕೊಂಡರು. ಇದಕ್ಕೆ ಪ್ರತಿಯಾಗಿ ಅವರಿತ್ತ ವರದಿಂದ ಶರೀರದಲ್ಲಿ ಆಜನ್ಮದಿಂದಿದ್ದ ಮೀನಿನ ವಾಸನೆಯು ಹೋಗಿ ಸುಗಂಧವುಂಟಾಯಿತು. ಅಂದಿನಿಂದ ನಾನು 'ಯೋಜನಗಂಧಿ' ಎಂಬ ಹೆಸರನ್ನು ಪಡೆಯಲು ಕಾರಣಳಾದೆನು. ಪುತ್ರವತಿಯಾದ ಮೇಲೆಯೂ ಸಹಾ ನನ್ನ ಹಿಂದಿನ ಕನ್ಯಕಾವಸ್ಥೆಗೆ ಯಾವುದೇ ಕಳಂಕವುಂಟಾಗದಂತೆ ಮಹರ್ಷಿಗಳು ಅನುಗ್ರಹಸಿದರು."[3] ಎಂದಳು.

ಅಂದರೆ ಇದರಿಂದ ನಮಗೆ ತಿಳಿಯುವುದೇನೆಂದರೆ, ಸ್ತ್ರೀಯರ ದೌರ್ಬಲ್ಯವನ್ನು ಉಪಯೋಗಿಸಿಕೊಂಡ ಋಷಿಗಳು ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಿದ್ದರು. ಈ ಪ್ರಸಂಗದಲ್ಲೇ, 'ಕುಂತಿಯು ಕುಂತಿಭೋಜನ ಅರಮನೆಗೆ ಆಗಮಿಸಿದ್ದ ಮಹಾ ಕೋಪಿಷ್ಠರಾದ, ಧರ್ಮ ಸೂಕ್ಷ್ಮತೆಗಳನ್ನು ಚೆನ್ನಾಗಿ ಅರಿತಿದ್ದ ದೂರ್ವಾಸರಿಗೆ ಅತಿಥಿ ಸೇವೆ ಮಾಡಿ ಅವರ ಕೃಪೆಗೆ ಪಾತ್ರಳಾದ ಕುಂತಿಯು ಕನ್ಯಾವಸ್ಥೆಯಲ್ಲಿದ್ದಾಗಲೇ ಸೂರ್ಯನಷ್ಟೇ ತೇಜಸ್ಸು, ಕಾಂತಿಗಳನ್ನು ಹೊಂದಿದ ಕರ್ಣನನ್ನು ಹಡೆದು ಸಮಾಜಕ್ಕೆ ಹೆದರಿಕೊಂಡು ಮಗುವನ್ನು ಗಂಗೆಯಲ್ಲಿ ತೇಲಿಬಿಟ್ಟಿದ್ದಳು.'

ಹಾಗೆಯೇ, ಇಲ್ಲೂ ಕೂಡಾ ಧರ್ಮವಿದರಾದ ಋಷಿಗಳು, 'ಪತಿಯ ಆಜ್ಞೆಯನ್ನು ಮೀರಲೇಬಾರದು.' ಎಂದು ತೀರ್ಮಾನಿಸಿದ್ದರು. ಮಕ್ಕಳಾಗುವ ಶಕ್ತಿಯನ್ನು ಕಳೆದುಕೊಂಡಿದ್ದ ಪಾಂಡುರಾಜನು ಮಕ್ಕಳನ್ನು ಪಡೆಯಲೇ ಬೇಕೆಂಬ ಅಭಿಲಾಷೆ ಹೊಂದಿದ್ದನು. ತನ್ನ ಹೆಂಡತಿ ಕುಂತಿಯನ್ನು ಕರೆದು, "ನನ್ನ ಮಾತನ್ನು ನಿರ್ಲಕ್ಷಿಸದೇ ಮಹಾತಪಸ್ವಿಯಾದ ಬ್ರಾಹ್ಮಣನೊಬ್ಬನನ್ನು ಆಶ್ರಯಿಸಿ, ಸಕಲ ಸದ್ಗುಣಗಳಿಂದ ಪರಿಪೂರ್ಣರಾದ ಮಕ್ಕಳನ್ನು ಪಡೆಯುವುದೇ ನಿನಗೆ ಸಾಧುವಾದುದು. ನಿನ್ನ ಈ ಪ್ರಯತ್ನದಿಂದ ನಾನೂ ಸಹ ಪುತ್ರವಂತರಿಗೆ ಸಿಕ್ಕುವ ಉತ್ತಮ ಲೋಕಗಳನ್ನೇ ಪಡೆಯುವೆನು."[4] ಎಂದು ಹೇಳಿ ಅವಳನ್ನು ಒತ್ತಾಯಿಸುತ್ತಾನೆ.

ಕಠೋರ ವ್ರತನಿಷ್ಠನೂ, ಧರ್ಮರಹಸ್ಯಗಳನ್ನೆಲ್ಲಾ ಬಹು ನಿಷ್ಕೃಷ್ಟವಾಗಿ ತಿಳಿದುಕೊಂಡಿದ್ದ ದೂರ್ವಾಸನನ್ನು ಕುಂತಿ ಬಹು ಪ್ರಯತ್ನದಿಂದ ಸಂತಸಗೊಳಿಸಿದ್ದರಿಂದ ಅವನು ಸುಪ್ರೀತನಾಗಿ ಪ್ರಯೋಗವಿಧಿಸಹಿತ ಮಂತ್ರೋಪದೇಶ ಮಾಡಿ 'ಪುತ್ರಂ ದೇಹೀ' ಎಂದು ಬೇಡಿದವಳಿಗೆ ಸಂತಾನವನ್ನು ಕರುಣಿಸಿದ್ದನು. ಧರ್ಮರಾಜ, ಭೀಮಾರ್ಜುನರನ್ನು ಕುಂತಿ ಪಡೆದಳು.

ಮಾದ್ರಿಯೂ ಇದೇ ವಿಧದಲ್ಲೆ ನಕುಲ, ಸಹದೇವರನ್ನು ಪಡೆದಳು.

ಈ ಪ್ರಸಂಗದಲ್ಲಿ ನಾವು ಮುಖ್ಯವಾಗಿ ನೆನಪಿಸಿಕೊಳ್ಳಬಹುದಾದ ಒಂದು ಅಂಶವೆಂದರೆ; 'ತನ್ನ ಪತಿಯ ಆಜ್ಞಾಧಾರಕಳಾಗಿ ಶರದಂಡಯಾನಿಯು ಋತುಕಾಲದಲ್ಲಿ ಸ್ನಾನಮಾಡಿ ಶುಚೀರ್ಭೂತೆಯಾಗಿ ರಾತ್ರಿಯ ಎರಡನೆಯ ಯಾಮದಲ್ಲಿ ನಾಲ್ಕು ರಸ್ತೆಗಳು ಕೂಡುವ ಜಾಗದಲ್ಲಿ ಕುಳಿತು ನಿರೀಕ್ಷಿಸುತ್ತಿದ್ದಳು. ಹೆಚ್ಚು ಕಾಲದ ವ್ಯರ್ಥವಾಗದೇ ಮಹಾತಪಸ್ವಿಯೊಬ್ಬನು ಅಲ್ಲಿಗೆ ಬಂದುದನ್ನು ಕಂಡು ತನಗೆ ಮಕ್ಕಳಾಗುವಂತೆ ಅನುಗ್ರಹಿಸಬೇಕೆಂದು ವೀರಪತ್ನಿಯು ಪ್ರಾರ್ಥಿಸಿ; ಯಥಾವಿಧಿಯಾಗಿ ಪುಂಸವನಕರ್ಮ ಮಾಡಿದ ಆ ತಪಸ್ವಿಯ ಸಂಯೋಗದಿಂದ ದುರ್ಜಯನೇ ಮೊದಲಾದ ಮಹಾರಥರಾದ ಮೂವರು ಮಕ್ಕಳನ್ನು ಶರದಂಡಯಾನಿಯು ಪಡೆದಳು.'

ಈ ಹಿನ್ನೆಲೆಯಲ್ಲಿ ಪಾಂಡು ರಾಜನೂ ಕೂಡಾ ಕುಂತಿಯನ್ನು ಯೋಗ್ಯಪುರುಷನೊಬ್ಬನನ್ನು ಆಶ್ರಯಿಸಿ ಪುತ್ರವಂತಳಾಗುವಂತೆ ಸೂಚಿಸಿದ್ದನು.

**ಈ. 'ಮಹಾಭಾರತ'ದ ಸಮಕಾಲೀನದಲ್ಲಿ ಅಸ್ತಿತ್ವದಲ್ಲಿದ್ದಂತಹ ವಿವಾಹ ಪದ್ಧತಿಗಳು :**

ಭೀಷ್ಮನು ತನ್ನ ಸಹೋದರನಿಗಾಗಿ ಕಾಶಿಯ ಮೂವರು ರಾಜಕುಮಾರಿಯನ್ನು ಸ್ವಯಂವರ ಮಂಟಪದಿಂದ ಅಪಹರಿಸಿಕೊಂಡು ಕರೆತಂದದ್ದನ್ನೂ ನೆನಪಿಸುತ್ತದೆ. ಅಂದಿನ ಕಾಲದಲ್ಲಿದ್ದ ಸಮಕಾಲೀನ ಸಮಾಜದಲ್ಲಿ ವಿವಾಹಪದ್ಧತಿಗಳನ್ನು ನಿರೂಪಿಸುತ್ತದೆ.

'ಮಹಾಭಾರತ'ದಲ್ಲಿ ಸಮಕಾಲೀನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದಂತಹ ಎಂಟು ಪ್ರಕಾರದ ವಿವಾಹಗಳನ್ನು ತಿಳಿಸುತ್ತದೆ.

೧. "ವಸ್ತ್ರಾಭರಣಗಳಿಂದಲಂಕೃತವಾದ ಕನ್ಯೆಯನ್ನು ಸ್ವಜಾತಿಯಲ್ಲಿ ಯೋಗ್ಯನಾದ ವರನನ್ನು ಹುಡುಕಿ ಪಾಣಿಗ್ರಹಣ ಮಾಡಿಕೊಳ್ಳುವುದಕ್ಕೆ 'ಬ್ರಾಹ್ಮವಿವಾಹ' ಎನ್ನುತ್ತಾರೆ.

೨. ದೇವತೆಗಳ ಸಂಬಂಧವಾದ ಯಜ್ಞ ಮಾಡಿ ಯಜ್ಞದ ಕೊನೆಯಲ್ಲಿ ಋತ್ವಿಜರಿಗೆ ಕನ್ಯೆಯನ್ನು ದಾನ ಕೊಡುವುದಕ್ಕೆ 'ದೈವವಿವಾಹ'ವೆಂದು ಹೆಸರು.

೩. ವರನಿಂದ ಒಂದು ಹಸು ಅಥವಾ ಒಂದು ಎತ್ತನ್ನು ಕನ್ಯಾಶುಲ್ಕವಾಗಿ ಪಡೆದು ಕನ್ಯಾದಾನ ಮಾಡುವುದಕ್ಕೆ 'ಆರ್ಷವಿವಾಹ'ವೆಂದು ಕರೆಯುತ್ತಿದ್ದರು.

೪. ವಧೂ-ವರರು ಜೊತೆಯಲ್ಲಿದ್ದು ಧರ್ಮಚಾರಿಗಳಾಗಿರಬೇಕೆಂಬ ಸಂಕಲ್ಪದಿಂದ ಕನ್ಯಾದಾನ ಮಾಡುವುದಕ್ಕೆ 'ಪ್ರಾಜಾಪತ್ಯವಿವಾಹ'ವೆಂದು ಹೆಸರು.

೫. ಕನ್ಯೆಗೆ ಇಷ್ಟು ಮೌಲ್ಯವೆಂಬುದನ್ನು ನಿರ್ಧರಿಸಿ ಅಷ್ಟು ಮೌಲ್ಯವನ್ನು ವಿಕ್ರಯರೂಪವಾಗಿ ಪಡೆದು ಮಾಡುವ ವಿವಾಹಕ್ಕೆ 'ಅಸುರವಿವಾಹ'ವೆಂದೂ ಕರೆಯುತ್ತಿದ್ದರೆ;

೬. ಯುವಕ-ಯುವತಿಯರು ಸ್ವೇಚ್ಛೆಯಿಂದ ಮಾಡಿಕೊಳ್ಳುವ ವಿವಾಹಕ್ಕೆ 'ಗಾಂಧರ್ವವಿವಾಹ' ಎನ್ನುತ್ತಾರೆ.

೭. ಯುದ್ಧ ಮಾಡಿ ಕನ್ಯೆಯ ಬಂಧು-ಬಾಂಧವರನ್ನು ಸಂಹರಿಸಿ ಕನ್ಯೆಯೂ ಅವಳ ತಂದೆ-ತಾಯಿಗಳೂ ಮತ್ತು ಅಣ್ಣ-ತಮ್ಮಂದಿರೂ ರೋಧನ ಮಾಡುತ್ತಿರುವ ಸಮಯದಲ್ಲಿ ಕನ್ಯೆಯನ್ನು ಎತ್ತಿಕೊಂಡು ಬಂದು ವಿವಾಹವಾಗುವುದಕ್ಕೆ 'ರಾಕ್ಷಸವಿವಾಹ' ಎಂದು ಹೆಸರು. ಮತ್ತು;

೮. ಮನೆಯಲ್ಲಿ ಎಲ್ಲರೂ ಮಲಗಿರುವ ಸಮಯದಲ್ಲಿ ಅಥವಾ ಅಜಾಗರೂಕರಾಗಿರುವ ಸಮಯದಲ್ಲಿ ಕನ್ಯೆಯನ್ನು ಕದ್ದುಕೊಂಡು ಹೋಗಿ ವಿವಾಹವಾಗುವುದಕ್ಕೆ 'ಪೈಶಾಚಿಕವಿವಾಹ'ವೆಂದೂ -ಇವುಗಳಲ್ಲಿ ಯಾರಿಗೆ ಯಾವುದು ಧರ್ಮವೆಂಬುದನ್ನೂ 'ಮಹಾಭಾರತ'ದಲ್ಲಿ ವ್ಯಾಸರು ವಿವರಿಸಿ ಹೇಳಿದ್ದಾರೆ."[೫]

ಮೊದಲನೆಯ ನಾಲ್ಕು ವಿವಾಹಗಳು ಬ್ರಾಹ್ಮಣನಿಗೆ ಪ್ರಶಸ್ತವಾದವುಗಳು. ಇದೇ ಕ್ರಮದಲ್ಲಿ ಕ್ಷತ್ರಿಯನಿಗೆ ಆರು ವಿಧವಾದ ವಿವಾಹಗಳು ಹೇಳಲ್ಪಟ್ಟಿವೆ. ಕ್ಷತ್ರಿಯರಾಜರು ರಾಕ್ಷಸವಿವಾಹವನ್ನಾದರೂ ಮಾಡಿಕೊಳ್ಳಬಹುದು ಎನ್ನುವುದಕ್ಕೆ ಶಾಸ್ತ್ರಾಧಾರವಿದೆ. ವೈಶ್ಯ-ಶೂದ್ರರು ಅಸುರವಿವಾಹವನ್ನು ಮಾಡಿಕೊಳ್ಳಬಹದು. ಅವರಿಗೆ ಕಡೆಯ ಐದು ರೀತಿಯ ವಿವಾಹಗಳಲ್ಲಿ ಮೊದಲನೆಯ ಮೂರು ವಿವಾಹಗಳು ಧರ್ಮಸಮ್ಮತವಾಗಿವೆ. ಆದರೆ ಕ್ಷತ್ರಿಯರಾದವರು ಪೈಶಾಚ ಮತ್ತು ಅಸರು ವಿವಾಹಗಳನ್ನೆಂದಿಗೂ ಮಾಡಿಕೊಳ್ಳಬಾರದು. -ಈ ವಿಧವಾದ ವಿಧಿಯನ್ನನುಸರಿಸಿ ವಿವಾಹವಾಗಬಹುದೆಂಬ ಉಲ್ಲೇಖ 'ಮಹಾಭಾರತ'ದಲ್ಲಿ ನಮಗೆ ಸಿಗುತ್ತದೆ.

ಈ ರೀತಿಯಾಗಿ ಮಹಾಭಾರತದ ಘಟನೆಗಳೊಂದಿಗೆ ನೇರವಾದ ಮತ್ತು ವಿಶೇಷವಾದ ಸಂಬಂಧವನ್ನು ಹೊಂದಿದ್ದಂತಹ ಮುಖ್ಯ ಸ್ತ್ರೀ ಪಾತ್ರಗಳೇ (ಸತ್ಯವತಿ, ಗಾಂಧಾರಿ, ಕುಂತಿ ಮತ್ತು ದ್ರೌಪದಿ) ಈ ಸ್ಥಿತಿಯನ್ನು ಅನುಭವಿಸಿರಬೇಕಾದರೆ ಇನ್ನು ಸಾಮಾನ್ಯ ಸ್ತ್ರೀಯರ ಪಾಡು ಹೇಗಿತ್ತು? ಎಂಬುದು ಆಲೋಚನಾರ್ಹವಾದುದೇ ಸರಿ!

ಗಾಂಧಾರಿಯ ಬದುಕೊಂದು ಬದುಕೇ? ಕುರುಡ ಗಂಡ, ಉದ್ಧಟ ಮಗ, ಯಾವ ಸುಖಕ್ಕಾಗಿ ಅವಳಿಗೆ ರಾಜ್ಯಸಿಂಹಾಸನ, ರಾಣೀವಾಸ, ನೂರಾರು ಸಖಿಯರು, ಅಂತಃಪುರವೆಲ್ಲಾ? ಕುಂತಿಯ ಬದುಕು ಇದಕ್ಕಿಂತಲೂ ಭಿನ್ನವೇನಿಲ್ಲಾ! ವೈಧವ್ಯ, ದಾರಿದ್ರ್ಯ, ವನವಾಸ.. ಒಂದೇ, ಎರಡೇ?! ಹೀಗೆ 'ಮಹಾಭಾರತ'ದುದ್ದಕ್ಕೂ ಮಿಡಿಯುವ ವಿವಿಧ ಮುಖ ಸ್ತ್ರೀಸತ್ತ್ವಾನುಸಂಧಾನವನ್ನೇ ಪರಿಚಯಿಸುತ್ತದೆ.

ಧರ್ಮ–ಅಧರ್ಮಗಳ ಅನ್ವೇಷಣೆಯಲ್ಲಿ ತೊಡಗಿದ ಮಹಾಕಾವ್ಯ 'ಮಹಾಭಾರತ'ವನ್ನು ಅಧ್ಯಯನ ಮಾಡುವಾಗ; ಮಹಾಧರ್ಮಿಷ್ಠನಾದ ಯುಧಿಷ್ಠಿರನು ದ್ಯೂತದ ವ್ಯಸನದಲ್ಲಿ ಹೇಗೆ ಸಿಲುಕಿಕೊಂಡನು? ಇದಕ್ಕೆ ಆತನ ರಾಜಧರ್ಮವು ಅನುಮತಿಯನ್ನಿತ್ತಿತೇ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ.

ಈ ಕುರಿತಾಗಿ ಆಳ್ವ ಚಿರಂಜೀವಿಯವರು 'ವೈದಿಕ ಸಂಸ್ಕೃತಿಯಲ್ಲಿ ಪಗಡೆ ಆಟ' –ಶಂ.ಬಾ.ಜೋಶಿ ಅಭಿನಂದನ ಗ್ರಂಥದಲ್ಲಿ, ಪು. ೩೦೮ ರಲ್ಲಿ, "ವೇದಗಳ ಕಾಲದಲ್ಲಿಯೇ ಈ ಆಟವು ಸಮಾಜದಲ್ಲಿ ನೈತಿಕ ಮಟ್ಟವನ್ನು ಕಳೆದುಕೊಂಡಿತ್ತು. ಮತ್ತು ಆಯಾ ಕಾಲದ ಜನಜೀವನದ ಆಕರ್ಷಣೆಯನ್ನು ಗಳಿಸಿಕೊಂಡು ಬಂದಿತ್ತು." ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಹೀಗೆ 'ಮಹಾಭಾರತ'ದ ಕಾಲಕ್ಕೂ ಹಿಂದೆ ಇದ್ದಂತಹ ಸೈಂಧವ ಸಂಸ್ಕೃತಿಯಲ್ಲೂ ಪಗಡೆ ಆಟವು ಅಸ್ತಿತ್ವದಲ್ಲಿತ್ತು ಎಂಬುದನ್ನು ಅಲ್ಲಿಯೇ ದೊರೆತ ಕೆಲವು ಅವಶೇಷಗಳಿಂದ ತಿಳಿದುಬರುತ್ತದೆ. ಬಹು ಪ್ರಾಚೀನವಾದ ಈ ಆಟವು ಮುಂದೆ ವೇದಗಳ ಕಾಲದಲ್ಲಿಯೂ ರೂಢಿಯಲ್ಲಿದ್ದು ಹಲವು ರೀತಿಯ ವೈಶಿಷ್ಟ್ಯತೆಗಳನ್ನು ಪಡೆದುಕೊಳ್ಳುತ್ತ ಆ ಕಾಲದ ಮಾನವನ ಅಭಿರುಚಿಯನ್ನು ಅಭಿವ್ಯಕ್ತಿಗೊಳಿಸುತ್ತಾ ಈ ಕಾಲದವರೆಗೂ ತನ್ನದೇ ಆದ ರೀತಿಯಲ್ಲಿ ಸಾಗುತ್ತಾ ಬಂದಿದೆ.

ಇದನ್ನು ನೋಡಿದಾಗ ಈ 'ದ್ಯೂತ' ಎಂತಹ ಅನರ್ಥಕಾರಿ ಆಟದ ಸಾಧನವೆಂದು ನಾವು ತಿಳಿದುಕೊಳ್ಳಬಹುದಾಗಿದೆ. ಋಗ್ವೇದ ಕಾಲದಲ್ಲಿ ಹಾಗೂ ಆನಂತರದ ಕಾಲದಲ್ಲಿ ರಾಜ–ಮಹಾರಾಜರಷ್ಟೇ ಅಲ್ಲದೆ ಋಷಿಗಳೂ, ಜನಸಾಮಾನ್ಯರೂ ಕೂಡಾ ಈ ಅನರ್ಥಕಾರಿ ಸಾಧನ 'ಪಗಡೆ' ಆಟದಲ್ಲಿ ತೊಡಗುತ್ತಿದ್ದರು.

ವ್ಯಾಸರಿಗೆ 'ಮಹಾಭಾರತ' ರಚನೆಗೆ 'ಋಗ್ವೇದ'ವೇ ತಳಹದಿಯಾದರೂ ಅದರಲ್ಲಿ ಕಂಡುಬಂದಿರುವಂತಹ 'ದ್ಯೂತ' ಅಥವಾ 'ಪಗಡೆ' ಆಟದ ದುಷ್ಪರಿಣಾಮದಿಂದಾಗಿ 'ರಾಜಧರ್ಮ' ಪರಿಪಾಲಿಸುವಂತಹ ಕ್ಷತ್ರಿಯರನ್ನೂ ಬಿಡದೆ ಸೂಕ್ಷ್ಮಾತಿಸೂಕ್ಷ್ಮ ರೀತಿಗಳಿಂದ ಮಾನಸಿಕವಾಗಿ ವಧಿಸುವ ಮೂಲಕ ಹೇಗೆ ನೋವನ್ನುಂಟು ಮಾಡುತ್ತದೆ ಎಂಬುದನ್ನು ಜಗತ್ತಿಗೆ ನೀತಿಬೋಧೆ ಹೇಳುವುದೇ ಅವರ ಪರಮಗುರಿಯಾಗಿತ್ತು.

ಹಾಗೆಯೇ, ಐದು ಜನ ಸಹೋದರರು ಒಬ್ಬಳೇ ಸ್ತ್ರೀಯನ್ನು ವಿವಾಹವಾಗುವುದು ಸರಿಯೇ? ಎನ್ನುತ್ತ ದ್ರೌಪದಿಯ 'ಪಂಚಪತಿತ್ವ'ದ ಕುರಿತು ಪ್ರಶ್ನೆ ಏಳದೇ ಇರಲಾರದು! 'ಮಹಾಭಾರತ'ವು 'ಕೌರವರ–ಪಾಂಡವರ ನಡುವಿನ ಯುದ್ಧ ಎಂದು ಹೇಳುವುದಕ್ಕೂ ಮೊದಲ ಹಿನ್ನೆಲೆ; ಕ್ಷತ್ರಿಯನಾದ ಪಾಂಚಾಲ ದೇಶದ ದ್ರುಪದನಿಂದ ಅಪಮಾನಿತಗೊಂಡ ಬ್ರಾಹ್ಮಣ ತಪಸ್ವಿ ದ್ರೋಣನು ಕೌರವರನ್ನು ಮುಂದಿಟ್ಟುಕೊಂಡು ತನ್ನ ಸೇಡನ್ನು ದ್ರುಪದನ ವಿರುದ್ಧ ತೀರಿಸಿಕೊಳ್ಳಲು ಹೆಣೆದ ಒಂದು ಜಾಲ!! ಆ ಸಮಯದಲ್ಲಿ ಪಾಂಚಾಲ ದೇಶದಲ್ಲಿ 'ಬಹುಪತಿತ್ವ'ವು ಮಾನ್ಯವಾಗಿತ್ತು.

ಶಂತನು ಮರಣಿಸಿದ ನಂತರ ಇಡೀ ಸಾಮ್ರಾಜ್ಯದ ಅಧಿಕಾರ ಸೂತ್ರವನ್ನು ಕೈಗೆತ್ತಿಕೊಂಡು ರಾಜ್ಯದ ಆಗುಹೋಗುಗಳನ್ನೆಲ್ಲಾ ನಿಭಾಯಿಸುತ್ತಿದ್ದಂತಹ ಸತ್ಯವತಿಯೇ ಮಹಾಭಾರತದ ಕರ್ತೃ, ಪರಮ ಋಷಿಯಾದ ವೇದವ್ಯಾಸ ಋಷಿಗಳ ಜನನಿ ಎನ್ನುವುದು ಗಮನಾರ್ಹವಾದ ಅಂಶ.

ಅಂದಿನ ಕಾಲದ ಋಷಿ ಮುನಿಗಳು ರಾಜನ ಆಡಳಿತ, ಅಧಿಕಾರದಲ್ಲಿ ಹೊಂದಿದ್ದಂತಹ ನಿಯಂತ್ರಣದಂತೆಯೇ ಸಮಾಜದಲ್ಲಿನ ಇತರ ಸಾಮಾನ್ಯ ಜನರೊಂದಿಗೂ ಸಂಪರ್ಕವನ್ನಿಟ್ಟುಕೊಂಡಿದ್ದ ಋಷಿಗಳೂ ಇದ್ದರು. ತಪಸ್ವಿಗಳು, ವ್ರತನಿಷ್ಠರಾದ ಋಷಿಗಳಿಗೆ ಸಮಾಜದಲ್ಲಿ ಒಂದು ಉನ್ನತವಾದ ಗೌರವ, ಭಕ್ತಿಗಳಿಂದ ಕೂಡಿದ ಸ್ಥಾನಮಾನಗಳನ್ನು ಜನರು ನೀಡಿದ್ದರು. ಈ ಕಾರಣದಿಂದಾಗಿ ಉಂಟಾದ ಅನೇಕ ಪರಿಣಾಮಗಳು ಮತ್ತು ದುಷ್ಪರಿಣಾಮಗಳು ಎಲ್ಲವನ್ನೂ ಈ ಲೇಖನದಲ್ಲಿ ಗಮನಿಸಿದ್ದಾಗಿದೆ.

ಈ ರೀತಿಯಾಗಿ ಋಷಿಗಳ ಹಿಡಿತಕ್ಕೆ ಸಿಕ್ಕಿದ ಸ್ತ್ರೀಸ್ಥಾನ–ಮಾನಗಳು ಹೀಗಿದ್ದರೂ; 'ಸಮಾಜದಲ್ಲಿ ಪುರುಷನಷ್ಟೇ ಪ್ರಾಧಾನ್ಯತೆ ಸ್ತ್ರೀಯರಿಗೂ ಇತ್ತು.' ಎನ್ನುವಂತಹ ಪ್ರಕರಣಗಳನ್ನೂ ಅಪರೂಪಕ್ಕೊಮ್ಮೆ ಮಹಾಭಾರತದಲ್ಲಿ ಕಾಣುತ್ತೇವೆ. ಈ ಮಾತನ್ನು ಪ್ರತಿನಿಧಿಸುವುದು; 'ರಾಮಾಯಣವು ಸೀತಾಯಾಶ್ಚರಿತಂ'

ಎಂಬಂತೆಯೇ ಮಹಾಭಾರತವನ್ನು 'ದ್ರೌಪದ್ಯಾಶ್ಚರಿತಂ ಮಹತ್.' ಎನ್ನಲಾಗಿದೆ. ಏಕೆಂದರೆ ಈ ಮಾತನ್ನು ದೃಢಪಡಿವುದೇ, 'ಮಹಾಭಾರತದ ಕೇಂದ್ರಬಿಂದುವಾದ ಕುರುಕ್ಷೇತ್ರ ಯುದ್ಧ ನಡೆದದ್ದು; ಕೌರವರು ಸರ್ವನಾಶವಾದದ್ದು, ದ್ರೌಪದಿಯ ಅಪಮಾನದ ಪ್ರತೀಕಾರದ ಫಲದಿಂದ.' ಎನ್ನುವ ಮಾತಂತೂ ಸತ್ಯವಾದುದು ಎಂಬುದನ್ನು ನಾವು ಒಪ್ಪಿಕೊಳ್ಳಲೇಬೇಕು.

ಹೋಮರ್‌ನ ಮಹಾಕಾವ್ಯ 'ಈಲಿಯಡ್' ಕಥಾವಸ್ತುವೆಲ್ಲವೂ 'ಹೆಲೆನ್ ಆಫ್ ಟ್ರಾಯ್' ಹೆಲೆನ್ ಸುತ್ತ ಸುತ್ತುವಂತೆ; ಮಿಲ್ಟನ್‌ನ 'ಪ್ಯಾರಡೈಸ್ ಲಾಸ್ಟ್' ಮಹಾಕಾವ್ಯವು ಈವ್‌ಳ ಸುತ್ತವೇ ಸೂತ್ರಬದ್ಧವಾದಂತೆ; 'ಮಹಾಭಾರತದ'ದ ಕಥಾವಸ್ತುವು ಇಲ್ಲಿನ ಸ್ತ್ರೀಪಾತ್ರಗಳು ಮತ್ತು ಸಮಕಾಲೀನ ಸ್ತ್ರೀಯರ ಸಾಮಾಜಿಕ ಸ್ಥಿತಿಗತಿಗಳನ್ನು 'ರಾಜಧರ್ಮ' ಮತ್ತು 'ಋಷಿಗಳ ಸ್ಥಾನ–ಮಾನ'ದ ಸುತ್ತ ಅಥವಾ ಇವುಗಳ ನೆರಳಿನಲ್ಲೇ, ಅವರ ತಾಳಕ್ಕೆ ತಕ್ಕಂತೆ ಗಿರಕಿ ಹೊಡೆಸಿರುವುದನ್ನೇ ಕಾಣುತ್ತೇವೆ.

ಹೀಗೆ ಇಂದಿನ ಆಧುನಿಕ ಯುಗದಲ್ಲಿ ಮಾನವನು ಯಾವುದೇ ಒಂದು ಪ್ರಾಚೀನ ವಸ್ತು ಅಥವಾ ವಿಷಯವನ್ನು ಕುರಿತು ವಿಚಾರ ಮಾಡಿದಾಗ ಹೊಸದಾಗಿ ಹೊಳೆಯುವ, ಮಿಂಚುವ ವಿಚಾರಗಳ ಪ್ರಕ್ರಿಯೆಯು ಒಂದು ಹೊಸದಾದ, ನೂತನ ದೃಷ್ಟಿಕೋನಕ್ಕೆ ಅರ್ವಾಚೀನ ಭೂತಕನ್ನಡಿ ಹಿಡಿದು ನೋಡಲು ಅವಕಾಶ ಮಾಡಿ–ಕೊಡುತ್ತದೆ.

~~~***~~~

ಅಡಿಟಿಪ್ಪಣಿಗಳು :

೧. ಶೇಷನವಗತ್ನ, 'ಮಹಾಭಾರತದಲ್ಲಿ ಧರ್ಮ', ಪು. ೨೦೫.
೨. ಶ್ರೀಮನ್ಮಹಾಭಾರತ – ೨, ಭಾರತ ದರ್ಶನ ಪ್ರಕಾಶನ, ಪು. ೭೮೪.
೩. ಶ್ರೀಮನ್ಮಹಾಭಾರತ – ೨, ಭಾರತ ದರ್ಶನ ಪ್ರಕಾಶನ, ಪು. ೭೨೧.
೪. ಶ್ರೀಮನ್ಮಹಾಭಾರತ – ೨, ಭಾರತ ದರ್ಶನ ಪ್ರಕಾಶನ, ಪು. ೭೦೬.
೫. ಶ್ರೀಮನ್ಮಹಾಭಾರತ – ೨, ಭಾರತ ದರ್ಶನ ಪ್ರಕಾಶನ, ಪು. ೪೫೫.

~~~***~~~

## 23. ಮಹಾಭಾರತದಲ್ಲಿ ಕೃಷ್ಣನೆಂಬ ರಾಜನೀತಜ್ಞ :

ಕ್ರಿ.ಪೂ.ದ ಅನೇಕ ಶತಮಾನಗಳಿಂದ ಹಿಡಿದು ನಮ್ಮ ಕಾಲದವರೆಗೆ ಅನುಸೂತವಾಗಿ ಸಾಗಿಬಂದಿರುವ ಕೃಷ್ಣನ ಕಲ್ಪನೆ ಹೊಸ ಹೊಸ ಆಯಾಮಗಳನ್ನು ಮಾಡಿಸಿಕೊಂಡು, ಜೋಡಿಸಿಕೊಂಡು ನಿತ್ಯ ನವೀನವಾಗಿ, ನಿತ್ಯ ಮನೋಹರವಾಗಿ ಉಳಿದುಕೊಂಡು ಬಂದಿದೆ. ಮೂಲತಃ ಬಿಡಿ ಬಿಡಿಯಾದ ಚಿತ್ರಗಳಾಗಿದ್ದಿರಬಹುದಾದರೂ, ಇಂದು ಆ ಪೃಥಕತ್ವ ಕೊಂಚವೂ ಇಲ್ಲ; ವೈದಿಕ ಆವೃತ್ತಿಯಲ್ಲಿನ ಕೃಷ್ಣ ಇಂದು ಒಂದು ಸಮಷ್ಟಿ ಕಲ್ಪನೆಯಾಗಿ ನಿಂತಿದ್ದಾನೆ. ಕೃಷ್ಣ ಕಲ್ಪನೆಯು ಮಹಾನದಿ ವೇದೋಪನಿಷತ್ತುಗಳ ಆ ಪರ್ವತಾಗ್ರದಿಂದ ಇಳಿದು ಜನಮಾನಸದ ಧರಾತಲಕ್ಕೆ ಬಂದು ಸೇರುವ ಹೊತ್ತಿಗೆ, ಅನೇಕ ಉಪನದಿಗಳೆಲ್ಲ ಅದಕ್ಕೆ ಬಂದು ಸೇರಿ, ಅದು ಸಿಂಧು ಸದೃಶವಾಗಿ ನಿಂತಿದೆ. ಆ ದಿವ್ಯ, ಭವ್ಯ ದೃಶ್ಯ ನಮ್ಮ ಚೇತನವನ್ನು ಸೂರೆಗೊಳ್ಳುತ್ತಿದೆ." (ಡಾ॥ ಪ್ರಧಾನ ಗುರುದತ್ತ, ಶ್ರೀ.ಕೃ.ಮ.ವಿ. (೧೯೯೦), ಪು. ೨೩೩.) ನಾವು ಪುರಾಣಿಕರಿಗೆ ಧನ್ಯವಾದ ಹೇಳಬೇಕು. ಭಾರತೀಯರದು ಪ್ರಾರಂಭದಿಂದಲೂ ಧಾರ್ಮಿಕ ವಿಚಾರಗಳ ಪರಂಪರೆಯ ಸಿದ್ಧಾಂತ. ಸರ್ವಕರ್ತೃತ್ವ ಸರ್ವಭೋಕ್ತೃತ್ವ ಪರ್ವಶಕ್ತಿಗಳೂ ಶ್ರೀಕೃಷ್ಣನಿಗಿರುವುದನ್ನು ಮಹಾಭಾರತಕಾರರು ಒಪ್ಪಿಕೊಂಡಿರುವುದನ್ನು ನಂತರದ ಯಾರಿಗೂ ಅದನ್ನು ಅಳ್ಳಗೆಳೆಯುವ ಶಕ್ತಿ ಇಲ್ಲ." ಹೀಗೆ ಮಾಡಿದವರು ಪುರಾಣಿಕರು ಮತ್ತು ಮತಾನುಯಾಯಿಗಳು. (ಸಂ: ಜಿ.ಎಸ್. ಭಟ್ಟ, ಕುಮಾರವ್ಯಾಸ ಒಂದು ಅಧ್ಯಯನ, (೧೯೯೯), ಪು. ೧೦೪.

"ಕೃಷ್ಣ" ಶಬ್ದವು ಋಗ್ವೇದದಲ್ಲಿ ಒಬ್ಬ ಋಷಿಯ ಹೆಸರಿನಲ್ಲಿದೆ.

**ಅಯಂ ವಾಂ ಕೃಷ್ಣೋ ಅಶ್ವಿನಾಹವತೇ ವಾಜಿನೀ ವಸು । ಸಂವೇದನಾ ಶೂನ್ಯ ॥**

ಕೃಷ್ಣನೆಂಬ ಹೆಸರಿನ ಋಷಿಯಾದ ನಾನು ನಿಮ್ಮನ್ನು ಎಲೈ ಅಶ್ವಿನೀ ದೇವತೆಗಳೇ ಕರ್ಮವೇ ಧನವಾಗಿವುಳ್ಳ ನಿಮ್ಮನ್ನು ಪ್ರಾರ್ಥಿಸುತ್ತೇನೆ." (ಋ.ಸ.ಭಾ-೨೫, ಪು. ೨೫೮) ಈ ೮೯-೮೪ನೆಯ ಸೂಕ್ತಕ್ಕೆ ಆಂಗಿರಸಃ ಕೃಷ್ಣಃ ಎಂಬುವನು ಋಷಿಯು ಈ ಕೃಷ್ಣ ಮಹಾಭಾರತದ ಕೃಷ್ಣನಲ್ಲ.

ಇನ್ನೊಬ್ಬ ಕೃಷ್ಣ - ಸಾಮವೇದದ ಒಂದು ಶಾಖೆಯ ಬ್ರಾಹ್ಮಣದೊಳಗಿನ ಛಾಂದೋಗ್ಯೋಪನಿಷತ್ತಿನ ಒಂದು ವಾಕ್ಯದಲ್ಲಿ ಉಲ್ಲೇಖಿಸಿರುವ;

**ತದ್ಧೈತದ್ ಘೋರ ಆಂಗಿರಸಃ ಕೃಷ್ಣಾಯ । ದೇವಕೀಪುತ್ರಾಯ - ಉಕ್ತ್ವೋವಾಚ ॥** (೩-೧೭-೬)

**"ಕೃಷ್ಣ** ಎಂದರೆ **ಘೋರ ಆಂಗಿರಸನು** ಅದನ್ನೇ ಅಂದರೆ ಆ ಯಜ್ಞದರ್ಶನವನ್ನೇ **ದೇವಕೀ ಪುತ್ರನಾದ ಕೃಷ್ಣನಿಗೆ** ಉಪದೇಶಿಸಿದನು ಎಂದಿರುವುದರಿಂದ 'ಮಹಾಭಾರತಕಾರ'ನು ಛಾಂದೋಗ್ಯೋಪನಿಷತ್ತಿನಿಂದಲೇ ತನ್ನ ಕಾವ್ಯದ ಆತ್ಮನಾಗಿರುವ **ಕೃಷ್ಣನನ್ನು ಎತ್ತಿಕೊಂಡಿದ್ದಾನೆಂಬುದರಲ್ಲಿ ಸಂದೇಹವಿಲ್ಲ."** (ಬಸ್ತಿ ವೆಂಕಟೇಶ ಪುಂಡಲೀಕ ಶೆಣೈ, "ಬ್ರಾಹ್ಮಿಲಿಪಿ ಮತ್ತು ಸಿಂಧೂ ಸಂಸ್ಕೃತಿ" (ಪು. ೪೪೫.)

ಇನ್ನು **'ಅರ್ಜುನ'** ಶಬ್ದದ ಬಗ್ಗೆ ಹೇಳುವುದಾದರೆ; ಋಗ್ವೇದ ೧-೧೨೨-೫ನೆ ಋಕ್ಕಿನಲ್ಲಿ;

**ಆವೋ ರುವಣ್ಯು ಮೌಶಿಜೋಹುವಧ್ಯೈ ಘೋಷೇವ ಶಂಸಮರ್ಜುನಸ್ಯ ॥** (೧-೧೨೨-೫)

ಇದರ ಅರ್ಥ "ಕಕ್ಷೀವಂತನಾದ ನಾನು ಘೋಷಾ ನಾಮಕ ಸ್ತ್ರೀಗೆ ಬಂದಿರುವ ಶ್ವೇತವರ್ಣದ ಚರ್ಮರೋಗದ ನಿವಾರಣೆಗಾಗಿ ನಿಮ್ಮನ್ನು ಸ್ತುತಿಸಿ ಆಹ್ವಾನಿಸುತ್ತೇನೆ." (ಋ.ಸಂ.ಭಾ- ೨೫, ಪು. ೨೯) ಎಂದು ಕಕ್ಷೀವಂತನು ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸುತ್ತಾನೆ. ಇಲ್ಲಿ **ಅರ್ಜುನ** ಎಂದರೆ 'ತೊನ್ನು ರೋಗ' ಎಂಬ ಅರ್ಥವಿರುವ ಉಲ್ಲೇಖವಿದೆ.

ಈ **ಅರ್ಜುನ** ಶಬ್ದ ಶುಕ್ಲ ಯಜುರ್ವೇದದ ಶತಪಥ ಬ್ರಾಹ್ಮಣದಲ್ಲಿದೆ. ೫-೪-೩-೬ನೆಯ ಕಂಡಿಕೆಯಲ್ಲಿ 'ಅರ್ಜುನ' ಎಂಬುದು ಇಂದ್ರನ ಗುಹ್ಯನಾಮವೆಂದು ಹೇಳಿದೆ. ವೇದವ್ಯಾಸರು ವೈದಿಕ ಸಾಹಿತ್ಯದ ಪ್ರೇರಣೆಯಿಂದ ಪ್ರಭಾವಿತರಾಗಿ ದೂರ್ವಾಸನ ಬಾಯಿಂದ ಈ ಮಂತ್ರವನ್ನು ಪುನಃಶ್ಚರಣೆ ಮಾಡಿ, ನೀನು ಯಾವ, ಯಾವ ದೇವತೆಯನ್ನು ಆಹ್ವಾನಿಸುತ್ತೀಯೋ ಆ ದೇವತೆಯು ನಿನಗೆ ವಶನಾಗುವನು! ಎಂದು ಹೇಳಿಸಿ ಇಂದ್ರನನ್ನು ಆಮಂತ್ರಿಸಿದಾಗ ಇಂದ್ರ ಕುಂತಿಯೊಡನೆ ಸೇರಿದನು. ಅರ್ಜುನನ ಜನನವಾಯಿತು. ಕೃಷ್ಣ-ಅರ್ಜುನ ಇಬ್ಬರನ್ನೂ ವ್ಯಾಸ ಋಷಿಗಳು ವೈದಿಕ ಸಾಹಿತ್ಯದಿಂದ ತಂದಿದ್ದಾರೆ.

**ಕುರುಕ್ಷೇತ್ರ ಯುದ್ಧಕ್ಕೆ ತಮ್ಮ ಸಹಾಯಕ್ಕಾಗಿ ಕೌರವ-ಪಾಂಡವರಿಬ್ಬರೂ ಕೃಷ್ಣನ ಸಹಾಯ ಕೇಳಲು ಬಂದರು.**

ಯುದ್ಧಗಳಲ್ಲಿ ತಮಗೆ ಜಯವಾಗುವುದಕ್ಕೋಸ್ಕರ ರಾಜರು ಪುರೋಹಿತರ ಮೂಲಕ ದೇವತೆಗಳನ್ನು ಪ್ರಾರ್ಥಿಸುವುದು, ಪ್ರಸನ್ನೀಕರಿಸಿಕೊಳ್ಳುವುದು, ದೇವತೆಗಳು ಮೂರ್ತಿಮತ್ತಾಗಿ ಬಂದು ಜಯ ದೊರಕಿಸಿ ಕೊಡುವುದು ಇವೆಲ್ಲವೂ ಬರುತ್ತದೆ. ಈ ರೀತಿ ದೇವತೆಗಳ ಸಹಾಯವನ್ನು ಅಪೇಕ್ಷಿಸುವಾಗ, ಎರಡು ಪಕ್ಷದವರೂ ಒಂದೇ ದೇವತೆಯನ್ನು ಪ್ರಾರ್ಥಿಸುವುದೂ ಉಂಟು! ಇಂತಹ ಸಂದರ್ಭದಲ್ಲಿ ದೇವತೆಯು ತಾನು ಯಾರಿಗೆ ಹೆಚ್ಚು ಪ್ರೀತಿಪಾತ್ರರೋ ಅವರಿಗೇ ಸಹಾಯ ಮಾಡಬೇಕೆಂದು ನಿಶ್ಚಯಿಸಿರುವುದೋ ಅವರಿಗೇ ಸಹಾಯ ಮಾಡಿ, ವಿರೋಧ ಪಕ್ಷದವರಿಗೆ ಸೋಲನ್ನು ಉಂಟು ಮಾಡುವುದುಂಟು. "ಸರ್ವಜ್ಞನಾದ ಇಂದ್ರನೇ ನಮ್ಮ ಸ್ತುತಿಯನ್ನು ಕೇಳು. ನಿನ್ನ ಯುದ್ಧ ಸನ್ನದ್ಧವಾದ ಅಶ್ವಗಳನ್ನು ಈ ಕಡೆ ತಿರುಗಿಸು. ಅನೇಕರು ನಿನ್ನನ್ನು ಪ್ರಾರ್ಥಿಸುತ್ತಾರೆ. ಆದರೂ ನಮ್ಮ ಸ್ತೋತ್ರಕ್ಕೇ ಹೆಚ್ಚು ಗಮನಕೊಡು."೬ (ಬ್ರಾಹ್ಮಣ ಇಂದ್ರೋಪ ಯಾಹಿ ವಿದ್ವಾನರ್ವಾಂಚಸ್ತೇ ಹರೆಯೋ । ವಿಶ್ವೇ ಚಿದ್ಧಿತ್ವಾ ವಿಹವಂತಮರ್ತಾ ಅಸ್ಮಾಕಮಿಚ್ಛೃ ಸಂತು ಯುಕ್ತಾಃ ।ಋಹಿ ವಿಶ್ವಮಿನ್ವ ॥"ಋ.ಸಂ.ಭಾ-೨೨, ಪು.

೬೯) ಇದರಿಂದ ಒಂದು ಅಂಶ ವ್ಯಕ್ತವಾಗುತ್ತದೆ. ದೇವತೆಗಳು, ಶ್ರದ್ಧಾಯುಕ್ತರಾಗಿ ಧರ್ಮಿಷ್ಠರಾದವರ ಪ್ರಾರ್ಥನೆಯನ್ನು ಮನ್ನಿಸಿ, ಅವರಿಗೇ ಒಲಿಯುತ್ತಿದ್ದರು ಎಂದಾಗುತ್ತದೆ. ಧರ್ಮ ಮತ್ತು ದೈವಸಹಾಯವೆರಡೂ ಯಾವ ಕಡೆ ಇವೆಯೋ ಆ ಕಡೆ ಜಯವೆಂಬ ಮಾತು ಸತ್ಯ.

ದುರ್ಯೋಧನ ಧನಂಜಯರಿಬ್ಬರೂ ದ್ವಾರಕೆಗೆ ಬಂದರು. ಶ್ರೀಕೃಷ್ಣ ಅಂತಃಪುರದಲ್ಲಿ ಮಲಗಿದ್ದನು. ಇಬ್ಬರೂ ಶಯನ ಮಂದಿರಕ್ಕೆ ಬಂದರು. ದುರ್ಯೋಧನ ಶ್ರೀಕೃಷ್ಣನ ತಲೆದಿಂಬಿನ ಬಳಿ ಕುಳಿತುಕೊಂಡರೆ, ಅರ್ಜುನ ಕೃಷ್ಣನ ಕಾಲ ಬಳಿ ನಿಂತುಕೊಂಡಿರುತ್ತಾನೆ. ಇಬ್ಬರೂ ಅವನನ್ನು ಯುದ್ಧದಲ್ಲಿ ಸಹಾಯ ಕೇಳಲು ಬಂದಿರುತ್ತಾರೆ. ಧನಂಜಯನು ನಿರಾಯುಧನಾದ ಕೃಷ್ಣನನ್ನು ತನ್ನ ಸಹಾಯಕ್ಕೆ ಆರಿಸಿಕೊಳ್ಳುತ್ತಾನೆ. ದುರ್ಯೋಧನನು ಸಾವಿರಾರು ಸೈನ್ಯ, ಶಸ್ತ್ರಗಳಿರುವ ಬಲರಾಮನನ್ನು ಪಡೆದುಕೊಳ್ಳಲು ಬಯಸುತ್ತಾನೆ. (ಈ ಕುರಿತಾಗಿ ಹೆಚ್ಚಿನ ವಿಷಯವನ್ನು ಅನುಬಂಧ-೧ರಲ್ಲಿ ಕೊಡಲಾಗಿದೆ.)

~~~***~~~

**ಅಡಿಟಿಪ್ಪಣಿಗಳು :**

೧. ಶ್ರೀಮನ್ಮಹಾಭಾರತ, ಭಾದಪ್ರ. ಭಾ–೧, ಪು. ೧೫೧.

೨. ಆನಂದತೀರ್ಥರು, ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ, ಭಾ–೭, ಪು. ೧೦೩.

೩. ಭಗವಾನ್ ಶ್ರೀವೇದವ್ಯಾಸ ಪ್ರಣೀತ ಮ.ಭಾ. ಭಾ–೭, ಪು. ೪೮೫.

೪. ಋ.ಸಂ. ೧೦.೪೦.೨.

೫. ಅಂಗರಾಜಗೃಹೇ ಯುಕ್ತಾಂ ಉಶಿಜಂ ಪುತ್ರಕಾಮಯಾ । ರಾಜ್ಞಾ ಚ ಪ್ರಹಿತಾಂ ದಾಸೀಂ ಭಕ್ತಾಂ ಮತ್ವಾಮಹಾತಪಾಃ ॥

ಜನಯಾ ಮಾಸ ಚೋತ್ಥಾಯ ಕಕ್ಷೀವತ್ಪ್ರಮುಖಾನ್ ಋಷೀನ್ ॥ (–ಬೃಹದ್ದೇವತಾ, ಅ–೪, ೨೪, ೨೫.)

೬. ಋಗ್ವೇದ ಸಂಹಿತಾ, ಭಾ–೧೮, ಪು. ೧೬೮.

೭. ಶ್ರೀಮನ್ಮಹಾಭಾರತ, ಭಾ–೩೨, ಪು. ಪರಿಶಿಷ್ಟ ೩೧೮.

~~~***~~~

## 24. ಗೋಗ್ರಹಣ ಪ್ರಸಂಗ :

ಒಂದು ಸಲ ಭೃಮ್ಯಶ್ವ ಋಷಿಯ ಪುತ್ರನಾದ ಮುದ್ಗಲನೆಂಬ ಋಷಿಯು ಗೋವುಗಳನ್ನೆಲ್ಲಾ ಕಳ್ಳರು ಅಪಹರಿಸಿಕೊಂಡು ಹೋದರು. ಯಾವ ಕೆಲಸಕ್ಕೂ ಬಾರದ ಒಂದು ಮುದಿ ಎತ್ತನ್ನು ಮಾತ್ರ ಬಿಟ್ಟು ಹೋಗಿದ್ದರು. ಅದರಿಂದ ಮುದ್ಗಲನು ಧೈರ್ಯಗೆಡದೆ ಆ ಮುದಿ ಎತ್ತನ್ನೇ ತನ್ನ ಗಾಡಿಗೆ ಕಟ್ಟಿ ಕಳ್ಳರನ್ನು ಬೆನ್ನಟ್ಟಿದನು. ತನ್ನಲ್ಲಿದ್ದ ಒಂದು ಗದೆ ಅಥವಾ ದೊಣ್ಣೆಯನ್ನೇ ಮತ್ತೊಂದು ಎತ್ತಾಗಿ ಕಟ್ಟಿಕೊಂಡು ಕಳ್ಳರೊಡನೆ ನಡೆದ ಹೋರಾಟದಲ್ಲಿ ಮುದ್ಗಲನ ಪತ್ನಿಯೇ ರಥವನ್ನು ನಡೆಸುವ ಸಾರಥಿಯಾಗಿದ್ದಳು. ಯುದ್ಧದಲ್ಲಿ ಮುದ್ಗಲನ ಸೇನಾನಿಯಂತಿದ್ದ ಅವನ ಪತ್ನಿಯು ಗೋವುಗಳನ್ನು ಕಳ್ಳರಿಂದ ಜಯಿಸಿ ತಂದಳು. ವೃಷಭದ ಗುಟುರು ಧ್ವನಿಯಿಂದ ಶತ್ರುಗಳು ತತ್ತರಿಸುವಂತಾಯಿತು. ಮುದ್ಗಲನು ಸಾವಿರಾರು ಗೋವುಗಳನ್ನು ಗೆದ್ದು ತಂದನು."[೧] ಋಗ್ವೇದದ ಈ ಪ್ರಸಂಗ ವ್ಯಾಸ ಋಷಿಗಳ "ಗೋಗ್ರಹಣ" ಪ್ರಸಂಗಕ್ಕೆ ಸ್ಫೂರ್ತಿನೀಡಿದೆ. ಮುದ್ಗಲನ ಪತ್ನಿಯ ಬದಲಾಗಿ 'ಗೋಗ್ರಹಣ'ದಲ್ಲಿ ಅರ್ಜುನನ್ನು ಸಮೀಕರಿಸಲಾಗಿದೆ.

ಅಡಿಟಿಪ್ಪಣಿಗಳು :

೧. ಋ.ಸಂ.ಭಾ–೨೦, ಪು. ೧೩.

~~~***~~~
~~~

## 26. 'ಮಹಾಭಾರತ' ಕುರಿತಾದ ಆಧುನಿಕ ಚಿಂತನೆಗಳು :

ಇದೂವರೆವಿಗೂ 'ಮಹಾಭಾರತ' ಮಹಾಕಾವ್ಯವನ್ನು ಕುರಿತು ಅಧ್ಯಯನ ನಡೆಸಿದವರಾಗಲೀ, ಚಿಂತನಕಾರರಾಗಲೀ 'ಮಹಾಭಾರತ'ದ ಒಳಹೊಕ್ಕು ನೋಡುವ ಅವಕಾಶವಾಗಿರಲಿಕ್ಕಿಲ್ಲ. ಸಿಕ್ಕದ್ದರೂ ಅದು ಕೇವಲ, ಜಾತಿ-ಮತ, ಧರ್ಮ, ಆಧ್ಯಾತ್ಮಿಕ ಪ್ರಭಾವ ಬೀರುವ ಪೌರಾಣಿಕ ಪ್ರತಿಮೆಗಳ ಕಥಾವಸ್ತುಗಳನ್ನು ಒಳಗೊಂಡ, ಭಕ್ತಿಯನ್ನು ನಿರೂಪಿಸುವ ಅಧ್ಯಯನಕ್ಕಷ್ಟೇ ಸೀಮಿತವಾಗಿತ್ತು. ಇದೊಂದು ರೀತಿಯ **ಯುಗಧರ್ಮ** ಎನ್ನಬಹುದು. ಯಾಕೆಂದರೆ **ಸಾಹಿತ್ಯಸೃಷ್ಟಿ ಯುಗಧರ್ಮದ ಕೈಗೂಸು**. ಅಂದು ಪುರುಷಾರ್ಥದಲ್ಲಿ ಧರ್ಮಚಿಂತನೆಯೇ ಪ್ರಧಾನವಾಗಿತ್ತು. ಧರ್ಮೋಪಾಸನೆಯ ಮನೋಧರ್ಮಕ್ಕೆ ಪ್ರಾಶಸ್ತ್ಯವಿದ್ದ ಕಾಲ. ವ್ಯಾಸರೂ ಇದೇ ಮನೋಧರ್ಮವುಳ್ಳವರಾಗಿಯೇ ರಚಿಸಿದ ಮಹಾಭಾರತವನ್ನು **ಇತಿಹಾಸ ಪ್ರದೀಪ** ಎಂದಿರುವುದನ್ನು ಗಮನಿಸಬೇಕು.

**ಲೋಕಗರ್ಭಗೃಹಂ ಕೃತ್ಸ್ನಂ ಯಥಾವತ್ ಸಂಪ್ರಕಾಶಿತಮ್ ।**

ಮಹಾಭಾರತದಲ್ಲಿ ಸಕಲ ಲೋಕ ವ್ಯವಹಾರಗಳೂ ನಿವೃತ್ತವಾಗಿವೆ ಎಂದಿರುವುದು ವ್ಯಾಸ ಋಷಿಗಳ ಐತಿಹಾಸಿಕ ಪ್ರಜ್ಞೆಯನ್ನು ತೋರಿಸುತ್ತದೆ.

ವ್ಯಾಸರು ಅಂದಿನ ಯುಗಧರ್ಮಕ್ಕನುಸಾರವಾಗಿ ಹೇಳಿರುವ ಲೋಕ ವ್ಯವಹಾರ ಇಂದಿನ **ಆಧುನಿಕ ವೈಜ್ಞಾನಿಕ ದೃಷ್ಟಿಯಿಂದ** ನೋಡಿದಾಗ ಗೋಚರಿಸುವ **ರಹಸ್ಯಕ್ಷೇತ್ರದ ನಿಗೂಢಗಳನ್ನು ವಸ್ತುನಿಷ್ಠವಾಗಿ** ಬಿಚ್ಚ ತೊಡಗಿದಾಗ, ಅದು ಇಂದಿಗೂ ಪ್ರಸ್ತುತವಾಗಿದೆಯೇ? ಇದ್ದರೆ ಅದನ್ನು ಪ್ರಮಾಣಬದ್ಧವಾಗಿ ಆಧಾರಸಹಿತವಾಗಿ ಪರಿಷ್ಕಾರಗಳನ್ನು ನಿರೂಪಿಸುವ ಕಾರ್ಯವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಪುರುಷಾರ್ಥಗಳು ಇಲ್ಲಿ ವ್ಯಕ್ತಿಗಳ ಮೂರ್ತಿರೂಪ ಪಡೆದಿದೆ.

೧. ಧರ್ಮ-ಭೀಷ್ಮ

೨. ಅರ್ಥ-ದುರ್ಯೋಧನ

೩. ಕಾಮ-ಶಂತನು, ಪರಾಶರ, ದೂರ್ವಾಸ, ಪಾಂಡು ಹಾಗೂ ಕಾಮಾರ್ಥಚಾಪಲ್ಯವುಳ್ಳ ಇತರರು.

೪. ಮೋಕ್ಷ-ವಿದುರ, ಆತ್ಮದ ಔಪಮ್ಯವನ್ನು ಅನುಭವಿಸಿದ ಮಹಾ ವ್ಯಕ್ತಿ.

ಈ ನಾಲ್ಕು ಪುರುಷಾರ್ಥಗಳೇ ವ್ಯಾಸರು ಸೃಷ್ಟಿಸಿದ ಕಥೆಯ ಪೋಷಣೆಗೆ ನೆರವಾದ ಪ್ರಾತಿನಿಧಿಕ ಮುಖ್ಯ ಪಾತ್ರಗಳು.

ಯಾವುದೇ ಒಂದು ಪ್ರಾಚೀನ ಕಾವ್ಯದ ವಸ್ತುವನ್ನು, ವಿಚಾರವನ್ನು, ವಿಷಯವನ್ನು, ಸುದ್ದಿಯ ಪ್ರಕ್ರಿಯೆಯನ್ನು ಆಧುನಿಕ ಈಗಿನ ಹೊಸದಾದ ನೂತನ ದೃಷ್ಟಿಕೋನದ ಅರ್ವಾಚೀನ **ಭೂತಕನ್ನಡಿಯಿಂದ** ಪ್ರಮಾಣಬದ್ಧವಾಗಿ ಪ್ರಯತ್ನಪಟ್ಟರೆ ನೋಡಬಹುದು.

ವೇದಕಾಲದ ಋಷಿಗಳು ನಾನಾ ದೇವತೆಗಳನ್ನು ಪ್ರಕೃತಿಯಲ್ಲಿ ಕಂಡು ಆರೋಪಿಸಿದರು. ಬೆಂಕಿ, ಮಳೆ, ಗಾಳಿಗಳನ್ನು ಕ್ರಮವಾಗಿ ಅಗ್ನಿ, ವರುಣ, ವಾಯುಗಳನ್ನು ದೇವರುಗಳೆಂದು ಆರಾಧಿಸಿದರು.

ಇದೆಲ್ಲ ಅಮೂರ್ತ. ಕಣ್ಣಿಗೆ ಕಂಡರೂ ಅವಕ್ಕೆ ದೇಹವಿಲ್ಲ. ನಂತರದ ಪುರಣ ಕಾಲದಲ್ಲಿ ಪುರಾಣಿಕರು ವೇದಕಾಲದ ಅಮೂರ್ತ ದೇವತೆಗಳಿಗೆ ಮೂರ್ತರೂಪ ಕೊಟ್ಟರು.

**ಪುರಾಣಿಕರ ಈ ಮೂರ್ತಿರೂಪ ಕೊಡುವ ಉದ್ದೇಶವೇನು?**

ವ್ಯಾಸರು ರಚಿಸಿದ ಮಹಾಭಾರತಕ್ಕೆ **'ಐತಿಹಾಸಿಕತೆ' ಕೊಡುವ ಉದ್ದೇಶ. 'ಆಧುನಿಕ ಚಿಂತನೆ'** ಇಲ್ಲಿಂದಲೇ **ಪ್ರಾರಂಭವಾಯಿತೆನ್ನಬಹುದು.**

[೧] ಏವಂ ಪಾಂಡೋಃ ಸುತಾಃ ಪಂಚದೇವದತ್ತಾ ಮಹಾಬಲಾಃ । ವಿವರ್ಧ ಮಾನಸ್ತೇ ತತ್ರ ಪುಣ್ಯೇ ಹೈಮವತೇಗಿತಾ ॥ (ಆ.ಪ. ೬–೧೨೪. ೨೭)

ಪಾಂಡವರು ದೇವದತ್ತರಾದ ಐದು ಮಂದಿ. ಮಹಾಬಲಿಷ್ಠರು. ಇವರು ಹಿಮಾಲಯ ಪರ್ವತದ ತಪ್ಪಲಲ್ಲಿ ಬೆಳೆದವರು ಎಂದು ವ್ಯಾಸರೇ ಹೇಳಿದ್ದಾರೆ. ಸಿಂಧೂ ನದಿಯ ಮುಖಜ ಭೂಮಿ ಸಮೀಪದಲ್ಲಿ ವಾಸ ಮಾಡುತ್ತಿರುವ ಒಂದು ಜಾತಿಗೆ 'ಪಾಂಡ್ಯ'ರೆಂದು **ಗ್ರೀಕ್ ಗ್ರಂಥಕಾರರು ಹೇಳಿದ್ದಾರೆ.** ಭೂಗೋಳವೇತ್ತನಾದ 'ಪಾಂಡ್ಯ'ವೆಂಬ ಹೆಸರಿನ ದೇಶವು **ವಿತಸ್ತಾ–ಜೀಲಮ್** ನದಿಯ ಸಮೀಪದಲ್ಲಿದೆ ಎಂದು ಹೇಳುತ್ತಾನೆ.

### ಕುರುಕ್ಷೇತ್ರ ಯುದ್ಧ :

ಕುರುಕ್ಷೇತ್ರ ಯುದ್ಧವು ನಾಲ್ಕು ಪರ್ವಗಳಲ್ಲಿ ಬೆಳೆದಿದೆ. ಆದರೆ ಇದರಲ್ಲಿ ಸ್ವಲ್ಪ ಭಾಗ ಮಾತ್ರ **ಮೂಲಭಾರತ 'ಜಯ'. ಆದಿಮ ಸ್ತರಕ್ಕೆ ಸೇರಿದೆ.**

### ಮೂಲಭಾರತ–'ಜಯ' ಗ್ರಂಥ :

'ಮಹಭಾರತ'ದ ಮೂಲ ಗ್ರಂಥ–ಜಯವೇನೋ ಪೂರ್ವದಲ್ಲಿ ಇದ್ದಿತಾದರೂ ಅದು ಈಗಿರುವ ಒಂದು ಲಕ್ಷ ಶ್ಲೋಕದ ಮಹಾಭಾರತವಂತೂ ಅಲ್ಲವೇ ಅಲ್ಲ ಎಂದು ಹೇಳಿದರೆ ಆ **'ಪ್ರಾಚೀನ ಭಾರತ'** ಯಾವುದು? ಸೇರಿಸಲ್ಪಟ್ಟ ಅಂಶಗಳು ಯಾವುವು? ಈ ಅಂಶಗಳು ಎಲ್ಲಿತ್ತು? ಎಂಬ ಇವೇ ಮೊದಲಾದ ಪ್ರಶ್ನೆಗಳು ಉದ್ಭವವಾಗುತ್ತವೆ. ಏನೇ ಆದರೂ ಇಂದಿರುವ ಲಕ್ಷ ಶ್ಲೋಕಗಳ 'ಮಹಭಾರತ' ಪ್ರಾಚೀನವಾದುದಂತೂ ಅಲ್ಲವೆಂದು ದೃಢವಾಗಿ ಹೇಳಬಹುದು. ಈ ಅಂಶಗಳು 'ಮಹಭಾರತ' ಆದಿಪರ್ವ ೨ನೇ ಅಧ್ಯಾಯ ಪರ್ವ ಸಂಗ್ರಹ ಅಧ್ಯಾಯದಲ್ಲಿ ಇಲ್ಲದಿರುವುದೆಲ್ಲ ಪ್ರಕ್ಷಿಪ್ತವೆಂದು ತಿಳಿದು ಬರುತ್ತದೆ.

ಉಪಾಖ್ಯಾನಗಳನ್ನು ಬಿಟ್ಟರೆ ೨೪,೦೦೦ ಶ್ಲೋಕಗಳ 'ಜಯ' ಗ್ರಂಥವೇ ಮೂಲ ಆದಿಮ ಮಹಾಭಾರತ. ಇಲ್ಲಿಂದ ಮುಂದೆ ಪುರಾಣಿಕರು ಉಪನ್ಯಾಸ ಮಾಡುತ್ತಾ ಹೋದ ಹಾಗೆ 'ಜಯ', 'ಭಾರತ'ವಾಗಿ ಆನಂತರ 'ಮಹಾಭಾರತ'ವಾಗಿ ಬೆಳೆದು ಹೋಗಿದೆ.

### ಅನ್ಯ ರಚನೆಗಳ ಆಧಾರ :

ವೇದವ್ಯಾಸರು 'ದ್ಯೂತ'ದ ಅನರ್ಥಕಾರಿ ಪರಿಣಾಮವನ್ನು ರಾಜ–ಮಹಾರಾಜರು, ಶ್ರೀಸಾಮಾನ್ಯರಿಗೆ ಬೋಧೆಯಾಗಲೆಂದೇ ಗುರುತರವಾದ ವೇದಪ್ರಮಾಣವನ್ನಿಟ್ಟುಕೊಂಡೇ ೨೪,೦೦೦ ಶ್ಲೋಕಗಳ ಈ ಮಹಾಕಾವ್ಯವನ್ನು ರಚಿಸಿದ್ದಾರೆ. ಮೂಲಕಥೆಗೆ ಪೋಷಕವಾದ ಪಾತ್ರಗಳನ್ನು ಸೃಷ್ಟಿ ಮಾಡಿದ್ದಾರೆ. ಈ ಪಾತ್ರಗಳನ್ನು ಋಗ್ವೇದ, ಶತಪಥಬ್ರಾಹ್ಮಣ, ಪಾಣಿನಿಯ ಸೂತ್ರ ಇತ್ಯಾದಿ ಗ್ರಂಥಗಳನ್ನು ಆಯ್ಕೆ ಮಾಡಿಕೊಂಡಿರುವುದು ಪ್ರಮಾಣಬದ್ಧವಾಗಿ ಕಂಡುಬರುತ್ತದೆ.

"ಶತಪಥಬ್ರಾಹ್ಮಣದಿಂದ ವ್ಯಾಸರು ತೆಗೆದುಕೋಮಡಿರುವ ಪಾತ್ರ ಅರ್ಜುನ. ಇದರ ಅರ್ಥ **ಇಂದ್ರನೆಂದು** ವ್ಯವಹೃತವಾಗಿದೆ. ಈ ಹೆಸರಿನ ಯಾವ ಮನುಷ್ಯನೂ ಇರಲಿಲ್ಲವೆಂದು ಸಿದ್ಧಾಂತವಾಗಿದೆ."[೧] ಅರ್ಜುನನಿಗೆ ಫಲ್ಗುಣಿ ನಕ್ಷತ್ರದಲ್ಲಿ ಹುಟ್ಟಿದ್ದಾನೆ. ಇದು ಇಂದ್ರಾಶ್ರಿತ ನಕ್ಷತ್ರ. ಹಾಗಾಗಿ 'ಅರ್ಜುನ' ಇಂದ್ರ ಪುತ್ರನೆಂದಾದ. ಪುರಾಣಿಕರು ಹೇಳುವಂತೆ ಅರ್ಜುನ ಇಂದ್ರನ **ಔರಸ ಪುತ್ರನಲ್ಲ. ದೂರ್ವಾಸ ಋಷಿಯ ಪುತ್ರ.** **ಈ ಕುರಿತಾಗಿ ಹಿಂದಿನ ಅಧ್ಯಾಯದಲ್ಲಿ ವಿವರಣೆ ನೀಡಲಾಗಿದೆ.**

"ಇದನ್ನೆಲ್ಲ ಅಲ್ಲಗೆಳೆಯುವಂತಿಲ್ಲ. ಯಾಕೆಂದರೆ 'ಮಹಾಭಾರತ'ವು ಅನೇಕಾಂಶಗಳ ಮೌಲಿಕ ವಿಷಯದಲ್ಲಿ ಸಂಶಯವುಂಟಾಗುವುದಿಲ್ಲ. ಏಕೆಂದರೆ ಆ ಅಂಶಗಳಿಲ್ಲದಿದ್ದರೆ ಮಹಾಭಾರತದ ತತ್ವವೇ ಹೋಗಿಬಿಡಬಹುದು."[೨]

### 'ಮಹಾಭಾರತ' ಕುರಿತಾಗಿ "ಆಧುನಿಕ ಚಿಂತನೆ"ಯ ಅವಶ್ಯಕತೆ ಏನು?

'ಮಹಾಭಾರತ' ಮೂರು ಸ್ತರಗಳಲ್ಲಿ ಬೆಳೆದಿರುವುದನ್ನು ಈಗಾಗಲೇ ತಿಳಿಸಿದೆ. ಮೂಲ ಪುರಾತನವಾದುದೊಂದು ಅಸ್ಥಿಪಂಜರವಿದ್ದಂತೆ. ಇದರಲ್ಲಿ ಪಾಂಡವ–ಕೌರವರ ಜೀವನವೃತ್ತ ಮತ್ತು ಪಾಂಡವರೊಂದಿಗೆ ಸೇರಿದ ಕೃಷ್ಣನ ಕಥೆಯನ್ನು ಬಿಟ್ಟು ಉಳಿದದ್ದೇನೂ ಇರಲಿಲ್ಲ. ಇದೇ ಸಂಕ್ಷಿಪ್ತವಾದ ೨೪,೦೦೦

ಶ್ಲೋಕಗಳುಳ್ಳ 'ಭಾರತ ಸಂಹಿತೆ'. ಇದನ್ನೂ ಬಂಕಿಮಚಂದ್ರರೂ ಹೇಳಿದ್ದಾರೆ. ಇದು ಒಬ್ಬರ ರಚನೆ. ಇದೇ 'ಆದಿ ಭಾರತ' ಇಲ್ಲಿ ಕೃಷ್ಣ ಕೇವಲ ಒಬ್ಬ ಮನುಷ್ಯನಾಗಿದ್ದಾನೆ.

ಎರಡನೆಯ ಬೆಳವಣಿಗೆ ಪುರಾಣ ಕಾಲದ ಭಾರತ. ೭೫,೦೦೦ ಶ್ಲೋಕಗಳವರೆಗೆ ಬೆಳೆದ ಭಾರತ.

"॥ **ಸ್ತ್ರೀಶೂದ್ರ ದ್ವಿಜ ಬಂಧೂನಾಂತ್ರಯೀ ನ ಶ್ರುತಿ ಗೋಚರಾ । ಕರ್ಮಶ್ರೇಯಸಿಮೂಢಾನಾಂ ಶ್ರೇಯ ಏವಂ ಭವೇದಿಹ** ॥
**ಇತಿ ಭಾರತ ಮುಖ್ಯಾನಾಂ ಕೃಪಯಾ ಮುನಿನಾ ಕೃತಂ** ॥ –ಎಂದು ಭಾಗವತದಲ್ಲಿ ಹೇಳಿದೆ. ನಾಲ್ಕು ವೇದಗಳ ಓದಿಗೆ ಸ್ತ್ರೀಯರಿಗೆ, ಶೂದ್ರರಿಗೆ ಓದಲು ಅಧಿಕಾರವಿದ್ದಿಲ್ಲ. ಆಧುನಿಕ ಕಾಲದಲ್ಲಿ ಶಿಕ್ಷಣವಿಲ್ಲದೆ ಯಾವ ಸಮಾಜವೂ ಉನ್ನತಿಯನ್ನು ಹೊಂದಲಾರದೆಂದು ತಿಳಿದು ಪುರಾಣಪುರುಷರು ಮಹಾಭಾರತವನ್ನು **ಪಂಚಮವೇದ ಎಂದು ಕರೆದು** ಸಮಸ್ತರೂ ಓದಬಹುದೆಂದು ತಿಳಿಸಿದರು. ಆದರೆ "ಆಧ್ಯಾತ್ಮಿಕ ಒಲವು ಕಾರಣವಾಗಿ ಕನ್ನಡಿಗರು **ಧಾರ್ಮಿಕ ಆಕರಗಳನ್ನು** ಉಳಿಸಿಕೊಂಡಷ್ಟು **ಲೌಕಿಕ ಆಕರಗಳನ್ನು** ಉಳಿಸಿಕೊಳ್ಳಲಿಲ್ಲ."[೩] ಸಾಹಿತ್ಯ ಯುಗಧರ್ಮ ಸೃಷ್ಟಿಯಾಗಿರುವುದೇ ಕಾರಣ. "ಧಾರ್ಮಿಕ ಮನಸ್ಸು ಕಾರಣವಾಗಿ ನಮ್ಮಲ್ಲಿ **ಇತಿಹಾಸ ಸಂಪ್ರದಾಯ** ಗೌಣಸ್ಥಾನಕ್ಕೆ ಸರಿದು **ಪುರಾಣ ಸಂಪ್ರದಾಯ** ಪ್ರಮುಖಸ್ಥಾನ ಪಡೆಯಿತು. ಪುರಾಣಪುರುಷರ ಆದರ್ಶ ಜೀವನವನ್ನು ಚಿತ್ರಿಸಿತೇ ಹೊರತು, ವಾಸ್ತವ ವ್ಯಕ್ತಿಗಳ ಬದುಕನ್ನು ಬರೆದಿಡಲಿಲ್ಲ."[೪] ಜನಸಾಮಾನ್ಯರ ಒಲವೂ ಧಾರ್ಮಿಕ ಸಾಹಿತ್ಯಕ್ಕೇ ಅಲವತ್ತಿಕೊಂಡಿತ್ತು. ನಂತರ 'ವೀರಯುಗ'ದಲ್ಲಿ ರಾಜಕೀಯ ವಯಕ್ತಿಗಳ ಬೆನ್ನು ಬಿಡದ ಪುರಾಣವು **'ಭಕ್ತಿಯುಗ'**ದಲ್ಲಿ ಧಾರ್ಮಿಕ ವ್ಯಕ್ತಿಗಳ ಬೆನ್ನನ್ನೂ ಬಿಡಲಿಲ್ಲ.

ಒಟ್ಟಾರೆ ಎರಡೂ ಯುಗಗಳಲ್ಲಿ ಹುಟ್ಟಿದ ಪರಿಸರ ಮತ್ತು ಪರಿಸರ ಪ್ರಜ್ಞೆ ಈ **ಪುರಾಣ ಪ್ರಜ್ಞೆ** ಕ್ರಮೇಣ **ಇತಿಹಾಸ ಪ್ರಜ್ಞೆಯನ್ನೇ** ಹಾಳುಮಾಡಿತು. ಒಟ್ಟಿನಲ್ಲಿ "ಧಾರ್ಮಿಕ **ಪುರಾಣ ದೃಷ್ಟಿ ಮತ್ತು ಪವಾಡ ದೃಷ್ಟಿ** ಪಂಡಿತರ ಉತ್ಪ್ರೇಕ್ಷಾ ದೃಷ್ಟಿ ಗ್ರಾಮೀಣರ ಐತಿಹ್ಯ ದೃಷ್ಟಿ ಮತ್ತು ವದಂತಿ ದೃಷ್ಟಿಗಳಿಂದಾಗಿ ನಮ್ಮ **ಇತಿಹಾಸದ ಆತ್ಮ** ನಾಶವಾಯಿತು."[೫] ಎಂದೇ ಹೇಳಬೇಕು. ಪುರಾಣ 'ದಂಡ ಸಂಹಿತ' ಸ್ಥಾನ ಪಡೆದಿತ್ತು.

ಅಧ್ಯಯನ ಅಥವಾ ಸಂಶೋಧನೆ ಎನ್ನುವುದು ಮತ್ತೇನೂ ಆಗಿರದೆ, "ಉಪೇಕ್ಷೆಯಿಂದಾಗಿ ಕಳೆದು ಹೋಗಿರುವ ಪರಂಪರೆಯನ್ನು ಶೋಧಿಸಿ ಜನಾಂಗದ ಮುಂದೆ ಮಂಡಿಸುವುದಾಗಿದೆ ಮತ್ತು ಪರಂಪರೆಯ ಅವಜ್ಞೆಯ ಸ್ಥಾನದಲ್ಲಿ **ಪ್ರಜ್ಞೆಯನ್ನು ಸ್ಥಾಪಿಸುವುದಾಗಿದೆ.** ಆ ಬೆಳಕು ಖಂಡಿತವಾಗಿಯೂ ವರ್ತಮಾನ ಬದುಕನ್ನು ತಿದ್ದುತ್ತದೆ. ಉದ್ದೀಪನಗೊಳಿಸುತ್ತದೆ."[೬] ಒಟ್ಟಿನಲ್ಲಿ **ಗತಕಾಲದ ಶೋಧ** ಎನ್ನುವುದು ವರ್ತಮಾನಕಾಲದ ನಿರ್ಮಾಣ–ಕ್ಕಾಗಿ ಎನ್ನುವುದು ಸಿದ್ಧಾಂತ.

ಒಟ್ಟಿನಲ್ಲಿ **ಚಾರಿತ್ರಿಕ ಪ್ರಜ್ಞೆಯ ಜಾಗೃತಿಯೇ** ಸಂಶೋಧನೆಯ ಅಂತಿಮಗುರಿ ಎನ್ನುವುದು ನಿರ್ವಿವಾದ.

ಪರಂಪರೆಯ ಪ್ರಜ್ಞೆ, ವ್ಯಕ್ತಿಯ ಬದುಕನ್ನು ರೂಪಿಸುವ ಒಂದು ಮುಖ್ಯಸಾಧನವಾಗಿ ಮಾರ್ಪಡುತ್ತದೆ.

'ಸಂಶೋಧನೆಗಾಗಿ ಸಂಶೋಧನೆ'ಯಾಗಿರದೆ ಸಾಮಾಜಿಕ ಪರಿವರ್ತನೆಗಾಗಿ ಸಂಶೋಧನೆಯಾಗಿರಬೇಕಾಗಿದೆ. "ಅಧ್ಯಯನಕಾರರು ಮಾಡುವ ಅಧ್ಯಯನ ಅಥವಾ ಸಂಶೋಧನೆಯಿಂದಾಗಿ ಜನರ ಚಿಂತನ ಕ್ರಮವನ್ನೂ ತಿದ್ದುವಂತಿರಬೇಕು– ಸೃಜನ ಸಾಹಿತ್ಯದಂತೆ. ಆನ್ವಯಿಕ ಸಂಶೋಧನೆ ಪ್ರಧಾನವಾದಷ್ಟೂ **ಚಿಂತನ ಕ್ರಮದಲ್ಲಿ** ಬದಲಾವಣೆ ಸಾಧ್ಯವಾಗುತ್ತದೆ."[೭] ಎನ್ನುವುದನ್ನು ಮರೆಯುವಂತಿಲ್ಲ. ಮಹಾಭಾರತವನ್ನು ವೈಜ್ಞಾನಿಕ ಸಂಶೋಧನೆಯಿಂದ ಆಧುನಿಕವಾಗಿ ಚಿಂತಿಸುವುದರ ಮುಖ್ಯ ಉದ್ದೇಶವೇ ಜನರ ಭಾವನೆಗಳಲ್ಲಿ ಪರಿವರ್ತನೆಯನ್ನುಂಟು ಮಾಡುವುದಾಗಿದೆ.

ಮಹಾಕವಿ ಪಂಪ ತನ್ನ 'ವಿಕ್ರಮಾರ್ಜುನ ವಿಜಯ' ಚಂಪೂ ಕಾವ್ಯದಲ್ಲಿ **'ಬೆಳಗುವೆನಿಲ್ಲಿ ಲೌಕಿಕಂ'** ಎಂದು ಹೇಳಿದ್ದಾನಷ್ಟೆ, ಆದರೆ ಆಧ್ಯಾತ್ಮಿಕ ಸ್ತರವನ್ನು ಬಿಟ್ಟು ನಡೆದಿರುವುದು ಕಾಣಿಸುವುದಿಲ್ಲ. ಮತ್ತು ಆಧುನಿಕ ಬೌದ್ಧಿಕ ಚಿಂತನೆಯ ಒಳನೋಟದಿಂದ ನೋಡಿದ್ದೂ ಕಂಡುಬರುವುದಿಲ್ಲ.

ಋಗ್ವೇದದ ೧೦ನೆಯ ಮಂಡಲದ ದ್ಯೂತಪ್ರಕರಣವನ್ನು ಗಾಢವಾಗಿ ಅಧ್ಯಯನ ಮಾಡದ ಹೊರತು ವ್ಯಾಸರ ಮನಸ್ಸಿನ ಮಹಾಭಾರತ ರಚಿಸುವ ಚಿಂತನಶೀಲತೆ ಅರ್ಥವಾಗುವುದಿಲ್ಲ.

~~~***~~~

**ಅಡಿಟಿಪ್ಪಣೆಗಳು :**

೧. ಬಂಕಿಮಚಂದ್ರ ಛಟೋಪಾಧ್ಯಾಯ, "ಶ್ರೀಕೃಷ್ಣ ಚರಿತ್ರೆ", ಪು. ೧೨.

೨. — ಅದೇ --, ಪು. ೩೧.

೩. ಎಂ.ಎಂ. ಕಲಬುರ್ಗಿ, "ಕನ್ನಡ ಸಂಶೋಧನ ಶಾಸ್ತ್ರ", ಪು. ೨೧.

೪. — ಅದೇ --, ಪು. ೨೩.

೫. -- ಅದೇ --, ಪು. ೯೯

೬. -- ಅದೇ --, ಪು. ೬೯

೭. -- ಅದೇ --, ಪು. ೧೦೦.

~~~***~~~

## ಅಧ್ಯಾಯ-8

### ಅಂತಿಮವಾಗಿ ಈ ಅಧ್ಯಯನದ ಕುರಿತಾಗಿ.

ಮಹಾಭಾರತವನ್ನು ಆಧುನಿಕವಾಗಿ ಚಿಂತಿಸಲು ಅದಕ್ಕೊಂದು ಮಾರ್ಗವುಂಟೇ? ಎಂಬ ಪ್ರಶ್ನೆ ಅಧ್ಯಯನಕ್ಕೆ ತೊಡಗುವಾಗ ಮನಸ್ಸಿನಲ್ಲಿ ಏಳುವುದು ಸಹಜ. "ಆಧುನಿಕವಾಗಿ ಚಿಂತನೆ" ನಡೆಸಲು ಹೊರಟ ಎಲ್ಲರಲ್ಲಿಯೂ ಈ ಪ್ರಶ್ನೆ ಏಳುವುದು ಸ್ವಾಭಾವಿಕ ಕೂಡಾ. ಚಿಂತಿಸುವ ಮಾರ್ಗವುಂಟು. ಅಧ್ಯಯನದಲ್ಲಿ ತೊಡಗುವಾಗ ಮೊದಲು ಮುಖ್ಯವಾಗಿ ಇರಬೇಕಾದದ್ದು **ಸಂವೇದನೆಯ ಕಾಲವನ್ನು** ಅಂದರೆ **ಯುಗಧರ್ಮವನ್ನು** ಪರಿಭಾವಿಸುವ ಪ್ರಜ್ಞೆ, ಅದನ್ನು ಮೊದಲು ಮೈಗೂಡಿಸಿಕೊಳ್ಳುವಂತಹ ಮನಸ್ಸು –ಈ ಎರಡೂ ಬಹಳ ಅವಶ್ಯಕವಾಗಿತ್ತು.

'ಮಹಾಭಾರತ' ಐದು ಸಾವಿರ ವರ್ಷಗಳ ಪ್ರಾಚೀನ ಭಾರತದಲ್ಲಿ ರಚನೆಯಾದ ಗ್ರಂಥ. ಮಹಾಕಾವ್ಯದ ಕಥೆ ದ್ವಾಪರ – ಕಲಿಯುಗಗಳ ಪರ್ವಕಾಲದಲ್ಲಿ ನಡೆದದ್ದು. ಒಂದು ಯುಗ ಮುಕ್ತಾಯವಾಗುತ್ತಿದ್ದ ಹಾಗೇ ಮತ್ತೊಂದು ಯುಗದ ಆರಂಭ. ಅಂದರೆ ಸಂವೇದನೆಗಳೂ ಆಯಾ ಯುಗಕ್ಕೆ ತಕ್ಕಹಾಗೆ ಬದಲಾಗುವುದು ನಿಸರ್ಗ ನಿಯಮ. ಇದರರ್ಥ ಅರಿತವರಿಗೆ ಮಾತ್ರ ಮಹಾಭಾರತದ ಬಗ್ಗೆ ತಮ್ಮ ಚಿಂತನೆಯ ಅನಿವಾರ್ಯ. ಯಾಕೆಂದರೆ ದೃಷ್ಟಿಯಂತೆ ಸೃಷ್ಟಿ ಅಲ್ಲವೇ?

ಯುಗಧರ್ಮಕ್ಕನುಸಾರವಾಗಿ ದೃಷ್ಟಿ ಬದಲಾಯಿಸಿಕೊಂಡರೆ ಮಾತ್ರ **'ಹೊಸ ಸೃಷ್ಟಿಯ ಪ್ರೇರಣೆ'** ಸಾಧ್ಯ. ಮಹಾಭಾರತವನ್ನು ಇಲ್ಲಿಯವರೆಗೆ ನೋಡಿದವರೆಲ್ಲಾ ಆಧ್ಯಾತ್ಮಿಕವಾಗಿ ಆರಾಧಿಸುವ ಮನೋಭಾವನೆಯಿಂದಲೇ ನೋಡುತ್ತಾ ಬಂದಿದ್ದಾರೆ. ಆಧುನಿಕವಾಗಿ ಚಿಂತಿಸಿ ಟೀಕಿಸಿದವರು ಅಥವಾ ಆಕ್ಷೇಪಿಸಿದವರು ಬೆರಳೆಣಿಕೆಯಲ್ಲಿ ಮಾತ್ರ ನಮಗೆ ಸಿಗುವುದು. ಇದಕ್ಕೆ ಕಾರಣಗಳು ಹಲವಾರು ಇವೆ.

೧. ಕುರುಡು ನಂಬಿಕೆಗಳಿಗೆ ದಾಸರಾಗಿರುವುದು.

೨. ವೈಚಾರಿಕತೆಯ ಕೊರತೆಯಿರುವುದು.

೩. ರಾಗ ಭಾವ ವಿದೂರರಾಗಿ ಸಮಸ್ಯೆಯ ಪರಿಶೀಲನೆ ಮಾಡದಿರುವುದು.

ಹೊಸ ದೃಷ್ಟಿ – ಸೃಷ್ಟಿಗೆ ಆಳವಾದ ಅಧ್ಯಯನ, ಪಾಂಡಿತ್ಯ, ಕಾಲಗರ್ಭದಲ್ಲಿ ಮರೆಯಾಗಿರುವ ಮಹಾಭಾರತದ ಅಂದಿನ ಸಂಸ್ಕೃತಿಯ ಅನ್ವೇಷಣೆಗೆ ಮಾಡುವ ರೂಪುರೇಷೆಯ ಪರಿಕಲ್ಪನೆಯನ್ನು ಇಂದಿನ ಆಧುನಿಕ ವೈಜ್ಞಾನಿಕ ಪದ್ಧತಿಗಳಿಗೆ ಸಂವಾದಿಯಾಗಿ, ಸಮೀಕರಿಸುವ ವಿಧಾನವಾಗಿ ರೂಪುಗೊಂಡ ನೈಸರ್ಗಿಕ ಪ್ರಕ್ರಿಯೆಗಳೊಂದಿಗೆ ತೌಲನಿಕವಾಗಿ ಹೋಲಿಸಿ ನೋಡುವ ಪರೀಕ್ಷಕ, ಶೋಧಕ ಪ್ರಜ್ಞೆ ಅವಶ್ಯಕತೆ ಕಂಡುಬಂದಿತು.

ಯಾಕೆಂದರೆ 'ಪ್ರತಿಯೊಂದು ಕಾರ್ಯದ ಹಿನ್ನೆಲೆಯಲ್ಲಿ ಒಂದಾದರೂ ಕಾರಣವಿದ್ದೇ ಇರುತ್ತದೆ. ಅಂತೆಯೇ ಪ್ರತಿಯೊಂದು ಕಾರಣದ ಪರಿಣಾಮವಾಗಿ ಒಂದಾದರೂ ಕಾರ್ಯ ಜರಗಿಯೇ ಜರಗುವುದು. ವಿಶ್ವವ್ಯಾಪಾರವೆಲ್ಲವೂ ಕಾರ್ಯಕಾರಣ ಜಾಲದಿಂದ ಬಂಧಿತವಾಗಿದೆ.

"ಕಾರ್ಯರಹಿತ ಕಾರಣವಾಗಲೀ; ಅಥವಾ ಕಾರಣರಹಿತ ಕಾರ್ಯವಾಗಲೀ ಈ ವಿಶ್ವದಲ್ಲೇ ಇಲ್ಲಾ."[೧] ಇದನ್ನು ರೂಪಿಸುವ ಮನೋಧರ್ಮವೇ **ವೈಚಾರಿಕತೆ**.

'ಮಹಾಭಾರತ'ವನ್ನು ೨೪,೦೦೦ ಶ್ಲೋಕಗಳಿಂದ ೭೫,೦೦೦ ಶ್ಲೋಕಗಳಾಗಿ, ಅನಂತರ ೧,೦೦,೦೦೦ ಶ್ಲೋಕಗಳವರೆಗೆ ಬೆಳೆಸುವ ಭರದಲ್ಲಿ ಸೌತಿಗಳು ನೂರಾರು, ಸಹಸ್ರಾರು ಇಂತಹ ಅವೈಚಾರಿಕ, ಅವೈಜ್ಞಾನಿಕ ಪ್ರಕರಣಗಳನ್ನು ಸೇರಿಸಿದ್ದಾರೆ. ಯುಗಧರ್ಮಕ್ಕನುಗುಣವಾಗಿ ಸ್ಪಂದಿಸುವ ಸಂವೇದನೆಗೆ ತಕ್ಕ ಹಾಗೆ ಅಳವಡಿಸಿಕೊಂಡ ದೃಷ್ಟಿಯನ್ನು ಶೋಧಿಸುವುದೇ ಆಧುನಿಕ ಚಿಂತನೆಯ ದೃಷ್ಟಿಯ ಉದ್ದೇಶ.

ಆಶ್ವಲಾಯನನು ತನ್ನ ಗೃಹ್ಯಸೂತ್ರಗಳಲ್ಲಿ **'ಭಾರತ'** ಮತ್ತು **'ಮಹಾಭಾರತ' ಎಂಬ ಎರಡು ಹೆಸರುಗಳನ್ನು ಒಂದೇ ಸೂತ್ರದಲ್ಲಿ ಉಲ್ಲೇಖಿಸಿದ್ದಾನೆ.** ಇದು ಈ ಗ್ರಂಥಕ್ಕೆ "ಮೂಲ ರೂಪ" ಮತ್ತು "ವಿಸ್ತೃತ ರೂಪ"ಗಳಿರುವುದನ್ನು ಸೂಚಿಸುತ್ತದೆ ಎಂದು **ಲಾಸನ್** ತನ್ನ ಊಹೆಯನ್ನು ಸಮರ್ಥಿಸಿದನು. "ಈ ದ್ವಿತೀಯ ವಿಸ್ತೃತ ರೂಪಕ್ಕೆ ಕಾಲಾಂತರದಲ್ಲಿ ಇನ್ನೂ ಅನೇಕ ವಿಷಯಗಳ ಸೇರ್ಪಡೆಯಾಗಿ ಈಗ ನಮ್ಮೆದುರಿಗಿರುವ ತೃತೀಯ ವಿಸ್ತೃತ ರೂಪವಾಯಿತೆಂದು ಅವನು ಊಹಿಸಿರುವುದನ್ನು ಅನೇಕ ವೈಷ್ಣವ ಆಖ್ಯಾನಗಳೂ ಭಾಗವತದ ಧರ್ಮಗಳೂ ಈ ಅವಧಿಯಲ್ಲಿಯೇ ಸೇರಿದವು."[೨] ಎಂದಮೇಲೆ ಈ ಎಲ್ಲಾ ವಿಷಯಗಳನ್ನೂ ತೆಗೆದು ಹಾಕಿದರೆ **"ಮಹಾಭಾರತದ ಕಥಾವಸ್ತು ಅದರೊಳಗಿನ ಪಾತ್ರಗಳು ಇವುಗಳ ಮೂಲ ಆಕೃತಿ ಇವು ಎಲ್ಲಿವೆಯೆಂದು ಹುಡುಕುತ್ತಿರುವ – ಶೋಧಿಸುತ್ತಿರುವವರಿಗೆ ಮೂಲಭಾರತವು ಉಪಲಬ್ಧವಾಗುವುದು."[೩] 'ಜಯ' ಕಾವ್ಯದ ಸ್ವರೂಪವನ್ನು ಕಾಣಬಹುದು.**

**ನಿಸರ್ಗದ ವಿದ್ಯಮಾನದ ಉಲ್ಲಂಘನೆ :**

ಮಹಾಭಾರತದಲ್ಲಿ ನಿಸರ್ಗದ ಆಧಾರದ ಕಾರ್ಯ–ಕಾರಣ ಸಂಬಂಧವನ್ನು ಉಲ್ಲಂಘಿಸಿರುವ ವಿದ್ಯಮಾನಗಳು ಹೇರಳವಾಗಿವೆ. ಕುತೂಹಲ ಹುಟ್ಟಿಸಿ ಎದ್ದು ನಿಲ್ಲುವ ಪ್ರಶ್ನೆಗಳಿಗೆ ಕೊನೆಯೇ ಇಲ್ಲಾ.

**ಸಮಸ್ಯೆಗಳು :**

೧. ಮಾನವ ಯೋನಿ ಸಂಬಂಧವಿಲ್ಲದ ಜನನ – ಮತ್ಸ್ಯಗಂಧಿ ಮತ್ತು ಆಕೆಯ ಸಹೋದರ.
೨. ಯಜ್ಞಕುಂಡದಿಂದ ಮಕ್ಕಳ ಜನನ – ದೃಷ್ಟದ್ಯುಮ್ನ, ದ್ರೌಪದಿ.
೩. ಪ್ರಸವವಾದ ಕೂಡಲೇ ಮತ್ತೆ ಕನ್ಯೆಯಾಗುವುದು. – ಸತ್ಯವತಿ, ಕುಂತಿ.
೪. ಮಡಿಕೆ–ಕುಡಿಕೆಗಳಲ್ಲಿ ಮಕ್ಕಳ ಉದ್ಭವ – ಕೌರವರು.
೫. ಋಷಿಗಳು ಸ್ತ್ರೀಸಂಗ ಮಾಡುವುದು. – ಪರಾಶರ, ವ್ಯಾಸ, ದೂರ್ವಾಸ.
೬. ಸ್ತ್ರೀಪುರುಷರ ಮಿಲನವಿಲ್ಲದೇ ವರದಾನದಿಂದ ಉಂಟಾಗುವ ಸಂತತಿ.
೭. ರೇತಸ್ಸು – ಅಂಡಾಣುಗಳ ಸಂಯೋಗವಿಲ್ಲದೇ ಸ್ತ್ರೀ ಗರ್ಭಧಾರಣೆ ಇಲ್ಲದೆ ಪುತ್ರ ಪ್ರಾಪ್ತಿ.
೮. ಗಡಿಗೆಯಿಂದ ಅಗಸ್ತ್ಯ ಮತ್ತು ವಸಿಷ್ಠರು ಹುಟ್ಟಿದ್ದು.
೯. ಒಬ್ಬ ಸ್ತ್ರೀಗೆ ನೂರಾರು ಜನ ಮಕ್ಕಳು ಹುಟ್ಟುವುದು.
೧೦. ಪುರುಷರೇತಸ್ಸಿನಿಂದ ಮಾತ್ರ ಸಂತಾನ ಪ್ರಾಪ್ತಿ.
೧೧. ಪಕ್ಷಿಯ ಮೂಲಕ ದೊನ್ನೆಯಲ್ಲಿ ವೀರ್ಯ ಕಳುಹಿಸುವುದು.

೧೨. ವೀರ್ಯವು ಯಮುನಾ ನದಿಯಲ್ಲಿ ಬಿದ್ದು ಅಪ್ಸರೆಯ ರೂಪದ ಮೀನು ಗರ್ಭಧರಿಸಿ ಮನುಷ್ಯ ಜನ್ಮದ ಜೋಡಿಯ ಪ್ರಸವವಾಗುವುದು.
೧೩. ವಂಶವೃದ್ಧಿಗಾಗಿ ನಿಯೋಗ ವಿಧಾನ ಅನುಸರಿಸುವುದು.
೧೪. ಅಭಿಚಾರ ಕ್ರಮದಿಂದ ಮಂತ್ರ ಪುನಶ್ಚರಣೆಯಿಂದ ಮಗು ಜನಿಸುವುದು.
೧೫. ಅಕ್ಷದ್ಯೂತ ಮತ್ತು ದ್ರೌಪದಿ ವಸ್ತ್ರಾಪಹರಣ.

**ಮಹಾಭಾರತದ 'ತಾತ್ವಿಕ ಭೂಮಿಕೆ' ಋಗ್ವೇದ ಸಂಹಿತೆಯಲ್ಲಿದೆ. (ಕ್ಲಾಸಿಕ್ ಫಾರ್ಮ್)**

### ಆರಾತೀಯ ಕವೀಶ್ವರರಾರುಂ ಮುನ್ನಾರ್ತರಿಲ್ಲ. ಯಾಕೆ? :

ಮಹಾಭಾರತದ ಕರ್ತೃವಿನ ಹೆಸರೇ ವೇದವ್ಯಾಸ. ಹೀಗಾಗಿ ಇಂತಹ "ಮಹಾಭಾರತದಲ್ಲಿನ ಸುಂದರ ಕಲ್ಪನೆಗಳು, ಸೂಚ್ಯ ಸನ್ನಿವೇಶಗಳು, ಪ್ರಭಾವಪೂರ್ಣ ಪ್ರಸಂಗಗಳು, ಸಂವಾದಿಯಾಗಿದ್ದ ಪ್ರಸಂಗಗಳು ಅಥವಾ ವಿಸಂವಾದಿಯಾಗಿದ್ದ ಪ್ರಸಂಗಾಂತರಗಳು – ಇವೆಲ್ಲವುಗಳ ಪ್ರಭಾವ ಮುಂದಿನ ಸಾಹಿತ್ಯ ಸೃಷ್ಟಿಯಲ್ಲಿ ತಲೆದೋರಿದ್ದರೆ ಆಶ್ಚರ್ಯವೇನೂ ಇಲ್ಲ. ಅಧ್ಯಯನ – ಆಸ್ವಾದನೆ–ಚಿಂತನೆಗಳ ಫಲ ಮುಂದಿನ ಸಾಹಿತ್ಯ ಸೃಷ್ಟಿಯಲ್ಲಿ ದೊರೆಯುವುದು ಅಪೂರ್ವವೂ ಅಲ್ಲ, ಅಸಹಜವೂ ಅಲ್ಲ."[೧] ಹಿಂದಿನವರೆಲ್ಲ ಮಹಾಭಾರತವನ್ನೊಂದು ಧರ್ಮ–ನೀತಿಗಳ 'ಆಗರ'ವನ್ನಾಗಿಸಿದ್ದಾರೆ. ಧರ್ಮದ ಇತಿಹಾಸವೆಂದಿದ್ದಾರೆ. ನೀತಿಗಳ ವಿಶ್ವಕೋಶವೆಂದು ಪ್ರಸಿದ್ಧಿ ಪಡೆದಿವೆ.

'ವ್ಯಾಸ' ಒಂದು ಗುರುಪರಂಪರೆಯ ಹೆಸರಷ್ಟೆ. ಪುರಾಣೇತಿಹಾಸಗಳ ಸ್ವಾರಸ್ಯದಿಂದ ಕೂಡಿದ ಮಹಾಭಾರತವನ್ನು ವೇದದಂತೆ ಪರಿಗಣಿಸುವ ಉದ್ದೇಶದಿಂದ ಮುಂದಿನ ಪುರಾಣಿಕರೆಲ್ಲ ತಾವು ವ್ಯಾಸ, ವೇದವ್ಯಾಸರೆಂದೇ ಕರೆದುಕೊಂಡಿದ್ದಾರೆ.

ಕಾರಣ ವೈದಿಕವಾದ ಉಪಾಖ್ಯಾನಗಳೂ ಪುರಾಣಾಖ್ಯಾನಗಳೂ ಇದರೊಳಗೆ ಅಡಗಿವೆ. ಇವೆಲ್ಲವೂ ಸೇರಿರುವುದರಿಂದ ಭಾರತವು ಜಾತಿ, ಮತ, ವರ್ಣಭೇದವಿಲ್ಲದೆ ಆಸ್ತಿಕರಾದ ಎಲ್ಲ ಹಿಂದೂ ಜನರಿಗೂ ಪರಮಪೂಜ್ಯವಾದ ಗ್ರಂಥವನ್ನಾಗಿ ಮಾಡಲೆಂದೇ ಒಂದು ಲಕ್ಷ ಶ್ಲೋಕಗಳಿಗೆ ವಿಸ್ತರಿಸಲಾಗಿದೆ.

ಪಂಪ, ರನ್ನ, ಕುಮಾರವ್ಯಾಸ ಆದಿಯಾಗೂ ಯಾರೂ ಮಹಾಭಾರತವನ್ನು ತಮ್ಮ ಕಾವ್ಯಗಳ ಮೂಲವಸ್ತುವಾಗಿ ತೆಗೆದುಕೊಂಡರೂ, ತಮ್ಮ ಕಾವ್ಯಗಳಲ್ಲಿ ಅಲ್ಲಲ್ಲಿ ಕೆಲವು ಅಲ್ಪ ಸ್ವಲ್ಪ ಬದಲಾವಣೆ ಮಾಡಿ–ಕೊಂಡರೇ ವಿನಃ **ವೈಜ್ಞಾನಿಕ ವಿಶ್ಲೇಷಣೆ, ಆಧುನಿಕ ಚಿಂತನೆ** ಮಾಡುವ ಸಾಹಸಕ್ಕೆ ಯಾರೂ ಕೈ ಹಾಕಿಲ್ಲ.

'ಆರಾತಿಕವೀಶ್ವರಾರುಂ ಮುನ್ನಾರ್ತರಿಲ್ಲ.'ವೆಂದು ಕವಿ ರನ್ನ ಹೇಳುವ ಹಾಗೆ;

"ಆರಾತೀಯ ಕವೀಶ್ವರ । ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯಭಂ ।ಡಾರದ ಮುದ್ರೆಯ ನೊಡೆದಂ । ಸಾರಸ್ವತಮೆನಿಪ ಕವಿತೆಯೋಳ್ ಕವಿರತ್ನಂ ॥"–(ಸಾ.ಭೀ.ವಿ. ೧–೩೮.)

–ಎಂದಿರುವ ಕಂದಪದ್ಯದ ಅರ್ಥವನ್ನಷ್ಟು ನಾವೂ ಸ್ವಲ್ಪ ಬದಲಾವಣೆ ಮಾಡಿಕೊಂಡರೆ; ಪೂರ್ವದ ಶ್ರೇಷ್ಠಕವಿಗಳಾರೂ ಒಡೆಯಲಾಗದಿದ್ದ ಮಹಾಭಾರತದ **"ಆಧುನಿಕ ಚಿಂತನೆ"ಗಳು ಎಂಬ ಮುದ್ರೆಯನ್ನು** ಈ ಅಧ್ಯಯನದ ಮೂಲಕ ನಡೆಸುವ ಪ್ರಯತ್ನವನ್ನು ಮಾಡಲಾಗಿದೆ..

ಪಂಪ – ರನ್ನರು ತಮ್ಮ ಪೋಷಕರ ಕೀರ್ತಿಯನ್ನು ಚಿರಸ್ಥಾಯಿಯಾಗಿ ಉಳಿಸಲು ಕಾವ್ಯ ರಚಿಸಿದರೆ, ಕುಮಾರವ್ಯಾಸನು ಕೃಷ್ಣ ಪಾರಮ್ಯವನ್ನು ಸಾರುವುದಕ್ಕಾಗಿ ಈ ಕಥಾನಕವನ್ನು 'ಮಹಾಭಾರತವು ಪರಮಾತ್ಮನ ಸ್ತುತಿರೂಪವಾಗಿದ್ದು ಪಾಂಡವರ ಕಥೆಯು ಆನುಷಂಗಿಕವಾಗಿ ಅದರಲ್ಲಿ ಬರುವಂತೆ ಹತ್ತು ಪರ್ವಗಳನ್ನು ರಚಿಸಿದ್ದಾನೆ.'[೨] **'ಮಹಾಭಾರತ' ಮಹಾಕಾವ್ಯವು ವೈದಿಕಯುಗ ಮುಗಿದ ಮೇಲೆ ಪುರಾಣಯುಗ ಹುಟ್ಟುವ ಮೊದಲು**

ರಚನೆಯಾಗಿದೆ. ಪ್ರಸಕ್ತ ಯುಗಧರ್ಮಕ್ಕನುಸಾರವಾಗಿ ವಿಜ್ಞಾನಯುಗದಲ್ಲಿ ವೈಜ್ಞಾನಿಕವಾಗಿ ಪರಾಮರ್ಶಿಸುವ ಮೂಲಕ 'ಮಹಾಭಾರತ'ವನ್ನು "ಆಧುನಿಕ ಚಿಂತನೆ"ಗೊಳಪಡಿಸುವ ಮೂಲಕ ಅಧ್ಯಯನ ಮಾಡಲಾಗಿದೆ.

~~~***~~~

**ಅಡಿಟಿಪ್ಪಣಿಗಳು :**

೧. ಜಿ.ಟಿ ನಾರಾಯಣ ರಾವ್, ವಿಜ್ಞಾನ ವರ್ತಮಾನ (೨೦೦೭), ಪು. ೭೮.

೨. ಪ್ರೊ॥ ಕೆ.ಟಿ. ಪಾಂಡುರಂಗಿ, ಕಾವ್ಯದರ್ಶನ, (೧೯೯೯), ಪು. ೨೭೨.

೩. ಡಾ॥ ಶಂ.ಬಾ. ಜೋಶಿ, ಸ್ಥಿತ್ಯಂತರ (೧೯೯೯), ಪು. ೬೬.

~~~***~~~

## ಅಧ್ಯಾಯ - 9

## ಸಮಾರೋಪ

### ೧."ಆಧುನಿಕ ಚಿಂತನೆ"ಯಲ್ಲಿ ಕಂಡುಬಂದಂತಹ 'ಮಹಾಭಾರತ'ದ ವೈಶಿಷ್ಟ್ಯತೆಗಳು ಮತ್ತು ವೈಜ್ಞಾನಿಕ ದೃಷ್ಟಿಕೋನದ ಮಹತ್ವ :

'ಮಹಾಭಾರತ'ವಾದರೂ ಹಾಗೆಯೇ ಎಲ್ಲ ಸ್ತರದ ಜನರ ಜೀವನದ ಅಂತರಾಳವನ್ನೇ ಹೊಕ್ಕು, ಲೋಕ ವ್ಯವಹಾರವಿರಲಿ, ರಾಜಕಾರಣವಿರಲಿ, ಯುದ್ಧೋತ್ಸಾಹವಿರಲಿ, ಶಾಂತಿಯ ಆಕರ್ಷಣೆಯಿರಲಿ ಎಲ್ಲವನ್ನೂ ಒಳಗೊಂಡು ಸಾರ್ವಕಾಲಿಕವಾಗಿ ಪ್ರತಿನಿಧಿಸುವಂತೆ, "ಭಾರತ ಸಂಸ್ಕೃತಿಯ ಎಲ್ಲ ರೀತಿಯ ವಿಚಾರವನ್ನೂ ಒಂದು ವಿಶ್ವಕೋಶದಂತೆ ತನ್ನಲ್ಲಿಯೇ ಅಡಗಿಸಿಕೊಳ್ಳುವ ಒಂದು ಬೃಹತ್ತಮ ಸಿದ್ಧಿ ಮಹಾಭಾರತದ್ದು."[೧] ಎನ್ನುವಂತೆ ಕಾವ್ಯ ರಚಿಸಿರುವುದು ಮಹರ್ಷಿಗಳ ಅದ್ಭುತ ಸಾಧನೆ.

### 'ಇತಿಹಾಸ'ವೆನಿಸಿದ ಮಹಾಕಾವ್ಯವಾದ 'ಮಹಾಭಾರತ'ವನ್ನು 'ಧಾರ್ಮಿಕ ಗ್ರಂಥ' ಎನ್ನುವುದಕ್ಕಿಂತಲೂ ಹೆಚ್ಚಾಗಿ 'ನೈತಿಕ ಗ್ರಂಥ'ವನ್ನಾಗಿಸುವಲ್ಲಿ ವ್ಯಾಸ ಋಷಿಗಳ ಅಪೂರ್ವ ಕಥಾವಸ್ತು ನಿರ್ಮಾಣ ಕೌಶಲತೆ :

ವೇದಯುಗದ ನಂತರ "ಭಾರತದಲ್ಲಿ ಬಂದ 'ಎಪಿಕ್ ಯುಗ'ದಲ್ಲಿ ಲೌಕಿಕ ಕಾವ್ಯದ ಪ್ರಥಮ ಪ್ರಭಾತವನ್ನು, ಋಷಿದರ್ಶನ ಮತ್ತು ಲೋಕಪ್ರಜ್ಞೆಗಳ ಸಂಗಮವನ್ನು ಜೊತೆ ಜೊತೆಗೆ ನವರಸಗಳ ಪರಿವೃಷ್ಟಿಗೆ ಪ್ರಯೋಜಕವಾದ ಉಪಮಾ ರೂಪಕಾದಿ ಅಲಂಕಾರಗಳ ಪ್ರಭಾವಳಿಯನ್ನು ತೊಡಿಸಿ ನವರಸಭರಿತ ಮಹಾಕಾವ್ಯವನ್ನು ರಚಿಸುವುದರಲ್ಲಿ ಹಿಂದೆ ಬಿದ್ದಿಲ್ಲ."[೨] ಮಹಾಕವಿಗಳ ವಾಣಿಯು ಲೋಕಾತೀತವಾದ ಪ್ರತಿಭಾ ವೈಶಿಷ್ಟ್ಯದಿಂದ ಕೂಡಿರುವುದನ್ನು 'ಜಯ' ಗ್ರಂಥ ಸಾರಿ ಹೇಳುತ್ತದೆ. ಪ್ರತಿಭೆ ಅನುಭವಸಿದ್ಧ. ಹಾಗಾಗಿಯೇ ಮಹಾಕವಿ ವ್ಯಾಸ ಋಷಿಗಳು ಅಪೂರ್ವ ವಸ್ತುವನ್ನು ನಿರ್ಮಿಸ ಬಲ್ಲ ನಿರ್ಮಾಣಕುಶಲಿಗಳಾಗಿದ್ದರು.

ಕವಿಯ ನಿರ್ಮಲ ಸೂಕ್ಷ್ಮ ದೃಷ್ಟಿಗೆ "ವರ್ತಮಾನದ ಅಂತರಂಗವು ಕಂಡು ಬರುವುದರಿಂದ ಆ ಕಾಲಕ್ಕೆ ಅತ್ಯಾವಶ್ಯಕವಾಗಿ ಬೇಕಾದ ಧರ್ಮಗಳನ್ನು ಆತನು ಕಂಡು ಹಿಡಿದು ನಿರೂಪಿಸುವನು; ವರ್ತಮಾನದಲ್ಲಿ ಭವಿಷ್ಯತ್ತನ್ನು ದರ್ಶಿಸುವನು; ಅಲ್ಲದೆ ಆತನ ಆಲೋಚನೆಗಳು ಪುರಾತನ ಗರ್ಭದಿಂದ ಮೂಡಿಬಂದಿರುವ ಸುಜ್ಞಾನ ವೃಕ್ಷದ ಸುಮಫಲ ಸದೃಶವಾಗಿರುವುದು."[೩] ಆದ್ದರಿಂದಲೇ ವ್ಯಾಸ ಋಷಿಗಳು 'ದ್ಯೂತ'ದ ದುಷ್ಪರಿಣಾಮವನ್ನು ವಿದುರನಿಂದಲೂ ಹೇಳಿಸಿರುತ್ತಾರೆ. 'ದ್ಯೂತ'ದಿಂದ ವಂಶದ ವಿನಾಶವಾಗುತ್ತದೆ. 'ದ್ಯೂತ' ಕಲಹಕ್ಕೆ ಕಾರಣವಾಗುತ್ತದೆ. ಪರಸ್ಪರ ಭೇದಕ್ಕೆ ಕಾರಣವಾಗುತ್ತದೆ. ಬಹು ಕ್ರೂರವಾದುದು. ಅಣ್ಣ–ತಮ್ಮಂದಿರಲ್ಲಿಯೇ ಉಗ್ರವಾದ ವೈರವನ್ನು ಸೃಷ್ಟಿಸುತ್ತದೆ. ಕುತ್ಸಿತವಾದ ಈ ದ್ಯೂತದಿಂದ ಐಶ್ವರ್ಯಗಳಿಸುವುದು ಒಳ್ಳೆಯದಲ್ಲ.

ಭಾರತವರ್ಷಕ್ಕೆ ವಾಲ್ಮೀಕಿ, ವ್ಯಸರ ದಿವ್ಯವಾಣಿಗಳು ರಸಸುಖರವೂ, ಆತ್ಮೋದ್ದೀಪಕವೂ ಆಗಿದ್ದವು. ಆ ಮಹಾಕಾವ್ಯಗಳ ಅಸ್ತಿಭಾರದ ಮೇಲೆಯೇ ತರುವಾಯ ಮೂಡಿದ ನಾಗರೀಕತೆ ನಿಂತಿರುವುದು ಆ ಕಾವ್ಯಧೇನುಗಳ ಸ್ತನ್ಯಪಾನದಿಂದಲೇ ದೇಶದ ಆತ್ಮಗಳು ಸುಪುಷ್ಟವಾಗಿರುವುವು. ಆ ಕವಿಗಳಲ್ಲಿ ಆಗಿನ ಯುಗಧರ್ಮ ಸಮಸ್ತವೂ ಮೂರ್ತಿಮತ್ತಾಗಿತ್ತು. "ರಾಮಾಯಣ ಓದಿದವರು ರಾಮ, ಲಕ್ಷ್ಮಣ, ಸೀತೆ, ಹನುಮಂತ ಮೊದಲಾದ ಆದರ್ಶ ಸ್ತ್ರೀಪುರುಷರಂತೆ ಆಗಬೇಕೆಂದೂ, ಮಹಾಭಾರತ ಓದಿದವರು ಪಾಂಡವರಂತಾದರೂ ದ್ಯೂತವಸನಿಗಳು ಮಾತ್ರ ಆಗಬಾರದು."[೪] ಎಂದೂ ಬೋಧಿಸುವ ನೀತಿಪ್ರದಾನ ಗ್ರಂಥಗಳಾಗಿರುವುವು.

ಭಾರತವರ್ಷದ ವೇದಕಾಲೀನ ರಾಜಮಹಾರಾಜರು ಹಾಗೂ ಜನಸಾಮಾನ್ಯರು ದ್ಯೂತದಂತಹ ಜೂಜಿನ ಅಸಂಸ್ಕೃತ ವ್ಯಸನಕ್ಕೆ ಸಿಕ್ಕಿ ಸಮಾಜದ ದೃಷ್ಟಿಯಲ್ಲಿ ಯಾವ ಮಟ್ಟಕ್ಕಿಳಿಯುತ್ತಿದ್ದರೆಂಬುದನ್ನು ನೋಡಿಯಾದರೂ ಭವಿಷ್ಯದಲ್ಲಿ ಜನ ಎಚ್ಚೆತ್ತುಕೊಳ್ಳಲಿ ಎಂದು ವ್ಯಾಸರು ರಚಿಸಿರುವ ಮಹಾಕಾವ್ಯಕ್ಕೆ ಇಲ್ಲಿ ಪಗಡೆ ಆಟವೇ **–ಜೂಜಿನ ಪ್ರಕರಣವೇ 'ಕಾರಯತ್ರೀ'** ಭಾವವಾಗಿದೆ.

**"ರಸಸಿದ್ಧನಾದ ಕವೀಶ್ವರ ಜನನಿಷ್ಠವಾದ ಸಕಲ ಸೌಂದರ್ಯಸಾರವನ್ನು ತನ್ನ ಪ್ರತಿಭಾದರ್ಶನದಲ್ಲಿ ಬಿಂಬಿಸಿಕೊಂಡು ಅನಂತರ ಸಹೃದಯ ಹೃದಯಾಹ್ಲಾದಕರವಾದ ಭಾಷೆಯಲ್ಲಿ ಮೂಡಿಸುವಾಗ ಕಾವ್ಯದ ಪ್ರಾದುರ್ಭಾವವಾಗುತ್ತದೆ"[೫] ಎಂದೂ ಹೇಳಬಹುದು.**

ಋಗ್ವೇದ ದ್ಯೂತ ಪ್ರಕರಣ ಒಂದು ಸಣ್ಣ ಪ್ರಕರಣವಾಗಿರಬಹುದು. ಆದರೆ ಅದು ರಾಜರು ಹಾಗೂ ಜನರ ಮೇಲೆ ಬೀರುವ ಪ್ರಭಾವ? ಹಾಗಾಗಿಯೇ ವ್ಯಾಸರ **ಕವಿಯ ಪ್ರತಿಭೆಯಿಂದ ಮಹಿಮೆಯಿಂದ ಹೊರಕ್ಕೆ ಕಾಣುವ ಸೂಕ್ಷ್ಮ ವಸ್ತುವು ಅವನ ಕಲ್ಪನಾ ಪ್ರಪಂಚದಲ್ಲಿ ಪರ್ವತಾಕೃತಿಯನ್ನು ತಾಳಿದೆ."[೬] ಹೀಗಿರುವುದನ್ನು ನಾವು ನಳ–ದಮಯಂತಿಯರ ಹಾಗೂ ಪಾಂಡವರ ಜೀವನದಲ್ಲಿ ಕಾಣುತ್ತೇವೆ.** ಇದಕ್ಕೆ ಕವಿಯ ದರ್ಶನವೇ ಕಾರಣ. ಇಲ್ಲಿ ದರ್ಶನವೆಂದರೆ, 'ಭೌತಿಕ ಚಕ್ಷಸ್ಸುವಿನಿಂದ ನೋಡುವಂತದ್ದು, ಮಾನಸಿಕ ದೃಷ್ಟಿಯಿಂದ ಯೋಚಿಸುವುದು, ಅಪರೋಕ್ಷ ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳುವುದು.'

ವ್ಯಾಸ ಋಷಿಗಳಿಗೆ ವೇದವಿಂಗಡಣೆಯ ಕಾಲದಲ್ಲಿ ದ್ಯೂತ ಪ್ರಕರಣ ಭೌತಿಕ ಚಕ್ಷುಗಳಿಗೇ ಕಾಣುತ್ತದೆ. ಪ್ರಕರಣದ ಋಕ್ಕುಗಳಿಂದ ಹೇಳಿರುವ ಜೂಜಾಟದ ಎಲ್ಲಾ ಪ್ರಕ್ರಿಯೆಗಳನ್ನೂ ಮಾನಸಿಕ ದೃಷ್ಟಿಯಿಂದ ಪರಿಣಾಮವನ್ನು ಪ್ರಜೆಗಳ ರಾಜಮಹಾರಾಜರ ದೃಷ್ಟಿಯಿಂದ ಪರಿಭಾವಿಸಿದಾಗ ಅದೆಷ್ಟು ಆತಂಕಕಾರೀ, ವಿನಾಶಕಾರಿ ಕ್ರೀಡೆಯೆಂದು ಅಪರೋಕ್ಷ ಸಾಕ್ಷಾತ್ಕಾರವನ್ನೂ ಮಾಡಿಕೊಳ್ಳುತ್ತಾರೆ.

"ಮಹರ್ಷಿಗಳು ತಮ್ಮ ದರ್ಶನ ಧಾರೆಯನ್ನು ಇತಿಹಾಸವೆಂದು ಕರೆಯಲಿ, ಕಾವ್ಯವೆಂದೇ ಹೇಳಲಿ, ಬೇರೆಯವರು ಅದನ್ನು ಶಾಸ್ತ್ರವೆಂದು ಹೊಗಳಿ, ಪುರಾಣವೆಂದು ತಿಳಿಯಲಿ – ಈ ಎಲ್ಲವನ್ನೂ ಸಾರ್ಥಕವೆನಿಸುವ ಹಿರಿಮೆ ಗರಿಮೆಗಳು ಆ ಪ್ರಾಚೀನ ರಚನೆಗೆ ಇರುವುದೇ ಈ ಮಹಾಕಾವ್ಯದ ಮಹಾ ವೈಶಿಷ್ಟ್ಯವಾಗಿದೆ."[೭]

"ಕೌಟುಂಬಿಕ, ಸಾಮಾಜಿಕ, ರಾಜಕೀಯ, ಐತಿಹಾಸಿಕ ಇತ್ಯಾದಿ ಎಲ್ಲಾ ಜೀವನ ವಲಯಗಳನ್ನೂ ವ್ಯಾಪಿಸಿ, ಮಾನವತೆಯ ಎಲ್ಲಾ ಮಾನಸಿಕ ಆಸೆ, ಆಕಾಂಕ್ಷೆಗಳಿಗೂ ಇಂಬಾಗಿ, ಅವನ ಎಲ್ಲಾ ಸುಖ ದುಃಖಗಳನ್ನೂ ಮಾರ್ದನಿಸುವ ಮಹಿಮೆ ಈ ಮಹಾಕಾವ್ಯದ್ದು."[೮] ದ್ಯೂತದಂತಹ ವಿಕೃತ ವ್ಯಸನಕ್ಕೆ ಒಳಗಾಗಿ ಹಾಳಾಗಬೇಡಿ ಎಂದು ಎಚ್ಚರಿಸುವ ಸಲುವಾಗಿಯೇ 'ಜಯ' ಗ್ರಂಥವನ್ನು ವ್ಯಾಸರು ರಚಿಸಿದರು.

ಪ್ರಾಚೀನ ಕಾವ್ಯಪರಂಪರೆಗೆ ತಲಕಾವೇರಿಯಾದ ಈ ಮಹಾಕಾವ್ಯ 'ಮಹಾಭಾರತ'ವನ್ನು ಓದುವಾಗ 'ಲೋಕದಲ್ಲಿ ಹೀಗೆ ನಡೆಯಲಾರದು' ಎನ್ನಬಹುದಾದ ಘಟನೆಗಳು ಎದುರಾಗುತ್ತವೆ. ಕವಿಯು ತನ್ನ ಕಾವ್ಯದಲ್ಲಿ ಸುಳ್ಳುಗಳನ್ನು ನಿರೂಪಿಸಿದ್ದಾನೆಂದು ಸಹೃದಯನು ಭಾವಿಸುಂತಾಗುತ್ತವೆ. ಆದರೆ ಅವೆಲ್ಲಾ 'ಕವಿಸಮಯ'ಗಳಲ್ಲಿ ತಮ್ಮ ಮೂಲಸ್ವರೂಪದಲ್ಲಿ ನಿಜವಾಗಿರುತ್ತದೆ. ಬದಲಾದ ಪರಿಸರದಲ್ಲಿ ಮತ್ತು ಬದಲಾವಣೆಗಳ ಪ್ರಭಾವದಿಂದ ಅವುಗಳ ನೈಜಿಕತೆ ಮಸುಕಾಗುತ್ತವೆ. ಇದನ್ನೆಲ್ಲಾ 'ಆಧುನಿಕ ವಿಚಾರ'ಗಳ ಬೆಳಕಿನಲ್ಲಿ ನೋಡುವವರಿಗೆ **ಕವಿಸಮಯಗಳಿರುವ** ಕವಿತೆಯ ಸಂದರ್ಭದಲ್ಲಿ ಪ್ರತಿಮೆಯಾಗಿಯೋ ಪ್ರತೀಕವಾಗಿಯೋ ಆಗಿ ಸಂದರ್ಭವನ್ನು ಪುಷ್ಟಿಗೊಳಿಸುತ್ತವೆ.

ಮಹಾಭಾರತ ಕುರಿತಾದ ಆಧುನಿಕ ಚಿಂತನೆ, 'ಇದು ಐತಿಹಾಸಿಕ ವಿಶ್ಲೇಷಣ ದೃಷ್ಟಿ. ಪ್ರತಿಯೊಂದು ವಸ್ತುವನ್ನೂ ಮಾನವನ ಮಾನದಂಡದಿಂದ ಅಳೆದು ಅದರ ಯೋಗ್ಯತೆಗಳನ್ನು ಗುರ್ತಿಸಿಕೊಳ್ಳಬೇಕು. ಇದರಿಂದ ತಾನು ನೋಡುತ್ತಿರುವ ವಸ್ತುಗಳ ನಿಜವಾದ ಸ್ಥಿತಿ ಅರಿತುಕೊಂಡಾಗ, ಕುರುಡು ನಂಬಿಕೆ, ಅಂಧಶ್ರದ್ಧೆ ಇದ್ದಲ್ಲಿ ಶುದ್ಧ ತಿಳುವಳಿಕೆ ಹುಟ್ಟಲು ಸಾಧ್ಯವಾಗುತ್ತದೆ. ಹಲವು ಸಾವಿರ ವರ್ಷಗಳ ಹಿಂದಿನ ವಿಚಾರವಾದುದರಿಂದ ಸಹಜವಾಗಿಯೇ ಇಂದಿನ ಭೌತಿಕ, ಸಾಮಾಜಿಕ, ರಾಜಕೀಯ ಪರಿಸ್ಥಿತಿಗಳಿಗೂ ಅಂದಿನದಕ್ಕೂ ವ್ಯತ್ಯಾಸವಿರುತ್ತದೆ. ಪ್ರಾಚೀನ ಭಾರತೀಯರಿಗೂ, ಆಧುನಿಕ ಭಾರತೀಯರ ಚಿಂತನೆಗೂ ಕೆಲವೊಮ್ಮೆ ಅಜಗಜಾಂತರ ವ್ಯತ್ಯಾಸವಿರುತ್ತದೆ! ಜೀವನ ವಿಧಾನದಲ್ಲಿ ಕಾಲದಿಂದ ಕಾಲಕ್ಕೆ, ಯುಗದಿಂದ ಯುಗಕ್ಕೆ ಬದಲಾವಣೆಗಳು ಸಹಜ. ಆಧುನಿಕ ನಾಗರಿಕತೆಯ **ವೈಜ್ಞಾನಿಕ ದೃಷ್ಟಿಯಿಂದ** ನೋಡಿದಾಗ ಅಂದಿನ ಅವಗುಣಗಳು ಗೋಚರಿಸುತ್ತವೆ. ಸಮಕಾಲೀನ ಸಾಹಿತ್ಯವು ಹೇಗೆ ನಮ್ಮ ಕಾಲದ ಜನಜೀವನವನ್ನು ವಿಸ್ತರಿಸುವುದೋ ಅದೇರೀತಿ ಇತಿಹಾಸ ಎನಿಸಿರುವ ಮಹಾಕಾವ್ಯವಾದ 'ಮಹಾಭಾರತ'ವು ಅಂದಿನ ಕಾಲದ ಜನಜೀವನವನ್ನು ಚಿತ್ರಿಸುತ್ತದೆ. ಈ ಅಧ್ಯಯನವು 'ಧರ್ಮಗ್ರಂಥ'ವೆಂದು ತಿಳಿದಿರುವ ಮಹಾಭಾರತದಲ್ಲಿರುವ ಮಾನವಾತೀತ, ಅನೈಸರ್ಗಿಕ ಅತಿಮಾನವತೆಗೆ ಕಾರಣವಾದ ಮೂಢನಂಬಿಕೆಗಳಿಗೆ ಸಂಬಂಧಿಸಿದ **ಶಸ್ತ್ರಚಿಕಿತ್ಸೆ,** ಇದು ವೈಜ್ಞಾನಿಕ ಮನೋಧರ್ಮದ ವಿಶ್ಲೇಷಣೆಯ ಮೂಲೋದ್ದೇಶ.

**೨. "ಆಧುನಿಕ ಚಿಂತನೆ"ಗೆ ಪ್ರೇರಣೆ ನೀಡಿದ ಕೆಲವು ಮೂಲ ಪ್ರಸಂಗಗಳು :**

'ಮಹಾಭಾರತದ ಕುರಿತಾದ ಆಧುನಿಕ ಚಿಂತನೆಗಳು' ಈ ಮಹಾಪ್ರಬಂಧದಲ್ಲಿ ವಿಶೇಷವಾಗಿ ಕಂಡುಬರುವಂತಹ ಹಲವಾರು ಅನೈಸರ್ಗಿಕ ಮುಖ್ಯ ಪ್ರಕರಣಗಳ ಅವೈಜ್ಞಾನಿಕ ಪ್ರಕ್ರಿಯೆಗಳ ಕುರಿತಾಗಿ ಚರ್ಚಿಸುವ, ವಿಶ್ಲೇಷಿಸುವಂತಹ ಪ್ರಯತ್ನವನ್ನು ಈ ಅಧ್ಯಯನದಲ್ಲಿ ನಡೆಸಲಾಗಿದೆ.

ಮುಖ್ಯವಾಗಿ ಋಗ್ವೇದಾದಿ ವೈದಿಕ ಸಾಹಿತ್ಯದ ಆಕರಗಳಿಂದ ಪ್ರೇರಣೆಗೊಂಡ ವ್ಯಾಸರು ಐತಿಹಾಸಿಕ ಪಾತ್ರಗಳ ಮೂಲವನ್ನೇ ಕಥಾವಸ್ತುವಿನ ರಚನೆಗೆ ಸ್ಫೂರ್ತಿಗೊಂಡಿರುವುದನ್ನೂ ಶೋಧಿಸುವ ಸರ್ವ ಕಾರ್ಯವನ್ನೂ ಈ ಅಧ್ಯಯನದಲ್ಲಿ ನಡೆಸಲಾಗಿದೆ.

ಮಹಾಭಾರತದ ಕಥಾಸಂವಿಧಾನ ರಚನೆಗೆ ಋಗ್ವೇದ ಅಷ್ಟೇಅಲ್ಲದೆ; ಆದಿ ಮಹಾಕಾವ್ಯ 'ರಾಮಾಯಣ'ವೂ ಮೂಲ ಪ್ರೇರಣೆಯಾಗಿರುವುದು ಆಧುನಿಕ ಚಿಂತನಶೀಲತೆಯ ಶೋಧನೆಯ ವಿಚಾರಕ್ಷೇತ್ರದ ವ್ಯಾಪ್ತಿಯಲ್ಲಿ ಪರಿಶೀಲಿಸಲಾಗಿದೆ.

**ಮಹಾಭಾರತದಲ್ಲಿ ಬರುವ ಅವೈಜ್ಞಾನಿಕ ಪ್ರಸಂಗಗಳ "ಆಧುನಿಕ ಚಿಂತನೆ"ಯ ವಿಶ್ಲೇಷಣೆಗೊಳಗಾಗಿರುವ ಕೆಲವು ವಿಷಯಗಳು ಮತ್ತು ಅವುಗಳ ಬಗೆಗಿನ ವಿಶ್ಲೇಷಣೆ.**

೧. ಋಷಿಗಳಿಗೆ ಸ್ತ್ರೀ-ಸಂಗ ಸರಿಯೇ? ( ವಿಶ್ವಾಮಿತ್ರ-ಮೇನಕೆ, ಸತ್ಯವತಿ-ಪರಾಶರ ಇತ್ಯಾದಿ)

೨. ಪ್ರಸವವಾದ ಕೂಡಲೇ ಮತ್ತೆ ಆ ಸ್ತ್ರೀಗೆ ಕನ್ಯಾವಸ್ಥೆ ಪ್ರಾಪ್ತಿಯಾಗುವುದು ಸಾಧ್ಯವೇ? (ಸತ್ಯವತಿ, ಕುಂತಿ)

೩. ವಂಶಾಭಿವೃದ್ಧಿಗಾಗಿ 'ನಿಯೋಗ' ಪದ್ಧತಿಯಿಂದ ಸಂತಾನ ಪಡೆಯುವುದು ಸಮಂಜಸವೇ? (ಧೃತರಾಷ್ಟ್ರ, ಪಾಂಡು ಇತ್ಯಾದಿ)

೪. ಸ್ತ್ರೀಗರ್ಭಾಶಯದ ಸಂಬಂಧವಿಲ್ಲದ ಸಂತಾನ ನಿಜವೇ? (ದ್ರೋಣ, ಕೃಪ, ಕೃಪೀ)

೫. ಮಡಿಕೆಗಳಲ್ಲಿ ಮಕ್ಕಳು ಜನಿಸುವುದು ಶಕ್ಯವಿದೆಯೇ? (ಕೌರವರು)

೬. ಯಜ್ಞಕುಂಡದಿಂದ ಮಕ್ಕಳು ಜನಿಸಲು ಸಾಧ್ಯವೇ? (ಧೃಷ್ಟದ್ಯುಮ್ನ-ದ್ರೌಪದಿ)

೭. ಸ್ತ್ರೀ-ಪುರುಷ ಸಂಯೋಗವಿಲ್ಲದೆ ಕೇವಲ ವರದಾನದಿಂದಲೇ ಸಂತಾನಪ್ರಾಪ್ತಿ ಸಾಧ್ಯವೇ? (ಪಾಂಡವರು)

೮. ಅಭಿಚಾರ ಕ್ರಮದಿಂದಲೇ ಸಂತಾನ ಭಾಗ್ಯ (ಕರ್ಣ)

೯. ರೇತಸ್ಸು-ಅಂಡಾಣುಗಳ ಸಂಯೋಗವಿಲ್ಲದೇ ಮತ್ಸ್ಯದಿಂದ ಜನ್ಮಪಡೆದ ಸಂತಾನ (ಸತ್ಯವತೀ)

೧೦. ಗಡಿಗೆಯಲ್ಲಿ ಅಗಸ್ತ್ಯ, ವಸಿಷ್ಠರ ಜನನ.

೧೧. 'ಅಕ್ಷದ್ಯೂತ' ಮತ್ತು 'ದ್ರೌಪದೀ ವಸ್ತ್ರಾಪಹರಣ.' ಪ್ರಸಂಗ.

'ಬ್ರಹ್ಮಜ್ಞಾನಿ'ಗಳೆನಿಸಿದ ಮಹರ್ಷಿಗಳು ಮಾಡುವ ಶಾಸನಗಳಿಗೂ, ಕೆಲಸಗಳಿಗೂ ಪಾಪಲೇಪವಿಲ್ಲ. ಹೀಗಾ- ಗಿಯೇ ವಿಶ್ವಾಮಿತ್ರ ಮೇನಕೆಗೆ ಮನಸೋತದ್ದು, ಪರಾಶರ ಸತ್ಯವತಿಗೆ ಮನಸೋತಿದ್ದು. ಇದು ಯುಗಧರ್ಮದ ಪ್ರಭಾವದಿಂದ. ರಾಜಶಾಸನಗಳನ್ನೂ ಜಾರಿಗೆ ತರುವ ಅಧಿಕಾರ ಹೊಂದಿದ್ದಂತಹ ಋಷಿಗಳು ಅನಭಿಷಿಕ್ತ ಸಾಮ್ರಾಟರೇ ಆಗಿ ಮೆರೆದರು. ಕುಂತಿ-ದೂರ್ವಾಸರ ಸಮಾಗಮದಿಂದ ಹುಟ್ಟಿದ ಶಿಶು ಕರ್ಣ. ಈ ಸತ್ಯ ಘಟನೆಯನ್ನು ಮರೆಮಾಚಿ, ಕುಂತಿಯ ಪಾವಿತ್ರ್ಯತೆಯನ್ನು ಕಾಪಾಡುವ ಸಲುವಾಗಿ ಧರ್ಮಾನುಕೂಲಕ್ಕಾಗಿ ಅವೈಜ್ಞಾನಿಕ ಪದ್ಧತಿಯನ್ನು ತುಂಬಿ ಹೇಳಿರುವುದು ಪುರಾಣಿಕರ ಕೈಚಳಕದಿಂದ! ಕಾರ್ಯ-ಕಾರಣದ ಸಮರ್ಥನೆಯೇ ಇಲ್ಲದೇ ಇಲ್ಲಿ ಅವೈಜ್ಞಾನಿಕವಾಗಿ, ಅನೈಸರ್ಗಿಕವಾಗಿ ಶಿಶುವಿನ ಹುಟ್ಟನ್ನು ಹೇಳಲಾಗಿದೆ. ಆದರೆ ಉದ್ದೇಶಪೂರ್ವಕವಾಗಿ ಸತ್ಯವನ್ನು ಮರೆಮಾಚುವ ಸಲುವಾಗಿ ಇಲ್ಲಿ ಸೂರ್ಯನ ಹೆಸರನ್ನು ಮಧ್ಯೆ ತಂದಿದ್ದಾರಷ್ಟೇ. 'ಸೂರ್ಯನಷ್ಟೇ ಪ್ರಖರವಾದ, ಪ್ರಭಾವವುಳ್ಳ ಮಗು ಜನಿಸಲಿ.' ಎನ್ನುವುದರ ಭಾವ.

**೩. ಮಹಾಭಾರತದಲ್ಲಿ ಋಷಿಗಳ ಅವೈಜ್ಞಾನಿಕ ಸಂತಾನದ ಉಲ್ಲೇಖಗಳು :**

'ಮಹಾಭಾರತ'ದಲ್ಲಿ ಇಂತಹ ಘಟನೆಗಳು ಹಲವಾರು ನಮಗೆ ಸಿಗುತ್ತವೆ. ಋಷಿಗಳ ರೇತಸ್ಸು ಎಲ್ಲಿಬಿದ್ದರಲ್ಲಿ ಜೀವೋತ್ಪನ್ನವಾಗುತ್ತಿತ್ತೆಂದು ಹೇಳಿರುವುದು ಅವೈಜ್ಞಾನಿಕ ಪದ್ಧತಿಯೆಂದೇ ಸಿದ್ಧಾಂತವಾಗುತ್ತದೆ. ಋಷಿಗಳು ಸ್ತ್ರೀಗರ್ಭದಿಂದ ಜನಿಸಿದರೆಂದು ಹೇಳುವುದಾಗಲೀ, ಅಥವಾ ಋಷಿಗಳು ಸಂಪರ್ಕ ಮಾಡಿದ ಸ್ತ್ರೀಗರ್ಭದಿಂದ ಶಿಶುವು ಜನಿಸಿತೆಂದು ಹೇಳುವುದು ಅಪಚಾರವೆಂದು ಭಾವಿಸುತ್ತಿದ್ದುದು ಅಂದಿನ ಯುಗಧರ್ಮ. ಸತ್ಯವನ್ನು ಮರೆಮಾಚುವುದಕ್ಕಾಗಿಯೇ ಇಂತಹ ಜೀವೋತ್ಪತ್ತಿಗೊಂಡ ಶಿಶುಗಳಿಗೆ 'ಅಯೋನಿಜರು' ಎಂಬ ಹಣೆಪಟ್ಟಿಯನ್ನು ಹಚ್ಚಿ ಮಡಿಕೆಗಳಲ್ಲಿ ಹುಟ್ಟಿದ್ದು, ಯಜ್ಞಕುಂಡಗಳಲ್ಲಿ ಜನಿಸಿದ್ದು, ದೊನ್ನೆಯಲ್ಲಿ ಜನಿಸಿದ್ದು, ಅಭಿಚಾರ ಮಂತ್ರದಿಂದಲೇ ಜನಿಸಿದ ಶಿಶುಗಳು ಇಂತಹ ಪ್ರಕರಣಗಳಿಗೆ ನಿದರ್ಶನಗಳು. ಆದರೆ ಇದನ್ನೆಲ್ಲಾ ಸುಳ್ಳು ಎಂದು ವಾದಿಸುವ ಎದೆಗಾರಿಕೆ ಯಾರಲ್ಲೂ ಕಾಣಿಸಲಿಲ್ಲ.

ಪ್ರಾಚೀನಕಾಲದಿಂದಲೂ ಹಿಡಿದು ಪಾಣಿನಿಯ ಕಾಲದವರೆಗು ಪ್ರಚಲಿತವಾದ ಅತಿಥಿಸತ್ಕಾರದ ಒಂದು ವಿಚಿತ್ರ ಮಾದರಿಯು ಇಲ್ಲಿ ಪ್ರಸ್ತಾಪಕ್ಕೆ ಯೋಗ್ಯವಾಗಿದೆ. "ತನ್ನ ಮಿತ್ರನಿಗೆ ಅಥವಾ ಅತಿಥಿಗೆ ತನ್ನ ಪತ್ನಿಯನ್ನೇ ಸಂಭೋಗಕ್ಕಾಗಿ ಕೊಡುವ ಪದ್ಧತಿ ಇತ್ತುಎಂದು ಮಹಾಭಾರತದ ಆದಿಪರ್ವದ ಹೇಳಿದೆ."

"ಕೌರವರ" ವಂಶ ಜನಿಸಿದ್ದು ವೇದವ್ಯಾಸರಿಂದ. "ಪಾಂಡವರ" ವಂಶ ಜನಿಸಿದ್ದು ದೂರ್ವಾಸರಿಂದ. ಇದೇ ಸಿದ್ಧಾಂತ. ಕುಂತಿ-ಮಾದ್ರಿಯರು ಪಂಚಪಾಂಡವರನ್ನು ಪಡೆದದ್ದು 'ನಿಯೋಗ ಪದ್ಧತಿ'ಯಿಂದಲೇ ಎನ್ನುವುದೇ ಸತ್ಯದ ಘಟನೆ.

**೪. 'ಮಹಾಭಾರತ'ದಲ್ಲಿ 'ಚತುರ್ವಿಧ ಪುರುಷಾರ್ಥ'ಗಳ ಸಾರ್ಥಕತೆ ಹೇಗೆ? ಏತಕ್ಕಾಗಿ ಇದರ ಅವಶ್ಯಕತೆ? :**

ಋಷಿಗಳೂ ಕೂಡಾ ಮೂಲತಃ ಮನುಷ್ಯರೇ. ಸ್ವಪ್ರಯತ್ನದಿಂದ ಪೂರ್ಣ ಮಾನವತ್ವವನ್ನು ವಿಕಸಿಸಿರುವ ಮಹಾಸಾಧಕರೆನಿಸಿಕೊಂಡವರು. ಇವರು 'ಅತಿಮಾನವರಲ್ಲ.' ಎಂಬ ಸ್ಥಿತಿಯನ್ನು ಅರ್ಥೈಸಿದ್ದಾರೆ. ಏಕೆಂದರೆ 'ದೇವವಾಣಿ' ಎಂಬ ಪ್ರತ್ಯೇಕವಾದ ನುಡಿಯೊಂದಿಲ್ಲ. ಮನುಷ್ಯವಾಣಿಯೇ ಆ ಅಂತಸ್ತಿಗೆ ಏರಿ ಋಷಿವಾಕ್ಯವಾಗುತ್ತದೆ. ನೈತಿಕತೆಯು ಔಚಿತ್ಯದ ಸರಹದ್ದು ಮೀರಿದಾಗ ವ್ಯಕ್ತಿ ಶಾಸ್ತ್ರಾಂಧನಾಗಿ ವರ್ತಮಾನದ ಜೀವನದಿಂದ ವಿಮುಖನಾಗುತ್ತಾನೆ. ವಿಶ್ವಾಮಿತ್ರ, ವಸಿಷ್ಠ, ದೂರ್ವಾಸ, ಪರಾಶರ ಮೊದಲಾದ ಎಲ್ಲಾ ಋಷಿಗಳ ದೃಷ್ಟಾಂತವೇ ಇದಕ್ಕೆ ಸಾಕ್ಷಿ. ಆದ್ದರಿಂದ ಉಳಿದೆಲ್ಲಾ ಇಂತಹ ಅವೈಜ್ಞಾನಿಕ, ವಿಚಿತ್ರವಾದ ಸೃಷ್ಟಿಯ ಮಹಾಭಾರತದ ಪ್ರಸಂಗಗಳ ಪ್ರಕ್ರಿಯೆಗಳು ಅಸಾಧುವೆಂದೂ, ಅಸಾಧ್ಯವೆಂದೂ ಸಿದ್ಧಾಂತವಾಗುತ್ತದೆ.

'ಕಾಮ'ವು ಪುರುಷಾರ್ಥಗಳಲ್ಲಿ ಒಂದು. ಋಷಿಗಳಾದರೇನು? ಅವರೂ ಮನುಷ್ಯರಲ್ಲವೇ? ಅಪೇಕ್ಷೆಯು ಮನಸ್ಸಿನಲ್ಲಿ ಹುಟ್ಟಿತೆಂದಮೇಲೆ ಮನುಷ್ಯನು ಮಾನಸಿಕವಾಗಿ ದುರ್ಬಲನಾದನೆಂದೇ ಅರ್ಥ. ಮಾನಸಿಕ, ದೈಹಿಕ, ಆತ್ಮ ದೌರ್ಬಲ್ಯಗಳು ಮನುಷ್ಯನನ್ನು ವಿಕೃತನನ್ನಾಗಿ ಮಾಡುತ್ತದೆ. ಆಗ ಮನುಷ್ಯನು ಅಜ್ಞಾನದ ವಶನಾಗುತ್ತಾನೆ. ಋಷಿಗಳ ವಾಸ್ತವ ಸಂಗತಿಗಳನ್ನೆಲ್ಲಾ ಅನಾವರಣ ಮಾಡುತ್ತಾ ಹೋಗಿದ್ದರೆ 'ಮಹಾಭಾರತ'ಕ್ಕೆ ಮಹತ್ವ ಬರುತ್ತಲೇ ಇರಲಿಲ್ಲ. ಅದು 'ಮಹಾಕಾವ್ಯ' ಎನಿಸಿಕೊಳ್ಳುತ್ತಲೂ ಇರಲಿಲ್ಲ.

ಮನುಷ್ಯ ಸಂತಾನ ಉತ್ಪತ್ತಿಯಾಗುವುದು ಸ್ತ್ರೀ-ಪುರುಷರಲ್ಲಿನ ಅಂಡಾಣು-ವೀರ್ಯಾಣುಗಳಂತಹ ವಿಶಿಷ್ಟಶಕ್ತಿಗಳ ಸೇರುವಿಕೆಯಿಂದ. ಅವು ಕುರುಡು ಶಕ್ತಿಗಳೂ ಅಲ್ಲ, ಜಡದ್ರವ್ಯಗಳೂ ಅಲ್ಲ. ಚೇತನಗಳು.. ಅವುಗಳು ಜೀವಿಗಳ ಕ್ಷೇತ್ರ(ದೇಹ)ಗಳಲ್ಲಿ ಅನುಪ್ರವೇಶ ಮಾಡದಿದ್ದರೆ **"ಸಂತಾನ ರೂಪದ ಸೃಷ್ಟಿಯ ವಿಕಾಸವು ಸಾಧ್ಯವಾಗುತ್ತಿರಲಿಲ್ಲ. ಸಂಯೋಗ, ಗರ್ಭದ ಉತ್ಪತ್ತಿ ನಂತರ ಅನುಕೂಲ ಸನ್ನಿವೇಶಗಳಲ್ಲಿ ಬೆಳೆದ ಭ್ರೂಣದಿಂದ ಶಿಶು ಜನನ ಎನ್ನುವುದು ವೈಜ್ಞಾನಿಕ ಸತ್ಯ."**[೧೦] ಎಂದು ಹೀಗೆ ಸ್ಪಷ್ಟವಾಗಿರುವಾಗ, 'ಮಹಾಭಾರತ'ದಲ್ಲಿ ದೇವತೆಗಳಾಗಲೀ, ಋಷಿಗಳಾಗಲೀ, ರಾಜ-ಮಹಾರಾಜರೇ ಆಗಲೀ ಪ್ರಕೃತಿ ನಿಯಮವನ್ನು ಮೀರಿ ಸ್ತ್ರೀ-ಪುರುಷರ ಸಮಾಗಮವಿಲ್ಲದೇ ಸೃಷ್ಟಿಕ್ರಿಯೆ ಸಾಧ್ಯವೇ ಇಲ್ಲಾ ಎಂದಮೇಲೆ;

೧. ದ್ರೋಣ, ಕೃಪ, ಕೃಪಿಯರು ದೊನ್ನೆ ಮತ್ತು ಕುಂಭಗಳಲ್ಲಿ ಜನನ.

೨. ಮೀನಿನ ಹೊಟ್ಟೆಯಲ್ಲಿ ಮತ್ಸ್ಯಗಂಧಿಯ ಜನನ. ಇತ್ಯಾದಿ ಪ್ರಕರಣಗಳು ಅನೈಸರ್ಗಿಕವಾಗಿವೆ.

ಸತ್ಯಸಂಗತಿ ಎಂದರೆ, **ದೂರ್ವಾಸರು** ಬಾಲಕಿ ಕುಂತಿ ಪ್ರೌಢಾವಸ್ಥೆಗೆ ಬಂದಾಗ **ಕಾಮಪಾಪವು ಪ್ರಜ್ಞೆಯಲ್ಲಿ ಜನ್ಮತಾಳಿ, ಭಾವದಲ್ಲಿ ಬೆಳೆದು, ಕರ್ಮದಲ್ಲಿ ಕಸುವು ಪಡೆದು ಪ್ರೌಢಾವಾಗುತ್ತದೆ."**[೧೧] ಋಷಿಗಳನ್ನೂ 'ಕಾಮ' ಬಿಟ್ಟಿಲ್ಲ. **'ನೈತಿಕ ದೋಷಗಳು ಮನಸ್ಸಿನ ಒಳಗಿನ ದುಷ್ಟ ಸಂಕಲ್ಪಗಳ ರೂಪದಲ್ಲೂ ಹಾಗೂ ಹೊರಗಿನ ಪಾಪಪೂರ್ಣ ಕೃತಿಗಳ ರೂಪದಲ್ಲೂ ಅಭಿವ್ಯಕ್ತವಾಗುತ್ತದೆ.** ಈಗಾಗಲೇ ಹೇಳಿರುವಂತೆ ಇದನ್ನು ವಿಶ್ವಾಮಿತ್ರರಾದಿಯಾಗಿ ಹಲವಾರು ಋಷಿಗಳಲ್ಲಿ ಕಾಣಬಹುದು.

ಮಕ್ಕಳ ಜನನ ಅದರಲ್ಲೂ ಗಂಡುಮಕ್ಕಳ ಜನನಕ್ಕೆ ಮಹಾಭಾರತದಲ್ಲಿ ವಿಶೇಷ ಪ್ರಾಶಸ್ತ್ಯವಿದೆ. ಕಾರಣ, **'ಅಪುತ್ರಸ್ಯ ಗತಿರ್ನಾಸ್ತಿ'**, ಮತ್ತು 'ವಂಶೋದ್ಧಾರ'ದ ಕುರಿತಾದ ಚಿಂತೆ. 'ಮಹಾಭಾರತ'ದಲ್ಲಿ ಮಕ್ಕಳನ್ನು ಪಡೆಯುವ ಹಲವಾರು ಪ್ರಸಂಗಗಳು ನಮ್ಮ ಗಮನ ಸೆಳೆಯುತ್ತವೆ. ಕಾರಣ ನೈಸರ್ಗಿಕ ನಿಯಮ ಪಾಲಿಸದೇ ಇರುವ **ಅವೈಜ್ಞಾನಿಕ ಪದ್ಧತಿಯನ್ನು ಅನುಸರಿಸಿದ್ದೆಂದು ಸತ್ಯವನ್ನು ಮರೆಮಾಚಿ ಹೇಳುವ ಸುಳ್ಳುಕಟ್ಟುಕಥೆಗಳು.**

**"॥ ದ್ವಾಪರೋ ಮೈಥುನೋ ಧರ್ಮಃ ಪ್ರಜಾನುಭವ ನೃಪ । ತಥಾ ಕಲಿಯುಗೇ ರಾಜನ್ ದ್ವಂದ್ವಮಾಪೇದಿರೇ ಜನಾಃ ॥**

-ಇದನ್ನು ಮಹಾಭಾರತ (ಶಾಂತಿಪರ್ವ ೨೦೭-೪೦) ವೇ ಸಮರ್ಥಿಸುವ ಶ್ಲೋಕ. ಸಂತಾನವು ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ರೀತಿಗಳಲ್ಲಿ ವೈಶಿಷ್ಟ್ಯಗಳಿಂದ ಕೂಡಿರುತ್ತದೆ. ಕೃತ ಮತ್ತು ತ್ರೇತಾಯುಗಗಳಲ್ಲಿ ಅನೇಕ ವಿಧವಾದ ಸಂತಾನ ಪ್ರಾಪ್ತಿಯಾಗುವ ಉಲ್ಲೇಖಗಳಿದ್ದರೂ, ದ್ವಾಪರ ಮತ್ತು ಕಲಿಯುಗಗಳಲ್ಲಿ ಗಂಡು-ಹೆಣ್ಣಿನ ಸಮಾಗಮದಿಂದಲೇ ಎಂದು ಸಮರ್ಥಿಸಿದೆ.

ವಿವಾಹ ಸಂಬಂಧದಿಂದ ಉಂಟಾಗುವ ಸ್ತ್ರೀ-ಪುರುಷ ಸಂಬಂಧವು **ಧಾರ್ಮಿಕ, ನೈತಿಕ** ಎನಿಸಿಕೊಳ್ಳುವುದಷ್ಟೇ ಅಲ್ಲದೇ **ಸಾಮಾಜಿಕ ಪ್ರತಿಷ್ಠೆಯೂ ದೊರೆಯುತ್ತದೆ.** ಇಂತಹ ಸಂಬಂಧದಿಂದ ಜನಿಸಿದ ಮಕ್ಕಳು **ಔರಸ ಪುತ್ರರು** ಎನಿಸುತ್ತಾರೆ. ಇದು ಆಧುನಿಕ ಚಿಂತನೆಯಂತೆ ಪ್ರಕೃತಿ ನಿಯಮವೂ, ವೈಜ್ಞಾನಿಕ ರೀತಿಯೂ ಆಗಿ ಒಪ್ಪಿಗೆ ಪಡೆದಿದೆ.

ಸ್ತ್ರೀ-ಪುರುಷರ ವಿವಾಹವಾಗದೇ **ಅನೈತಿಕ ಸಂಬಂಧದಿಂದ** ಉಂಟಾಗುವ ಮಕ್ಕಳು **ಅನೌರಸ ಪುತ್ರರು** ಎನಿಸುತ್ತಾರೆ. ಇದು ಹಾದರಕ್ಕೆ ಹುಟ್ಟಿದ ಸಂತಾನ ಎನಿಸುತ್ತದೆ. ಇದನ್ನು ಮರೆಮಾಚಲಿಕ್ಕಾಗಿ ಮಕ್ಕಳಿಲ್ಲದವರು **'ಮಹಾಭಾರತ'** ಕಾಲದಲ್ಲಿ **ಯಜ್ಞ-ಯಾಗಾದಿಗಳ ನೆಪ ಹೇಳಿ, ಸ್ತ್ರೀ-ಪುರುಷರ ಸಂಬಂಧವೇ ಇಲ್ಲದೆಯೂ ಮಕ್ಕಳಾಗುತ್ತವೆಂದು** ನಂಬಿಸುವಂತಹ **ಪ್ರಕರಣಗಳು** ಮಹಾಭಾರತದಲ್ಲಿ ಹಲವಾರು ಕಂಡು ಬರುತ್ತವೆ. ಇದು **ಪುರಾಣಿಕರ ಸೃಷ್ಟಿಯೇ ಇರಬೇಕು. ಪುರಾಣ ಕಥೆಗಳಲ್ಲಿ ಇಂತಹ ವಿಸ್ಮಯಗಳನ್ನು ಹೇರಳವಾಗಿ ಕಾಣಬಹುದು.**

**ದ್ರೋಣ, ಧೃಷ್ಟದ್ಯುಮ್ನ, ದ್ರೌಪದೀ, ಕೃಪ, ಕೃಪೀಯರೆಲ್ಲಾ ಇಂತಹ ಅಯೋನಿಜರೆಂದು ಹೇಳಿರುವುದೂ ಋಷಿಗಳು ಅಥವಾ ಪುರಾಣಿಕರೇ.**

## ೫೭. ಯಜ್ಞ-ಯಾಗಾದಿಗಳ ಅವಶ್ಯಕತೆಯೇನು? ಏಕೆ ಇವುಗಳನ್ನು ಆಚರಿಸಲೇಬೇಕು? :

ದಿವೋದಾಸನು **ಪುತ್ರಕಾಮೇಷ್ಠಿ ಯಾಗ** ಆಚರಿಸಿದನು. ಈತನ ಪತ್ನಿ ಮಾಧವಿ. ಇವರಿಗೆ ಪ್ರತರ್ದನ ಎಂಬ ಮಗ ಹುಟ್ಟಿದನು. ಮಾಧವಿಗೆ ಈಗಾಗಲೇ ಸಂತಾನವಾಗಿತ್ತು. ಓರ್ವ ಬ್ರಹ್ಮರ್ಷಿ ಮಾಧವಿಗೆ 'ನಿತ್ಯಕನ್ಯೆ'ಯಾಗಿರುವ ವರ ಕೊಡುತ್ತಾನೆ. ಇದೇ ನಿಯಮ ಸತ್ಯವತಿ-ಕುಂತಿಗೂ ಅನ್ವಯಿಸಲಾಗಿದೆ.

**ಯಜ್ಞ ಮತ್ತು ತಪಶ್ಚರ್ಯಗಳನ್ನು ವೈಭವೀಕರಿಸಲು ಹಾಗೂ ಪ್ರಕೃತಿ ವಿರುದ್ಧವಾದ ಅನೈಸರ್ಗಿಕ, ಅವೈಜ್ಞಾನಿಕ ಸಂತಾನಪ್ರಾಪ್ತಿಯು ಪುರಾಣಿಕರ ಸೃಷ್ಟಿ ಎಂದುಬೇರೆ ಹೇಳಬೇಕಾಗಿಲ್ಲ.**

'ಮಹಾಭಾರತ'ದ ಕರ್ತೃ ಹಾಗೂ ಒಂದು ಪಾತ್ರವೇ ಆಗಿರುವ ವೇದವ್ಯಾಸರು **ಪರಾಶರ-ಯೋಜನಗಂಧಿಯರ** ಸಮಾಗಮದಿಂದಲೆ ತಾವು ಜನಿಸಿರುವುದನ್ನು ಹೇಳಿದ್ದಾರೆ. ವ್ಯಾಸರಿಗೂ ಸ್ತ್ರೀ-ಪುರುಷರ ಸಮಾಗಮದಿಂದ ಮಾತ್ರ ಸಂತಾನ ಸಾಧ್ಯ ಎಂಬ ವೈಜ್ಞಾನಿಕ ಸತ್ಯ ತಿಳಿದಿತ್ತು ಎನ್ನುವುದು ದೃಢವಾಗುತ್ತದೆ. ಎಂದ ಮೇಲೆ ಮುಂದಿನ ಎಲ್ಲಾ ಅನೈಸರ್ಗಿಕ, ಅವೈಜ್ಞಾನಿಕ ಸಂತಾನಗಳಿಗೆ ಅವರು ಹೊಣೆಗಾರರಲ್ಲ ಎಂದೂ ಸಿದ್ಧಾಂತವಾಯಿತು. ಮುಂದಿನ ಪ್ರಮಾಣಗಳಿಗೆಲ್ಲ ಪುರಾಣಿಕರೇ ಕಾರಣರೆಂದೂ ತಿಳಿದುಬರುತ್ತದೆ. 'ಮಹಾಭಾರತ'ದಲ್ಲಿನ ಆದಿಪರ್ವದಲ್ಲಿರುವ ೬೩-೮ ಶ್ಲೋಕವು ಇದನ್ನು ಸಮರ್ಥಿಸುತ್ತದೆ.

'ಮಹಾಭಾರತ' ಮಹಾಕಾವ್ಯ ಯುಗಧರ್ಮಕ್ಕನುಗುಣವಾಗಿ ನಡೆದ ಹಲವಾರು ಘಟನೆಗಳನ್ನೊಳಗೊಂಡಿದೆ. ಈ ಘಟನೆಗಳು ಇಂದಿನ ಆಧುನಿಕ ಯುಗಧರ್ಮಕ್ಕೆ ಕಾಲಕ್ಕೆ ಹೊಂದಿಕೊಳ್ಳುವುದು ಎಷ್ಟು ಸಮಂಜಸ? ಎಂದು ತಾರ್ಕಿಕ ಮನೋಭಾವದಿಂದ ನೋಡಿದಾಗ ಕಂಡುಬರುವಂತಹ ಬದಲಾವಣೆಗಳನ್ನು ನಾವು ವೈಜ್ಞಾನಿಕ ದೃಷ್ಟಿಯಿಂದ ವಿಮರ್ಶಿಸಿದಾಗ ಅದರಲ್ಲಿ ಆಧುನಿಕ ರೂಪರೇಷೆಯ ಲಕ್ಷಣಗಳು ಕಂಡು ಬರುವುದು ಸಹಜ. ಕುತೂಹಲವೂ ಸಹಜ. ಇದಕ್ಕೆ ಕಾರಣ "ಪ್ರಾಚೀನ ಮಾನವ ಆಧುನಿಕ ಬುದ್ಧಿಜೀವಿಯಂತೆ ಯೋಚಿಸಲಿಲ್ಲ; ಮಾತ್ರವಲ್ಲ, ಅವನು ಹೀಗೆ ಯೋಚಿಸಬಹುದಾಗಿತ್ತೆಂದು ಇಂದು ನಾವೆನ್ನುತ್ತೇವೆಯೋ ಹಾಗೆ ಯೋಚಿಸಿಲ್ಲ. ಆದ್ದರಿಂದಲೇ ಅವರು ಸೃಷ್ಟಿಸಿದ್ದು ನಮಗೆ ಜಟಿಲವಾದ ಪುರಾಣದಂತೆ ಕಾಣುತ್ತಿದೆ."[೧೨] ಈ ಹೇಳಿಕೆಯನ್ನು ಮಹಾಕಾವ್ಯದಲ್ಲಿ ಪ್ರಾದುರ್ಭಾವಗೊಂಡಿರುವ ಎಲ್ಲಾ ಪ್ರಸಂಗಗಳಿಗೂ ಅನ್ವಯಿಸಬಹುದು.

ಭಾರತೀಯ ಧರ್ಮ, ಸಂಸ್ಕೃತಿ, ನಾಗರೀಕತೆಗಳ ಸಮಗ್ರದರ್ಶನ ಮಾಡಿಸುವ ಈ ಮಹಾಕಾವ್ಯವು ಸಂಸ್ಕೃತಿಯ ಒಳ-ಹೊರ ಪಾಪಗಳ ಪಾರದರ್ಶಕ ಶಬ್ದಚಿತ್ರಗಳಿವೆ. ನಮಗೆ ದೊರೆತಿರುವ ಇತಿಹಾಸಗಳಲ್ಲಿ ಅತೀ ಪ್ರಾಚೀನ ಇತಿಹಾಸ ಸಾಹಿತ್ಯ ಎಂದರೆ 'ಮಹಾಭಾರತ' ಕಾವ್ಯವೇ ಆಗಿದೆ. ಭಾರತೀಯ ಕಾವ್ಯಗಳಿಗೇ ಇದು ಸಾಗರಸದೃಶ!

ವ್ಯಾಸ ಋಷಿಗಳ ಸಮಕಾಲೀನ ಸಾಮಾಜಿಕ ಸ್ಥಿತಿಯಲ್ಲಿ ಮತ್ತು ಅದಕ್ಕೂ ಹಿಂದಿನ ಅಂದರೆ ವೇದಗಳ (ಋಗ್ವೇದ) ಕಾಲದಲ್ಲಿ **'ಅಕ್ಷದ್ಯೂತ'ದಿಂದುಂಟಾಗುವ ಭಯಂಕರ ದುಷ್ಪರಿಣಾಮಗಳಿಗೆ ಋಷಿಗಳು ಪರಿಣಾಮಕಾರೀ ರೀತಿಯಲ್ಲಿ ಒಳಗಾಗಿದ್ದರು. ಇದು ನೀತಿಬಾಹಿರವಾದುದೆಂದು ಬೋಧಿಸಲೆಂದೇ ಪಣ ತೊಟ್ಟು ಅವರು ಈ 'ಮಹಾಭಾರತ' ಮಹಾಕಾವ್ಯವನ್ನು ರಚಿಸಿದರು. ಪಾಂಡವರಿಗೂ-ಕೌರವರಿಗೂ ನಡೆದ ಯುದ್ಧವೇ 'ಮಹಾಭಾರತ'ದ ಹೃದ್ಭಾಗ. ಕಾಲಕ್ರಮದಲ್ಲಿ ಇತರ ಅನುಷಂಗಿಕ ವಿಷಯಗಳು, ಉಪಾಖ್ಯಾನಗಳೂ, ದೃಷ್ಟಾಂತ ಕಥೆಗಳೂ, ಮೋಕ್ಷಬೋಧಕ ಪ್ರಕರಣಗಳು, ಉಪದೇಶ ಭಾಗಗಳು ಬಂದು ಸೇರಿಸಲ್ಪಟ್ಟವು.** -ಈ ಎಲ್ಲಾ ವಿಷಯಗಳ ಕುರಿತಾ-ಗಿಯೂ ಕೂಲಂಕಷವಾಗಿ ಅಧ್ಯಯನ ನಡೆಸಲಾಗಿದೆ.

**ಋಷಿ ಕವಿ 'ದ್ಯೂತ'ದಿಂದ ತತ್ವಜ್ಞಾನಿಯಾಗುತ್ತಾನೆ.** 'ಅಕ್ಷದ್ಯೂತ' ಪ್ರಸಂಗದಿಂದಾಗಿ ದ್ರೌಪದಿ 'ಮಹಾಭಾರತ'ದ ಮುಖ್ಯ ಪಾತ್ರವಾಗಿದ್ದಾಳೆ. ಕ್ಷತ್ರಿಯ ಕುಲನಾಶಕ್ಕೆ ಅಗ್ನಿಕನ್ಯೆಯ ಈ ಪಾತ್ರ ಬಹಳ ಪ್ರಮುಖವಾಗಿದೆ. 'ಅಕ್ಷದ್ಯೂತ'ಕ್ಕೆ ಇಡೀ ಮಹಾಕಾವ್ಯವು ಒಂದು ಸಾಂಕೇತಿಕ ಪ್ರತಿಮೆಯಂತಿದೆ.

ದುರ್ಯೋಧನನಿಗೆ ಸಕಲ ಸಂಪತ್ತು ಹಣ, ಐಶ್ವರ್ಯದ ದಾಹವಿತ್ತು. ಅದರ ಜೊತೆಗೆ ದ್ರೌಪದಿಯ ಸೌಂದರ್ಯ ಕೌರವೇಂದ್ರನ ಕಣ್ಣು ಕುಕ್ಕುವಂತಾಯಿತು. ಹಸ್ತಿನಾಪುರದಲ್ಲಿದ್ದಾಗ ದುರ್ಯೋಧನಾದಿಗಳ ಕಾಟ, ವನವಾಸದಲ್ಲಿದ್ದಾಗ ಸೈಂಧವನ ಕಾಟ, ಅಜ್ಞಾತವಾಸದಲ್ಲಿದ್ದಾಗ ಕೀಚಕನ ಕಾಟ! ಒಟ್ಟಾರೆ ದ್ರೌಪದಿಯ ಸೌಂದರ್ಯವೇ

ಆಕೆಗೆ ಮುಳುವಾಯಿತೇ? ಎಷ್ಟೆಲ್ಲಾ ತೊಂದರೆಗಳನ್ನನುಭವಿಸಲು. ರಾಜಪುತ್ರಿಯಾದವಳಿಗೆ ಜೂಜುಗಾರರ ಸಹವಾಸದಿಂದ ಬಂದ ದುರ್ಗತಿಗೆ ಮಿತಿಯುಂಟೇ? ಇದಕ್ಕೆಲ್ಲಾ ಕಾರಣರಾದವರು ಅಂದಿನ ಕಾಲದ ರಾಜರು ಮತ್ತು ಋಷಿಗಳೇ.

ಕುಂತಿಯ ಅಂದಿನ ದುರವಸ್ಥೆಗೆ ಕಾರಣವೂ ಈ ದುಷ್ಟ ವ್ಯವಸ್ಥೆಯೇ. ಕಾಲಜ್ಞಾನವನ್ನು ತಿಳಿದವರೆಂದು ಹೇಳುವ 'ಋಷಿಗಳು' ಅಂದಿನ ಕಾಲದ ಸಮಾಜ ಸ್ಥಿತಿಯನ್ನು ಸಂಪೂರ್ಣ ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು.

**೬. ಮಹಾಭಾರತ ಯುದ್ಧದ ಬಗ್ಗೆ ವಿದ್ವಾಂಸರ ಅಭಿಪ್ರಾಯ :**

ಪುರಾತತ್ವ ಇತಿಹಾಸಜ್ಞರಾದ ಡಾ|| ಡಿ.ಸಿ. ಸರ್ಕಾರ್ ಮತ್ತು ಡಾ|| ಎಚ್.ಡಿ. ಸಂಕಾಲಯಾ ಮುಂತಾದವರು 'ಮಹಾಭಾರತ' ಯುದ್ಧ ನಡದೇ ಇಲ್ಲವೆಂದಿದ್ದಾರೆ. ಇದು ವ್ಯಾಸರ ಉದ್ದೇಶಕ್ಕೂ ವ್ಯತಿರಿಕ್ತವಾಗಿದೆ. 'ಅಕ್ಷದ್ಯೂತ'ದಂತಹ ಅನರ್ಥಕಾರಿ ಜೂಜಾಟದಿಂದ ಹೇಗೆ ಸಾಮ್ರಾಜ್ಯಗಳೇ ನಾಶವಾಗಿ ಹೋಗುತ್ತದೆ ಎಂಬುದನ್ನು ತೋರಿಸಲಿಕ್ಕಾಗಿ ಕುರುಕ್ಷೇತ್ರ ಯುದ್ಧವನ್ನು;

'ಇದು ಆದಿಭಾರತದಲ್ಲಿಯೂ ಇದೆ. ಆದಿಪರ್ವ ಎರಡನೇ ಅಧ್ಯಾಯ –೧೩ರಲ್ಲಿದೆ.

**"|| ಅಂತರೇಚೈವ ಸಂಪ್ರಾಪ್ತೇ ಕಲಿದ್ವಾಪರ ಯೋರಭೂತ್ । ಸಮಂತಪಂಚಕೇ ಯುದ್ಧಂ ಕುರುಪಾಂಡವ ಸೇನಯೋಃ ||"**

ಕಲಿ ಮತ್ತು ದ್ವಾಪರ ಯುಗಗಳ ಸಂಧಿಕಾಲವು ಪ್ರಾಪ್ತವಾದಾಗ ಕುರು–ಪಾಂಡವರ ಸೈನ್ಯಗಳೊಳಗೆ ಸಮಂತಪಂಚಕ (ಕುರುಕ್ಷೇತ್ರ)ದಲ್ಲಿ ಯುದ್ಧವು ನಡೆಯಿತು ಎಂದು ಸ್ಪಷ್ಟವಾಗಿ ಹೇಳಿದೆ. ಅಂದರೆ ಈ ಕಾಲ ಕ್ರಿಪೂ. ೩೨೦೦.

ಭಾರತ ಇಂದಿಗೂ ಯುದ್ಧ ಬೇಕಾಗಿಲ್ಲ. ಅಂದು 'ಉದ್ಯೋಗ ಪರ್ವ'ದಲ್ಲಿ ಕೃಷ್ಣ ಸಂಧಿಯನ್ನು ಸಾಧಿಸುವೆ ಎಂದು ಹೋದ. ಯುದ್ಧವನ್ನು ನಿಶ್ಚಯಿಸಿಕೊಂಡು ಬಂದ. ಇದು ಹಳೆಯ ಕಥೆ ಎಂದು ತಿಳಿಯಬೇಡಿ. ಇಂದಿಗೂ "ಸೀಮಾವಾದ"ದಲ್ಲಿ ಭಾವೈಕ್ಷ ವಿಷಯದಲ್ಲಿ ನಾವು ಶಾಂತಿಯನ್ನು ಸ್ಥಾಪಿಸಲು ಹೋಗಿ ಯುದ್ಧದ ಬೀಜವನ್ನು ಬಿತ್ತಿ ಬರುತ್ತಿದ್ದೇವೆ. ಶಾಂತಿದೂತರಾಗಿ ಹೋದ ಲಾಲ್‌ಬಹದ್ದೂರ ಶಾಸ್ತ್ರಿವರು ಜೀವಂತ ಮರಳಿ ಭಾರತಕ್ಕೆ ಬರಲೇ ಇಲ್ಲಾ. ಪರಸ್ಪರ ವಿನಾಶದಿಂದ ಯಾರಿಗೂ ಎಂದಿಗೂ ಸುಖವಾಗಿಲ್ಲ. ಇದರ ಅರಿವು ಪಾಶ್ಚಿಮಾತ್ಯರಿಗೂ ಇದೆ. ಆದುದರಿಂದ ಅವರೂ ಹೇಳುತ್ತಿದ್ದಾರೆ. ಪರಸ್ಪರ ವಿನಾಶದ ಹಾದಿಯನ್ನು ಬಿಡೋಣ ಎಂದು."[೧೩] ಅದೆಲ್ಲಾ ಕೇವಲ ನಾಟಕ. ಪಾಕಿಸ್ತಾನ ಮತ್ತು ಚೀನಾ ಇಂದಿಗೂ ಕಾಲುಕೆರೆಯುತ್ತಲೇ ಇರುವುದು ಎಲ್ಲರಿಗೂ ತಿಳಿದ ವಿಚಾರವೇ ಆಗಿದೆ. ಇದೊಂದು ಜ್ವಲಂತ ಸಮಸ್ಯೆಯಾಗಿದೆ.

**"|| ಏತತ್ಕಲಿಯುಗಂ ನಾಮ ಅಚಿರಾದ್ಯತ್ಪ್ರವರ್ತತೇ ||**

–ಇತ್ಯಾದಿ ಆಧಾರಗಳಿಂದ ವ್ಯಾಸರ 'ಜಯ' ಕಾವ್ಯವು ಕ್ರಿ.ಪೂ. ೩೦೦೦ ವರ್ಷಗಳ ಸುಮಾರಿನಲ್ಲಿ ನಡೆದುದೆಂದೇ ಸ್ಪಷ್ಟವಾಗುವುದು."[೧೪]

ಮಹಾಭಾರತ ನಡೆದಿರುವ ಎಲ್ಲಾ ಸಂಗತಿಗಳನ್ನೂ ವ್ಯಾಸರು ಪ್ರತ್ಯಕ್ಷವಾಗಿ ನೋಡಿರುವುದಾಗಿ 'ಪದ್ಮಪುರಾಣ' ಹೇಳುತ್ತದೆ. ಮತ್ತು ಕಲಿಯುಗದ ಆದಿಯಲ್ಲಿ ರಚಿಸಲ್ಪಟ್ಟಿರಬೇಕೆಂದು 'ವರಾಹ ಪುರಾಣ'ವು ಹೇಳುತ್ತದೆ.

**೭. ಪ್ರಕ್ಷಿಪ್ತಗಳು ಯಾಕೆ? :**

ಭೀಷ್ಮ ಯುಧಿಷ್ಠಿರನಿಗೆ ರಾಜಧರ್ಮವನ್ನು ವರ್ಣಿಸುವ ಸಂದರ್ಭದಲ್ಲಿ; ಮನುವು ತನ್ನ ಧರ್ಮಶಾಸ್ತ್ರದಲ್ಲಿ ಎರಡು ಶ್ಲೋಕಗಳನ್ನು ಹೇಳಿದ್ದಾನೆ. "ಆ ಶ್ಲೋಕಗಳನ್ನು ನೀನು ಹೃದ್ಗತ ಮಾಡಿಕೊಳ್ಳಬೇಕೆಂದು ಹೇಳುತ್ತಾನೆ."[೧೫] ಇದು ಹೇಗೆ ಸಾಧ್ಯ? ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ. ಆದರೆ ಮಹಾಭಾರತ ಕಾಲದ ನಂತರ ಬಂದವನು

ಮನು. ಇದು ತುಂಬ ಆಭಾಸವೆನಿಸುತ್ತದೆ. ಇದು ಪ್ರಕ್ಷಿಪ್ತವೆನ್ನದೆ ವಿಧಿಯಿಲ್ಲ. ನಂತರ ಸೇರ್ಪಡೆಯಾಗಿರುವುದೇ ಸಿದ್ಧಾಂತ. ಪುರಾಣಿಕರ ಕೈಚಳಕವೆನ್ನಲು ಇದಕ್ಕಿಂತಲೂ ಬೇರೆ ಸಾಕ್ಷಿ ಬೇಕಾಗಿಲ್ಲ.

**೮. ರಾಮಾಯಣ-ಮಹಾಭಾರತಗಳಲ್ಲಿಯ ಸಾಮ್ಯಗಳು :**

೧. ಶ್ರೀರಾಮನು ರಾಮಾಯಣದಲ್ಲಿ ಯಜ್ಞಕುಂಡದ ಮಧ್ಯದಿಂದ ಆವಿರ್ಭವಿಸುತ್ತಾನೆ.

**ಮಹಾಭಾರತದಲ್ಲಿ ಧೃಷ್ಟದ್ಯುಮ್ನ-ದ್ರೌಪದಿಯರು ಯಜ್ಞಕುಂಡದಿಂದ ಹುಟ್ಟುತ್ತಾರೆ.** ಇದಕ್ಕೆ ವ್ಯಾಸರಿಗೆ ಹಿನ್ನೆಲೆ ಮತ್ತು ಪ್ರೇರಣೆ ದೊರೆತದ್ದು; ಭೃಗು ಎಂಬ ಋಷಿಯು ಅಗ್ನಿಯ ಜ್ವಾಲೆಯಲ್ಲಿ ಪ್ರಾದುರ್ಭೂತನಾದವನು, ಯಾರ ದೇಹದಲ್ಲಿಯೂ ಉತ್ಪನ್ನನಾದವನಲ್ಲ. ಪೂರ್ವದಲ್ಲಿ ಪ್ರಜಾಪತಿಯ ವೀರ್ಯವು ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟು ಅದರ ಜ್ವಾಲೆಯಿಂದ ಭೃಗು ಋಷಿಯು ಉತ್ಪನ್ನನಾದನೆಂದು ಪೂರ್ವೇತಿಹಾಸವಿದೆ. ಈ ಪ್ರಕರಣವು ವ್ಯಾಸರ ಮೇಲೆ ಪ್ರಭಾವ ಬೀರಿದ್ದರಿಂದ ಅವರು ದ್ರೌಪದಿ ಮತ್ತು ಧೃಷ್ಟದ್ಯುಮ್ನನನ್ನು ಯಜ್ಞಕುಂಡದಲ್ಲಿ ಹುಟ್ಟಿದಂತೆ ಚಿತ್ರಿಸಿದ್ದಾರೆ.

೨. ರಾಮ ಹುಟ್ಟುವಾಗಲೇ ಅವನ ಹೃದಯದಲ್ಲಿ ಶ್ರೀವತ್ಸವೆಂಬ ಚಿಹ್ನೆಯೂ, ಕೌಸ್ತುಭಮಣಿಯೂ, ವನಮಾಲೆಯೂ ವಿರಾಜಿಸುತ್ತಿರುತ್ತದೆ.

ಮಹಾಭಾರತದಲ್ಲಿ ಕರ್ಣ ಹುಟ್ಟುವಾಗ ಕರ್ಣಕುಂಡಲಗಳು ಮತ್ತು ಕವಚಗಳಿರುತ್ತವೆ.

೩. ರಾಮಾಯಣದಲ್ಲಿ ಶ್ರೀರಾಮಾದಿಗಳು ಯಜ್ಞದ ಫಲವಾಗಿ ದೊರೆತ ದಿವ್ಯಪಾಯಸದ ಪ್ರಭಾವದಿಂದಲೇ ಅವತರಿಸಿದರು.

ಮಹಾಭಾರತದಲ್ಲಿ ಪಾಂಡವರು ಮಂತ್ರವೀರ್ಯದಿಂದ ಆಹ್ವಾನಿಸಲ್ಪಟ್ಟ ಇಂದ್ರಾದಿ ದೇವತೆಗಳಿಂದ ಜನಿಸಿದರು. ಅಷ್ಟೇಅಲ್ಲ; ಇನ್ನೂ ಅನೇಕ ವಿಷಯಗಳಲ್ಲಿ ರಾಮಾಯಣದ **ವಿಸ್ತಾರವೇ ಮಹಾಭಾರತವೆಂದು** ಹೇಳಬಹುದಾಗಿದೆ. ಮಹಾಭಾರತದಲ್ಲಿನ **ಕಣಿಕನ ಉಪದೇಶದಿಂದಾಗಿ** ಧೃತರಾಷ್ಟ್ರನ ಮನಸ್ಸು ವಿಲ್ಪವಾಯಿತು: ಕಡೆಯವರೆಗೂ ಅವನು ಕಣಿಕನು ಹೇಳಿದುದನ್ನು ಮರೆಯಲೇ ಇಲ್ಲ. ರಾಮನ ಮೇಲೆ ಕೈಕೇಯಿಗಿದ್ದ ದೃಢ ವಿಶ್ವಾಸವು ಮಂಥರೆಯಂತೆ ಕಣಿಕನೂ ತರ್ಕಬದ್ಧವಾಗಿ ಮಾತನಾಡುತ್ತಾನೆ.

'ಲೋಕವಸ್ತು' ಕವಿ ಮನೋವ್ಯಾಪಾರದಿಂದ 'ಕಾವ್ಯವಸ್ತು'ವಾಗುತ್ತದೆ. ಈ ಕಾವ್ಯವಸ್ತುವಿನ ಸಹಜ ಸೌಂದರ್ಯ, ಸಹಜವಾದ ಉಕ್ತಿಯಲ್ಲಿ ಅಭಿವ್ಯಕ್ತಿಗೊಂಡಾಗ ಕಾವ್ಯದ ಪ್ರಕಾರಗಳು ಹುಟ್ಟುತ್ತವೆ.

**೯. ಕಾವ್ಯಸ್ವರೂಪ ಲಕ್ಷಣ :**

ಕಾವ್ಯ ಹುಟ್ಟುವುದೇ ಪ್ರತಿಭಾಶಾಲಿಯಿಂದ. 'ಕಾವ್ಯಂತು ಜಾಯತೆ ಜಾತು ಕಸ್ಯಚಿತ್ ಪ್ರತಿಭಾವತಃ' ಎನ್ನುತ್ತಾನೆ ಭಾಮಹ. ಈ ಪ್ರತಿಭೆಯ ಜತೆಗೆ ವ್ಯಾಕರಣ, ಛಂದಸ್ಸು, ಪುರಾಣ ಕಥೆ, ಲೋಕಾನುಭವಗಳೆಲ್ಲ ಮುಖ್ಯವಾಗುತ್ತದೆ.

'ಕವೇಃ ಕರ್ಮ ಕಾವ್ಯಂ' 'ಕಾವ್ಯ ಕವಿ ಕರ್ಮ.' ಎಂಬ ಸಿದ್ಧಾಂತ ನಮಗೆಲ್ಲಾ ತಿಳಿದೇ ಇದೆ. ಕವಿಯ ಕೌಶಲದಿಂದ, ಅವನ ಅನುಭವದಿಂದ ಕಾವ್ಯ ರೂಪುಗೊಳ್ಳುತ್ತದೆ.

ಕವಿ ಸ್ವಭಾವದ ಭೇದದಿಂದ ಕಾವ್ಯದಲ್ಲಿಯೂ ಭೇದಗಳುಂಟಾಗುತ್ತವೆ.

'ಕಾವ್ಯಂತು ಜಾಯತೇ ಜಾತು ಕಸ್ಯಚಿತ್ ಪ್ರತಿಭಾವತಃ' – ಕಾವ್ಯ ಹುಟ್ಟುವುದು ಎಲ್ಲೋ ಲಕ್ಷಕ್ಕೊಬ್ಬ ಪ್ರತಿಭಾಶಾಲಿಯಿಂದ ಮಾತ್ರ ಎಂದಿರುವ ಭಾಮಹನ ಉಕ್ತಿ ಡಾ॥ ಗೋಕಾಕ್ ಅವರಿಗೂ ಅನ್ವಯಿಸುತ್ತದೆ.

'ಪ್ರತಿಮೆ' ಎಂದರೇನು? ಅಂದರೆ; ಅನುಭವಗಳ ಅಭಿವ್ಯಕ್ತಿಯಲ್ಲಿ ಮೂಡಿ ಬಂದ ಅಲಂಕಾರಗಳು ಎಂದು ವ್ಯಾಪಕವಾದ ದೃಷ್ಟಿಯಲ್ಲಿ ಹೇಳಬಹುದು.

ಇಲ್ಲಿ 'ದ್ಯೂತ'ಕ್ಕೆ ಮಹಾಭಾರತ ಇಡೀ ಕಾವ್ಯವೇ ಒಂದು 'ಕಾವ್ಯಪ್ರತಿಮೆ'ಯಾಗಿದೆ.

ಪ್ರತಿಮೆ ಕಾವ್ಯಕ್ಕೆ ಒಂದಲ್ಲಾ ಒಂದು ರೂಪದಲ್ಲಿ ಅನಿವಾರ್ಯ ಎನ್ನುವುದನ್ನು ನೋಡುತ್ತೇವೆ.

ಮಹಾಭಾರತ ಕಾವ್ಯವು ಪ್ರತಿಮೆಗಳ ಪರಂಪರೆ.

'ಪ್ರತಿಮೆ'ಯು 'ಅಲಂಕಾರ'ಗಳಿಗೆ ಸಂವಾದಿಯಾಗಿದೆ. 'ಕಾವ್ಯಪ್ರತಿಮೆ' ಕಣ್ಣಮುಂದೆ ಚಿತ್ರವೊಂದನ್ನು ಕಟ್ಟುತ್ತದೆ. ಬೌದ್ಧಿಕ ಅನುಭವಗಳ ಸಂಕೀರ್ಣತೆಯತ್ತ ಮನಸ್ಸನ್ನು ತಿರುಗಿಸುತ್ತದೆ.

ರೂಪಕಗಳ ಶಕ್ತಿ, ಕವಿ ಪ್ರತಿಭಾಶಕ್ತಿಗೆ ಒರೆಗಲ್ಲಾಗುತ್ತದೆ. ಈ ರೂಪಕಗಳೇ ಕಾವ್ಯದ ಸಾರಸರ್ವಸ್ವ

'Imaging is, in itself, the very height and life of poetry ' ಎಂದಿರುವ **ಡ್ರೈಡನ್** ಮಾತನ್ನು ನೆನಪಿಸಿಕೊಳ್ಳಬಹುದು.

ಆದರೆ ಕಾವ್ಯಪ್ರತಿಮೆಗಳು, ಎಷ್ಟೇ ಸುಂದರವಾಗಿರಲಿ, ಅವು ತಮಗೆ ತಾವೇ ಇಲ್ಲ–ಅಂದರೆ ಅಸ್ತಿತ್ವವಿಲ್ಲ. ಅವಕ್ಕೆ ಬೆಲೆ ಬರಬೇಕಾದರೆ ತೀವ್ರವಾದ ರಸಾನುಭವವನ್ನು ಅಭಿವ್ಯಕ್ತಿಗೊಳಿಸುವ ಸಾಕ್ಷಿಗಳು ಬೇಕು. ಅದನ್ನೆಲ್ಲಾ ನಾವು ಇಡೀ ಮಹಾಭಾರತ ಮಹಾಕಾವ್ಯದುದ್ದಕ್ಕೂ ಕಾಣುತ್ತೇವೆ.

ಇದೂವರೆಗೂ 'ಮಹಾಭಾರತ'ದ ಕುರಿತು ನಡೆದಿರುವಂತಹ ಅಧ್ಯಯನಗಳು, ಚರ್ಚೆಗಳಲ್ಲೇ ಬಹಳ ಮುಖ್ಯವಾದದ್ದು; ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯ ಇವರು 'ಮಹಾಭಾರತ ಮಹತ್ವ' ಕುರಿತು ಚರ್ಚಿಸಿರುವುದು. ಇಲ್ಲಿ ಅವರು ಬಹಳ ಮುಖ್ಯವಾಗಿ ಚರ್ಚಿಸಿರುವ ವಿಷಯಗಳೆಂದರೆ;

೧. ಮೂಲ ಮಹಾಭಾರತದಲ್ಲಿರುವ ಸಮಸ್ಯೆಗಳು

೨. ಶುದ್ಧ ಪಾಠ ನಿರ್ಣಯಿಸುವ ಬಗೆ ಹೇಗೆ?

೩. ತತ್ವ ಸಂಶೋಧನ ಸಂಸತ್ (ರಿ) ಉಡುಪಿ, ಇವರು ಮಾಡುತ್ತಿರುವ ಕಾರ್ಯಗಳು

೪. ಭಂಡಾರ್ಕರ್ ಸಂಸ್ಥೆಯ ಸಾಧನೆ.

೫. ಇದುವರೆವಿಗೂ ನಡೆದಿರುವ ಸಂಶೋಧನೆಗಳು.

೬. ದಾಕ್ಷಿಣಾತ್ಯ ಪಾಠವೇಕೆ ಶ್ರೇಷ್ಠ?

೭. ಸಂಶೋಧಿತ ಹಸ್ತಪ್ರತಿಗಳ ವಿವರಣೆ.

೮. ಔತ್ತರೇಯ ಪಾಠಗಳ ಸಮಸ್ಯೆಗಳು

೯. ಸಂಸ್ಕೃತಕ್ಕೆ ಹೊಸ ಕೊಡುಗೆಗಳು.

೧೦. ಮಹಾಭಾರತದ ಸಂಶೋಧನೆಯ ಅವಶ್ಯಕತೆಗಳು.

–ಆದರೆ ಇವರೆಲ್ಲಿಯೂ 'ಮಹಾಭಾರತದ ಆಧುನಿಕ ಚಿಂತನೆ'ಯ ಬಗ್ಗೆ ಪ್ರಸ್ತಾಪಿಸಿಲ್ಲ.

ಶುದ್ಧಪಾಠದ ಸಮಸ್ಯೆಗಳ ಜಟಿಲತೆಯೂ ಪರಿಹಾರವಾಗಿಲ್ಲ. **ಪುಣೆಯ ಶ್ರೀ ವಿ.ಎಸ್. ಸುಕ್ತಂಕರ್** ಅವರು ಕ್ರಿ.ಶ. ೧೯೧೫ರಲ್ಲಿ ಶುದ್ಧ ಪ್ರತಿಗಾಗಿ ಬಹಳ ಶ್ರಮಪಟ್ಟಿದ್ದಾರೆ. ೨೦೦ ಕ್ಕೂ ಹೆಚ್ಚು ವಿದ್ವಾಂಸರು ಸುಮಾರು ೫೦ ವರ್ಷಗಳಿಗಿಂತಲೂ ಹೆಚ್ಚು ಕಾಲ ಮಹಾಭಾರತ ಪರಿಶೋಧನೆ ಮಾಡಿರುವ 'ಭಂಡಾರ್ಕರ್ ಸಂಸ್ಥೆ'ಯ ಸಾಧನೆಯಲ್ಲೂ 'ಆಧುನಿಕ ಚಿಂತನೆ'ಯ ವಿಷಯ ಬಂದಿರುವುದಿಲ್ಲ.

ಉಡುಪಿಯ ಅಷ್ಟ ಮಠಗಳಲ್ಲಿರುವ ಪ್ರಾಚೀನ ಹಸ್ತಪ್ರತಿಗಳು ತಮ್ಮ ಶೋಧನೆಯಲ್ಲಿ ಸೇರಿಸಿಲ್ಲವೆಂದು ತಿಳಿಸಿದ್ದಾರೆ. ಒಂದು ವಿಚಾರವೆಂದರೆ ಭಂಡಾರ್ಕರ್ ಸಂಸ್ಥೆ "ವೇದವ್ಯಾಸ ದೇವರು ೨೪,೦೦೦ ಶ್ಲೋಕಗಳು ಮಾತ್ರ ರಚನೆ ಮಾಡಿದ್ದಾರೆ. ಅನಂತರದ ಕಾಲದಲ್ಲಿ ಉಳಿದ ಗ್ರಂಥವು ಬೆಳೆದು ಬಂದಿದೆಯೆಂಬ ಅಭಿಪ್ರಾಯವನ್ನು ನೀಡುತ್ತಾರೆ."[೫] ಎಂದಿರುವುದು ನಿಜಕ್ಕೂ ಗಮನಾರ್ಹವಾದ ಅಂಶ.

ಭಂಡಾರ್ಕರ್ ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಇವರು ಕಾಶ್ಮೀರ ದೇಶದ ಶಾರದಾ ಪ್ರತಿಯನ್ನು ಅವಲಂಬಿಸಿ ಸಂಶೋಧನೆ ಮಾಡಿದ್ದಾರೆ. ಈ ಶಾರದಾ ಪ್ರತಿಯಲ್ಲಿ ಕೆಲವು ಪ್ರಸಿದ್ಧವಾದ ಮಹಾಭಾರತದ ಭಾಗಗಳೇ ಕಾಣಿಸುವುದಿಲ್ಲವೆಂದು ಹೇಳಿದ್ದಾರೆ.

ಮಹಾಭಾರತವು ಭಾರತೀಯ ತತ್ವಶಾಸ್ತ್ರಕ್ಕೆ ಸಂಬಂಧಿಸಿದಂತೆ ಶ್ರೇಷ್ಠವಾದ ಗ್ರಂಥ. ಇದರ ಹಿರಿಮೆ ವೇದಪುರಾಣಗಳಲ್ಲಿ ವರ್ಣಿತವಾಗಿದೆ. ಆದ್ದರಿಂದ ಇದರ ಅಧ್ಯಯನವು ಅತ್ಯಗತ್ಯ. ಇದರ ಆಧುನಿಕ ಮನೋವೈಜ್ಞಾನಿಕ ರೀತಿಯ ವಿಮರ್ಶೆಯ ಅಧ್ಯಯನಕ್ಕೆ ಪ್ರಯತ್ನ ಮಾಡಬೇಕು. ಹಾಗೆ ಮಾಡಿದಾಗ ಮಾತ್ರ ಮಹಾಭಾರತದ ಆಧುನಿಕ ಚಿಂತನೆಯ ಅಧ್ಯಯನಕ್ಕೆ ಸಾರ್ಥಕವಾದೀತು. ಉದ್ದೇಶಪೂರ್ವಕವಾಗಿ ತೆಗೆದಿರುವ ಗ್ರಂಥದ ಭಾಗಗಳು ಯಾವುವು? ಸೇರಿಸಿರುವ ಭಾಗಗಳು ಯಾವುವು? ಗ್ರಂಥದಲ್ಲಿ ಮತ-ಧರ್ಮಾನುಸಾರ ವ್ಯತ್ಯಾಸ ಮಾಡಿರುವ ವಿಷಯಗಳು ಯಾವುವು? ಎನ್ನುವ ತಪ್ಪುಗಳನ್ನೆಲ್ಲಾ ಕಂಡುಹಿಡಿಯಬಹುದು. ಇದರಿಂದಲಾದರೂ ಸ್ವಲ್ಪಮಟ್ಟಿಗೆ ಮಹಾಭಾರತದ ಮೂಲಪಾಠವನ್ನು ನಿರ್ಣಯಿಸಲು ಸಹಾಯವಾಗುತ್ತದೆ.

### ೧೦. ಪಾಶ್ಚಾತ್ಯರ ಆಕ್ಷೇಪಣೆಗಳು ಮತ್ತು ಅಭಿಪ್ರಾಯಗಳು :

"ಅಡಾಪ್ಫ್‌ಹಾಲ್ಟ್ಜಮನ್, ಲೇಸನ್, ವಿಂಟರ್‌ನಿಟ್ಜ್, ಮೆಯರ್, ಬಾರ್ತ್, ಲೆವಿ, ವಿಸ್ಕಲ್, ಜಾಕೋಬಿ, ಓಲ್ಡನ್‌ಬರ್ಗ್ ಮತ್ತು ಹಾಪ್‌ಕಿನ್ಸ್ ಮೊದಲಾದ ಪಾಶ್ಚಾತ್ಯರ ದೃಷ್ಟಿಯಲ್ಲಿ 'ಮಹಾಭಾರತ'ದ ಈ ವಿವರವಾದ ವಿವೇಚನೆಯಿಂದ ಮೂರು ಮುಖ್ಯವಾದ ಅಂಶಗಳು ವ್ಯಕ್ತವಾದವು."[೧೬] ಅವುಗಳೆಂದರೆ;

೧. ಮಹಾಭಾರತವು ಮೂರು ಮುಖ್ಯವಾದ ಹಂತಗಳಲ್ಲಿ ಮತ್ತು ಅನೇಕ ಪ್ರಕ್ಷೇಪಗಳಿಂದ ಬೆಳವಣಿಗೆಯನ್ನು ಹೊಂದಿದೆ.

೨. ಮೂಲದಲ್ಲಿ ಈ ಕಾವ್ಯವು ಕೌರವರ ಶೌರ್ಯ ಮತ್ತು ಸದ್ಗುಣಗಳನ್ನು ಹೊಗಳುವ ಕಾವ್ಯವಾಗಿದ್ದು; ನಂತರದಲ್ಲಿ ಪಾಂಡವರನ್ನು ಹೊಗಳುವ ಕಾವ್ಯವಾಗಿದೆ.

೩. ಈ ಮೊದಲು ಲೌಕಿಕ ಕಾವ್ಯವು ನಂತರ ಧರ್ಮ, ನೀತಿ, ಮತೀಯ ವಿಷಯಗಳು ಸೇರಿ ಧಾರ್ಮಿಕ ಕಾವ್ಯವಾಗಿದೆ.

– "ಈ ಮೂರು ಅಭಿಪ್ರಾಯಕ್ಕೆ ಬಂದು ಮುಟ್ಟಲು ಅವರು ಕೊಟ್ಟಿರುವ ಕಾರಣಗಳೂ ಉಲ್ಲೇಖಿಸಿದ ಪ್ರಮಾ-ಣಗಳೂ, ಹೂಡಿದ ತರ್ಕವೂ ಮತ್ತು ಕಟ್ಟಿಕೊಂಡ ಕಲ್ಪನಾ ವೈವಿಧ್ಯವೂ ಬಹುಮುಖ್ಯವಾಗಿರಬಹುದು."[೧೭] ಆದರೆ ಅವರ ತರ್ಕದಲ್ಲಿ ಮೂಲಭೂತ ದೋಷಗಳೂ ಇವೆ.

ಮೊದಲನೆಯ ಅಭಿಪ್ರಾಯಕ್ಕೆ ಮಹಾಭಾರತದಲ್ಲೇ ಪ್ರಮಾಣವಿದೆ.

**"॥ ಮನ್ವಾದಿ ಭಾರತಂ ಕೇಚಿದಾಸ್ತೀಕಾದಿತಥಾಪರೇ । ತಥೋಪರಿಚರಾದ್ಯನ್ನೇವಿಪ್ರಾಃ ಸಮ್ಯಗಧೀಯತೇ ॥"[೧೮]**
**(ಆ.ಪ. ೧-೫೨.)**

ಕೆಲವರು 'ಮನು'ವಿನಿಂದ ಕೆಲವರು 'ಆಸ್ತೀಕ'ನ ಕಥೆಯಿಂದ ಮತ್ತೆ ಕೆಲವರು ಉಪರಿರಾಜನ ಕಥೆಯಿಂದ ಮಹಾಭಾರತದ ಕಥೆ ಎಂದು ಆದಿಪರ್ವದಲ್ಲೇ ಹೇಳಿದೆ.

**ಪ್ರೇಕ್ಷಪಗಳನ್ನೂ ಕೂಡಾ 'ಮಹಾಭಾರತ'ವೇ ಹೇಳಿದೆ.**

**"॥ ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ ॥"[೧೯]**

ಕೃಷ್ಣದ್ವೈಪಾಯನರು ಉಪಕಥೆಗಳನ್ನು ಬಿಟ್ಟು ೨೪,೦೦೦ ಶ್ಲೋಕಗಳಿಂದ 'ಮಹಾಭಾರತ'ವನ್ನು ರಚಿಸಿದರು ಎಂದು ಮೂಲದಲ್ಲಿ ಗ್ರಂಥವೇ ಸೂಚಿಸಿದೆ. ಮತ್ತು ಎರಡನೇ ಆಕ್ಷೇಪಣೆ ಸಮಂಜಸವಲ್ಲ. ಈ ಕಾವ್ಯವು ಮೂಲದಲ್ಲಿ ಎಲ್ಲಿಯೂ ಕೌರವರ ಶೌರ್ಯ ಮತ್ತು ಸದ್ಗುಣಗಳನ್ನು ಹೊಗಳಿಲ್ಲ. (ಇನ್ನೂ ಬೇಕಾದರೆ ಪಾಂಡವರನ್ನು 'ಕೌರವರು' ಎಂದು ಹೇಳಬಹುದು. ಏಕೆಂದರೆ ಪಾಂಡವರೂ ಕೂಡಾ 'ಕೌರವ' ವಂಶಕ್ಕೆ ಸೇರಿದವರು. 'ಪಾಂಡು'ವಿನ ಮಕ್ಕಳಾದ್ದರಿಂದ ಅವರನ್ನು 'ಪಾಂಡವರು' ಎಂದು ಕರೆಯಲಾಗಿದೆ.) ಆದ್ದರಿಂದ ಹಾಗೊಂದುವೇಳೆ ಕಾವ್ಯದ ಆರಂಭದಲ್ಲಿ ಕೌರವರ ಶೌರ್ಯ ಮತ್ತು ಸದ್ಗುಣಗಳನ್ನು ಹೊಗಳಿದ್ದೇ ಆದರೆ ನಂತರ ಅದೆಲ್ಲಿ ಮರೆಯಾಯಿತು? ಈ ಅಭಿಪ್ರಾಯವು ದೋಷಪೂರಿತವಾದುದು.

ವ್ಯಾಸ ಋಷಿಗಳು ಚತುರ್ವೇದಗಳನ್ನು ವಿಂಗಡಿಸುವಾಗ ಅವರ ಮನಸ್ಸನ್ನು ಸೆಳೆದ ಋಗ್ವೇದದ ೧೦ನೇ ಮಂಡಲದ **'ಅಕ್ಷದ್ಯೂತ'ದ ಸೂಕ್ತವೇ ಪ್ರೇರಣೆ ಎನ್ನುವುದಕ್ಕೆ 'ಮಹಾಭಾರತ' ಒಂದು ಬಲವಾದ ದೃಷ್ಟಾಂತವಾಗಿದೆ ಎನ್ನುವುದೇ ಸಿದ್ಧಾಂತ. 'ಅಕ್ಷದ್ಯೂತ'ವು** ಋಗ್ವೇದದ ಕಾಲದಲ್ಲಿಯೇ ಅಂದಿನ ಸಾಮಾಜಿಕ ಜೀವನದೊಳಗಿನ ಒಂದು ಸಂಮೋಹಕ ಅಂಗವಾಗಿತ್ತೆಂದು 'ಕುರು-ಪಾಂಡವರು' ಆಡಿದ 'ದ್ಯೂತ' ಪ್ರಕರಣ ಸಿದ್ಧಪಡಿಸಿದೆ. "ಮಹಾಭಾರತದ ಅಕ್ಷದ್ಯೂತ ಅರ್ಥವಾಗಲು ಋಗ್ವೇದದ 'ಅಕ್ಷದ್ಯೂತ' ಸೂಕ್ತದಿಂದ ಮೌಲಿಕ ಸಹಾಯ ದೊರೆಯುತ್ತದೆ. ಮಹಾಭಾರತಕಾರರೂ ಇದನ್ನೇ ಭಾರತೀಯ ಯುದ್ಧದ ಅನಾಹುತದ ಸಂಹಾರಕ ರೌದ್ರ ಅಗ್ನಿಬೀಜವೆಂದು ಮಹಾಭಾರತದ ಕೇಂದ್ರ ಘನಟೆಯಾಗಿ ಸ್ವೀಕರಿಸಿರುತ್ತಾರೆ. **'ಅಕ್ಷದ್ಯೂತ'ದ ಯುಗ** ಮಹಾಭಾರತದ ಏನೆಲ್ಲಾ ಪ್ರಮುಖ ಘಟನೆಗಳ **'ನಾಭಿ'ಯಾಗಿದೆ?"**[೨೦] ವ್ಯಾಸರ ಪಾತ್ರಸೃಷ್ಟಿಯ ಸ್ಫೂರ್ತಿಸ್ಥಾನ ಋಗ್ವೇದ. ಮಹಾಭಾರತ ಮೂಲ ಆಕೃತಿಯೂ ***"ಋಗ್ವೇದದ ಹತ್ತನೇ ಮಂಡಲ ಎಪ್ಪತ್ತೆರಡನೇ ಸೂತ್ರ ೭,೮,೯ ರಲ್ಲಿ ಬರುವ ಅದಿತಿ"***ಯೇ ***'ಮಹಾಭಾರತದ ಗಂಗೆ'*** ಯಾಗಿದ್ದಾಳೆ.

ಮೂರನೇ ಅಭಿಪ್ರಾಯ ಒಪ್ಪುವಂತಹದ್ದು. ಇದಕ್ಕೆ 'ಮಹಾಭಾರತದ ರಚನೆಯ ಆಂತರಿಕ, ಬಾಹ್ಯ ಪ್ರಮಾ-ಣಗಳೇ ಸಾಕ್ಷಿಯಾಗಿವೆ. ಮೂಲ "ಜಯ" ಗ್ರಂಥವೇ "ಮಹಾಭಾರತ"ದ ಇಂದಿನ ಹೆಬ್ಬೊತ್ತಿಗೆಯಾಗಿದೆ. ಇತಿಹಾಸ, ಪುರಾಣಗಳ ಮೂಲಕವಾಗಿ ವೇದಗಳಲ್ಲಿರುವ ರಹಸ್ಯಾರ್ಥಗಳನ್ನು ಹೇಳುವುದರ ಮೂಲಕ "ಪಂಚಮವೇದ" ಎಂಬ ಹೆಗ್ಗಳಿಕೆಗೂ ಪಾತ್ರವಾಗಿದೆ.

~~~***~~~

**ಅಡಿಟಿಪ್ಪಣಿಗಳು :**

೧. ಡಾ॥ ಕೆ. ಕೃಷ್ಣಮೂರ್ತಿ, "ಸೃಜನಶೀಲತೆ ಮತ್ತು ಪಾಂಡಿತ್ಯ", ಪು. ೬

೨. -- ಅದೇ--, ಪು. ೭.

೩. ಡಾ॥ ಕುವೆಂಪು, -- ಅದೇ --, ಪು. ೧೦೨,

೪. -- ಅದೇ --, ಪು. ೧೦೬.

೫. ಎಂ.ಎಸ್. ನರಸಿಂಹಮೂರ್ತಿ, "ಕಾವ್ಯಸುಧಾ", ಪು. ೩೨

೬. -- ಅದೇ --, ಪು. ೩೪.

೭. ಡಾ॥ ಕೆ. ಕೃಷ್ಣಮೂರ್ತಿ, "ಸೃಜನಶೀಲತೆ ಮತ್ತು ಪಾಂಡಿತ್ಯ", ಪು.೬

೮. -- ಅದೇ--, ಪು. ೭

೯. ಡಾ॥ ಕೆ. ಮಣಿಮಾಲಿನಿ, "ದ್ರೌಪದೀ ಸಮೀಕ್ಷೆ", ಪು. ೩೯.

೧೦. ವಾಲ್ಮೀಕಿ ರಾಮಾಯಣ, ಭಾ-೨, ಪರಿಶಿಷ್ಟ, ಪು. ೧೦

೧೧. ಶೇಷನವರ್ನ, "ಭಾರತದಲ್ಲಿ ಧರ್ಮ", ಪು. ೨೪೨.

೧೨. ಡಾ॥ ಕೆ.ಎಲ್. ಗೋಪಾಲಕೃಷ್ಣಯ್ಯ,

೧೩. ಎಂ.ಎನ್.ಶ್ರೀನಿವಾಸ ಅಯ್ಯಂಗಾರ್, "ಸಂಸ್ಕೃತ ಸಾಹಿತ್ಯ ಚರಿತ್ರೆ", ಪು. ೧೧೧.
~~~

೧೪. ಡಾ॥ ದ.ರಾ. ಬೇಂದ್ರೆ, "ಮತ ಧರ್ಮ ಮತ್ತು ಆಧುನಿಕ ಮಾನವ", ಪು. ೧೯.
೧೫. ಶ್ರೀಮನ್ಮಹಾಭಾರತ, ಬಾ-೨೧, ಪು. ೪೫೯೦
೧೬. ಎಸ್. ನಾರಾಯಣ ಶೆಟ್ಟಿ, "ಯುಗಯಾತ್ರಿ" ಭಾರತೀಯ ಸಂಸ್ಕೃತಿ, ಪು. ೮೭.
೧೭. ಪ್ರೊ॥ ಕೆ.ಟಿ. ಪಾಂಡುರಂಗಿ, "ಸಂಸ್ಕೃತ ಕವಿ ಕಾವ್ಯದರ್ಶನ", ಪು. ೨೮೦.
೧೮. ಶ್ರೀಮನ್ಮಹಾಭಾರತ, ಭಾ-೭, ಪರಿಶಿಷ್ಟ, ಪು.೯
೧೯. -- ಅದೇ --, ಭಾ-೧, ಪು. ೧೬.
೨೦. ಡಾ॥ ಶಂ.ಬಾ. ಜೋಶಿ, ಋಗ್ವೇದ ನಾಗಪ್ರತಿಮಾ ವಿಚಾರ", ಪು. ೪೩೮.

~~~***~~~

## ಅಧ್ಯಾಯ - ೧೦
## ಅನುಬಂಧಗಳು

**ಅನುಬಂಧ-1 - "ಪುರಾಣಗಳು" :**

"ಆಧುನಿಕ ಚಿಂತನೆ"ಯ ಸ್ವರೂಪವನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕಾದರೆ ವೇದಗಳು ಮತ್ತು ಮಹಾಭಾರತದ ನಂತರ ಅಸ್ತಿತ್ವಕ್ಕೆ ಬಂದಂತಹ ಪುರಾಣಗಳು, ಇತಿಹಾಸ, ಜಾನಪದ -ಇವುಗಳ ಬಗೆಗೂ ಸ್ವಲ್ಪ ಜ್ಞಾನವನ್ನು ಹೊಂದಿರಬೇಕಾಗುತ್ತದೆ.

'ಮಹಾಭಾರತ'ದ ಮಡಿಲಿನಲ್ಲಿ ಹದಿನೆಂಟು ಪುರಾಣಗಳಿವೆ. ಸಮಸ್ತವಾದ ಇಂದ್ರಿಯ ಚೇಷ್ಟೆಗಳಿಗೂ ಮಾನಸಿಕ ಕ್ರಿಯೆಗಳು ಹೇಗೆ ಆಧಾರಭೂತವಾಗಿರುವುವೋ ಹಾಗೆಯೇ ಸಂಪೂರ್ಣವಾದ ಲೌಕಿಕ-ವೈದಿಕ ಕರ್ಮಗಳಿಗೂ, ಸತ್ಕರ್ಮಗಳಿಗೂ ಈ ಆಖ್ಯಾನವು ಆಧಾರಭೂತವಾಗಿದೆ. (ಶ್ರೀಮನ್ಮಹಾಭಾರತ, ಭಾ-೧, ಪು. ೯೦)

**ಜೋಸೆಫ್ ಕ್ಯಾಂಬೆಲ್**‌ನ ಮಾತುಗಳಲ್ಲಿಯೇ ಹೇಳುವುದಾದರೆ ಮಿಥ್‌ಗಳು ಕಲ್ಪನೆಯ ಮೂಲದಿಂದ ಹುಟ್ಟಿಕೊಳ್ಳುವಂಥಹದ್ದಲ್ಲ. ಅವುಗಳ ಮೂಲ ಇರುವುದು ಜೀವನ ವ್ಯವಸ್ಥೆಯಲ್ಲಿ. ಆಳವಾದ ಜೀವನಕೇಂದ್ರವೊಂದರಿಂದ ಅವು ಹೊರಹೊಮ್ಮಿರುವಂಥವು. ಮಿಥ್‌ಗಳನ್ನು ನಾವು ಐಡಿಯಾಲಜಿಯೊಂದಿಗೆ ಸಮೀಕರಿಸುವ ಗೊಂದಲಕ್ಕೆ ಪಕ್ಕಾಗಬಾರದು. ಹೃದಯ ಎಲ್ಲಿದೆಯೋ, ಅನುಭವ ಎಲ್ಲಿದೆಯೋ ಅಲ್ಲಿಂದ ಮಿಥ್‌ಗಳು ಚಿಗುರುತ್ತವೆ. ಇಂಥವನ್ನು ಜನರು ಹೇಗೆ ನಂಬುತ್ತಾರೆ ಎಂದು ಬುದ್ಧಿಗೆ ಇವು ಅಚ್ಚರಿಯನ್ನುಂಟುಮಾಡಬಹುದು ಎನ್ನುವ ಅವರು, ಮಿಥ್‌ಗಳು ತಥ್ಯದ ಫ್ಯಾಕ್ಟ್ ಕಡೆಗೆ ಬೆರಳು ತೋರವು; ತಥ್ಯದ ಅರಿವನ್ನು ಒದಗಿಸುವ ಆದರೆ ತಥ್ಯಗಳನ್ನು ಮೀರಿದಂಥ ವಿವರಗಳ ಕಡೆಗೆ ಅವು ನಮ್ಮ ಗಮನವನ್ನು ಸೆಳೆಯುತ್ತವೆ ಎನ್ನುತ್ತಾರೆ.

'ಪುರಾಣಗಳು' ಧಾರ್ಮಿಕ, ದಾರ್ಶನಿಕ ಸಾಹಿತ್ಯವನ್ನು ಪ್ರತಿನಿಧಿಸುತ್ತದೆ. ರಾಮಾಯಣ-ಮಹಾಭಾರತಗಳ ಜೊತೆಗೆ ಪುರಾಣಗಳಿಗೆ ಒಂದು ವಿಶಿಷ್ಟಸ್ಥಾನ ಬರಲಿಕ್ಕೂ ಇದೇ ಕಾರಣ. ಇವು ಅಂದಿನ ಕಾಲದ ಜನರ ಧಾರ್ಮಿಕ, ದಾರ್ಶನಿಕ, ಐತಿಹಾಸಿಕ ಹಾಗೂ ಸಾಮಾಜಿಕ ರಾಜಕೀಯ ಜ್ಞಾನಭಂಡಾಗಾರಗಳಾಗಿವೆ ಎಂದು ಪಾಶಗಿಟರ್ ಎಂಬ ವಿದ್ವಾಂಸ ಪುರಾಣಗಳ ಕುರಿತು ಹೇಳುತ್ತಾನೆ.

ಪುರುಷಾರ್ಥಗಳು ನಾಲ್ಕು : ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ.

**"॥ ಪುರಾಣನ್ಯಾಯ ಮೀಮಾಂಸಾ ಧರ್ಮಶಾಸ್ತ್ರಾಙ್ಗಮಿಶ್ರಿತಾಃ । ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ॥"**

"ವೇದಗಳೆಲ್ಲವೂ ಪುರಾಣಗಳಲ್ಲಿ ನೆಲೆಗೊಂಡಿವೆ. ವೇದಾರ್ಥಕ್ಕಿಂತಲೂ ಪುರಾಣಾರ್ಥವು ಮುಖ್ಯ ಇತಿಹಾಸ-ಪುರಾಣಗಳ ಸಹಾಯದಿಮದಲೇ ವೇದಾರ್ಥವನ್ನು ವಿಸ್ತರಿಸಬೇಕು."[೧] ಪುರಾಣ ಮತ್ತು ಇತಿಹಾಸ ಶಬ್ದಗಳನ್ನು
~~~

ಸಮಾನಾರ್ಥವಾಗಿ ಬಳಸಿರುವುದೂ ಉಂಟು. ಆಖ್ಯಾನವನ್ನು ಇತಿಹಾಸವೆನ್ನುವುದೂ ಉಂಟು. ಪುರಾಣಗಳು ಹದಿನೆಂಟು. ಅವುಗಳ ಕರ್ತೃ ವ್ಯಾಸರೇ ಎಂದು ಹೇಳಲಾಗಿದೆ.

**"॥ ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ॥"**

ಅಂದರೆ ವೇದದಲ್ಲಿ ಪ್ರತಿಪಾದಿತವಾಗಿರುವ ರಹಸ್ಯಾರ್ಥಗಳನ್ನು ವಿವರಿಸುವ ಸಲುವಾಗಿ ಪುರಾಣಗಳು ರಚನೆಯಾದವು. ಸತ್ರಗಳಲ್ಲಿ ಉಪನ್ಯಾಸ ಮಾಡುವವರು ಸೂತರು. 'ಸಾಮ್ರಾಜ್ಯಶಾಹಿಯ ಮತ್ತೊಂದು ಮಹತ್ವಪೂರ್ಣ ಅಂಗವು ಪ್ರಚಾರಾಂಗ. ರಾಜಮಹಾರಾಜರ ಶೌರ್ಯದ ಗುಣಾವಗುಣಗಳನ್ನು ರಾಜ್ಯದ ಮೂಲೆ ಮೂಲೆಗೆ ಮುಟ್ಟಿಸುವ ಮೂಲಕ ರಾಜನು ದೇವಸಮಾನನು, ಮಹಿಮಾನ್ವಿತನು – ಎಂಬ ಭಾವನೆಯನ್ನು ಜನರಲ್ಲಿ ಮೂಡಿಸಿ ಆತನಿಗೆ ಸಂಪೂರ್ಣ ವಿಧೇಯತೆಯ ಸ್ಥಿತಿಯನ್ನು ಸಮಾಜದಲ್ಲಿ ಪ್ರವರ್ಧಿಸುವ ಸಾಧನ–ಸೂತರೆಂಬ ಒಂದು ವರ್ಗವನ್ನು ಸಂಪೂರ್ಣವಾಗಿ ಈ ಕಾರ್ಯಕ್ಕೆ ಬೆಳೆಸಿದ್ದು.

ಋಗ್ವೇದದ ಆರ್ಯರು ಅನೇಕ ದೇವತೆಗಳನ್ನು ಆರಾಧಿಸುತ್ತಿದ್ದರು. ಇವರ ಆವಾಸಸ್ಥಾನ;

ಸ್ವರ್ಗ : ದ್ಯೌಃ, ಮಿತ್ರ, ವರುಣ, ಸೂರ್ಯ, ಸವಿತೃ, ವಿಷ್ಣು, ಉಷಸ್, ರಾತ್ರಿ.

ಅಂತರಿಕ್ಷ : ಇಂದ್ರ, ರುದ್ರ, ಮರುತ್ತುಗಳು, ವಾಯು, ಪರ್ಜನ್ಯ.

ಭೂಮಿ : ಅಗ್ನಿ, ಸೋಮ, ಪೃಥವೀ.

ಆರ್ಯರು ಪ್ರಕೃತಿಯ ನಾನಾ ರೂಪಗಳನ್ನು ಪೂಜಿಸುತ್ತಿದ್ದರು. ದೇವತೆಗಳನ್ನು ಸ್ತೋತ್ರ ಮಾಡಿ ಹೋಮಾಗ್ನಿಗೆ ಆಜ್ಯ–ತುಪ್ಪ ಸುರಿದು ಪೂಜಿಸುತ್ತಿದ್ದರು. 'ಸೋಮ' ದೇವತೆಯಾಗಿದ್ದ.

ಇಂದ್ರನಿಗೆ ಪ್ರಮುಖವಾದ ಸ್ಥಾನ ಕ್ಷತ್ರಿಯರ ಶೂರ ದೇವತೆ. ಇಂದ್ರ ಸೋಮಪಾನಪ್ರಿಯನಾಗಿದ್ದ. ಪ್ರಕೃತಿಯ ಒಂದೇ ರೂಪವನ್ನು ಹಲವು ದೇವತೆಗಳಂತೆಯೂ, ಹಲವರೂ ರೂಪಗಳನ್ನು ಒಂದೇ ದೇವತೆಯ ಅಧೀನಕ್ಕೆ ಒಳಪಟ್ಟಂತೆ ಕಾಣುತ್ತಿದ್ದರು.

"ಋಗ್ವೇದದಲ್ಲಿ ಇತರ ದೇವತೆಗಳಲ್ಲಿಯೂ ಸಹ ವಿಷ್ಣುವಿನ ಅವತಾರಾದಿಗಳು ನಿರ್ದೇಶಿಸಲ್ಪಡದಿರುವುದ–ರಿಂದಲೂ, ವೇದದಲ್ಲಿ ಅಲ್ಲಲ್ಲಿ ಕಂಡು ಬರುವ ದೇವತಾಕಾರ್ಯಗಳೇ **ಪುರಾಣಗಳಲ್ಲಿ** ವಿಶೇಷ ರೀತಿಯಿಂದ ವರ್ಣಿತವಾಗಿರುವುದರಿಂದಲೂ **ಪುರಾಣಕಥೆಗಳಿಗೆ ಮೂಲವು ವೇದವೇ** ಆಗಿರುವುದರಿಂದಲೂ ಪುರಾಣಾಂತರ್ಗತವಾದ ಅವತಾರಗಳನ್ನು ವೇದಮಂತ್ರಗಳಿಗೆ ಹೊಂದಿಸಿ ಅರ್ಥ ಮಾಡುವುದು ಸರಿಯಲ್ಲವೆಂದು ಪಾಶ್ಚಾತ್ಯ ಮತ್ತು ಆಧುನಿಕಪಂಡಿತರು ಅಭಿಪ್ರಾಯಪಡುವರು."[೨]

"ಪುರಾಣಪ್ರತ್ನಪ್ರತ್ನ ಪುರಾತಣ ಚಿಂತನಾ : ಎಂಬ ಕೋಶಾವಾಕ್ಯದಂತೆ ಪುರಾಣ, ಪ್ರತನ, ಪ್ರತ್ನ, ಪುರಾತನ ಚಿಂತನವೆಂಬ ಶಬ್ದಗಳಿಗೆ **ಪುರಾತ್ನ** ಎಂದರೆ ಹಿಂದೆ ನಡೆದದ್ದು ಎಂಬ ಅರ್ಥವಿರುವುದು."[೩]

"ಭಾರತೀಯ ಪುರಾಣ ಸಾಹಿತ್ಯವು ರಾಮಾಯಣ–ಮಹಾಭಾರತಗಳ ಸ್ಫೂರ್ತಿಯ ಮೇಲೆ ಮುಂದುವರಿದ ಗ್ರಂಥರಾಶಿ. **ಪುರಾಣ** ಶಬ್ದವು ತಾನೇ ಸೂಚಿಸುವಂತೆ ಪುರಾತನವಾದದ್ದನ್ನು ಹೇಳುತ್ತದೆ. ಒಂದು ವ್ಯುತ್ಪತ್ತಿಯಂತೆ **ಪುರಾ ಅಪಿ ನವಮ್ ಪುರಾಣಮ್** ಹಿಂದೆ ಕೂಡ ಯಾವುದು ಹೊಸದಾಗತ್ತೋ, ಅರ್ಥಾತ್ ಇಂದೂ ಮತ್ತು ಎಂದೆಂದಿಗೂ ಹೊಸದಾಗಿಯೇ ಇರುವುದೋ ಅದೇ ಪುರಾಣವೆನಿಸಿಕೊಳ್ಳುತ್ತದೆ."[೪]

### ಐತಿಹ್ಯ :

'ಪುರಾಣ'ಕ್ಕೆ ಶಬ್ದವನ್ನು ಋಗ್ವೇದದಲ್ಲಿ ಮುಂಚೆ, ಹಿಂದೆ ಯಜ್ಞಕಾಲದಲ್ಲಿ, ಅನಾದಿಕಾಲದಿಂದಲೂ ಹಾಗೂ ಪೂರ್ವದಿಂದ ಅನುಸ್ಯೂತವಾಗಿ ಬಂದದ್ದೂ ಆದ ಎಂದಿಷ್ಟೇ ಅರ್ಥಗಳಲ್ಲಿ ಬಳಕೆಯಲ್ಲಿದೆ.

ವ್ಯಾಸರು ಋಗ್ವೇದ ಪಾತ್ರ, ಘಟನೆಗಳ ಪ್ರಭಾವದಿಂದ ಮಹಾಭಾರತ ರಚಿಸಿದ್ದಾರೆ. ಮಹಾಭಾರತ 'ಪಂಚಮವೇದ' ಎಂಬ ಪ್ರಸಿದ್ಧಿಗೆ ಒಳಗಾಯಿತು. ಅದೇ ಋಗ್ವೇದದ ಪಾತ್ರ, ಘಟನೆಗಳನ್ನೇ ಆರಿಸಿಕೊಂಡು

ಪುರಾಣಿಕರು ಅಷ್ಟಾದಶ ಪುರಾಣಗಳನ್ನು ಸೃಷ್ಟಿಸಿದ್ದಾರೆ. **"ಮಹಾಭಾರತದ ಸಂಪ್ರದಾಯದಲ್ಲೇ ಪುರಾಣಗಳನ್ನೂ ಸೃಷ್ಟಿಸಲಾಗಿದೆ. ಆದರೆ ಕಥೆಗಳನ್ನು ಅದೇರೀತಿ ನಿರೂಪಿಸಿಲ್ಲ. ಮನುಷ್ಯ ಪ್ರಯತ್ನದ ಕಾಮ, ಅರ್ಥ, ಧರ್ಮ, ಮೋಕ್ಷ ಇವುಗಳನ್ನೂ ಪುರಾಣಗಳು ಎತ್ತಿಹಿಡಿಯುತ್ತವೆ."**[3] ಮಹಾಭಾರತ ಅನುಕ್ರಮಣಿಕಾ ಪರ್ವದಲ್ಲೇ ಪುರಾಣದ ಉಲ್ಲೇಖ ಕುರುವಾಗಿದೆ. ಮಹಾಭಾರತ ಗ್ರಂಥ ರಚನಾ ಕೆಲಸವನ್ನು ಶಿವಪುತ್ರ ಗಣೇಶನಿಗೆ ವಹಿಸಲಾಗಿದೆ. ಮಹಾಭಾರತ ದಾಕ್ಷಿಣಾತ್ಯ, ಔತರೇಯಗಳೆಂಬ ಎರಡು ಪಾಠಗಳಿದ್ದು, ದಾಕ್ಷಿಣಾತ್ಯ ಪಾಠದಲ್ಲಿ ಗಣೇಶನ ವಿಚಾರವಿಲ್ಲ.

**"ಪುರಾಣಗಳಿಗೆ ಏನಾದರೂ ಧಾರ್ಮಿಕ ಹಿನ್ನೆಲೆ ಇರಬೇಕಾಗುತ್ತದೆ. ಅಂದರೆ ಅದರ ಮುಖ್ಯ ಪಾತ್ರ ಅಥವಾ ಪಾತ್ರಗಳು ದೇವತೆಗಲಾಗಿರುತ್ತಾರೆ."**[1] ಎನ್ನುವ ಉದ್ದೇಶಕ್ಕಾಗಿಯೇ ಸೂತರು ಅನುಕ್ರಮಣಿಕಾ ಪರ್ವದಲ್ಲಿ ಗಣೇಶನ ಕಥಾಭಾಗದಿಂದಲೇ ಪುರಾಣ ಪ್ರವೇಶಕ್ಕೆ ರಹದಾರಿ ಮಾಡಿಕೊಟ್ಟಿದ್ದಾರೆ. ಪಾಂಡವರನ್ನು ಪರಮ ಭಾಗವತರನ್ನಾಗಿ ಮಾಡಲಿಕ್ಕೆ ಶ್ರೀಕೃಷ್ಣನನ್ನು ತಂದಿದ್ದಾರೆ.

ಪುರಾಣಗಳು ವೇದಕಾಲದಿಂದ ಪ್ರಾರಂಭವಾಗಿ ಆಯಾಕಾಲದ ವಿವಿಧ ಧಾರ್ಮಿಕ ಪಂಥಗಳ ಆಧ್ಯಾತ್ಮಿಕತೆಯನ್ನು ಜಾಗೃತಗೊಳಿಸುವ ಆಖ್ಯಾನ, ಉಪಾಖ್ಯಾನ, ಉಪಕಥೆಗಳನ್ನು ಸತ್ರಯಾಗಗಳಲ್ಲಿ ಸೂತರು ತಾವು ಮಾಡುತ್ತಿದ್ದ ಉಪನ್ಯಾಸಗಳಲ್ಲಿ ಸೇರಿಸತೊಡಗಿದರು. "ವೇದೋಪನಿಷತ್ತುಗಳ ದ್ರಷ್ಟಾರರು ಮತ್ತು ಅವರಿಗಿಂತ ಈಚಿನ ಕರ್ಮ–ಜ್ಞಾನ–ಭಕ್ತಿಮಾರ್ಗಗಳ ಪ್ರವರ್ತಕರಾದ ಸಂತರು ಇಂಥ ಅತ್ಯಂತ ಶ್ರೇಷ್ಠವರ್ಗಕ್ಕೆ ಸೇರಿದ ಎಲ್ಲಾ ಸಾಧು ಪರಂಪರೆಯ ಆಧ್ಯಾತ್ಮಾನುಭೂತಿಗಳೂ ಇವಕ್ಕೆ ಆಧಾರ ಮತ್ತು ಇವು ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ದ್ವೈತಾದ್ವೈತ ಇವುಗಳಲ್ಲದೆ ಸಾಂಖ್ಯ ಹಾಗೂ ಯೋಗ ಮತ್ತು ನ್ಯಾಯಗಳನ್ನೂ ಪ್ರತಿನಿಧಿಸಿ ಅವುಗಳೊಳಗೆ ಸಾಮರಸ್ಯವನ್ನು ಕಲ್ಪಿಸುವುದರಲ್ಲೂ ಉದ್ಯುಕ್ತವಾಗಿವೆ."[2] ಪುರಾಣಗಳ ಸಂಖ್ಯೆ 'ಅಷ್ಟಾದಶ' ಎಂದರೆ ಹದಿನೆಂಟು ಇವಕ್ಕೆ ಉಪಪುರಾಣಗಳು ಹದಿನೆಂಟು. ಇವುಗಳಲ್ಲಿ ಸಾತ್ವಿಕ, ತಾಮಸ ಹಾಗೂ ರಾಜಸ ಮೂರೂ ಇವೆ.

**"॥ ವಂಶಾನುಚರಿತಂ ಚೈವಪುರಾಣಂ ಪಂಚಲಕ್ಷಣಂ ॥"**

ಪುರಾಣಗಳಲ್ಲಿ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಮತ್ತು ವಂಶಾನುಚರಿತ ಎಂಬ ಐದು ವಿಷಯಗಳು ಪ್ರಧಾನವಾಗಿರುತ್ತವೆ.

'ಜಾನಪದ' ಸಾಹಿತ್ಯಕ ಬಗೆಯಲ್ಲಿ 'ಐತಿಹ್ಯ' ಒಂದು ಮುಖ್ಯವಾದ ಅಂಗ. ಇಂಗ್ಲಿಷ್‌ನ 'Legend' ಪದಕ್ಕೆ ಸಂವಾದಿಯಾಗಿ 'ಐತಿಹ್ಯ'ವನ್ನು ಬಳಸುತ್ತೇವೆ. ಈ 'ಲೆಜೆಂಡ್' ಪದವೂ ಲ್ಯಾಟನ್ನಿನ ದಿಂದ 'Legenda' ಬಳಕೆಗೆ ಬಂದಿದೆ.

ಐತಿಹ್ಯಗಳು ಪ್ರಾಬಲ್ಯಕ್ಕೆ ಬಂದುದು ಮಧ್ಯಯುಗದಲ್ಲಿ. ಮೂಲದಲ್ಲಿ ಐತಿಹ್ಯಗಳು ಸನ್ಯಾಸಿಗಳನ್ನ, ಪಾದ್ರಿಗಳನ್ನ ಕುರಿತಾದಂತಹ ಕತೆಗಳಾಗಿದ್ದವು ಎಂದು ತಿಳಿದು ಬರುತ್ತದೆ. 'Folklore' ಅಸ್ತಿತ್ವಕ್ಕೆ ಬರುವವರೆಗೆ ಈ ಪದಕ್ಕಿದ್ದ ಅರ್ಥ 'ಸಾಧು–ಸಂತರ ಚರಿತ್ರೆ' ಎಂದಾಗಿತ್ತು.

ಪವಾಡಸದೃಶರಾಗಿದ್ದ ಸಾಧು–ಸಂತರ ಘಟನೆಯನ್ನು ಆಧಾರವಾಗಿಟ್ಟುಕೊಂಡು ಆತನ ಮರಣಾನಂತರವೂ ಕತೆಯನ್ನು ಕಟ್ಟಿ ಪ್ರಚಾರದಲ್ಲಿ ತರುತ್ತಿದ್ದರು. ಅಂಥ ಸಾಧುಗಳು ಧರ್ಮಬಾಹಿರ ವ್ಯಕ್ತಿಗಳನ್ನು ಪರೀಕ್ಷೆ ಮಾಡುವುದಕ್ಕಾಗಿ ಭೂಮಿಗೆ ಬರುತ್ತಿದ್ದರು. ಭಾರತದಲ್ಲಿ ಈ ವಿಧವಾದ ಕತೆಗಳಿವೆ. ಯಾರೋ ಒಬ್ಬ ಸಾಧು ಜೀವಸಹಿತ ಸಮಾಧಿಯಾದರೆ ಆ ಸಮಯದಲ್ಲಿ ವರ್ಷಕ್ಕೊಮ್ಮೆ ಗಂಟೆ ಶಬ್ದ ಕೆಳುವಂತದ್ದು ಇಂತಹ ಕತೆಗಳೇ ಪ್ರಚಲಿತವಿರುವ ಐತಿಹ್ಯಗಳು. **ಈ ರೀತಿಯ ವ್ಯಕ್ತಿಗಳ ಬಗ್ಗೆ ಇದ್ದಂತ ನಂಬಿಕೆಗಳು, ಘಟನೆಗಳೇ ಹುಟ್ಟಿಕೊಂಡಂಥ ಕಥೆಗಳು.**

**ಐತಿಹ್ಯ**

| | | |
|---|---|---|
| ಪೌರಾಣಿಕ ಐತಿಹ್ಯ<br>ಕಲೆವಾಲಾ<br>ಜಗತ್ತಿನ ಸೃಷ್ಟಿ | ಅತಿಮಾನುಷ<br>ಶಕ್ತಿಗಳು<br>ವ್ಯಕ್ತಿಗಳಿಗೆ ಸಂಬಂಧಿಸಿದ್ದು | ಐತಿಹಾಸಿಕ<br>ಐತಿಹ್ಯಗಳು |

**ಸ್ಥಳೀಯ ವಲಸೆ :**

೧. ಚಾರಿತ್ರಿಕ ಭೌಗೋಳಿಕಕ್ಕನುಗುಣವಾಗಿ ಸ್ಥಳೀಯ ಐತಿಹ್ಯಗಳು ರೂಪುಗೊಳ್ಳುತ್ತವೆ.

೨. ವಲಸೆ ಐತಿಹ್ಯಗಳು ಇಡೀ ಮಾನವ ಸಮೂಹಕ್ಕೆ ಸಂಬಂಧಪಟ್ಟ ಹಾಗೆ ರಊಪಿವಾಗುವಂತಹವು. ಈ ವಲಸೆ ಐತಿಹ್ಯಗಳು ತಮ್ಮ ಅಭಿವ್ಯಕ್ತಿಯನ್ನಷ್ಟೇ ಬದಲಾಯಿಸಿಕೊಳ್ಳುತ್ತವೇ ವಿನಹಾ ಉಳಿದ ವಸ್ತುವೆಲ್ಲಾ ಹಾಗೇ ಇರುತ್ತವೆ.

೩. ಬಲಿ ಐತಿಹ್ಯ – ಇದು ಸರ್ವೇ ಸಾಧಾರಣ.

ಸ್ಥಳೀಯ ಐತಿಹ್ಯದ ವರ್ಗೀಕರಣ :

೧. ಕೆರೆ, ಕೊಳ ಕೆಲವು ಪ್ರದೇಶಕ್ಕೆ ಸಂಬಂಧಪಟ್ಟಿದ್ದು.

೨. ಬಲಿ ಐತಿಹ್ಯ.

೩. ಪ್ರಪಾತ ಐತಿಹ್ಯ.

೪. ಕೌಟುಂಬಿಕ ಐತಿಹ್ಯ.

೫. ಜನಪದ ನಿರುಕ್ತಿ (ಭ್ರಮಿಸಿಕೊಳ್ಳುವುದು)

೬. ವಿವರಣಾತ್ಮಕ ವಸ್ತುಗಳ ಐತಿಹ್ಯ. ಉದಾ:– ಸಪ್ತಋಷಿಮಂಡಲ.

"ನಾಯಕ, ದೇವತೆಯಾಗಿರದೆ ಮಾನವನಾಗಿದ್ದಾಗ ಇದು ವಿವರಣಾತ್ಮಕವೋ ಅಥವಾ ಒಂದು ಸ್ಥಳಕ್ಕೆ ಸೀಮಿತವೂ ಆಗಿದ್ದರೆ, ಪುರಾಣ–ಐತಿಹ್ಯವಾಗುತ್ತದೆ. ಸಾಮಾನ್ಯೀಕೃತವಾದರೆ ಜನಪದಕಥೆಯಾಗುತ್ತದೆ."

**ಇತಿಹಾಸ :**

"॥ ಇತಿಹಾಸ ಪುರಾಣ ಮಪಿ ಪೌರುಷೇಯ ತ್ವಾತ್ । ಪ್ರಮಾಣಾಂತರ ಮೂಲತಾಮಾಕಾಂಕ್ಷತೇ ॥"

ಇತಿಹಾಸ ಪುರಾಣಗಳು ಪುರುಷ ಕರ್ತೃಕವಾದುದರಿಂದ ವೇದಗಳನ್ನು ಬಿಟ್ಟರೆ ಎರಡನೆಯ ಪ್ರಮಾಣವಾಗಿ ಇವುಗಳನ್ನು ಸ್ವೀಕರಿಸಬೇಕಾಗುವುದು. 'ಇತಿ+ಹ+ಆಸ'= 'ಇತಿಹಾಸ'= 'ಹೀಗೇ ಇದ್ದಿತು'. ಎಂದರ್ಥ. ವೇದದಲ್ಲಿಯೇ 'ಇತಿಹಾಸ, ಪುರಾಣ' ಎರಡೂ ಅಡಕವಾಗಿದೆ.

೧. ವೇದದಲ್ಲಿ ಬರುವ ದೇವಾಸುರ ಯುದ್ಧ ವರ್ಣನೆ. –ದೇವಾಸುರಾಃ ಸಂಯತ್ತಾ ಆಸನ್ – **ಇತಿಹಾಸ.**

೨. ಉಕ್ತವಾಗಿರುವ ಪ್ರಪಂಚದ ಪೂರ್ವಾವಸ್ಥೆಯನ್ನೊಳಗೊಂಡ ಸೃಷ್ಟಿ ಪ್ರತಿಪಾದಕ ವಾಕ್ಯ ಸಮೂಹ – 'ಇದಂ ವಾ ಅಗ್ರೇ ನೈವಕಿಂಚಿದಾಸೀತ್'. ಇತ್ಯಾದಿ – ಇತ್ಯಾದಿ– **ಪುರಾಣ** ಎಂದಿರುವುದರಿಂದಲೇ.

**"॥ ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪ ।ಬ್ರಂಹಯೇತ್ । ಬಿಭೇತ್ಯಲ್ಪ ಶ್ರುತಾದ್ವೇದೋ ಮಾಮಯಂ ಪ್ರಹರಿತಷ್ಯತಿ ।**

"ಇತಿಹಾಸ–ಪುರಾಣಗಳಿಂದಲೇ ವೇದಗಳಿಗೆ ಅರ್ಥವನ್ನು ವಿಸ್ತರಿಸಿ ಹೇಳಬೇಕು."[೮]

**ಜಾನಪದ :**

ಜನಪದಕಥೆ ಮತ್ತು ಪುರಾಣ ಕಥೆಗಳ ನಡುವೆ ಪರಸ್ಪರ ಬದಲಾವಣೆಗಳು ಸತತವಾಗಿ ನಡೆಯುತ್ತವೆ. ಗ್ರೀಂ ಸಹೋದರರು ಗುರುತಿಸಿದಂತೆ ಅನೇಕ ಜನಪದ ಕಥೆಗಳು ಪುರಾಣಗಳು ಒಡೆದ ಚೂರುಗಳೇ ಆಗಿದೆ. ಅನೇಕ ಪುರಾಣಗಳು ಜಗತ್ತಿನಾದ್ಯಂತ ಜನಪದ ಕಥೆಗಳಲ್ಲಿ ಸಾಮಾನ್ಯವಾಗಿರುವ ಪ್ರೇರಣೆ ಮತ್ತು ವಸ್ತುವನ್ನು

ಬಳಸಿಕೊಂಡಿವೆ. ಪುರಾಣದ ಪಾತ್ರಗಳಲ್ಲಿ ದೈವಿಕತೆ ಎಲ್ಲಿಯವರೆಗೆ ಇರುತ್ತದೋ ಅಲ್ಲಿಯವರೆಗೂ ಪುರಾಣವು ಪುರಾಣವಾಗಿಯೇ ಉಳಿದಿರುತ್ತದೆ.[೯] "ಎಲ್ಲಿ ದೇವತೆ ಅಥವಾ ದೇವತೆಗಳು ಕಾಣುವುದಿಲ್ಲವೋ ಅಂಥ ಕಥೆಗಳನ್ನು ಜನಪದಕಥೆಗಳೆಂದು ಸರಿಯಾಗಿ ವಿಂಗಡಿಸಬಹುದು."[೧೦]

"ಮನುಷ್ಯರು ಪ್ರಾಣಿಗಳಾಗಿ ಪರಿವರ್ತನೆ ಹೊಂದಬಹುದು; ಪ್ರಾಣಿಗಳು ಮನುಷ್ಯರಾಗಲೂಬಹುದು. ಎಂಬ ನಂಬಿಕೆಯಿದ್ದ ಪ್ರಾಚೀನ ಕಾಲವೊಂದಿತ್ತು."[೧೧] ಪ್ರಾಣಿಗಳು ಮನುಷ್ಯರಂತೆ ಮಾತನಾಡುವವೆಂಬ ಕಥೆಗಳಿಗೆ ಇದೇ ತಳಹದಿ ಎಂದು ಜಿ.ಎಚ್. ಲುಕ್ವೆಟ್ ಎಂಬುವವರು ಪುರಾಣ ಜ್ಞಾನಕೋಶ ಎಂಬ ಗ್ರಂಥದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

~~~***~~~

**ಅಡಿಟಿಪ್ಪಣಿಗಳು :**

೧. ಶ್ರೀಮದ್ಭಾಗವತ, ಭಾ–೧, ಪು. ೧೫.

೨. ಐತರೇಯಬ್ರಾಹ್ಮಣ, ಅಧ್ಯಾಯ–೧, ಖಂಡ–೧, ಪು. ೧೨೦.

೩. –– ಅದೇ ––, ಪು. ೧೬೬.

೪. ಪ್ರೊ॥. ಕೆ.ಎಸ್. ಕಣ್ಣನ್, "ಇತಿಹಾಸ ಪುರಾಣ", ಪು. ೯೨.

೫. ಡಾ॥ ಚಂದ್ರಶೇಖರ ಕಂಬಾರ, ಸಂ: "ಕ.ಜಾ.ವಿ. ಕೋಶ" ಭಾ–೨, ಪು. ೧೨೭೮.

೬. –– ಅದೇ ––, ಪು. ೧೨೭೭.

೭. ಡಾ॥ ಸರ್ವೆಪಲ್ಲಿ ರಾಧಾಕೃಷ್ಣನ್, "ತತ್ವಶಾಸ್ತ್ರ ಪ್ರಾಚ್ಯ ಮತ್ತು ಪಾಶ್ಚಾತ್ಯ", ಪು. ೧೨೨.

೮. ಡಾ॥ ಚಂದ್ರಶೇಖರ ಕಂಬಾರ, "ಕನ್ನಡ ಜಾನಪದ ವಿಶ್ವಕೋಶ", ಭಾ–೨, ಪು. ೧೨೭೮.

೯. ಸಂ: ಅ.ನ. ಕೃಷ್ಣರಾಯರು, "ಭಾರತೀಯ ಸಂಸ್ಕೃತಿ ದರ್ಶನ', ಲೇ: ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರ, ಪು. ೧೩೮.

೧೦. ಡಾ॥ ಚಂದ್ರಶೇಖರ ಕಂಬಾರ, "ಕನ್ನಡ ಜಾನಪದ ವಿಶ್ವಕೋಶ", ಭಾ–೨, ಪು. ೧೨೭೮.

೧೧. –– ಅದೇ ––, ಪು. ೧೨೭೭.

~~~***~~~

**ಅನುಬಂಧ-2**

ಋಗ್ವೇದದ ೮–೯೬–೩, ೪ನೇ ಋಕ್ಕುಗಳಲ್ಲಿ ಇಂದ್ರ ಮತ್ತು ಕೃಷ್ಣನೆಂಬ ಅರಸು ನಡುವೆ ಯುದ್ಧ ನಡೆಯುತ್ತದೆ. ಭಾ–೨೫, ಪು. ೪೪೩ರಲ್ಲಿ ಋಗ್ವೇದ 'ಇಂದ್ರ'ನ ಮಹಿಮಾ ಪ್ರಸಂಗಗಳನ್ನೆಲ್ಲ ವೇದವ್ಯಾಸರು ಮಹಾಭಾರತದ ಕಥಾ ರಚನೆಯ ಪಾತ್ರ ಪ್ರಸಂಗಗಳಾಗಿ ಕೃಷ್ಣನಿಗೆ ಆರೋಪಿಸಿ ಅಲ್ಪ–ಸ್ವಲ್ಪ ಬದಲಾವಣೆಗಳಿಂದ ಮಾರ್ಪಡಿಸಿದ್ದಾರೆ. ಇಂದ್ರನ ಪೂಜೆಗೆ ಕೃಷ್ಣನ ವಿರೋಧವಿರುವ ಉಲ್ಲೇಖವೂ ವ್ಯಕ್ತವಾಗಿದೆ.

ಋ.ಸಂ. ಭಾ–೧, ಪು. ೨೧೬ ಮತ್ತು ಭಾ–೫, ಪು. ೬೮೮–೮೯ರಲ್ಲಿ ಋಗ್ವೇದದಂಥ ಪ್ರಾಚೀನ ಗ್ರಂಥವೊಂದರಲ್ಲಿ ಕಾಣುವ ಈ ಪ್ರಸಂಗಕ್ಕೂ ಕೃಷ್ಣನ ಜೀವನದಲ್ಲಿ ನಡೆದ ಘಟನೆಗೂ ಇರುವ ಕೆಲವು ಸಾಮ್ಯಗಳು ಮೂಲ ಪ್ರಸಂಗದ ಪ್ರೇರಣಾದಾಯಕ ಶಕ್ತಿಗೆ ಕನ್ನಡಿ ಹಿಡಿದಂತಿದೆ.

~~~***~~~
~~~

## ಅನುಬಂಧ-5

### ಮಹಾಭಾರತದಲ್ಲಿ "ಕವಿಸಮಯ" :

ಭೂಲೋಕ–ಸ್ವರ್ಗ ಲೋಕಗಳಂತೆಯೇ **ಪಾತಾಳ ಲೋಕ**ವನ್ನೂ ಕುರಿತು ಪುರಾಣಿಕ ಕವಿಗಳ 'ಕವಿಸಮಯ' ಈ ಮಹಾಕಾವ್ಯದಲ್ಲುಂಟು!! ದೈತ್ಯ, ದಾನವ, ಅಸುರ – ಎಲ್ಲರೂ ಒಂದೇ ಎನ್ನುವುದು ಕವಿಸಮಯ. ಇದರಿಂದಲೇ ಪುರಾಣಗಳ ಬೆಳವಣಿಗೆ ಸಾಧ್ಯವಾಗುವುದು. ಇಲ್ಲಿ ಒಂದು ಪ್ರಶ್ನೆ ಉದ್ಭವಿಸುತ್ತದೆ. ಅದು **ಶಾಸ್ತ್ರಸಿದ್ಧವಲ್ಲದ್ದು ಮತ್ತು ಲೋಕ ಸಿದ್ಧವೂ ಅಲ್ಲದ್ದು**. ಇದನ್ನು ಪುರಾಣ ಕವಿಗಳು ತಮ್ಮ 'ಕವಿಸಮಯ'ದಲ್ಲಿ ಹೇಗೆ ತಂದರು? ಇದು ಬ್ರಹ್ಮಸೃಷ್ಟಿಯನ್ನು ಮೀರಿದಂತಾಗುವುದಿಲ್ಲವೇ?!, ಅನೈಸರ್ಗಿಕ ಪ್ರಕ್ರಿಯೆ ಎನಿಸುವುದಿಲ್ಲವೇ?! ಎಂದರೆ ಅದಕ್ಕೆ ಮಮ್ಮಟ ಕವಿಯು ತನ್ನ 'ಕಾವ್ಯ ಪ್ರಕಾಶ'ದಲ್ಲಿ 'ಕವಿವಾಣಿ' ಹೇಗೆ ಬ್ರಹ್ಮಸೃಷ್ಟಿಗಿಂತಲೂ ಅಂಶ ಅಂಶದಲ್ಲೂ ಮೇಲೆಂಬುದನ್ನು ಕೌಶಲದಿಂದ ಸೂಚಿಸಿದ್ದಾನೆ. ನಮ್ಮ ದಿನ ದಿನದ ಅನುಭವಕ್ಕೆ ಗೋಚರವಾಗುವಂತೆ, ಬ್ರಹ್ಮಸೃಷ್ಟಿಗೆ ಬಂಧನಗಳು ಹಲವು. ಹಾಗಾಗಿ ಅವು ನಿಯಮಿತವಾದವುಗಳು! ನಿಯಮಗಳನ್ನು ಎಳ್ಳಷ್ಟೂ ಮೀರಲಾರವು. ಜೊತೆಗೆ ಇಲ್ಲಿಯ ಲೌಕಿಕ ವ್ಯವಹಾರಗಳಲ್ಲಿ ಸುಖದ ಜೊತೆಗೆ ಹೆಚ್ಚಾಗಿ ದುಃಖದ ಮೋಹಗಳೇ ನಮ್ಮನ್ನು ಅತ್ಯಧಿಕವಾಗಿ ಸುತ್ತಿಕೊಳ್ಳುತ್ತವೆ; ಅಲ್ಲದೆ ಇದರ ನಿರ್ಮಾಣಕ್ಕೆ ಬೇಕಾದ ಸಾಮಗ್ರಿಯೆಷ್ಟು, ಶ್ರಮವೆಷ್ಟು! ಇಷ್ಟಾದರೂ ಈ ಜಗತ್ತನ್ನು ಕೇವಲ ಮನೋಹರವೆನ್ನಬಹುದೇ! ಇದಕ್ಕೆ ಪ್ರತಿ ವಿಚಿತ್ರವಾಗಿ ಕವಿಸೃಷ್ಟಿಯ್ನು ನೋಡಿದಾಗ; "ನಿಯತಿಃ ಕೇನಲಂಘ್ಯತೇ ನಿಯತಿಯನಾರ್ ಮೀರದಪರ್!"[೧] (ನಿಯತಿಕೃತ ನಿಯಮರಹಿತಾಂಹ್ಲಾದೈಕಮಯೀ ಯನಸ್ಯಪರತಂತ್ರಾಂ । ನವರಸರುಚಿರಾಂ ನಿರ್ಮಿತಿಮಾದಧತೀ ಭಾರತೀ ಕವೇರ್ಜಯತಿ ॥" ತೀ.ನಂ.ಶ್ರೀ. 'ಭಾರತೀಯ ಕಾವ್ಯಮೀಮಾಂಸೆ', ಅ–೧–೧). ಎಂಬ ಉಕ್ತಿ ಇದಕ್ಕೆ ಅನ್ವಯಿಸುವುದಿಲ್ಲ; ಲೋಕದಲ್ಲಿ ಅಸಾಧ್ಯವಾದ ಸಂಗತಿಗಳು ಇಲ್ಲಿ ಸಹಜವೆಂಬಂತೆ ಉಲ್ಲಿಖಿತವಾಗುತ್ತದೆ. ದುಃಖ, ತಾಪಾದಿಗಳನ್ನುಂಟು ಮಾಡುವ ವಸ್ತುಗಳೂ ಅನುಭವಗಳೂ ಕಾವ್ಯದಲ್ಲಿ ಕಾಲಿಟ್ಟ ಕೂಡಲೇ ಕೇವಲ ಆಹ್ಲಾದಮಯವಾಗುತ್ತದೆ. "ಈ ಜಗತ್ತಿನ ನಿರ್ಮಾಣ ಕಾರ್ಯದಲ್ಲಂತೂ ಕವಿ ಯಾರ ಕೈಯನ್ನೂ ಕಾದಿರಬೇಕಾಗಿಲ್ಲ. ಅದು ಅವನ ಪ್ರತಿಭೆಯಿಂದ ನಿರರ್ಗಳವಾಗಿ ನಿರವಧಿಯಾಗಿ ಹೊರಡುತ್ತವೆ."[೨] (–– ಅದೇ ––, ಪು. ೧೪೭.) ಇಲ್ಲಿಯ ಪುರಾಣಿಕ ಕವಿಗಳ "ಕವಿ ಪ್ರತಿಭೆ"ಗೆ, ಲೀಲಾವ್ಯಾಪಾರಕ್ಕೆ 'ಋಗ್ವೇದ'ವೇ ಆಧಾರ ಮತ್ತು ಆಕರಸಂಗ್ರಹವಾಗಿದೆ.

ಮೊದಲು ಕಾವ್ಯ, ನಂತರ ಕಾವ್ಯಮೀಮಾಂಸೆ.

ರಾಮಾಯಣ ಆದಿಕಾವ್ಯ. ನಂತರ ವೇದವ್ಯಾಸರು ರಚಿಸಿದ 'ಭಾರತ' ಮಹಾಕಾವ್ಯ. ಇದು ಕೇವಲ ೨೪, ೦೦೦ ಶ್ಲೋಕಗಳಿಗಷ್ಟೇ ಸೀಮಿತವಾಗಿತ್ತು. ಉಪಾಖ್ಯಾನಗಳರಹಿತವಾಗಿತ್ತು. (ಶ್ರೀಮ.ಭಾ. ಭಾ–೧, ಪು. ೧೬)

ನಂತರದ ರಚನೆ ಪುರಾಣಗಳು.

'ಭಾರತ' ಕಥೆಯನ್ನು ವ್ಯಾಸರು ವೈಶಂಪಾಯನರಿಗೂ, ವೈಶಂಪಾಯನರು ಜನಮೇಜಯನಿಗೂ, ಸೂತಪುರಾಣಿಕರು ನೈಮಿಷಾರಣ್ಯದಲ್ಲಿ ಸೇರಿದ್ದ ಋಷಿಗಳಿಗೆ ಬೋಧಿಸುವಾಗ ಪುರಾಣಿಕರಷ್ಟೇ ಆಗಿರದಂತಹ ಕವಿಗಳೂ ಆಗಿ ಪುರಾಣ ಪ್ರವಚನಗಳಲ್ಲಿ ಧಾರಾಳವಾಗಿ ಸಂದರ್ಭಾನುಸಾರವಾಗಿ 'ಕವಿ ಸಮಯ'ವನ್ನು ಬಳಸಿ 'ಮಹಾಭಾರತ'ವಾಗಿ ಬೆಳೆಸಿದ್ದಾರೆ. ಈ ಸಂದರ್ಭದಲ್ಲಿ 'ಮಹಾಭಾರತ' ಜ್ಞಾನದೀವಿಗೆಯಾಗಿ, ಅತಿಶಯ ಪುಣ್ಯದಾಯಕವಾಗುವುದಲ್ಲದೇ, ದೇವತೆಗಳ, ದೇವರ್ಷಿಗಳ, ಬ್ರಹ್ಮರ್ಷಿಗಳ, ಯಕ್ಷ–ನಾಗರು ಮುಂತಾದ ಪುಣ್ಯ ಪುರುಷರ ಚರಿತ್ರೆಯಾಗಿ ನಿರೂಪಣೆ ಮಾಡಲಾಯಿತು.

~~~***~~~
~~~

## ಅನುಬಂಧ-6

**ಪುರುಷ ರೇತಸ್ಸಿನಿಂದ ಮಾತ್ರ ಸಂತಾನ :**

ಇದು ಅವೈಜ್ಞಾನಿಕ ಮತ್ತು ಅನೈಸರ್ಗಿಕ. ಇಂದಿನ ವೈದ್ಯಕೀಯ ವಿಧಾನದಲ್ಲಿಯೂ ಇದು ಸಾಧ್ಯವಿಲ್ಲದ ಮಾತು. 'ಸ್ತ್ರೀಯು ಮಾನವನ ಜನ್ಮಕ್ಷೇತ್ರ. ಜನ್ಮ ಭೂಮಿಯು ಪವಿತ್ರವಾದುದೆನ್ನುವುದಾದರೆ ಜನ್ಮಕ್ಷೇತ್ರವೂ ಪವಿತ್ರತಮವಾದುದು. ಆದ್ದರಿಂದಲೇ ಸ್ತ್ರೀಯರು ತಮ್ಮ ಪತಿಗಳಿಗೆ ಸನಾತನವಾದ ಪುಣ್ಯಕ್ಷೇತ್ರವೂ ಆಗಿದ್ದಾರೆ. **ಋಷಿ–ಮಹರ್ಷಿ, ಮಹಾತಪಸ್ವಿಗಳಾಗಿರಬಹುದು**. ಅಘಟಿತ ಘಟನಾ ಸಾಮರ್ಥ್ಯವುಳ್ಳವರಾಗಿಯೂ ಆಗಿರಬಹುದು. ಅವರಾದರೂ ಸ್ತ್ರೀಯರಿಂದ ಹೊರತಾಗಿ ಪ್ರಜೋತ್ಪತ್ತಿ ಮಾಡಲಾರರು. ಎಂತಹ ತಪಸ್ಸಿನಿಂದಲೂ ಅವರಿಗೆ ಆ ಶಕ್ತಿಯು **ಪ್ರಸ್ತಾಪವಾಗುವುದಿಲ್ಲ. ಮೇಲಾಗಿ "ಎಲ್ಲಾ ಋಷಿ–ಮಹರ್ಷಿಗಳೂ ಸ್ತ್ರೀಯರಿಂದಲೇ ಜನ್ಮ ತಾಳಿದವರಾಗಿದ್ದಾರೆ."**೧ (ಶ್ರೀ.ಮ.ಭಾ. ಭಾ–೧, ಪು. ೪೭೬) ಈ ಮೇಲಿನ ಹೇಳಿಕೆಯಿಂದ ಮಹಾಭಾರತದಲ್ಲಾಗಿರುವ ಸಂತಾನೋತ್ಪತ್ತಿಗಳೆಲ್ಲ ಅಪ್ಸರೆಯರ ಸಮಾಗಮದಿಂದಲೇ ಆಗಿರುವುದೆಂದರೂ ಅದು ಸ್ತ್ರೀಯಿಂದಲೇ ಎನ್ನುವುದಂತೂ ಸಿದ್ಧಾಂತ.

~~~\*\*\*~~~

## ಅನುಬಂಧ-7

**ಪಾಂಡವರು ಯಾರು?**

**ಎಂಬ ಪ್ರಶ್ನೆಗೆ** 'ಮಹಾಭಾರತ'ದಲ್ಲಿ "ಸಂಸ್ಕೃತಿ"ಯ ಪರಿಕಲ್ಪನೆ ತತ್ವವನ್ನು ಪ್ರತಿಪಾದಿಸಲು ಬೇಕಾದ ಪ್ರಮಾಣವನ್ನು ಅನ್ವೇಷಿಸಲು ಹೊರಟಾಗ ಪ್ರಥಮವಾಗಿ ಕಂಡ ಬರುವುದು 'ಅಕ್ಷದ್ಯೂತ'. ಮಹಾಭಾರತಕ್ಕೆ ಐತಿಹಾಸಿಕತೆ ಬರಲಿಕ್ಕೂ ಬಹು ಮುಖ್ಯ ಕಾರಣ ಋಗ್ವೇದದ ೧೦ನೇ ಮಂಡಲ.

ಈ ಹೇಳಿಕೆ ಮಹಾಭಾರತದಲ್ಲಿ,

**"॥ ಧರ್ಮಾರ್ಥ ಕಾಮ ಮೋಕ್ಷಾಣಾಮುಪದೇಶ ಸಮನ್ವಿತಂ । ಪೂರ್ವವೃತ್ತ ಕಥಾಯುಕ್ತ ಮಿತಿಹಾಸಂ ಪ್ರಚಕ್ಷತೆ ॥"**

ಶ್ಲೋಕ ಸಮರ್ಥಿಸುತ್ತದೆ. ಪೂರ್ವದಲ್ಲಿ ನಡೆದಿರುವುದೇ ಇತಿಹಾಸ.

ಪಾಣಿನಿಯ ಸೂತ್ರದಲ್ಲಿ ಮಹಾಭಾರತ ಹಾಗೂ ಯುಧಿಷ್ಠಿರನ ಉಲ್ಲೇಖವಿದೆ. ಪ್ರಾಯಶಃ ಪಾಂಡವರ ಕಥೆ ಇರಲಿಲ್ಲವೆಂದು ಹೇಳಲಾಗಿರುವ ಆದಿ ಮಹಾಭಾರತ ಕಥೆಯನ್ನೇ ಆಧಾರವಾಗಿಟ್ಟುಕೊಂಡು 'ದ್ಯೂತ' ಪ್ರಸಂಗವನ್ನು ಕಥೆಯ ಕೇಂದ್ರಬಿಂದುವಾಗಿಟ್ಟುಕೊಂಡು ಪಾಂಡವರನ್ನೂ ಸೇರಿಸಿಕೊಂಡೇ ವೇದವ್ಯಾಸರು 'ಮಹಾಭಾರತ' ಕಾವ್ಯ ರಚಿಸಿದ್ದಾರೆ.

**ಪಾಂಡವರು ಯಾರು?**

–ಎಂದರೆ ವೈದಿಕ ಸಾಹಿತ್ಯದಲ್ಲಿ ಎಲ್ಲೂ ಪಾಂಡವರ ಹೆಸರು ಕಂಡು ಬರುವುದಿಲ್ಲ.

ಪಾಂಡವರನ್ನು ಕುರಿತು ಬೌದ್ಧ ಗ್ರಂಥಕಾರರಿಂದ, "ಪಾಂಡವ ಎಂಬ ಹೆಸರಿನಲ್ಲಿ ಪರ್ವತವಾಸಿಗಳಾದ ಒಂದು ಜಾತಿಯ ಜನರನ್ನು ವರ್ಣಿಸಿರುವರು. ಅವರು ಉಜ್ಜಯಿನಿ ಮತ್ತು ಕೋಸಲ ರಾಜ್ಯವಾಸಿಗಳ ಶತ್ರುಗಳು."(ವೇಬರ್, ಹಿಸ್ಟರಿ ಆಫ್ ಇಂಡಿಯನ್ ಲಿಟರೇಚರ್, ಪು. ೧೬೫) ಎಂದು ಹೇಳಲಾಗಿದೆ.

ಮಹಾಭಾರತದಲ್ಲಿ ಪಾಂಡವರು ಹಸ್ತಿನಾಪುರಕ್ಕೆ ಬರುವ ಮೊದಲು ಹಿಮಾಲಯ ಪರ್ವತದಲ್ಲಿ ಬೆಳೆದರೆಂದು ಹೇಳಿದೆ.

**"॥ ಏವಂ ಪಾಂಡೋಃ ಸುತಾಃ ಪಂಚ ದೇವದತ್ತಾ ಮಹಾಬಲಾಃ । ವಿವರ್ಧಮಾನಸ್ತೇ ತತ್ರ ಪುಣ್ಯೇ ಹೈಮವತೇ ಗಿರಾ ॥"**
~~~

ಪಾಂಡು ಪುತ್ರರಾದ ಪಾಂಡವರು ಐವರು ದೇವದತ್ತರಾದ ಐದು ಮಂದಿ ಮಹಾಬಲಿಷ್ಠರು ಪುತ್ರರು ಇವರು ಹಿಮಾಲಯ ಪರ್ವತದಲ್ಲಿ ಬೆಳೆದರು. (ಶ್ರೀಮನ್ಮಹಾಭಾರತ, ಸಂ-೨, ಪು. ೮೨೩) ಪ್ಲಿನಿ ಮತ್ತು (ಸ) ಅನಿಸ್ ಎಂಬ ಹೆಸರಿನ ಗ್ರೀಕ್ ಗ್ರಂಥಕಾರರು ಭಾರತವರ್ಷದ ವಾಯುವ್ಯ ಮೂಲೆಯಲ್ಲಿರುವ ಮತ್ತು ಬಾಹ್ಲೀಕ ದೇಶದ ಉತ್ತರ ದಿಕ್ಕಿನಲ್ಲಿರುವ ಸೋಗ್ರಿಯಾನಾ ದೇಶದಲ್ಲಿನ ಒಂದೂರಿನ ಹೆಸರು **ಪಾಂಡೂ** ಎಂದೂ, ಸಿಂಧೂ ನದಿಯ ಮುಖದ ಸಮೀಪದಲ್ಲಿ ವಾಸ ಮಾಡುತ್ತಿರುವ ಒಂದು ಜಾತಿಗೆ **ಪಾಂಡ್ಯರು** ಎಂದೂ ಬರೆದಿರುತ್ತಾರೆ. ಭೂಗೋಳವೇತ್ತನಾದ **ಟಾಲ್ಮಿಯಾ ಪಾಂಡ್ಯ** ಎಂಬ ಹೆಸರಿನ ದೇಶವು **ವಿತಸ್ತಾ** ನದೀ ಸಮೀಪದಲ್ಲಿದೆ ಎಂದು ಬರೆದಿರುತ್ತಾರೆ. ಕಾತ್ಯಾಯನನು ಪಾಣಿನಿಯ ಸೂತ್ರವೊಂದರ ವಾರ್ತಿಕೆಯಲ್ಲಿ **ಪಾಂಡು ಶಬ್ದ**ದ ನಿಷ್ಪತ್ತಿ ಮಾಡುತ್ತಾನೆ. (ಬಂಕಿಮ ಚಂದ್ರ ಭಟೋಪಾಧ್ಯಾಯ, "ಶ್ರೀಕೃಷ್ಣಚರಿತೆ", ಪು. ೩೩)

~~~***~~~

## ಅನುಬಂಧ-8

ಮಹಾಭಾರತದಲ್ಲಿ ಕೃಷ್ಣನ ಕಥೆಗೆ ಸಂಬಂಧಿಸಿದಂತೆ ಅನೇಕ ವಿವರಗಳ ಮೂಲಾನ್ವೇಷಣೆಗೆ ಋಗ್ವೇದವನ್ನು ಆಶ್ರಯಿಸುವುದು ಅರ್ಥಪೂರ್ಣವೂ ಔಚಿತ್ಯವೂ ಆಗಿರುವಂತೆ ತೋರುತ್ತದೆ. (ಡಾ॥ ಶಂ.ಬಾ. ಜೋಶಿ, "ಋಗ್ವೇದ ನಾಗಪ್ರತಿಮಾ ವಿಚಾರ, ಪು. ೪೪೮) ಯಾಕೆಂದರೆ "ಋಗ್ವೇದದ ಈ ಇಂದ್ರ, ವಿಷ್ಣು, ಮಹಾಭಾರತದ ಕೃಷ್ಣಾರ್ಜುನರಾಗುತ್ತಾರೆ! ಆದರೆ ಋಗ್ವೇದದ ಭೂಮಿಕೆಯಲ್ಲಿ ಇಂದ್ರು ಪ್ರಧಾನ ದೈವತ! ಮಹಾಭಾರತದಲ್ಲಿ ಕೃಷ್ಣನಿಗೆ ಪ್ರಧಾನ. (ಡಾ॥ ಗುರುದತ್ತ, "ಶ್ರೀಕೃಷ್ಣ ಉಗಮ ಮತ್ತು ವಿಕಾಸ", ಪು. ೧೩೫)

ಈಗಿನ ಕವಿಗಳಂತೆಯೇ ವೇದವ್ಯಾಸನೂ ತನ್ನ ಪ್ರತಿಭೆಯಿಂದ ಜಗತ್ತಿಗೆ ಬೆಳಕು ಬೀರಬೇಕೆಂದು ಯತ್ನಿಸಿದ ಕವಿಪುಂಗವ; ತನ್ನ ಸಾಮಾಜಿಕ ಆಧ್ಯಾತ್ಮಿಕ ಅನುಭವಗಳ ರಸಸಮ್ಮಿಲನದಿಂದ ಅದ್ವಿತೀಯ ಪಾತ್ರವೆನಿಸಿದ ಕೃಷ್ಣನ ಪಾತ್ರವನ್ನು ಸೃಷ್ಟಿಸಲಾಗಿದೆ.(ಅದೇ, ಪು. ೧೩೫) ಶ್ರೀಕೃಷ್ಣ ಅಗ್ರಪೂಜೆ ಪಡೆಯಲಿಕ್ಕೂ ಕಾರಣವಿದೆ. ಶ್ರೀಕೃಷ್ಣದರ್ಶನ ಶಾಸ್ತ್ರ ಪಟು, ಅಸಾಮಾನ್ಯ, ನಿಸ್ಪೃಹನಾದ ಕರ್ಮಯೋಗಿ, ತತ್ವವೇತ್ತ, ವಿಶ್ವವೇದಾಂತಿ, ಆತ್ಮಾನುಭವ ಹೊಂದಿದ ವಿಭೂತಿ ಪುರುಷ, ತನ್ನ ಕೆಲಸಗಳಿಂದ ಶಕ್ತಿಯಿಂದ ಶ್ರೀಕೃಷ್ಣನು ಲೋಕದ ಅಗ್ರಪೂಜೆಯನ್ನು ಪಡೆದನಲ್ಲದೆ ತನ್ನ ಹುಟ್ಟಿನಿಂದಲ್ಲ.(ಎಂ.ಆರ್. ಭಟ್, "ಭಾರತಗಾಂಭೀರ್ಯ", ಪು.೮)

~~~***~~~

## ಅನುಬಂಧ-9

### 'ಭಾರತ' ಶಬ್ದದ ನಿರ್ವಚನ :

'ಭಾರತ'ಕ್ಕೆ 'ಭಾರತ' ಎಂದು ಕರೆಯಲಿಕ್ಕೆ ಕಾರಣವೇನು? 'ಭಾರತ'ವೆಂದು ಕರೆಯುವ ಮೊದಲು ಇದನ್ನು ಏನೆಂದು ಕರೆಯುತ್ತಿದ್ದರು?

೧. **ಪ್ರಾಚೀನ ಪರ್ಷಿಯನ್ನರ** ಗ್ರಂಥವಾದ **'ಅವೆಸ್ತ'** ದಲ್ಲಿ **'ಹಿಂದು'** ಎಂಬ ಶಬ್ದ ಪ್ರಯೋಗವಿರುವುದರಿಂದಲೂ ಹಿಂದೂ ಶಬ್ದವು ಬಹು ಪ್ರಾಚೀನಕಾಲದಿಂದಲೂ ಪ್ರಾಚಾರ್ಯದಲ್ಲಿರಬೇಕಾಗಿ ಬೋಧೆಯಾಗುವುದಲ್ಲದೆ ಈ ಹಿಂದೂ ಶಬ್ದವೇ ಕಾಲಕ್ರಮದಲ್ಲಿ ಮಾರ್ಪಟ್ಟು **ಇಂಡಿಯಾ** ಎಂಬುದಾಗಿ ಪಾಶ್ಚಾತ್ಯರಿಂದ ಸಂಬೋಧಿಸಲ್ಪಟ್ಟದ್ದಾಗಿರುವುದು. ಇದು ಒಂದು ಅಭಿಪ್ರಾಯ.

೨. ಪ್ರಾಚೀತೇತಿಹಾಸಗಳಲ್ಲಿ ಋಗ್ವೇದದಲ್ಲಿಯೂ ಈ 'ಭರತ'ನೆಂಬ ವ್ಯಕ್ತಿಯ ಹೆಸರು ಕಂಡುಬರುತ್ತದೆ. ಈ ಭೂಭಾಗವನ್ನಾಳಿದ ಭರತನ ವಂಶಾವಳಿಯನ್ನು ಶ್ರೀ ಎಂ.ಎಸ್. ಶ್ರೀನಿವಾಸ ಅಯ್ಯಂಗಾರ್ ಅವರು ಹೀಗೆ ವಿಶ್ವವಿಭಜನೆ ಮಾಡುತ್ತಾರೆ.

ಪರಬ್ರಹ್ಮ> ಸ್ವಾಯಂಭೂ ಮನ (ಬ್ರಹ್ಮನ ಮಾನಸಪುತ್ರ)> ಪ್ರಿಯವೃತ-ಬರ್ಹಿಷ್ಮತಿ> ಅಗ್ನೀಧ್ರ-ಪೂರ್ವಚಿತ> ನಾಭಿ-ಮೇರು> ಋಷಭ-ಜಯಂತಿ.

ಈ ಋಷಭ-ಜಯಂತಿಯರಿಗೆ ಒಂದುನೂರು ಮಕ್ಕಳಾದರು. ಇವರಲ್ಲಿ ಹಿರಿಯನೂ, ಗುಣಾಢ್ಯನೂ ಮಹಾಯೋಗಿಯೂ ಆದವನೇ **ಭರತ. ಈ ಭರತ ಖಂಡಕ್ಕೇ ರಾಜ್ಯಭಾರ ವಹಿಸಿದ್ದರಿಂದ ಈ ದೇಶಕ್ಕೆ ಭರತವರ್ಷವೆಂಬ ಹೆಸರೂ ಪ್ರಚಲಿತವಾಯಿತು.**

**ಇತಿಹಾಸ :**

**ಭರತರು ಮತ್ತು ಪುರುಗಳು** ಒಂದುಗೂಡಿ ಕುರುಜನರಾದರು. ಮೊದಲಿಗೆ ಅವರು ನಡುಬಯಲಿನ ಅಂಚಿನಲ್ಲಿರುವ ಸರಸ್ವತೀ ಮತ್ತು ದೃಶದ್ವತಿ ನದಿಗಳ ನಡುವಿನ ಪ್ರದೇಶದಲ್ಲಿ ವಾಸ ಮಾಡುತ್ತಿದ್ದರು. ಬಹುಶೀಘ್ರದಲ್ಲಿ ಅವರು ದೆಹಲಿ ಮತ್ತು ನಡುಬಯಲಿನ ಮೇಲುಭಾಗವನ್ನು ಆಕ್ರಮಿಸಿಕೊಂಡರು. ಅದೇ ಕುರುಗಳ ನಾಡಾದ **ಕುರುಕ್ಷೇತ್ರ** ಕ್ರಮೇಣ ಅವರು ನಡುಬಯಲಿನ ಮಧ್ಯಭಾಗದಲ್ಲಿ ನೆಲೆಸಿದ್ದ **ಪಾಂಚಾಲರೊಂದಿಗೆ ಒಂದುಗೂಡಿದರು. ಈ ಕುರು-ಪಾಂಚಾಲರ** ಅಧಿಕಾರ **ದೆಹಲಿ ಮತ್ತು ನಡುಬಯಲಿನ ಮೇಲು ಭಾಗ ಮಧ್ಯಭಾಗಗಳಿಗೆಲ್ಲಾ ಹರಡಿತು.** ಅವರು ಈಗಿನ **ಮೀರತ್ ಜಿಲ್ಲೆಗೆ** ಸೇರಿದ ಹಸ್ತಿನಾಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. **ಮಹಾಭಾರತ ಮಹಾಕಾವ್ಯದ** ಮುಖ್ಯವಸ್ತುವಾದ ಭಾರತಯುದ್ಧದಿಂದಾಗಿ ಈ ಕುರುಜನರ ಇತಿಹಾಸ ಮಹತ್ವದ್ದು. ಆ ಯುದ್ಧವು ಕ್ರಿ.ಪೂ. ೯೫೦ರ ಸುಮಾರಿನಲ್ಲಿ ಕುರುಕುಲಕ್ಕೇ ಸೇರಿದ ಕೌರವರು ಮತ್ತು ಪಾಂಡವರ ನಡುವೆ ನಡೆಯಿತೆಂದು ಹೇಳಲಾಗಿದೆ. ಸುಹೋತ್ರನ ಮಗ ಹಸ್ತಿ ಎಂಬ ರಾಜ ನಿರ್ಮಿಸಿದ ಪುರ ಹಸ್ತಿನಾಪುರ ಅಥವಾ ಹಸ್ತಿನಾಪುರ ಎಂದಾಗಿದೆ. ಎಂದು ಆದಿಪರ್ವ ಅಧ್ಯಾಯ ೬೨-೩೬ರಲ್ಲಿ ಹೇಳಿದೆ. 'ಪಾಂಚಾಲ ಒಂದು ಬಣದ ಹೆಸರಾಗಿದ್ದು ಅನಂತರ ಒಂದು ಪ್ರದೇಶದ ಹೆಸರಾಯಿತು.' (ಪ್ರೊ|| ರಾಮ್ ಶರರ್ಣವರ್ಮಾ, "ಪ್ರಾಚೀನ ಭಾರತ", ಪು. ೮೦)

ಮಹಾಭಾರತದಲ್ಲಿ ಬರುವ **ಕುರು-ಪಾಂಚಾಲರು** ಮುಂತಾದ ವಂಶಗಳು ಕ್ರಿ.ಪೂ. ೧೦ನೇ ಶತಮಾನದಲ್ಲೇ ಇದ್ದರೆಂದು ಋಗ್ವೇದದಿಂದ ತಿಳಿದುಬರುತ್ತದೆ.

~~~***~~

## "ಮಹಾಭಾರತ ಸಂಸ್ಕೃತಿ"

ಆಧುನಿಕ ಸಮಾಜಶಾಸ್ತ್ರಜ್ಞರು ಸಮಾಜ ವಿಜ್ಞಾನ ಇತ್ಯಾದಿ ಅಧ್ಯಯನಕ್ಕೆ ಪಾರಿಭಾಷಿಕ ಶಬ್ದಗಳ ಬಗ್ಗೆ ವಿಶೇಷ ಗಮನ ಹರಿಸಿದ್ದಾರೆ.

ನಾನಿಲ್ಲಿ **ಸಂಸ್ಕೃತಿ** ಎಂಬ ಪದವನ್ನು ಮಾನವನ ಜೀವನ ಕ್ಷೇತ್ರಕ್ಕೆ ವಿಸ್ತರಿಸಿ ಆ ಮುಖಾಂತರ ಮಹಾಭಾರತ ಕಾಲದ ಸಾಮಾಜಿಕ ಜನಜೀವನದೊಂದಿಗೆ ಅನ್ವಯಿಸಿ ಕವಿ ವಿಮರ್ಶೆಯನ್ನು ಪರಾಮರ್ಶಿಸುವ ಪ್ರಯತ್ನದಲ್ಲಿ **'ಟಿಪ್ಪಣಿ'**ಗಳನ್ನು ರಚಿಸಲಾಗಿದೆ.

**ಇ.ಬಿ.ಟೈಲರ್** : ಸಂಸ್ಕೃತಿಯು ಸಮಾಜಜೀವಿಯಾಗಿ ಪಡೆಯುವ ಜ್ಞಾನ, ನಂಬಿಕೆ, ಕಲಿಯುವ ಕಲೆ, ನೀತಿಗಳು, ಕಾನೂನು, ಪದ್ಧತಿ ಹಾಗೂ ಸಾಮರ್ಥ್ಯ, ಅಭ್ಯಾಸವನ್ನು ಒಳಗೊಂಡಿರುವ ಸಮಗ್ರ ಮಿಶ್ರಣವೆಂದು ಹೇಳಿರುವ ವ್ಯಾಖ್ಯೆಯನ್ನು ಮಹಾಭಾರತ ಸಾಮಾಜಿಕ ಜೀವನದಲ್ಲಿ ಹುಡುಕಿ ತೆಗೆಯಬೇಕು.

ಸಂಸ್ಕೃತಿಯ ಮಾನವನು ಸೃಷ್ಟಿಯಾದ ಕಾಲದಲ್ಲಿ ಆರಂಭವಾಯಿತೆಂದು ತಿಳಿದು ಬರುತ್ತದೆ ಎಂದೂ ಇ.ಬಿ.ಟೈಲರ್ ತನ್ನ ಕೃತಿಯೊಂದರಲ್ಲಿ ಹೇಳುತ್ತಾನೆ. ಹಾಗಾಗಿ ಮಹಾಭಾರತ ಕಾಲದ ಸಮಾಜವೂ ತನ್ನದೇ ಆದ **ಸಂಸ್ಕೃತಿ**ಯನ್ನು ಹೊಂದಿತ್ತು.

**ರೆಡ್‌ಫೀಲ್ಡ್** : ಸಾಂಪ್ರದಾಯಿಕ ತಿಳಿವಳಿಕೆಗಳ ವ್ಯವಸ್ಥಿತಿ ಸಂಚಯವೇ ಸಂಸ್ಕೃತಿ; ಆ ತಿಳಿವಳಿಕೆಗಳು ಕಲೆ ಮತ್ತು ಮಾನವ ನಿರ್ಮಿತ ವಸ್ತುಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದಲ್ಲದೇ ಸಂಪ್ರದಾಯದ ಮುಖಾಂತರವೂ ಮುಂದುವರೆದು ಮಾನವ ಸಮೂಹಕ್ಕೆ ವೈಶಿಷ್ಟ್ಯ ನೀಡುತ್ತದೆ ಎನ್ನುತ್ತಾನೆ.
~~~

ಈ ಹೇಳಿಕೆಗೆ ನಾವು 'ಅರಗಿನ ಮನೆ'ಯಲ್ಲಿ ಪಾಂಡವರನ್ನು ಸುಡಲು ದುರ್ಯೋಧನನು ನಿರ್ಮಿಸುವ ಕುತಂತ್ರ ಸನ್ನಿವೇಶಗಳು ಮತ್ತು ಕೃಷ್ಣಾರ್ಜುನರು ಮಾಡಿದ 'ಖಾಂಡವವನ ದಹನ'ದ ಪ್ರತಿಫಲವಾಗಿ ನಿರ್ಮಿಸುವ ಇಂದ್ರಪ್ರಸ್ಥ ರಾಜಧಾನಿಯ 'ಮಹ ಭವನ' ಇತ್ಯಾದಿಗಳನ್ನು ಗಮನಿಸಬಹುದು.

ಸಮಾಜದ ಸದಸ್ಯನಾಗಿದ್ದುಕೊಂಡೇ ಮಾನವನು ಗಳಿಸುವ ಸಾಮರ್ಥ್ಯಗಳೇ **ಸಂಸ್ಕೃತಿ** ಎಂದು ಹೇಳುವ ಇ.ಬಿ. ಟೈಲರ್‌ನ ಮಾತಿಗೆ ಮಹಾಭಾರತದ ಹದಿನೆಂಟು ಪರ್ವಗಳೂ ಸಾಕ್ಷ್ಯ ನೀಡುತ್ತವೆ.

ಸಂಪ್ರದಾಯದೊಡನೆ ಎಡಬಿಡದೇ ಬಂದಿರುವ ಪದ್ಧತಿಗಳೇ 'ಸಂಸ್ಕೃತಿ' ಎಂದು **ರಾಬರ್ಟ್ ರೆಡ್‌ಫೀಲ್ಡ್** ಹೇಳುವ ಮಾತಿಗೆ ಜನ್ಮ ರಹಸ್ಯವನ್ನು ಬಿಚ್ಚಿಡುವ ಮಹಾಭಾರತದ ಹತ್ತಾರು ಸಂತಾನೋತ್ಪತ್ತಿಯ 'ನಿಯೋಗ' ಪದ್ಧತಿ ಜ್ವಲಂತ ಸಾಕ್ಷಿಯಾಗಿದೆ.

ಸಂಸ್ಕೃತಿಯು ಆವಿಷ್ಕಾರಗಳನ್ನು ಇನ್‌ವೆನ್‌ಷೆನ್ ಅಥವಾ ಒಂದು ಪದ್ಧತಿಯಲ್ಲಿ ಸಂಘಟಿತವಾದ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳನ್ನು ಪಡೆದಿರುತ್ತದೆ. ಉದಾಹರಣೆಗೆ 'ಉದ್ಯೋಗಪರ್ವ'ದಲ್ಲಿ ಬರುವ ಕುರುಕ್ಷೇತ್ರ ಮಹಾ ಸಮರಾಂಗಣದಲ್ಲಿ ರಚಿಸುವ ವ್ಯೂಹಗಳು, ಕಾದಾಡುವ ಪದ್ಧತಿ ಇತ್ಯಾದಿ. ಪ್ರತಿಯೊಂದು ಸಂಸ್ಕೃತಿಯಲ್ಲಿ ಕಂಡು ಬರುವ ಸಾಮಾಜಿಕ ಆಚರಣೆಗಳು ಒಂದೇ ಆಗಿದ್ದರೂ ಅವು ತಮ್ಮ ಮಟ್ಟಿಗೆ ಬೇರೆ, ಬೇರೆ ಪದ್ಧತಿಗಳನ್ನು ಅನುಸರಿಸುತ್ತದೆ. ಸಾಮಾಜಿಕ ಆಚರಣೆಗಳು;

ಬಂಧುತ್ವ, ಕುಲ, ವಿವಾಹ, ಆಸ್ತಿ ವ್ಯವಸ್ಥೆ, ಕಾನೂನು ದಂಡನೆ, ಧರ್ಮ, ಕಲೆ ಮತ್ತು ಕಸುಬು, ಸ್ತ್ರೀ ಸ್ಥಾನಮಾನ, ಯುದ್ಧ, ರಾಜ್ಯಾಡಳಿತ ಮಾನವನ ವರ್ತನೆ ಮತ್ತು ಪದ್ಧತಿಗಳಿಗೆ ಸಂಬಂಧಪಟ್ಟ ಹಾಗೆ ಮಹಾಭಾರತವನ್ನು ಅಧ್ಯಯನ ಮಾಡಬೇಕಾಗಿದೆ. ಇದರಿಂದ ಆಧುನಿಕ ಮಾನವ ಶಾಸ್ತ್ರಜ್ಞರು ಹೇಳಿರುವ 'ಸಂಸ್ಕೃತಿ'ಯನ್ನು ಅದಕ್ಕೆ ಗೊತ್ತುಪಡಿಸಿರುವ ಅರ್ಥ ಸ್ಪಷ್ಟವಾಗುತ್ತದೆ. ಸಾಂಸ್ಕೃತಿಕ ಅಧ್ಯಯನದಲ್ಲಿ 'ಸಂಸ್ಕೃತಿ' ಪದವನ್ನು ಪಾರಿಭಾಷಿಕವಾಗಿ ಬಳಸಲಾಗುತ್ತದೆ.

'ಸಂಸ್ಕೃತಿ' ಎಂಬುದು 'ಕೃಷಿ ಮಾಡುವುದು' ಅಥವಾ 'ಬೋಧಿಸು' ಎಂಬ ಲ್ಯಾಟಿನ್ ಕ್ರಿಯಾಪದದ 'ಕಲ್ಚರ್' 'ಕೃಷಿ' ಅಥವಾ 'ಶಿಕ್ಷಣ' ಎಂಬ ನಾಮಪದಗಳಿಂದ ನಿಷ್ಪನ್ನವಾಗಿದೆ. ಭಾರತೀಯ ವಾಙ್ಮಯದಲ್ಲಿ 'ಸಂಸ್ಕೃತಿ' ಎಂಬ ಸಂಸ್ಕೃತ ಪದ ಸಂಸ್ಕಾರ, ಸಂಸ್ಕರಿಸುವಿಕೆ ಎಂಬ ಮೂಲಗಳಿಂದ ಬಂದಿರುವದಾಗಿದ್ದು ಸಂಸ್ಕಾರವೆಂದರೆ ಶುದ್ಧಿ ಮಾಡುವುದು, ನಯಗೊಳಿಸುವುದು, ರೂಪಕೊಡುವುದು ಎಂಬ ಸಾಮಾನ್ಯವಾಗಿ ಪ್ರಚಾರದಲ್ಲಿರುವ ನಿತ್ಯ ಬಳಕೆಯ ಅರ್ಥಕ್ಕಿಂತ ಮಾನವಶಾಸ್ತ್ರದಲ್ಲಿ ಬೇರೊಂದು ಅರ್ಥದಲ್ಲಿ 'ಸಂಸ್ಕೃತಿ' ಪದವನ್ನು ಬಳಸಲಾಗುವುದು. (ಡಿ.ಎಚ್.ಮಲ್ಲಿನಾಥಯ್ಯ ಸಾಂಸ್ಕೃತಿಕ ಮಾನವಶಾಸ್ತ್ರ, ಪು. ೧೪) ಸಂಸ್ಕೃತಿ ಮಾನವನ ನೈಸರ್ಗಿಕ ಪರಿಸರಕ್ಕೆ ಹೊಂದಿಕೊಳ್ಳಲು ಅನುವು ಮಾಡಿಕೊಡುತ್ತದೆ.

**'ಮಹಾಭಾರತ'ಕ್ಕೆ ಪ್ರಾಚೀನ ಭಾರತೀಯ ಮಾನವನ ಸಂಸ್ಕೃತಿಯ ವಿಶ್ವಕೋಶವಾಗಿದೆ.** ●

** **** **

# ಅಧ್ಯಾಯ – ೧೨

## ಗ್ರಂಥಋಣ

೧. ರಂಗನಾಥಶರ್ಮ, "ಶ್ರೀಮನ್ಮಹಾಭಾರತ", ಭಾರತದರ್ಶನ ಪ್ರಕಾಶನ.

೨. ಋಗ್ವೇದದ ೧೦ನೇ ಮಂಡಲದ ಕೆಲವು ಭಾಗಗಳು

೩. ಕೌಲಗಿ ಶೇಷಾಚಾರ್, "ಭಾರತ ಚಕ್ರತೀರ್ಥ", ೨೦೧೧, ನಿಶಾಂತ್– ಎಂಟರ್‌ಪ್ರೈಸಸ್, ಮೈಸೂರು.

೪. ವೈದ್ಯಗುರು ಎಂ.ಆರ್.ಭಟ್, "ಭಾರತ ಗಾಂಭೀರ್ಯ", ೧೯೫೪, ವೈದ್ಯಗುರು ಎಂ.ಆರ್.ಭಟ್, ಮಂಗಳೂರು.

೫. ಎ.ಆರ್. ಕೃಷ್ಣಶಾಸ್ತ್ರಿ, "ವಚನಭಾರತ", ೧೯೫೦, ಗೀತಾ ಬುಕ್ ಹೌಸ್, ಮೈಸೂರು.

೬. ಡಾ॥ ಮಣಿಮಾಲಿನಿ ವಿ.ಕೆ., "ದ್ರೌಪದೀ ಸಮೀಕ್ಷೆ", ೧೯೯೬, ಮುಂಬೈ– ವಿ.ವಿ.

೭. ಡಾ॥ ಕೆ.ಶ್ರೀಕಂಠಯ್ಯ, "ಮಹಾಭಾರತದ ಪಂಚರತ್ನಗಳು", ೨೦೦೧, ಅಳಿಲು ಸೇವಾ ಸಂಸ್ಥೆ, ಬೆಂಗಳೂರು.

೮. ಡಾ॥ ನಾರಾಯಣ್, "ದ್ರೌಪದೀ–ಸತ್ಯಭಾಮಾ ಸಂವಾದ", ೨೦೦೭, ಕೌಟಿಲ್ಯ ರಾಷ್ಟ್ರೀಯ ಅಧ್ಯಯನ ಸಂಸ್ಥೆ, ಮೈಸೂರು.

೯. ಕಂನಾಡಿಗಾ, "ದ್ವಾಪರ"–ಮಹಾಭಾರತಕ್ಕೊಂದು ವಿಭಿನ್ನ ವಿಶ್ಲೇಷಣೆ, ೨೦೧೫, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೦. ಪ್ರೊ॥ಜಿ.ವೆಂಕಟಸುಬ್ಬಯ್ಯ, "ಒಂದಿಷ್ಟುರಾಮಾರಣ ಒಂದಿಷ್ಟು–ಮಹಾಭಾರತ", ೨೦೧೧, ಸಪ್ನ ಬುಕ್‌ಹೌಸ್, ಬೆಂಗಳೂರು.

೧೧. ಗ.ನಾ.ಭಟ್ಟ, "ಪರ್ವ–ಭಾರತ", ೨೦೧೫, ಕಮಲ ಎಂಟರ್‌ಪ್ರೈಸಸ್, ಬೆಂಗಳೂರು.

೧೨. ಮಾಸ್ತಿ ವೆಂಕಟೇಶ ಅಯ್ಯಂಗಾರ್, "ಭಾರತತೀರ್ಥ", ೧೯೫೨, ಜೀವನ ಕಾರ್ಯಾಲಯ, ಬೆಂಗಳೂರು.

೧೩. Reflections and Variations of Mahabharatha, 2009, Sahithya academi, New Delhi.

14. A critical studies in Mahabharatha, Dr. Suktunkar.

೧೫. ಬಂಕಿಮ ಚಂದ್ರ ಭಟ್ಟೋಪಾಧ್ಯಾಯ, "ಶ್ರೀಕೃಷ್ಣಚರಿತ್ರೆ" , ೧೯೬೫, ಚೇತನ, ಬೆಂಗಳೂರು.

೧೬. ಶೇಷನವರತ್ನ, "ಮಹಾಭಾರತದಲ್ಲಿ ಧರ್ಮ", ೧೯೯೩, ಸಮಾಜಪುಸ್ತಕಾಲಯ, ಧಾರವಾಡ.

೧೭. ಆಚಾರ್ಯ ನಾವಾಭಾಯಿಭಟ್, "ಮಹಾಭಾರತದ ಪಾತ್ರ", ೧೯೭೧, ಜೀವನ ವಿಕಾಸ ಸಾಹಿತ್ಯ, ಬೆಂಗಳೂರು.

೧೮. ವಿ. ಸೀತಾರಾಮಯ್ಯ, ವಿಮರ್ಶೆ, ಸಂ–೧, "ಇತಿಹಾಸ ಕಾವ್ಯಗಳು", ೧೯೯೮, ವಿ. ಸೀ. ಸಂಪದ, ಬೆಂಗಳೂರು.

೧೯. ವಿವಿಧ ಲೇಖಕರು : "ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ" – ೧೯೯೩

೨೦. ಅನು : ಕೆ.ಎಲ್.ಗೋಪಾಲಕೃಷ್ಣ "ಭಾರತದ ಇತಿಹಾಸ" – ೧೯೩೨

೨೧. ಬಸ್ತಿ ಪುಂಡಲೀಕ ವೆಂಕಟೇಶ ಶೇಣ್ಯೈ– "ಬ್ರಾಹ್ಮಿಲಿಪಿ ಮತ್ತು ಸಿಂಧು ಸಂಸ್ಕೃತಿ" – ೧೯೭೭

೨೨. ಡಿ. ಎಚ್. ಮಲ್ಲಿನಾಥಯ್ಯ – ಸಾಂಸ್ಕೃತಿಕ ಮಾನವಶಾಸ್ತ್ರ

೨೩. ದುರ್ಗಾ ಭಾಗವತ – ಅನು : ಗೌರೀಶ ಕೈಕಿಣಿ – "ವ್ಯಾಸ ಪರ್ವ", ಪ್ರಮತಿ ಪ್ರಕಾಶನ, ಸುಬ್ರಹ್ಮಣ್ಯ, ೧೯೯೨.

೨೪. ಎಂ. ನಂಜಮ್ಮಣ್ಣಿ ಸಾಮಾಜಿಕ ಮಾನವಶಾಸ್ತ್ರ – ೧೯೯೨

೨೫. ಡಾ. ವಿಲಾಸ ಸಂಗವೆ– ಅನು : ಮಾಧವ ಕುಲಕರ್ಣಿ – ಸಮಾಜಶಾಸ್ತ್ರ – ೧೯೭೧

೨೬. ಶಂ.ಭಾ.ಜೋಶಿ – ಋಗ್ವೇದ ಸಾರ : "ನಾಗಪ್ರತಿಮಾ ವಿಚಾರ" – ಪ್ರಸಾರಾಂಗ–ಮೈಸೂರು–ವಿ.ವಿ. – ೧೯೩೧

೨೭. ದೇವದತ್ತ ಪಟ್ಟನಾಯಕ, "ಜಯ", ೨೦೧೫, ಮನೋಹರ ಗ್ರಂಥಮಾಲ, ಧಾರವಾಡ.

೨೮. ದಿ.ಶ್ರೀ.ರ.ಭಿಡೆ, "ರಾಮಾಯಣ ಮಹಾಭಾರತಗಳಲ್ಲಿ ಆತ್ಮಹತ್ಯೆ", ೨೦೦೯, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು.

೭೯. ಡಾ॥ ಪದ್ಮಾಕರ ವಿ.ವರ್ತಕ, "ಸ್ವಯಂಭು", ೨೦೦೮, ಪ್ರಚೇತ ಬುಕ್ ಹೌಸ್, ಬೆಂಗಳೂರು.

೩೦. ಶ್ರೀಪಾದ ರಘುನಾಥಬಿಢೇ, "ಮಹಾಭಾರತದ ಶಾಪಗಳು", ೧೯೯೬, ಗೀತಾ ಬುಕ್ ಹೌಸ್, ಮೈಸೂರು.

೩೧. ಕೆ. ಶ್ರೀಕಂಠಯ್ಯ – "ಕನ್ನಡ ಕಾವ್ಯಗಳಲ್ಲಿ ಸಮಗ್ರ ಚಿತ್ರಗಳು" – ೧೯೮೩

೩೨. ಡಾ॥ ಇರಾವತಿ ಬಾಯಿ ಕರ್ವೇ, "ಯುಗಾಂತ", ಸಾಹಿತ್ಯ ಅಕಾಡೆಮಿ, ದೆಹಲಿ, ೧೯೭೩.

೩೩. ಡಾ॥ ಪಿ.ವಿ.ಕಾಣೆ, "ಎರಡು ಮಹಾಕಾವ್ಯಗಳು", ಕುವೆಂಪು ಭಾಷಾ ಭಾರತಿ ಪ್ರಕಾಶನ, ಬೆಂಗಳೂರು, ೨೦೧೩.

೩೪. ಸಂ: ರಜನೀಕಾಂತ, "ವಾಲ್ಮೀಕಿ ಮತ್ತು ವ್ಯಾಸ", ಪ್ರಕಾಶನ ವಿಭಾಗ, ವಾರ್ತಾ ಮತ್ತು ಪ್ರಸಾರ ಇಲಾಖೆ, ಭಾರತ ಸರ್ಕಾರ, ನವದೆಹಲಿ, ೧೯೯೮.

೩೫. ಪ್ರೊ॥ ಜಿ.ಟಿ.ನಾರಾಯಣ ರಾವ್, "ವಜ್ರಪಥ", ಸಂ: ಪ್ರೊ॥ ಪಾಂಡುರಂಗ ಉಡುಪ, ಕರ್ನಾಟಕ ಸಂಘ, ಶಿವಮೊಗ್ಗ, ೧೯೯೩.

೩೬. ಡಾ॥ ರೋಮಿಲಾ ಥಾಪರ್, ಅನು: ಡಾ॥ ಸೂರ್ಯನಾಥ ಕಾಮತ್, "ಗತಕಾಲದ ಬಗ್ಗೆ ಪೂರ್ವಗ್ರಹ",
ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಮೈತ್ರಿ ಪ್ರಕಾಶನ, ಮೈಸೂರು, ೧೯೮೨.

೩೭. ಶ್ರೀ ಬಿ.ಜಿ. ಸತ್ಯಮೂರ್ತಿ, "ಸರಳಭಾರತ", ಸಾಹಿತ್ಯಸುಗ್ಗಿ ಪ್ರಕಾಶನ, ಬೆಂಗಳೂರು, ಪ್ರ. ಮು.೧೯೯೯,
ದ್ವಿಮುದ್ರಣ,೨೦೦೯.

೩೮. ಶ್ರೀ ಬಿ.ಜಿ.ಸತ್ಯಮೂರ್ತಿ, "ಪರಿಕಲ್ಪನೆ", ಬೆಂಗಳೂರು, ೨೦೧೧.

೩೯. ಶ್ರೀಮಧ್ವಾಚಾರ್ಯರು, "ಮಹಾಭಾರತ ತಾತ್ಪರ್ಯ ನಿರ್ಣಯ", ಅನು: ಪ್ರಭಂಜನಾಚಾರ್ಯರು, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು.

೪೦. ವ್ಯಾಸಪ್ರಣೀತ ಮಹಾಭಾರತ, ಅನು: ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯ, ತತ್ವಸಂಶೋಧನ ಸಂಸತ್, ಪಲಿಮಾರು, ಉಡುಪಿ.

೪೧. ಪ್ರೊ|| ಶ್ರೀಪತಿ ತಂತ್ರಿ, "ನೂತನ ಧರ್ಮದರ್ಶನ", ರಜತ ಸಾಹಿತ್ಯ, ಶಿವಮೊಗ್ಗ, ೧೯೯೩.

೪೨. ಡಾ|| ಪ್ರಧಾನ ಗುರುದತ್ತ, "ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ", ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು, ೧೯೯೦.

೪೩. ಪ್ರೊ|| ಕೆ.ಎಸ್. ನಾರಾಯಣಾಚಾರ್ಯ, "ಶ್ರೀವ್ಯಾಸ ಸೂಕ್ತಿ ಸುಧಾ", ಮಾಲೋಲಾ ಪ್ರಕಾಶನ, ಧಾರವಾಡ, ೧೯೮೪.

೪೪. ಡಾ|| ದ.ರಾ.ಬೇಂದ್ರೆ, "ಸಾಹಿತ್ಯದ ವಿರಾಟ್ ಸ್ವರೂಪ", ಸಮಾಜ ಪುಸ್ತಕಾಲಯ, ಧಾರವಾಡ, ೧೯೭೪.

~~~***~~~
~~~